ಶ್ರೀ

# ಬುದ್ಧಿಯೋಗ

ಅಥವಾ

# ಗೀತೆಯ 'ಗುಹ್ಯ' ಅಧ್ಯಾತ್ಮಶಾಸ್ತ್ರ.

ಬುದ್ಧಿರ್ಯೋಗೇ ತ್ವಿಮಾಂ ಶೃಣು

— ಗೀತೆ ೨-೩೯

ದದಾಮಿ ಬುದ್ಧಿಯೋಗಂ ತಂ ಯೇನ ಮಾಂ ಉಪಯಾಂತಿ ತೇ

— ಗೀತೆ ೧೦-೧೦

ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ

— ಗೀತೆ ೧೮-೫೭


ಬರೆದವರು:

ಮುಗದಲ ರಾಮಚಂದ್ರ



೧೯೩೭

ಬೆಲೆ: ಒಂದೂವರೆ ರೂಪಾಯಿ

# ಅರ್ಪಣೆ.

ಮಾನವರ ಅಂತರಂಗದಲ್ಲಿ ನಿಂತು

ಅವರ ಅಜ್ಞಾನವನ್ನು ತನ್ನ ಕೃಪಾಪ್ರಸಾದದಿಂದ

ಕಳೆದು ಅಲ್ಲಿ ಜ್ಞಾನದೀಪವನ್ನು ಬೆಳಗುವ ಸೃಷ್ಟಿಕರ್ತನೂ

ಸೃಷ್ಟಿಪ್ರವರ್ತಕನೂ ವಾತ್ಸಲ್ಯಮೂರ್ತಿಯೂ

ಆದ

**ಪುರುಷೋತ್ತಮನಿಗೆ.**

# ಮುನ್ನುಡಿ.

ಸೃಷ್ಟಿಯಲ್ಲಿ ತಾನಿರುವ ಉದ್ದೇಶವೇನೆಂಬುದನ್ನು ಅರಿಯುವ ಜಿಜ್ಞಾಸೆಯು ಮಾನವನ ಸ್ವಭಾವಧರ್ಮವಾಗಿದೆ. ಈ ತೃಷ್ಣೆಯು ಕೆಲಕಾಲ ಅಡಗಿಹೋಗಬಹುದು; ಅದು ನಿರ್ಮೂಲವಾಗಲಾರದು ಸತ್ಯಸ್ವರೂಪನಾದ ಸೂರ್ಯನು ಅಸ್ತನಾದರೂ ರಾತ್ರಿ ಕಳೆಯಲು ಮರಳಿ ಉದಯಿಸುವಂತೆ ಮನುಷ್ಯನಲ್ಲಿ ಅನ್ಯ ಸುಖ ಸಮಾಧಾನಗಳಿಂದ ಮುಸುಕಿ ಹೋಗುವ ಈ ಜಿಜ್ಞಾಸೆಯು ತಿರುಗಿ ತಲೆದೋರದೆ ಇರುವದಿಲ್ಲ. ಅವನ ಎಲ್ಲ ತೃಷ್ಣೆಗಳಲ್ಲಿ ಇದು ಸ್ಥಿರವಾದುದು-ಚಿರಂಜೀವಿಯಾದುದು.

ಈ ತೃಷ್ಣೆಯನ್ನು ತಣಿಯಿಸುವದಕ್ಕಾಗಿ ಮಾಡಿದ ಮಾನವ ಪ್ರಯತ್ನಗಳು ಭಾವ (emotion), ಜ್ಞಾನ(knowledge) ಹಾಗೂ ಕರ್ಮ ( action) ಎಂಬ ಮೂರು ಬಗೆಯ ಭೂಮಿಕೆಗಳನ್ನು ಅವಲಂಬಿಸಿರುವವು. ಇವುಗಳಲ್ಲಿ ಒಂದೊಂದು ಪ್ರಯತ್ನವೂ ಮಾನವ ಶಕ್ತಿಯ ಪರಾಕಾಷ್ಠೆಯನ್ನು ಮುಟ್ಟಿರುವಲ್ಲಿನ ಅದ್ಭುತ ಫಲಿತಾಂಶಗಳನ್ನು ಪಡೆದಿರುವದು. ಜಗತ್ತಿನೊಳಗಿನ ಆಸ್ತಿಕನಾಸ್ತಿಕ ಧರ್ಮ ಪಂಥಗಳಲ್ಲಿ ಈ ಪ್ರಯತ್ನಗಳ ಸ್ವರೂಪವನ್ನು ಕಾಣಬಹುದು. ಭಾವ ಪ್ರಧಾನವಾದ ಧರ್ಮಗಳು ಭಕ್ತಿಯನ್ನು ಗುರಿಯಾಗಿಟ್ಟುಕೊಂಡಿವೆ; ಜ್ಞಾನ ಪ್ರಧಾನವಾದುವು ಅಂತಿಮ ಸತ್ಯಾನ್ವೇಷಣವನ್ನು ಯತ್ನಿಸಿವೆ; ಕರ್ಮ ಪ್ರಧಾನವಾದುವು ಇಹಪರಗಳ ನಿಶ್ರೇಯಸ ಸುಖವನ್ನು ಕರ್ತೃತ್ವದಿಂದ ಸಾಧಿಸಲೆಣಿಸಿರುವವು.

ತಾನು ಹೇಳುವದೇ ಸದ್ಧರ್ಮವೆಂದು ಸಾರದ ಧರ್ಮ ಪಂಥವಿಲ್ಲ. ಆದರೂ ಮೇಲೆ ಹೇಳಿದ ಮೂರು ಬಗೆಯ ಧರ್ಮ ಪಂಥಗಳ ಉಚಿತ ಸಂಯೋಗ (Synthesis)ದಲ್ಲಿಯೇ ಸತ್ಯವು ನೆಲಸಿರಬೇಕೆಂದು ವಿಚಾರವಂತರಾದ ಭಾವಿಕರಿಗೆ ತೋರದೆ ಇರುವದಿಲ್ಲ. ಸುಮಾರು ಇಪ್ಪತ್ತೈದು ವರುಷಗಳ ಹಿಂದೆ ಈ ವಿಶ್ವಾಸವು ನಮ್ಮಲ್ಲಿ ಪ್ರಬಲವಾಗಿದ್ದಿತು. ಅದೇ ಸಮಯದಲ್ಲಿ ಲೋಕಮಾನ್ಯ ತಿಲಕರವರ ಉಪಕ್ರಮದಿಂದ ಶ್ರೀ ಭಗವದ್ಗೀತೆಯು ಹೊಸಪರಿಯಾಗಿ ಪರಿಚಿತವಾಗುತ್ತಲೂ ಇತ್ತು. ಆ ಗ್ರಂಥಕ್ಕೆ

ಆಗ ಮನಸ್ಸೋತು ಅದನ್ನು ಸೂಕ್ಷ್ಮವಾಗಿ ಅಭ್ಯಾಸ ಮಾಡತೊಡಗಿದವರಲ್ಲಿ ನಾವೂ ಒಬ್ಬರು. ಗೀತೆಯ ಪರಿಚಯವು ಬೆಳೆಯುತ್ತ ಹೋದಂತೆ, ನಾವು ಅಪೇಕ್ಷಿಸಿದ್ದ ಎಲ್ಲ ಧರ್ಮ ಪಂಥಗಳ ಸಂಯೋಗವು (Synthesis) ಗೀತೆಯಲ್ಲಿ ಹೇಳಿದ ತತ್ವಗಳಿಂದ ಬಹು ಮಟ್ಟಿಗೆ ಸಾಧಿಸುವದೆಂದು ತೋರಿತು. ಇದೇ ಆಸಕ್ತಿಯಿಂದ ಮುಂದೆ ಸಾಗುವಾಗ ಗೀತೆಯು ಸ್ವತಂತ್ರ ಗ್ರಂಥವೆಂದೂ ಕಂಡು ಬಂದಿತು. ಅದನ್ನು ತತ್ಪೂರ್ವದ ವೇದಾಂತ ಕಲ್ಪನೆಗಳ ಭಾಂಡಾಗಾರವೆಂದೂ ಆದರ್ಶಬಿಂಬವೆಂದೂ ತಿಳಿದು ಅವುಗಳನ್ನೇ ಅದರಲ್ಲಿ ಹುಡುಕಬಾರದು; ಆ ಕಲ್ಪನೆಗಳನ್ನು ತಿದ್ದಿ ಸರಿಪಡಿಸುವ ಅಧಿಕಾರವುಳ್ಳ ಗ್ರಂಥವೆಂದು ಅದನ್ನು ಭಾವಿಸಬೇಕು ಎಂಬ ವಿಶ್ವಾಸವು ಬಲಿಯಿತು. ಪೂರ್ವದ ವೇದಾಂತ ಕಲ್ಪನೆಗಳ ಸಂಯೋಗ(Synthesis) ವನ್ನು ಗೀತೆಯು ತನ್ನ ಪದ್ಧತಿಯಿಂದ ಅಪ್ರತಿಮವಾಗಿಯೂ ಸಫಲವಾಗಿಯೂ ಸಾಧಿಸಿರುವದು. ಈ ವೈಶಿಷ್ಟ್ಯವು ಗೀತೆಯೊಳಗಿನ ಪ್ರಸಂಗಗಳ ಮತ್ತು ಪ್ರಮೇಯಗಳ ಔಚಿತ್ಯದಲ್ಲಿಯೂ ಭಾವಗಳ ವ್ಯೂಹರಚನೆಯಲ್ಲಿಯೂ (ideology) ಶಬ್ದಗಳ ಅರ್ಥಗಳಲ್ಲಿಯೂ ವಿಚಾರಗಳ ದೃಷ್ಟಿಕೋನದಲ್ಲಿಯೂ ತುಂಬಿರುವದು.

ಆಧುನಿಕರ ವಿಚಾರವೇದಿಕೆಯಲ್ಲಿ ಶ್ರೀಭಗವದ್ಗೀತೆಯು ಪ್ರಕಟವಾಗಿ ಇನ್ನೂ ಒಂದು ತಲೆಮಾನವು ಪೂರ ಕಳೆದಿಲ್ಲ. ಈ ಅವಧಿಯಲ್ಲಿ ಅದರ ಗುಟ್ಟನ್ನು ಪ್ರಕಾಶಪಡಿಸಲು ಮತ್ತು ಸಾಮಾನ್ಯರಿಗೆ ತಿಳಿಸಿಹೇಳಲು ನಿರ್ಮಾಣವಾದ ಅಥವಾ ಆಗುವ ಗ್ರಂಥಗಳ ಸುರಿಮಳೆಯು ಎಲ್ಲ ಭಾಷೆಗಳಲ್ಲಿಯೂ ನಡೆದಿದೆ; ಇದಲ್ಲದೆ ಅಧಿಕಾರ ಸಂಪನ್ನರಾದ ಪ್ರಾಚೀನ ಮತ್ತು ಅರ್ವಾಚೀನ ಭಾಷ್ಯಕಾರರು ಭಗವದ್ಗೀತೆಯನ್ನು ಕುರಿತು ಬರೆದ ಅಗಾಧ ಭಾಷ್ಯಗಳು ಇದ್ದೇ ಇರುವವು. ಆದರೂ ನಾವು ಮೇಲೆ ಉಲ್ಲೇಖಿಸಿರುವ ಗೀತೆಯ ವೈಶಿಷ್ಟ್ಯವು ಈ ಕೃತಿಗಳಲ್ಲಿ ಸ್ಫುಟವಾದಂತೆ ನಮಗೆ ತೋರಲಿಲ್ಲ.

ಪೂರ್ವಗ್ರಹಗಳನ್ನು ತೊರೆದು, ನಾವು ಪ್ರತಿಪಾದಿಸಿದ ವಿಚಾರಗಳ ಪಕ್ಷಪಾತವಿಲ್ಲದೆ ಸಮಬುದ್ಧಿಯಿಂದಲೂ ಏಕನಿಷ್ಠೆಯಿಂದಲೂ ವರ್ಷಾನುವರ್ಷ ಗೀತೆಯನ್ನು ಪರಿಶೀಲಿಸಿದರೂ ಅದರ ವಿಶಿಷ್ಟತೆಯ ಕಲ್ಪನೆಯು ದೃಢವಾಗುತ್ತ ಹೋಗಿದೆ. ಗೀತೆಯು ಪಂಡಿತರಿಗಾಗಿ ಮಾಡಿದ ಬೋಧನೆಯಲ್ಲ;

ಬುದ್ಧಿ ಕುಶಾಗ್ರತೆಯಿಲ್ಲದವರಿಗೆ ಅದರ ಹೃದ್ಗತವು ಹೊಳೆಯದು ಎಂಬ ಮಾತುಗಳನ್ನು ನಾವು ಒಪ್ಪುವದಿಲ್ಲ. ಆಧ್ಯಾತ್ಮಿಕ ಭಾವನೆಗಳಿಗೆ ಸುಲಭ ವಾಗಿ ಎರವಾಗುವ ಸಾಮಾನ್ಯ ಜನಪದವನ್ನೂ ಅವರ ಶಕ್ತಿಯ ಮರ್ಯಾದೆ ಯನ್ನೂ ಅನುಲಕ್ಷಿಸಿ ಶ್ರೀಕೃಷ್ಣನು ಗೀತೆಯನ್ನು ಬೋಧಿಸಿರುವನೆಂದು ನಾವು ಮನಗಂಡಿರುವೆವು. ಈ ವಿಶ್ವಾಸದಿಂದಲೂ ಗೀತೆಯ ಪ್ರಸಾದ ದಿಂದಲೂ ನಮ್ಮಲ್ಲಿ ದೃಢವಾದ ವಿಚಾರಗಳನ್ನು ಯಥಾಯೋಗ್ಯವಾದ ಪಾಲನಪೋಷಣೆಗಾಗಿ ಜನತೆಗೆ ಒಪ್ಪಿಸುವದು ಆವಶ್ಯಕವೆಂದು ಹಲವು ಸ್ನೇಹಿತರು ಅಭಿಪ್ರಾಯಪಟ್ಟುದರಿಂದ ಅವು ಈ ಗ್ರಂಥರೂಪವಾಗಿ ಜನತೆಯ ಕೈಸೇರುತ್ತಿರುವವು.

ಈ ಗ್ರಂಥರಚನೆಯ ಕಾರ್ಯದಲ್ಲಿ ನಮ್ಮ ಮಿತ್ರರು ನಮಗೆ ಪರಿಪರಿ ಯಾಗಿ ನೆರವಾಗಿರುವರು. ಅವರೆಲ್ಲರಿಗೂ ನಮ್ಮ ಕೃತಜ್ಞತೆಯ ವಂದನೆ ಗಳು. ವಿಶೇಷವಾಗಿ ನಮಗೆ ಮೊದಲಿನಿಂದ ಪ್ರೋತ್ಸಾಹವನ್ನಿತ್ತು ನಮ್ಮನ್ನು ಮುಂದುವರಿಸಿದವರು ಅಖಿಲ ಕರ್ನಾಟಕಕ್ಕೆ ಭೂಷಣರಾದ ಶ್ರೀಯುತ ದಿವಾಕರ ರಂಗರಾಯರು. ಪ್ರತಿ ಪುಟವನ್ನೂ ಓದಿ ಮಹತ್ವದ ಸಲಹೆ ಗಳನ್ನಿತ್ತವರು ಶ್ರೀಯುತ ಸಾಲಿ ರಾಮಚಂದ್ರರಾಯರು. ಹಸ್ತಪ್ರತಿ ಯನ್ನೋದಿ ತಿದ್ದಿಕೊಟ್ಟವರು ಶ್ರೀಯುತ ಪಂಡಿತ ಪೂಜಾರರವರು. ಈ ಮಹನೀಯರುಗಳ ಉಪಕಾರವು ಚಿರಸ್ಮರಣೀಯವು. ಗ್ರಂಥದೊಳಗಿನ ಗುಣಗಳೆಲ್ಲ ಅವರಿಂದುಂಟಾಗಿವೆ; ದೋಷಗಳಿಗೆ ನಾವು ಹೊಣೆಗಾರರು. ಗ್ರಂಥವನ್ನು ಅಂದವಾಗಿಯೂ ತೀವ್ರವಾಗಿಯೂ ಅಚ್ಚು ಹಾಕಿಸಿಕೊಟ್ಟ ಮೋಹನ ಮುದ್ರಣಮಂದಿರದ ಒಡೆಯರಿಗೂ ನಾವು ಉಪಕೃತರಾಗಿರು ವೆವು.

ಧಾರವಾಡ
ಈಶ್ವರ ಸಂ. ಚೈತ್ರಶುದ್ಧ ಪ್ರತಿಪದೆ.
೧೨-೪-೩೭.

ಗ್ರಂಥಕರ್ತ.

# ವಿಷಯಾನುಕ್ರಮಣಿಕೆ.







# ಉಪೋದ್ಘಾತ.

——:oOo:——

"There is no evangel without worship. Throw yourselves, children of India, into the worship of these and your whole part. Strive passionately for knowledge. Yours are the spades and mattocks of this excavation; for with you and not with the foreigner are the thought and language that will make it easy to unearth the old significance. India's whole hope lies in a deeper research, a more rigid investigation of facts. With her, encouragement and not despair is on the side of truth"

*Sister* **Nivedita**

" ಉಪಾಸನೆಯಿಲ್ಲದೆ ತತ್ವದರ್ಶನವಿಲ್ಲ. ಭಾರತಮಾತೆಯ ಮಕ್ಕಳೇ, ನಿಮ್ಮ ಪುರಾತನ ಸಂಸ್ಕೃತಿಯ ಆರಾಧನೆಯನ್ನು ನಿಷ್ಠೆಯಿಂದ ಕೈಕೊಳ್ಳಿರಿ. ಅದಕ್ಕಾಗಿ ನಿಮ್ಮ ಸರ್ವಸ್ವವನ್ನು ಧಾರೆಯೆರೆಯಿರಿ. ಉತ್ಸಾಹಭರಿತರಾಗಿ ಜ್ಞಾನಾರ್ಜನೆಯ ತಪವನ್ನಾಚರಿಸಿರಿ. ಈ ಉತ್ಖಲನಕ್ಕೆ ಬೇಕಾಗುವ ಸಾಧನಗಳು ನಿಮ್ಮಲ್ಲಿಯೇ ಇವೆ. ನಿಮ್ಮ ಪ್ರಾಚೀನ ಸಂಸ್ಕೃತಿಯ ಭಾವರಹಸ್ಯವನ್ನು ಪ್ರಕಾಶಪಡಿಸಲು ಆವಶ್ಯವಾದ ಭಾಷೆಯೂ ವಿಚಾರಗಳೂ ನಿಮ್ಮಲ್ಲಿರುವವೇ ಹೊರತು ವಿದೇಶೀಯರಲ್ಲಿಲ್ಲ. ದೀರ್ಘಸಂಶೋಧನೆ, ನಿಷ್ಠುರ ಸತ್ಯಪರೀಕ್ಷಣೆ ಇವುಗಳಿಂದಲೇ ಭರತಖಂಡದ ಭವಿತವ್ಯತೆಯು ಸಾಧಿಸುವದು. ಈ ಪ್ರಯತ್ನದಲ್ಲಿ ನಿಮಗೆ ಈಗ ನಿಜವಾಗಿ ನೆರವಾಗುವದು ಉತ್ಸಾಹವೇ ಹೊರತು ನಿರುತ್ಸಾಹವಲ್ಲ."

ಸಿಸ್ಟರ ನಿವೇದಿತಾ.

## ಅಧ್ಯಾತ್ಮ ಶಾಸ್ತ್ರದ ಈಗಿನ ಸ್ಥಿತಿಯು.

ಭಗವದ್ಗೀತೆಯು ಅಧ್ಯಾತ್ಮ ವಿಷಯಕ ಗ್ರಂಥವು. ಈ ನಮ್ಮ ಕಾಲದಲ್ಲಿ ಅಧ್ಯಾತ್ಮದ ಮಹತ್ವವನ್ನು ಮನಗಾಣಿಸುವದಕ್ಕಾಗಿ ಪ್ರಯಾಸ ಪಡುವ ಕಾರಣವಿಲ್ಲ. ಐಹಿಕವನ್ನು ನೆರೆನಂಬಿ ಮತಿಗೆಟ್ಟು, ಹೆಚ್ಚು ಕಡಿಮೆ ಪಶ್ಚಾತ್ತಾಪದಿಂದ ಮನುಷ್ಯಜಾತಿಯು ಮತ್ತೊಂದು ಬಾರಿ ಅಧ್ಯಾತ್ಮದ ಕಡೆಗೆ ತಿರುಗುವ ಸಂಧಿಕಾಲವೇ ಇದಾಗಿದೆ. ಹೀಗೆ ಪಶ್ಚಾತ್ತಾಪವನ್ನು ಹೊಂದದವರೂ ಅನೇಕರಿರಬಹುದು. ಭೌತಿಕ ಮಾರ್ಗವನ್ನವಲಂಬಿಸಿ ಇತರರು ಪಡೆದ ಯಶಸ್ಸನ್ನೂ ಲಾಭಗಳನ್ನೂ ತಾವಾದರೂ ಪಡೆಯ ಬಹುದೆಂಬ ಹಂಬಲಿಕೆಯು ಇಂಥವರಿಗೆ ಸಹಜವೆಂದೇ ನಾವು ನಂಬುವೆವು. ಆದರೂ ಕೇವಲ ಭೌತಿಕ ಮಾರ್ಗವನ್ನು ಅವಲಂಬಿಸುವದರಿಂದ ಜೀವಿತವು ಸಾರ್ಥಕವಾಗುವದಿಲ್ಲವೆಂಬ ಸತ್ಯವು ಜನಸಮ್ಮತವಾಗುತಲಿರುವದು. ಇಷ್ಟೇ ಅಲ್ಲ, ಅಧ್ಯಾತ್ಮವನ್ನು ಲಕ್ಷಿಸದ ಭೌತಿಕವು ವ್ಯಕ್ತಿಗಳಿಗೇ ಅಲ್ಲದೆ ಜನಾಂಗ ಗಳಿಗೂ ಸಮಗ್ರ ಮಾನವ ಜಾತಿಗೂ ವಿಪತ್ಕರವೆಂಬ ಅನುಭವವನ್ನು ಪಾಶ್ಚಾತ್ಯರಿಂದ ಇತ್ತಲಾಗಿ ಎಲ್ಲರೂ ಮನಗಂಡಿರುವರು. ಹೀಗಿರುವಾಗ ಭೌತಿಕ ಮಾರ್ಗಕ್ಕೆ ಪ್ರತಿಸ್ಪರ್ಧಿಯೆನಿಸಿ ಮಾನವಜಾತಿಯಲ್ಲಿ ಆತ್ಯಂತಿಕ ಶ್ರೇಯದ ಆಕಾಂಕ್ಷೆಯನ್ನು ಅನಾದಿ ಕಾಲದಿಂದ ಹುಟ್ಟಿಸುತಲಿರುವ ಅಧ್ಯಾತ್ಮದ ಮಹತ್ವವನ್ನು ಈ ಕಾಲದಲ್ಲಿ ವಿಶೇಷವಾಗಿ ವರ್ಣಿಸುವುದು ಅನವಶ್ಯವೇ ಸರಿ. ಅಧ್ಯಾತ್ಮವು ಮನುಷ್ಯ ಜಾತಿಯ ಭವಿತವ್ಯಕ್ಕೆ ಮೂಲಾ ಧಾರವಾಗಿದೆಯೆಂಬ ವಿಶ್ವಾಸವು ಎಲ್ಲರಲ್ಲಿಯೂ ಉಂಟಾಗುತ್ತಿರುವದು.

ಅಧ್ಯಾತ್ಮವು ಮಾನವ ಪ್ರಪಂಚಕ್ಕೆ ಸಂಜೀವಿನಿಯೆಂಬದು ಸರ್ವ ಸಾಮಾನ್ಯವಾಗಿರುವದು ನಿಜವು. ಆದರೂ ಅಂಥ ಅಧ್ಯಾತ್ಮದ ನಿಜ ಸ್ವರೂಪವೇನು? ಕೆಲವರು ವೇದಗಳು, ಕೆಲವರು ಉಪನಿಷತ್ತುಗಳು, ಕೆಲ ವರು ಶಾಸ್ತ್ರ ಪುರಾಣಗಳು, ಕೆಲವರು ಯೋಗಗಳು, ಕೆಲವರು ಗೂಢವಿದ್ಯೆ ಗಳು, ಕೆಲವರು ತಮ್ಮ ಅಂತರಂಗದ ಅನುಪಮ ಅನುಭವಗಳು, ಕೆಲವರು ನಿಸರ್ಗದ ರಹಸ್ಯಗಳು, ಕೆಲವರು ಅಗೋಚರ ಸೃಷ್ಟಿಸ್ವಭಾವದ ಗೂಢ ತತ್ವಗಳು, ಕೆಲವರು ತಾವು ಹುಟ್ಟಿದ ಅಥವಾ ಸೇರಿದ ಧರ್ಮಪಂಥಗಳು

ಇವೇ ಅಧ್ಯಾತ್ಮದ ಸ್ವರೂಪಗಳೆಂದು ನಂಬಿ ನಡೆಯುತ್ತಿರುವರು. ಇನ್ನು ಕೆಲವರು ಇವುಗಳಲ್ಲಾವುದೂ ಯಥಾರ್ಥವಲ್ಲವೆಂದೂ ಮನುಷ್ಯನನ್ನು ಇಂಥ ಬಂಧನಗಳಿಗೆ ಒಳಪಡಿಸದೆ ಸ್ವತಂತ್ರವಾಗಿ ಬಿಟ್ಟರೆ ಪ್ರತಿಯೊಬ್ಬನು ತನ್ನ ಬುದ್ಧಿಬಲದಿಂದ ಸಾಧಿಸಬಹುದಾದ ಅತ್ಯಂತಿಕ ನೈತಿಕ ಅಥವಾ ಲೌಕಿಕ ಶ್ರೇಯವೇ ಅಧ್ಯಾತ್ಮದ ಸ್ವರೂಪವೆಂದೂ ಪ್ರತಿಪಾದಿಸುವರು. ಅಧ್ಯಾತ್ಮದ ಸ್ವರೂಪವು ಹೀಗೆ ವಿಚ್ಛಿನ್ನವಾಗಿ ಗ್ರಹಿಸಲ್ಪಟ್ಟಿರುವಾಗ ಅದು ಎಂಥ ಸಂಜೀವಿನಿಯಾಗಿದ್ದರೂ ಮನುಷ್ಯನ ಉದ್ಧಾರಕ್ಕೆ ನೆರವಾಗುವುದು ಹೇಗೆ? ಮರುಭೂಮಿಯಲ್ಲಿ ಬಿತ್ತಿದ ಬೀಜದ ಹಾಗೆ ಅದು ವಿಫಲವಾಗುವುದರಲ್ಲಿ ಆಶ್ಚರ್ಯವೇನು? ಫಲಿಸದೆ ಹೋದುದಕ್ಕೆ ಅಧ್ಯಾತ್ಮವನ್ನು ಹಳಿದು ಫಲವೇನು?

ಪರಿಸ್ಥಿತಿಯು ಹೀಗಿದ್ದರೂ ಅಧ್ಯಾತ್ಮದಲ್ಲಿ ಎಲ್ಲರಿಗೂ ವಿಶ್ವಾಸವಿರುವುದು ಆಶ್ಚರ್ಯಕರವೂ ಶುಭಸೂಚಕವೂ ಆಗಿದೆ. ಈಗಿನ ಸಮಾಜದ ಅವ್ಯವಸ್ಥೆಯನ್ನು ಕಂಡು ಅದಕ್ಕುಪಾಯವೆಂದು, ಈವರೆಗೆ ತಾನು ಸಂಗ್ರಹಿಸಿದ ಅಧ್ಯಾತ್ಮದ ಅನುಭವಗಳ ಸಾರವನ್ನು ಪರಿಶೋಧಿಸಿ, ಪರಿಶ್ರಮದಿಂದಲೂ ನೂತನ ಅನುಭವಜನ್ಯವಾದ ಪ್ರಯತ್ನದಿಂದಲೂ ಅಗರ ಸೀಮವಾದ ನೆಲೆಯನ್ನು ಕಂಡುಹಿಡಿಯುವ ನಿರ್ಧಾರವನ್ನು ಮನುಷ್ಯನು ಮಾಡುತ್ತಲಿರುವನು. ಈ ಅವನ ಪ್ರಯತ್ನದಲ್ಲಿ ಭಗವದ್ಗೀತೆಯ ಸ್ಥಾನವಾವುದು, ಅದರ ಸಾಫಲ್ಯವೇನು ಎಂಬುದನ್ನು ಹೊಸ ದೃಷ್ಟಿಯಿಂದ ಸೂಚಿಸುವುದೇ ನಮ್ಮ ಪ್ರಸ್ತುತ ಪ್ರಯತ್ನದ ಉದ್ದೇಶವು.

## ಭಗವದ್ಗೀತೆಯೂ ಅಧ್ಯಾತ್ಮವೂ.

ಭಗವದ್ಗೀತೆಯು ಅಧ್ಯಾತ್ಮ ಗ್ರಂಥಗಳಲ್ಲಿ ರಾಜಪದವಿಯನ್ನು ಪಡೆದಿರುವುದು. ಇದನ್ನು ಕೊಂಡಾಡದವರೇ ಇಲ್ಲ. ಸನಾತನೀಯರಿಗೆ ಇದು ಪರಮ ಪೂಜ್ಯವು. ಅನ್ಯರಿಗೆ ಮಾನ್ಯವು. ಇದಕ್ಕೆ ಜನ್ಮವನ್ನಿತ್ತ ಸಂಸ್ಕೃತ ನುಡಿಯನ್ನು ಮೃತಭಾಷೆಗಳಲ್ಲಿ ಪರಿಗಣಿಸುವದುಂಟು. ಆದರೆ ತನ್ನ ಮಾತೃವಿನ ಅಮೃತತ್ವಕ್ಕೆ ಸಾಕ್ಷಿಯಾಗಿ ಇದು ಜಗತ್ತೆಲ್ಲವನ್ನೂ ಆಕ್ರಮಿ

ನುತ್ತಲಿರುವದು. ತಮ್ಮ ನಾಡು ನುಡಿಗಳಲ್ಲಿ ಅವತರಿಸಿದುದಕ್ಕಾಗಿ ಭಾರತೀಯರು ಈ ಲೋಕಮಾನ್ಯವಾದ ಭಗವದ್ಗೀತೆಯನ್ನು ನಿಸ್ಸೀಮ ಶ್ರದ್ಧಾಭಕ್ತಿಗಳಿಂದ ಮನ್ನಿಸಿರುವರು. ಇದಕ್ಕಾಗಿ ಅವರು ಆ ಅನುಪಮ ರಾಜಗ್ರಂಥದ ಋಣದಿಂದ ಮುಕ್ತರಾಗಿರುವರೆಂದೂ ಒಪ್ಪಬಹುದು. ಆದರೆ ಭಗವದ್ಗೀತೆಯು ಭಾರತೀಯರಿಗೆ ಏಕೆ ಫಲಿಸದೆ ಹೋಯಿತು? ವೈಭವ ವಿಜಯಾದಿಗಳು ಭಗವದ್ಗೀತೆಯ ಫಲಗಳೆಂದು ಸಂಜಯನು ಪೂರ್ಣ ವಿಶ್ವಾಸದಿಂದ ಹೇಳುವನಲ್ಲ? ಇವುಗಳಿಗೆ ನಾವು ಎರವಾದುದೇಕೆ? ತನ್ನನ್ನು ನಂಬಿದವರಿಗೆ ಶಾಂತಿ ಸಮಾಧಾನ ಆತ್ಮಸುಖಗಳೇ ಫಲಿಸುವ ವೆಂದು ಗೀತೆಯು ತಾನೇ ಹೇಳುವದಲ್ಲ? ಇವು ನಮಗೆ ದೊರೆಯದೆ ಹೋದುದೇಕೆ? ಈ ಪ್ರಶ್ನೆಗಳಿಗೆ ಈ ವರೆಗೆ ಅನೇಕರು ಅನೇಕ ರೀತಿಯಾಗಿ ಉತ್ತರವನ್ನು ಹೇಳಿರುವರು. ನಮ್ಮ ಅಲ್ಪಮತಿಗೆ ತೋರಿದ ಮತ್ತೊಂದು ಉತ್ತರವನ್ನು ಹೇಳುವದೇ ನಮ್ಮ ಪ್ರಯತ್ನವು.

## ಪ್ರಸ್ಥಾನತ್ರಯಿಯೂ ಭಗವದ್ಗೀತೆಯೂ

ಉಪನಿಷತ್ತುಗಳು, ಬ್ರಹ್ಮಸೂತ್ರಗಳು ಮತ್ತು ಭಗವದ್ಗೀತೆ ಇವು ಗಳಿಗೆ ಪ್ರಸ್ಥಾನತ್ರಯಿಯೆಂದು ಹೆಸರು. ಪ್ರಸ್ಥಾನತ್ರಯಿಯಲ್ಲಿ ಭಗವ ದ್ಗೀತೆಯು ಸೇರಿದ ಮೇಲೆಯೇ ಅಧ್ಯಾತ್ಮ ವಿದ್ಯೆಯ ಕ್ಷಿತಿಜದ ಮೇಲೆ ಅದು ಉದಯಿಸಿತೆಂದು ಧಾರಾಳವಾಗಿ ಹೇಳಬಹುದು. ತತ್ಪೂರ್ವದಲ್ಲಿ ಅದು ಇದ್ದುದು ನಿಜ, ಮತ್ತು ಅದರ ಆಗಿನ ಬಾಳಿಕೆಯು ಭಾಗ್ಯಹೀನವಾಗಿ ಅಥವಾ ನಿಸ್ತೇಜವಾಗಿ ಇದ್ದಿರುವ ಸಂಭವವಿಲ್ಲ. ಆದರೂ ಆ ಕಾಲದ ಅದರ ಜೀವನದ ಕುರುಹುಗಳಾಗಲಿ ಕಲ್ಪನೆಗಳಾಗಲಿ ಈಗ ಉಳಿದಿರುವದಿಲ್ಲ.

ಉಪನಿಷತ್ತುಗಳಿಗೂ ಬ್ರಹ್ಮಸೂತ್ರಗಳಿಗೂ ಅನ್ಯೋನ್ಯ ಸಂಬಂಧ ವುಂಟು. ಆದರೆ ಅದೇ ಬಗೆಯ ಸಂಬಂಧವು ಅವುಗಳಿಗೂ ಭಗವದ್ಗೀತೆಗೂ ಇರುವದಿಲ್ಲ. ಭಗವದ್ಗೀತೆಯನ್ನು ಗೌರವಪರವಾಗಿ ಉಪನಿಷತ್ತೆಂದೇ ಹೇಳುವದುಂಟು. ಇದರಿಂದ ಗೀತೆಯು ಪ್ರಸ್ಥಾನತ್ರಯಿಯಲ್ಲಿ ಸೇರಿಸ ಲ್ಪಟ್ಟಾಗ ಉಪನಿಷತ್ತುಗಳ ತತ್ವಗಳು ಜನರ ಮನಸ್ಸನ್ನು ಎಷ್ಟರ ಮಟ್ಟಿಗೆ

ಆಕರ್ಷಿಸಿದ್ದವೆಂಬುದು ಸ್ಪಷ್ಟವಾಗುವದು. ಹಾಗೆಯೇ ಭಗವದ್ಗೀತೆ ಯಾದರೂ ಆಗ ಅಷ್ಟೇ ಆದರಣೀಯವಾಗಿತ್ತೆಂಬದನ್ನೂ ಊಹಿಸಬಹುದು. ಈ ಪ್ರಕಾರ ಉಪನಿಷತ್ತುಗಳನ್ನೂ ಭಗವದ್ಗೀತೆಯನ್ನೂ ಒಂದೇ ತರಗತಿ ಯಲ್ಲಿ ತರುವವರು ಉಪನಿಷತ್ತುಗಳಿಗೆ ಭಗವದ್ಗೀತೆಯ ಆಧಾರವನ್ನು ಕೋರಿದ್ದರೋ ಅಥವಾ ಭಗವದ್ಗೀತೆಗೆ ಉಪನಿಷತ್ತುಗಳ ಆಧಾರವನ್ನು ಕೋರಿದ್ದರೋ ಎಂಬುದನ್ನು ತಿಳಿಯುವದು ಸಂದಿಗ್ಧವಾಗಿದ್ದರೂ ಬೋಧಪ್ರದ ವಾಗಿರುವದು. ಉಪನಿಷತ್ತುಗಳ ವೇದಾಂತ ತತ್ವಗಳನ್ನೇ ಅವರು ಪ್ರಸ್ಥಾ ಪಿಸಬೇಕಾಗಿದ್ದುದರಿಂದ ಸ್ವತಂತ್ರವಾಗಿದ್ದ ಭಗವದ್ಗೀತೆಯ ಆಧಾರವನ್ನೇ ಅದಕ್ಕಾಗಿ ಅವರು ಕೋರಿದ್ದರೆಂದು ಧಾರಾಳವಾಗಿ ಊಹಿಸಬಹುದು. ಹೀಗೆ ಭಗವದ್ಗೀತೆಯನ್ನು ಸ್ವತಂತ್ರವೆಂದು ಹೇಳುವದಕ್ಕೆ ಕಾರಣ ವೇನೆಂದರೆ ಪ್ರಸ್ಥಾನತ್ರಯಿಯಲ್ಲಿ ಅದನ್ನು ಸೇರಿಸಿಕೊಳ್ಳುವದಕ್ಕೆ ಮೊದಲು ಅದಕ್ಕೂ ಉಪನಿಷತ್ತುಗಳಿಗೂ ಸಂಬಂಧವು ಕಂಡುಬರುವದಿಲ್ಲ. ಅನಂತರ ದಲ್ಲಿ ಉಂಟಾದ ಬ್ರಹ್ಮಸೂತ್ರಗಳು ಉಪನಿಷತ್ತುಗಳಿಂದಲೇ ಉದಿಸಿದವೆಂದು ಹೇಳಿಕೊಳ್ಳುವವು. ಆದರೆ ಕೊನೆಯಲ್ಲಿ ಜನಿಸಿದ ಭಗವದ್ಗೀತೆಯಲ್ಲಿ ಉಪನಿಷತ್ತುಗಳ ಉಲ್ಲೇಖವೇ ಇರುವದಿಲ್ಲ. ಒಂದೇ ಒಂದೆಡೆಯಲ್ಲಿ ಬ್ರಹ್ಮಸೂತ್ರಗಳ ಉಲ್ಲೇಖವಿರುವದು ನಿಜ. ಆದರೆ ಅದಾದರೂ ಗೀತೆಯ ಮಹತ್ವವಿಲ್ಲದ ಒಂದು ವಿಭಾಗ ಮಾತ್ರಕ್ಕೆ ಸಂಬಂಧಿಸಿರುವದು.; ಗೀತೆಯ ಸಮಗ್ರ ಶಾಸ್ತ್ರಕ್ಕೆ ಸಂಬಂಧಪಟ್ಟಿಲ್ಲ. ಭಗವದ್ಗೀತೆಯಂಥ ಪ್ರಧಾನ ಗ್ರಂಥದಲ್ಲಿ ಜನ ಮಾನ್ಯತೆಯನ್ನು ಪಡೆದ ಉಪನಿಷತ್‌ಗ್ರಂಥಗಳ ಉಲ್ಲೇಖವು ಇಲ್ಲದಿರುವದೇ ಅದರ ಸ್ವಾತಂತ್ರ್ಯಕ್ಕೆ ಸಾಕ್ಷಿ.

## ಗೀತೆಯೂ ಉಪನಿಷತ್ತುಗಳೂ

ವೇದಗಳು ಅನಾದ್ಯನಂತವಾದವುಗಳೆಂದು ನಾವು ನೆರೆನಂಬುವೆವು. ಹೀಗಿರುವಾಗ ಉಪನಿಷತ್ತುಗಳನ್ನು ವೇದಾಂತವೆಂದು ಏಕೆ ತಿಳಿಯಬೇಕು? ಈ ಪ್ರಶ್ನೆಗೆ ಸಮಾಧಾನವನ್ನು ಹೇಳಬಹುದು. ಆದರೆ ನಮ್ಮ ಅಧ್ಯಾತ್ಮ ವಿಚಾರಗಳೆಲ್ಲ ಪ್ರತ್ಯಕ್ಷವಾಗಿ ಉಪನಿಷತ್ತುಗಳಲ್ಲಿಯೇ ವಿರಾಮಗೊಂಡಿದ್ದು

ನಾವು ವೇದಗಳ ಅಂತವನ್ನು ಅವುಗಳಲ್ಲಿಯೇ ಕಲ್ಪಿಸಿರುವೆವೆಂಬುದು ನಿರ್ವಿವಾದವು. ಈ ಕಲ್ಪನೆಗೆ ಬಲವಾದ ವಿರೋಧವನ್ನು ಗೀತೆಯು ಉಂಟು ಮಾಡಬಹುದಾಗಿತ್ತು. ಆದರೆ ಅದನ್ನು ಪ್ರಸ್ಥಾನತ್ರಯಿಯಲ್ಲಿ ಸೇರಿಸಿದ್ದರಿಂದ ಉಪನಿಷತ್ತುಗಳ ಸಾಮ್ರಾಜ್ಯವೇ ದೃಢವಾಯಿತು. ಉಪನಿಷತ್ತುಗಳ ಮಹತ್ವವನ್ನೂ ಉಪಯುಕ್ತತೆಯನ್ನೂ ನಾವು ಅಪಹಿಸುವದಿಲ್ಲವೆಂದು ತಿಳಿಯಬಾರದು. ಅವು ಸದ್ಯದ ವಿಷಯವಲ್ಲವಾದುದರಿಂದ ಅವುಗಳ ಗುಣಗಳನ್ನು ನಾವು ಇಲ್ಲಿ ಪರಿಶೀಲಿಸುವದಿಲ್ಲ. ನಾವು ಒತ್ತಿ ಹೇಳಬೇಕಾಗಿರುವ ಮುಖ್ಯಾಂಶವೇನೆಂದರೆ ಗೀತೆಯು ಪ್ರತಿಪಾದಿಸುವ ತತ್ವಜ್ಞಾನವನ್ನು ಉಪನಿಷತ್ತುಗಳ ಒರೆಗಲ್ಲಿಗೆ ಹಚ್ಚಿ ಅದರ ಸತ್ಯಾಂಶವನ್ನು ನಿರ್ಣಯಿಸ ಹೋದುದರಿಂದ ಸನಾತನ ಧರ್ಮಕ್ಕೆ ಬಹಳ ಹಾನಿಯುಂಟಾಗಿರುವದು. ಗೀತೆಯ ತತ್ವಜ್ಞಾನವು ಉಪನಿಷತ್ತುಗಳಲ್ಲಿ ಅಡಗಿ ಹೋಗದೆ ಅವುಗಳ ತತ್ವಜ್ಞಾನಕ್ಕೆ ಪ್ರತಿಸ್ಪರ್ಧಿಯಾಗಿ ನಿಂತಿದ್ದರೆ ಸನಾತನ ಧರ್ಮದ ಇತಿಹಾಸವು ಬಹಳ ಉಜ್ವಲವಾಗುತ್ತಿತ್ತೆಂದು ನಮ್ಮ ನಂಬುಗೆ. ಉಪನಿಷತ್ತುಗಳೂ ಭಗವದ್ಗೀತೆಯೂ ಏಕವಿಷಯಕ ಗ್ರಂಥಗಳಾಗಿರುವದು ನಿಜವಾದರೂ ಅವುಗಳ ಸಿದ್ಧಾಂತಗಳು ಒಂದನ್ನೊಂದು ಬಿಟ್ಟಿರಬಾರದೆಂಬ ಮಾತು ನಮಗೆ ಅಗ್ರಾಹ್ಯವಾಗಿ ತೋರುವದು. ಅವುಗಳಲ್ಲಿ ಅಭಿನ್ನತೆಯನ್ನು ಕಲ್ಪಿಸಿ ಗೀತೆಯನ್ನು ಉಪನಿಷತ್ತುಗಳಿಗೆ ಸ್ವಾಧೀನಪಡಿಸಿದಂತೆಯೇ ಇನ್ನಿತರ ಶಾಸ್ತ್ರಗಳಾದರೂ ಗೀತೆಯನ್ನು ತಮ್ಮ ಅನುಯಾಯಿ ಎಂದು ತಿಳಿಯುತ್ತಲಿರುವವು. ಸಾಂಖ್ಯಶಾಸ್ತ್ರ ಯೋಗಶಾಸ್ತ್ರಗಳು ಈ ಮಾತಿಗೆ ಸಾಕ್ಷಿಯಾಗಿವೆ. ಭಗವದ್ಗೀತೆಯು ಸ್ವಯಂಪ್ರಕಾಶಿಯಾದ ರಾಜಗ್ರಂಥವು. ಅದು ಪರ ಪ್ರಕಾಶಿತವೆಂದು ಬಗೆಯುವದು ಸರಿಯಲ್ಲ. ಅದು ಸ್ವಯಂ ಪ್ರಕಾಶಿಯೆಂದು ತಿಳಿದು ಅದರ ಸ್ವತಂತ್ರ ಬೋಧನೆಯ ಸತ್ಯಾಂಶವನ್ನು ಪರಿಶೋಧಿಸಿ ನಮ್ಮ ಅಲ್ಪಮತಿಗೆ ತೋರಿದಂತೆ ನಾವು ಅದನ್ನು ಜನತೆಯೆಂಬ ಜನಾರ್ದನನ ಮುಂದೆ ಮಂಡಿಸಿರುವೆವು. ಇದರಲ್ಲಿ ಹಲಕೆಲವು ನ್ಯೂನತೆಗಳು ಸೇರಿಕೊಂಡಿರಬಹುದು. ಅವುಗಳನ್ನು ಸರಿಪಡಿಸುವ ಭಾರವು ವಾಚಕರದು.

## ಜನಸಾಮಾನ್ಯರೂ ಭಗವದ್ಗೀತೆಯೂ

ಇನ್ನು ಭಗವದ್ಗೀತೆಯ ಪರಿಚಯವು ಜನಸಾಮಾನ್ಯರಲ್ಲಿ ಸದ್ಯಕ್ಕೆ ಯಾವ ಸ್ಥಿತಿಯಲ್ಲಿರುವದೆಂಬುದನ್ನು ವಿಚಾರಮಾಡುವ. ಮತಸ್ಥಾಪಕರಾದ ಆಚಾರ್ಯರು, ಅವರ ಅಭಿಪ್ರಾಯಗಳನ್ನು ಸುಬೋಧಪಡಿಸುವ ಟೀಕಾಕಾರರು, ಕವಿಗಳು, ವೇದವಿಶಾರದರು, ಯೋಗಿಗಳು, ಪೌರಾಣಿಕರು, ತಾರ್ಕಿಕರು, ವೈಯ್ಯಾಕರಣಿಗಳು ಮೊದಲಾದ ಪ್ರಾಚೀನರೂ; ಐತಿಹಾಸಿಕರು, ಪ್ರಾಚ್ಯವಿದ್ಯಾವಿಶಾರದರು, ಅಂತರಂಗ ಬಹಿರಂಗ ಪರೀಕ್ಷಕರು, ರಹಸ್ಯ ಶೋಧಕರು, ಪೌರ್ವಾತ್ಯ ಪಾಶ್ಚಾತ್ಯ ಪಂಡಿತರು, ಮತಾನುಯಾಯಿಗಳು ಆಚಾರ ವಿಚಾರ ಸ್ವಾತಂತ್ರ್ಯವಾದಿಗಳು, ನಿಯತಕಾಲಿಕ ವಿದ್ವಾಂಸರು ವಿದ್ಯಾವಿಭೂಷಿತ ಸ್ತ್ರೀಪುರುಷರು, ಸಮಾಜ ಸುಧಾರಕರು, ಸ್ವರಾಜ್ಯ ಪುರಸ್ಕರ್ತರು, ನೀತಿ ಶಾಸ್ತ್ರಕಾರರು, ಅಧ್ಯಾತ್ಮಿಕರು, ಅನಧ್ಯಾತ್ಮಿಕರು, ಸನಾತನಿಗಳು, ಪರಧರ್ಮಾನುಯಾಯಿಗಳು, ನಿಬಂಧಲೇಖಕರು, ಮೊದಲಾದ ಅರ್ವಾಚೀನರೂ ಗೀತೆಯನ್ನು ಬಹುಜನ ಸಮಾಜಕ್ಕೆ ಪರಿಚಿತವಾಗಿ ಮಾಡುವ ಸತ್ಕಾರ್ಯವನ್ನು ಸಾಯಾಸದಿಂದ ಯತ್ನಿಸಿಯೂ ಯತ್ನಿಸುತ್ತಲೂ ಇರುವರು. ಇವರ ನಾನಾವಿಧ ದೃಷ್ಟಿ ವೈಶಿಷ್ಟ್ಯಗಳಲ್ಲಿ ಯಾವುದೊಂದನ್ನೂ ಗೀತೆಯು ತನ್ನದೆಂದು ಒಪ್ಪುವದಿಲ್ಲ. ಅದಕ್ಕೆ ಸ್ವತಂತ್ರವೂ ಅತ್ಯುಚ್ಚವೂ ಆದ ಧ್ಯೇಯದೃಷ್ಟಿಯು ಇರುವದು. ಈ ವಿವಿಧ ದೃಷ್ಟಿಗಳೇ ಅಲ್ಲದೆ ಇವುಗಳಂತೆ ಇನ್ನು ಮುಂದೆ ಉಂಟಾಗಬಹುದಾದವೂ ಗೀತೆಯ ಈ ಸರ್ವ ಸಂಗ್ರಾಹಕವಾದ ಧ್ಯೇಯದೃಷ್ಟಿಯಲ್ಲಿ ಸಮಾವೇಶವಾಗಿರುವದು ಸಹಜವು. ಇನ್ನೊಂದು ವಿಶೇಷವೇನೆಂದರೆ ಇವರಲ್ಲಿ ಎಲ್ಲರೂ ಗೀತೆಗೆ ಮಾರ್ಗದರ್ಶಕರಾಗುವರೇ ಹೊರತು ಅದನ್ನು ಮಾರ್ಗತೋರಿಸೆಂದು ಕೇಳುವವರು ಯಾರೂ ಇಲ್ಲ. ಗೀತೆಯನ್ನು ಪರಾಮರಿಸುವದರಲ್ಲಿ ಅವರ ಉದ್ದೇಶವು ಗೀತಾರ್ಥಗ್ರಹಣವಲ್ಲ. ತಮ್ಮವೆಂದು ತಾವು ಭಾವಿಸಿದ ಧರ್ಮತತ್ವಗಳನ್ನು ಗೀತೆಯಾದರೂ ಒಪ್ಪುವದು; ಈ ಕಾರಣ ಗೀತೆಯ ಜನಮಾನ್ಯತೆಯು ತಮ್ಮ ತತ್ವಗಳಿಗೂ ದೊರೆಯಬೇಕೆಂಬ ಉದ್ದೇಶದಿಂದ ಗೀತೆಯನ್ನು ಅನೇಕರು ವಿಧವಿಧವಾಗಿ ಗೌರವಿಸುವರು. ಇಂಥ ವೇದಾಂತ

ಕೋವಿದರ ಕೋಲಾಹಲದಲ್ಲಿ ಈಗಿನ ಬಹುಜನ ಸಮಾಜವು ಗೀತೆಯ ಗುರಿಯನ್ನರಿಯದೆ ದಿಙ್ಮೂಢವಾಗುವದು ಸಹಜವಾಗಿದೆ. ಈ ತರದ ಮಂಥನದಿಂದ ಬಹುಜನ ಸಮಾಜಕ್ಕೆ ನಿಶ್ಚಿತ ಜ್ಞಾನಕ್ಕಿಂತಲೂ ಗೀತಾ ವಿಷಯಕ ಸಂದೇಹಗಳೇ ಹೆಚ್ಚಾಗಿ ಉಂಟಾಗಿರುವವು. ಗೀತೆಯು ಬಹು ಗಹನವಾದ, ಭವ್ಯವಾದ, ಅದ್ಭುತವಾದ ಆಧ್ಯಾತ್ಮಿಕ ಗ್ರಂಥವೆಂದು ಎಲ್ಲರೂ ಒಪ್ಪುವರು. ಆದರೂ ವೇದಾಂತ ವಿಷಯವೇ ಸಾಧಾರಣ ಮನುಷ್ಯರಿಗೆ ದುರ್ಗಮವಾದುದರಿಂದ ಅದನ್ನು ವಿವರಿಸುವ ಗೀತೆಯನ್ನು ವಿದ್ವಾಂಸರಿಗೊಪ್ಪಿಸಿ ತಾವು ದೂರದಲ್ಲಿರುವದೇ ಉಚಿತವೆಂಬ ಭಾವನೆಯು ಸಾಮಾನ್ಯವಾಗಿ ದೃಢವಾಗಿರುವದು. ಇತ್ತೀಚೆಗೆ ಆಧುನಿಕ ಬರಹಗಾರರು ಗೀತೆಯು ವೇದಾಂತಕ್ಕಿಂತಲೂ ವ್ಯವಹಾರದ ಅಥವಾ ನೀತಿಶಾಸ್ತ್ರದ ಪ್ರಧಾನಗ್ರಂಥವೆಂದು ವಾದಿಸಿರುವರು. ಅದು ಬಹುಮಟ್ಟಿಗೆ ಸಮರ್ಪಕವೆನಿಸಿ, ಬಹುಜನಸಮಾಜವು ಆತ್ಮಹಿತ ದಕ್ಷತೆಯಿಂದ ಈಗೀಗ ಗೀತೆಯ ಕಡೆಗೆ ಒಲೆಯುತ್ತಲಿರುವದು.

## ಆತ್ಮತತ್ವಬೋಧವು ಶ್ರವಣಸುಖದಲ್ಲಿಲ್ಲ.

ನಾವು ನೆಚ್ಚಿದ ವಿದ್ವಾಸರಿಂದ ಯಾವ ನಿಶ್ಚಿತ ಜ್ಞಾನವನ್ನು ಪಡೆದಿರುವೆವೆಂಬುದನ್ನು ಇಲ್ಲಿ ವಿಚಾರಿಸುವ. ವೇದಾಂತ ವಾಙ್ಮಯದಲ್ಲಿ ತುಂಬಿರುವ ಗಂಭೀರವಾದ ಶಬ್ದಸಂಗ್ರಹವು ಈ ಮೂಲಕ ಸಾಮಾನ್ಯವಾಗಿ ಜನರಲ್ಲಿ ರೂಢವಾಗಿರುವದು ನಿಜವು. ಆದರೆ ಇಂಥ ಶಬ್ದಭಾಂಡಾರದ ಪರಿಚಯದಿಂದ ಪ್ರತ್ಯಕ್ಷ ಜ್ಞಾನಲಾಭವು ಅವರಿಗೆ ಆದಂತೆ ಕಾಣುವುದಿಲ್ಲ. ಈ ಶಬ್ದಭಾಂಡಾರವನ್ನು ಸಂಗ್ರಹಿಸುವಾಗಲೂ ಶಬ್ದಗಳು ಪರಿಚಿತವಾದ ಬಳಿಕ ಅವುಗಳನ್ನು ಉಪಯೋಗಿಸುವಾಗಲೂ ನಾವು ಸಮಾಧಾನವನ್ನೇ ಅಲ್ಲದೆ ಆಧ್ಯಾತ್ಮ ಮೂಲಕ ಸುಖವನ್ನೂ ಅನುಭವಿಸುವದು ನಿಜವು. ಆದರೂ ಇಂಥ ಸುಖದೊಳಗಿನ ಸತ್ಯಾಂಶವನ್ನು ನಾವು ಕಂಡುಕೊಳ್ಳದೆ ಹೋಗಿರುವೆವು. ಇಂದ್ರಿಯ ಗ್ರಾಹ್ಯವಾದ ಸುಖಕ್ಕಿಂತಲೂ ಮನಸ್ಸಿನಿಂದ ಗ್ರಹಿಸಿದ ಸುಖವು ಸೂಕ್ಷ್ಮವಾಗಿಯೂ ತೀಕ್ಷ್ಣವಾಗಿಯೂ ಇರುವದು. ಹಾಗೆಯೇ ಬುದ್ಧಿಯಿಂದ ಸಲ್ಲುವ ಸುಖವು ಮನೋಗ್ರಾಹ್ಯವಾದ

ಸುಖಕ್ಕಿಂತಲೂ ಶ್ರೇಷ್ಠವಾಗಿರುವದು ಸಹಜವು. ಇಂದ್ರಿಯ ಸ್ವಭಾವ ವನ್ನು ಮೀರಿದ ಆತ್ಮ ಸ್ವಭಾವದ ನೆಲೆಯನ್ನು ಕಂಡುಹಿಡಿಯುವ ಪ್ರಯತ್ನ ದಿಂದ ಮನುಷ್ಯನ ಬುದ್ಧಿಗೆ ಸಲ್ಲುವ ಸುಖವು ಉಚ್ಚತಮವಾಗಿರುವದು ಆಶ್ಚರ್ಯವಲ್ಲ. ಈ ಸುಖವು ಪ್ರಾಪ್ತವಾಗಲಿಕ್ಕೆ ಬುದ್ಧಿಯು ವಿಚಾರಿ ಸುವ ಆತ್ಮ ತತ್ವಗಳು ಸತ್ಯವಾಗಿಯೇ ಇರಬೇಕೆಂಬ ಅಗತ್ಯವಿಲ್ಲ. ಬುದ್ಧಿಯು ಅವನ್ನು ಗ್ರಹಿಸಲು ಮಾಡಿದ ಕೇವಲ ಪ್ರಯತ್ನದಿಂದಲೇ ಅದು ಸುಖಿಸಿ, ಸಮಾಧಾನಪಡುವದು. ಬುದ್ಧಿಯು ಇಂಥ ಸಂದರ್ಭದಲ್ಲಿ ಪಡೆಯುವ ಸುಖವು ಅದು ಗ್ರಹಿಸಿದ ಆತ್ಮತತ್ವದ ಸತ್ಯತೆಗೆ ಸಾಕ್ಷಿಯೆಂದು ಊಹಿಸ ಬಾರದು. ಸತ್ಯವಾದ ಆತ್ಮತತ್ವಗಳನ್ನು ನಿಜವಾಗಿ ಅರಿಯುವದರಿಂದ ಆಶ್ಚರ್ಯವು ಅಳಿಯಬೇಕು, ಸಂದೇಹಗಳು ನಿಶ್ಶೇಷವಾಗಿ ನಷ್ಟವಾಗಬೇಕು. ಆತ್ಮ ತತ್ವಬೋಧವಾದುದರಿಂದ ದೊರೆಯುವ ಶಾಂತಿ ಸಮಾಧಾನಗಳು ಆತ್ಮ, ಬುದ್ಧಿ, ಮನಸ್ಸು, ಇಂದ್ರಿಯ ಸ್ವಭಾವಗಳನ್ನು ಆಕ್ರಮಿಸಿ ನೆಲೆ ಯಾಗಿ ನಿಲ್ಲಬೇಕು. ಅಲ್ಲದೆ ಬುದ್ಧಿಯು ತಾನು ಮಾಡುವ ಆಧ್ಯಾತ್ಮ ಶೋಧನೆಯ ಚತುರತೆಯಿಂದ ಪಡೆಯುವ ಸುಖವು ಅದು ಗ್ರಹಿಸಿದ ತತ್ವ ಗಳ ಸತ್ಯತೆಗೆ ಎಂದಿಗೂ ಸಾಕ್ಷಿಯಾಗಲಾರದು ಎಂದು ಗೀತೆಯು ಅಭಿ ಪ್ರಾಯ ಪಡುವದು. ವಿದ್ವಾಂಸರ ಪರಿಶ್ರಮದಿಂದ ಈ ಪ್ರಕಾರದ ಆತ್ಮ ತತ್ವಗಳ ಅನುಭವವು ಬಹುಜನಸಮಾಜಕ್ಕೆ ದೊರೆತ ಲಕ್ಷಣಗಳು ಎಲ್ಲಿಯೂ ಕಾಣಿಸುವದಿಲ್ಲ. ಇದಕ್ಕೆ ಬದಲು ವೇದಾಂತ ಶಬ್ದಗಳ ಸಾಂಕೇತಿಕ ಅರ್ಥ ದಿಂದ ಸತ್ಯದ ಬೋಧವಾಗದೆ ಸಂದೇಹಗಳೇ ಬಲಿತು ಬೇರೂರಿರುವವು. ಆತ್ಮ, ಬ್ರಹ್ಮ, ಕರ್ಮ, ಜ್ಞಾನ, ಸಂನ್ಯಾಸ, ಯೋಗ, ಅಧ್ಯಾತ್ಮ, ಅಧಿದೈವ, ಅಧಿಭೂತ, ಕರ್ಮವಿಪಾಕ, ನಿರ್ದ್ವಂದ್ವತೆ, ತ್ರಿಗುಣಾತೀತತೆ, ಭಕ್ತಿ, ಮೋಕ್ಷ, ಕ್ಷರ, ಅಕ್ಷರ, ಸುಖದುಃಖ, ಸತ್ ಅಸತ್, ವಿನಾಶಿ ಅವಿನಾಶಿ, ಪಿಂಡಬ್ರಹ್ಮಾಂಡ, ಪುರುಷಪ್ರಕೃತಿ, ಜೀವಾತ್ಮ ಪರಮಾತ್ಮ ಇವೇ ಮೊದ ಲಾದ ವೇದಾಂತ ವಾಙ್ಮಯದೊಳಗಿನ ಮನೋಹರ ಶಬ್ದಗಳ ಅರ್ಥ ಗಹ ನತೆಯಿಂದ ಬುದ್ಧಿಯು ಆತ್ಯಂತಿಕ ಸುಖವನ್ನು ಪಡೆದು ತಾನು ಸತ್ಯದ ನೆಲೆಯನ್ನು ಕಂಡು ಹಿಡಿಯಿತೆಂದು ಭಾವಿಸುವದು. ಆದರೂ ಈ ಶಬ್ದ ಗಳಿಂದ ತತ್ವಬೋಧವು ಆಗಿರುವದಿಲ್ಲವೆಂಬುದಕ್ಕೆ ಅವುಗಳಲ್ಲಿ ಒಂದೊಂದು

ಶಬ್ದದ ಅರ್ಥವು ವಿದ್ವಾಂಸರಿಗೇ ಅನಿಶ್ಚಿತವಾಗಿಯೂ ವಾದಗ್ರಸ್ತ ವಾಗಿಯೂ ಇರುವದು ಸಾಕ್ಷಿಯಾಗಿದೆ. ಎಂದಮೇಲೆ ವಿದ್ವಾಂಸರ ಪರಿಶ್ರಮದಿಂದ ಅಧ್ಯಾತ್ಮ ತತ್ವಗಳ ವಿಷಯದಲ್ಲಿ ಬಹುಜನಸಮಾಜಕ್ಕೆ ಯಾವ ನಿಶ್ಚಿತ ಜ್ಞಾನವೂ ದೊರೆತಿಲ್ಲವೆಂಬುದು ಸ್ಪಷ್ಟವು.

## ಅಧ್ಯಾತ್ಮಜ್ಞಾನವಾಗದಿದ್ದುದಕ್ಕೆ ಇನ್ನಿತರ ಕಾರಣಗಳು.

ಮಾನವಜಾತಿಯು ಅಧ್ಯಾತ್ಮಪ್ರಪಂಚದ ಅರುಣೋದಯಕಾಲದಿಂದ ಈ ವರೆಗಿನ ಅದರ ವಿವಿಧ ಅನುಭಾವಗಳ ಆದರ್ಶಗಳಂತಿರುವ ಶ್ರುತಿ ಸ್ಮೃತಿ ಪುರಾಣಗ್ರಂಥಗಳನ್ನು ಕಾಲಭೇದವಿಲ್ಲದೆ ಕಾಪಾಡಿಕೊಂಡು ಬಂದುದ ಕ್ಕಾಗಿ ವಿದ್ವಾಂಸರಿಗೆ ಎಷ್ಟು ಧನ್ಯವಾದಗಳನ್ನು ಅರ್ಪಿಸಿದರೂ ಸಾಲದು. ಆದರೆ ಆ ಗ್ರಂಥಗಳ ಇಂಗಿತವನ್ನು ಆ ವಿದ್ವಾಂಸರು ವಿವರಿಸಿದಂತೆಯೇ ಸ್ವಲ್ಪವೂ ವ್ಯತ್ಯಾಸಮಾಡದೆ ಸ್ವೀಕರಿಸುವದು ಈ ಕಾಲದಲ್ಲಿ ಸಯುಕ್ತಿಕ ವಾಗಿರುವದಿಲ್ಲ. ಅಧ್ಯಾತ್ಮವಿಷಯದಲ್ಲಿ ವಿದ್ವಾಂಸರಿಂದ ಬಹುಜನ ಸಮಾಜಕ್ಕೆ ಪ್ರಯೋಜನವಿಲ್ಲದೆ ಹೋದುದಕ್ಕೆ ವಿದ್ವಾಂಸರೇ ಹೊಣೆಗಾರರೆಂದು ಹೇಳಲಾಗದು. ಸಮಾಜಕ್ಕೆ ಈ ವಿಷಯದಲ್ಲಿ ಅಕ್ಕರೆಯಿಲ್ಲದೆ ಹೋದುದ ರಿಂದ ಅದೂ ಹೊಣೆಯನ್ನು ಹೊರಬೇಕೆಂದು ನಾವು ಈ ಮೊದಲೇ ಸೂಚಿಸಿರುವೆವು. ಇದೂ ಅಲ್ಲದೆ ಅಧ್ಯಾತ್ಮದೊಂದಿಗೆ ಕಾವ್ಯ, ಸಂಗೀತ, ನ್ಯಾಯ, ವಾಙ್ಮಯ, ಯೋಗ ಮೊದಲಾದವು ಅಪರಿಹಾರ್ಯವಾಗಿ ಕೂಡಿರುವವು. ಇವುಗಳಿಂದ ಅಧ್ಯಾತ್ಮದಲ್ಲಿ ತೋರುವ ಸೌಂದರ್ಯಕ್ಕಾಗಿಯೇ ಅದು ಸಮಾಜಕ್ಕೆ ಪ್ರಿಯವಾದಂತೆ ಕಾಣುವದು. ಅಧ್ಯಾತ್ಮಕ್ಕಾಗಿ ಅಧ್ಯಾತ್ಮ ವನ್ನು ಸಮಾಜವು ಬಯಸಿದಂತೆ ಕಾಣಿಸುವದಿಲ್ಲ. ಅದು ಫಲಿಸದೆ ಹೋದುದಕ್ಕೆ ಇದಾದರೂ ಒಂದು ಕಾರಣವೆಂದು ಹೇಳಬಹುದು.

ಅಧ್ಯಾತ್ಮ ತತ್ವಗಳನ್ನು ಮನಗಾಣುವದಕ್ಕೆ ಬುದ್ಧಿಯ ಕುಶಾಗ್ರತೆಯು ಅವಶ್ಯವೆಂಬ ದೃಢವಿಶ್ವಾಸದಿಂದ ಅವುಗಳನ್ನು ಸಂಗ್ರಹಿಸುವ ಕಾರ್ಯವನ್ನು ಸಾಮಾನ್ಯ ಜನರು ಋಷಿಗಳಿಗೂ ಕವಿಗಳಿಗೂ ಒಪ್ಪಿಸಿದಂತೆ ತೋರುವದು. ಋಷಿಗಳ ಜ್ಞಾನೋದ್ರೇಕವನ್ನಾಗಲಿ, ಕವಿಗಳ ಕಲ್ಪನಾ

ತರಂಗಗಳನ್ನಾಗಲಿ, ವಾಕ್‌ಪಟುತ್ವವನ್ನಾಗಲಿ, ನ್ಯಾಯ ತರ್ಕಶಾಸ್ತ್ರಗಳ ರುಕ್ಷ ತಾಂತ್ರಿಕ ನಿಯಮಗಳನ್ನಾಗಲಿ ಅಧ್ಯಾತ್ಮವು ಅವಲಂಬಿಸದಿದ್ದರೆ ಅದು ಬದುಕಲಾರದೆಂಬ ಭಾವನೆಯು ಜನರಲ್ಲಿ ದೃಢಮೂಲವಾದಂತಿರುವುದು. ಅಧ್ಯಾತ್ಮವು ಒಂದು ಸ್ವತಂತ್ರ ಶಾಸ್ತ್ರವೆನಿಸದಿದ್ದರೂ ಹೆಸರಿಗೋಸ್ಕರ ಅದನ್ನು ಅಧ್ಯಾತ್ಮ "ಶಾಸ್ತ್ರ"ವೆಂದು ಗೌರವಿಸುವದುಂಟು. ಆದರೆ ಸ್ವತಂತ್ರ ಶಾಸ್ತ್ರದ ಯಾವ ಲಕ್ಷಣವೂ ಈ ಅಧ್ಯಾತ್ಮಶಾಸ್ತ್ರದಲ್ಲಿ ಕಂಡುಬರುವುದಿಲ್ಲ. ಶಾಸ್ತ್ರವು ಸ್ವತಂತ್ರವಾದ ಹಾಗೆಲ್ಲ ಅದರ ಪ್ರಮೇಯಗಳು ಖಂಡಿತವಾಗಿ ಏರ್ಪಡುತ್ತ ಹೋಗಬೇಕು. ಈ ಪ್ರಮೇಯಗಳು ಮನುಷ್ಯನ ಅನುಭವಕ್ಕೆ ಎಂದಿಗೂ ವಿಪರೀತವಾಗಿ ತೋರಬಾರದು; ಅವು ಇತರ ಶಾಸ್ತ್ರಗಳ ನಿಯಮಗಳನ್ನು ಉಲ್ಲಂಘಿಸಬಾರದು; ಮತ್ತು ಅಧ್ಯಾತ್ಮ ಶಾಸ್ತ್ರದ ವಿಶಿಷ್ಟ ಸ್ವರೂಪವನ್ನು ತಾಳಿರಬೇಕು. ಅಧ್ಯಾತ್ಮವೆಂದು ಈಗ ಭಾವಿಸಲ್ಪಡುವ ಶಾಸ್ತ್ರದಲ್ಲಿ ಈ ಲಕ್ಷಣಗಳು ಕಾಣಿಸುವದಿಲ್ಲ. ಇದೂ ಅಲ್ಲದೆ ಅಧ್ಯಾತ್ಮವೆಂದರೆ ಇಂದ್ರಿಯಾತೀತವಾದ ಗೂಢತತ್ವಗಳ ವಿಚಾರಣೆಯೇ ಎಂಬ ಭಾವನೆಯು ನೆಲೆಗೊಂಡಿರುವದು. ಇಂಥ ಸತ್ಯಗಳಿಗೆ ಸರ್ವಸಾಧಾರಣವಾದ ಅನುಭವದ ಬೆಂಬಲವು ದೊರೆಯುವದು ಸುಲಭವಲ್ಲ. ಆದುದರಿಂದ ಅಲೌಕಿಕ ವ್ಯಕ್ತಿಗಳ ಅಥವಾ ವಿಭೂತಿಗಳ ಆಧ್ಯಾತ್ಮಿಕ ಅನುಭವಗಳನ್ನು ಸಂಗ್ರಹಿಸಿ ಆ ಶಾಸ್ತ್ರವನ್ನು ರಚಿಸಬೇಕಾಯಿತು. ಇಂಥ ಅನುಭವಗಳು ಪರಸ್ಪರ ವಿರುದ್ಧವಾಗಿಯೂ ಇರುವವು. ಆದರೂ ಈ ವ್ಯಕ್ತಿಗಳ ವಿಭೂತಿತ್ವವು ಅಬಾಧಿತವೆಂದು ಊಹಿಸಲ್ಪಡುವದರಿಂದ ಅವರ ಅನುಭವಗಳೊಳಗಿನ ವಿರೋಧವನ್ನು ಲಕ್ಷಿಸದೆ ಅವು ಸತ್ಯಾಂಶಗಳೆಂದೇ ಭಾವಿಸಬೇಕಾಯಿತು. ಇಂಥ ವಿರೋಧ ಯುಕ್ತವಾದ ತತ್ವಗಳನ್ನು ಸತ್ಯಗಳೆಂದು ಹೇಳುವದಕ್ಕೆ ಆಸ್ಪದವಿಲ್ಲದ್ದರಿಂದ ಅವುಗಳನ್ನು ಮತಗಳೆಂದು ಹೇಳಬೇಕಾಯಿತು. ಇಂಥ ಮತಗಳ ಕೋಲಾಹಲವೇ ಈಗ ಅಧ್ಯಾತ್ಮಶಾಸ್ತ್ರವೆಂದು ಮೆರೆಯುತ್ತಲಿರುವದು. ಗೌರವಕ್ಕಾಗಿ ಇವುಗಳನ್ನು ಸತ್ಯಗಳೆಂದರೂ ಅವು ಊಹೆ ಅನುಮಾನಗಳೇ ಹೊರತು ಸನಾತನ ಸತ್ಯಗಳಲ್ಲ. ಇಂಥ ಅನುಮಾನಗಳ ಸಂದಣಿಯನ್ನು ಶಾಸ್ತ್ರವೆಂದು ಕರೆದರೂ ಅದಕ್ಕೆ ನಿಜವಾದ ಶಾಸ್ತ್ರದ ಯೋಗ್ಯತೆಯು ಹೇಗೆ ಸಲ್ಲಬಹುದು? ನಿಜವಾದ

ಅಧ್ಯಾತ್ಮ ಶಾಸ್ತ್ರವು ಬಾಹ್ಯಸೃಷ್ಟಿಯನ್ನು ಅಲ್ಲಗಳೆಯದೆ ಅದರ ತತ್ವಗಳನ್ನೆಲ್ಲ ವನ್ನು ನಿಚ್ಚಳವಾಗಿ ತಿಳಿದು ಆತ್ಮತತ್ವಗಳಿಗೆ ಇರುವ ಅವುಗಳ ಸಂಬಂಧ ವನ್ನು ಸಾಧಾರಣ ಮನುಷ್ಯನ ಭಾವನೆಗೆ ತಿಳಿಯುವ ಹಾಗೆ ತೋರಿಸಿ ಕೊಡಬೇಕು. ಅದರೊಳಗಿನ ಸಿದ್ಧಾಂತಗಳು ಸಾರ್ವಕಾಲಿಕವಾಗಿಯೂ ಸಾರ್ವತ್ರಿಕವಾಗಿಯೂ ಸಮ್ಮತವಾಗುವಂತೆ ಇರಲಿಕ್ಕೆಬೇಕು. ಮನುಷ್ಯನ ಸ್ವಭಾವದ ಒಂದು ವಿಶಿಷ್ಟ ಭಾಗವನ್ನು ಮಾತ್ರವಲ್ಲದೆ ಅವನ ಸ್ವಭಾವ ಸರ್ವಸ್ವವನ್ನು ಅದು ತಿಳಿಸಿ ಹೇಳುವಂತಿರಬೇಕು. ಈ ತರದ ಅಧ್ಯಾತ್ಮ ಶಾಸ್ತ್ರವು ಪ್ರಸ್ತುತದಲ್ಲಿ ಇರುವದಿಲ್ಲವೆಂದು ನಮಗೆ ತೋರುವದು. ನಾವು ಧಾರಿಯಾದ ಅಧ್ಯಾತ್ಮ ಶಾಸ್ತ್ರವನ್ನು ಶಾಸ್ತ್ರವೆಂದು ಒಪ್ಪದೆ ಸಂಪೂರ್ಣವೂ ಸರ್ವಾಂಗಸುಂದರವೂ ಆದ ಅಧ್ಯಾತ್ಮ ಶಾಸ್ತ್ರವನ್ನು ಬಯಸಿ ನಾವು ಹುಡುಕಲೆಳಸಿದೆವು. ಭಗವದ್ಗೀತೆಯನ್ನು ಹೊಸ ದೃಷ್ಟಿಯಿಂದ ನಿರೀಕ್ಷಿಸಿ ದರೆ ಇಂಥ ಶಾಸ್ತ್ರವು ರೂಪುಗೊಳ್ಳುವದೆಂದು ನಮಗೆ ಕಂಡುಬಂದಿತು. ಆ ನಮ್ಮ ಪರಿಶೋಧನೆಯ ಇತ್ಯರ್ಥವನ್ನು ನಮ್ಮ ಅಲ್ಪಮತಿಗೆ ಬೋಧ ವಾದಂತೆ ಈ ಗ್ರಂಥದಲ್ಲಿ ಬಹುಜನ ಸಮಾಜಕ್ಕೆ ಒಪ್ಪಿಸುತ್ತಲಿರುವೆವು.

## ಭಗವದ್ಗೀತೆಯ ಬಗೆಗೆ ಆಕ್ಷೇಪಗಳು.

ಭಗವದ್ಗೀತೆಯನ್ನು ಕುರಿತು ಚಿಕಿತ್ಸಾಪೂರ್ವಕವಾಗಿ ವಿಚಾರ ಮಾಡುವಾಗ ಆರಂಭದಲ್ಲಿಯೇ ಆಕ್ಷೇಪಗಳು ಗುಂಪುಗುಂಪಾಗಿ ಮುಸುಕು ವವು. ಅದು ಸ್ವತಂತ್ರವೋ ಅಥವಾ ಮಹಾಭಾರತಕ್ಕೆ ಸೇರಿದುದೋ? ಸ್ವತಂತ್ರವಾದರೆ ಅದಕ್ಕೆ ಕರ್ತೃವು ಯಾರು? ವ್ಯಾಸರಿಂದ ರಚಿತವಾದ ಮಹಾಭಾರತದಲ್ಲಿ ಅದು ಏಕೆ ದೊರೆಯುವದು? ಅದನ್ನು ಉಪದೇಶಿಸಿದ ಶ್ರೀಕೃಷ್ಣನು ವ್ಯಾಸನಿರ್ಮಿತ ಕಾಲ್ಪನಿಕ ವ್ಯಕ್ತಿಯೋ ಐತಿಹಾಸಿಕ ಪುರುಷನೋ? ಐತಿಹಾಸಿಕ ವ್ಯಕ್ತಿಯಾದರೆ ಇವನ ಹುಟ್ಟು, ಜಾತಿ, ಗೋತ್ರಗಳಾವವು? ಮಹಾಭಾರತವನ್ನು ರಚಿಸಿದ ವ್ಯಾಸರೇ ಶ್ರೀಕೃಷ್ಣ ನಾಗಿರಬಹುದೇನು? ಅಲ್ಲದಿದ್ದರೆ ಇತಿಹಾಸದಲ್ಲಿ ಬರುವ ಅನೇಕ ಕೃಷ್ಣರಲ್ಲಿ ಗೀತೆಯನ್ನು ಉಪದೇಶಿಸಿದವನು ಆವನು? ಗೀತೆಯು ಯಾವ ಸಂಕಟ ಪ್ರಸಂಗದಲ್ಲಿ ಜನ್ಮ ತಾಳಿತೆಂದು ವರ್ಣಿಸಲ್ಪಟ್ಟಿರುವದು ಅದು ಐತಿಹಾಸಿಕ

ವಾಗಿರಬಹುದೇ? ಗೀತೆಯನ್ನು ತನ್ನ ಹೊಟ್ಟೆಯಲ್ಲಿ ತಳೆದ ಮಹಾಭಾರತದ ಐತಿಹಾಸಿಕತೆಯೇ ಸಂದೇಹಾಸ್ಪದವಾಗಿರುವಾಗ ಅದರೊಳಗೆ ಸನ್ನಿವಿಷ್ಟವಾದ ಭಗವದ್ಗೀತೆಯು ಐತಿಹಾಸಿಕವೆಂದು ನಂಬುವದು ಹೇಗೆ? ಗೀತೆಯೊಳಗಿನ ವಿಶ್ವರೂಪ ದರ್ಶನದಂಥ ಪ್ರಸಂಗಗಳು ಅಸಂಭವನೀಯವಾಗಿ ಕಾಣುವದಿಲ್ಲ!

ಈಗ ಉಪಲಬ್ಧವಿರುವ ಭಗವದ್ಗೀತೆಯಲ್ಲಿ ಪ್ರಕ್ಷಿಪ್ತಭಾಗವಿರುವದೇನು? ಅಹುದಾದರೆ ಅದು ಯಾವುದು? ಮೂಲ ಗೀತೆಯಲ್ಲಿ ಎಷ್ಟು ಶ್ಲೋಕಗಳಿದ್ದಿರಬಹುದು? ಅವುಗಳ ಮೂಲಭೂತ ಕಲ್ಪನೆಯ ಸ್ವರೂಪವೇನು? ಈಗಿನ ಭಗವದ್ಗೀತೆಯು ತತ್ಪೂರ್ವದ ಯಾವ ಯಾವ ಗ್ರಂಥಗಳನ್ನೂ ಪಂಥಗಳನ್ನೂ ಅನುಸರಿಸುವುದು ಅಥವಾ ಅವಲಂಬಿಸುವದು? ಉಪನಿಷದಾದಿ ಗ್ರಂಥಗಳೊಳಗಿನ ಅನೇಕ ಶ್ಲೋಕಗಳು ಗೀತೆಯಲ್ಲಿ ಬಂದಿರುವುದರಿಂದ ಅವುಗಳನ್ನೇ ಗೀತೆಯು ಅನುಸರಿಸುವುದೆಂದು ಏಕೆ ಊಹಿಸಬಾರದು! ಗೀತೆಯ ಉಲ್ಲೇಖವೂ ಗೀತೆಯೊಳಗಿನ ವಚನಗಳ ಪುನರುಕ್ತಿಯೂ ಮಹಾಭಾರತದಲ್ಲಿ ಹಲವೆಡೆಗಳಲ್ಲಿ ಬಂದಿರುವುದರಿಂದ ಮಹಾಭಾರತದ ವಿಚಾರಸರಣಿಯನ್ನೇ ಗೀತೆಯು ಅನುಸರಿಸುವದೆಂದು ಏಕೆ ಬಗೆಯಬಾರದು? ಗೀತೆಯಲ್ಲಿ ಯೋಗವೇ ಮುಖ್ಯವಾಗಿ ಹೇಳಿದೆ, ಪಾತಂಜಲ ಯೋಗದ ಉಲ್ಲೇಖವು ನಿಃಸಂದಿಗ್ಧವಾಗಿ ಬಂದಿರುವದು; ಹಾಗೆಯೇ ಸಾಂಖ್ಯಶಾಸ್ತ್ರದ ಉಲ್ಲೇಖವಾದರೂ ನಾಮನಿರ್ದೇಶದಿಂದ ಬಂದಿರುವುದು. ಎಂದ ಮೇಲೆ ಗೀತೆಯು ಸಾಂಖ್ಯ ಮತ್ತು ಯೋಗಶಾಸ್ತ್ರಗಳ ಕೈಪಿಡಿಯೆಂದು ಏಕೆ ಹೇಳಬಾರದು? ಭಾಗವತ ಧರ್ಮದ ಪರಂಪರೆಯೂ ಗೀತೆಯ ಪರಂಪರೆಯೂ ಒಂದೇ ಆಗಿರುವದರಿಂದ ಗೀತೆಯಲ್ಲಿ ಭಾಗವತ ಧರ್ಮವೇ ಬಂದಿರಬೇಕಲ್ಲವೇ? ಈ ಪಂಥಗಳೆಲ್ಲ ಗೀತೆಯಲ್ಲಿ ಬಂದಿರುವವೆಂದು ಹೇಳುವುದಕ್ಕೆ ಆಸ್ಪದವಿರುವದು. ಆದರೆ ಬಾದರಾಯಣ ಸಂಬಂಧವನ್ನು ಹೇಳಿ ಜ್ಞಾನ, ಕರ್ಮ, ಭಕ್ತಿ, ದ್ವೈತ, ಅದ್ವೈತ, ಸಂನ್ಯಾಸ, ನೀತಿಶಾಸ್ತ್ರ, ರಾಜಕೀಯ ಸಾಹಸ ಇವುಗಳಲ್ಲಿ ಒಂದೊಂದೂ ಗೀತೆಯನ್ನು ತನ್ನ ಪ್ರಧಾನ ಗ್ರಂಥವೆಂದು ವಾದಿಸುವದು. ಹೀಗಿರುವಾಗ ಗೀತೆಯನ್ನು ಏನೆಂದು ಬಗೆಯಬೇಕು? ಇನ್ನಾವ ಗ್ರಂಥವಾದರೂ ಇಷ್ಟು ತೊಡಕಿನಲ್ಲಿ

ಸಿಲುಕಿದ್ದರೆ ಅದು ವಿಚಾರಾರ್ಹವಲ್ಲವೆಂದು ನಿರಾಕರಿಸಲ್ಪಡುತ್ತಿತ್ತು; ಆದರೆ ಗೀತೆಯ ಮಹಿಮೆಯೂ ಮಹತ್ವವೂ ಈ ತೊಡಕುಗಳಿಂದಲೇ ಏಕೆ ಬೆಳೆಯುವವು ?

## ನಮ್ಮ ಪರಿಶೀಲನೆಯ ಹೊಸದೃಷ್ಟಿಯು.

ಮೇಲೆ ತೋರಿಸಿದಂಥ ಆಕ್ಷೇಪಗಳಿಗೆ ಅಂತವಿಲ್ಲ. ಅವುಗಳನ್ನೆಲ್ಲ ಸಾಧಕ-ಬಾಧಕ ಕಾರಣಗಳನ್ನು ಹೇಳಿ ಸಾಧಾರಣವಾಗಿ ಸಮರ್ಥಿಸುವದು ಅಥವಾ ಖಂಡಿಸುವದು ಉಂಟು. ಹೀಗೆ ಅವುಗಳನ್ನು ಚರ್ಚಿಸುವುದರಿಂದ ಯಾವ ಉಪಯುಕ್ತ ನಿಷ್ಕರ್ಷೆಯೂ ನಿಷ್ಪನ್ನವಾಗಿಲ್ಲ; ಇನ್ನು ಮುಂದೆ ಆಗುವಂತೆ ನಮಗೆ ತೋರುವದಿಲ್ಲ. ಇದಕ್ಕಾಗಿ ನಾವು ಇಲ್ಲಿ ಆಯಾ ಆಕ್ಷೇಪಗಳಾವವನ್ನೂ ಚರ್ಚಿಸುವ ಗೊಡವೆಗೆ ಹೋಗುವದಿಲ್ಲ. ಅವುಗಳ ವಿಷಯವಾಗಿ ನಮ್ಮ ವಿಚಾರಗಳನ್ನು ಹೇಳಬೇಕಾಗಿ ಬಂದರೆ ಪ್ರಸಂಗಾನುಸಾರ ಅವುಗಳನ್ನು ನಾವು ಹೇಳುವೆವು. ಆದರೆ ಗೀತೆಯ ಗುಟ್ಟನ್ನಾಗಲಿ ಗುರಿಯನ್ನಾಗಲಿ ಕಂಡುಕೊಳ್ಳುವುದಕ್ಕೆ ಇಂಥ ಆಕ್ಷೇಪಗಳನ್ನು ಚರ್ಚಿಸುವುದು ಅನಾವಶ್ಯಕವೆಂದು ನಮಗೆ ತೋರುವುದು. ಗೀತೆಯನ್ನು ಅಂತರಂಗವಾಗಿ ಬಹಿರಂಗವಾಗಿ ಪರೀಕ್ಷಿಸಿ ಅಥವಾ ಹೊರಗಿನ ಆಧಾರಗಳನ್ನು ಕೂಡಿಸಿ ಈ ಆಕ್ಷೇಪಗಳಿಗೆ ಸಮಾಧಾನವನ್ನು ಹೇಳುವ ಪರಿಪಾಠವನ್ನು ಬಿಟ್ಟು ಗೀತೆಯಲ್ಲಿ ಹೇಳಿದ ತತ್ವಜ್ಞಾನದ ವಿಮರ್ಶೆಯಿಂದಲೇ ನಾವು ಅದರ ಇಂಗಿತವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಿರುವೆವು. ಇದೇ ನಮ್ಮ ಹೊಸ ದೃಷ್ಟಿಯ ಲಕ್ಷಣವು.

ವ್ಯಾಸರ ಅಥವಾ ಮಹಾಭಾರತದ ಐತಿಹಾಸಿಕತೆಯನ್ನೂ ಗೀತೆಯನ್ನು ಸ್ವಮುಖದಿಂದ ಬೋಧಿಸಿದ ಶ್ರೀಕೃಷ್ಣನೆಂಬ ವ್ಯಕ್ತಿಯ ಐತಿಹಾಸಿಕತೆಯನ್ನೂ ನಾವು ವಿಚಾರಿಸುವದಿಲ್ಲ. ಈ ವ್ಯಕ್ತಿಗಳು ಕಾಲ್ಪನಿಕವೆಂದು ಬಗೆದರೂ ಗೀತೆಯಲ್ಲಿ ಶೇಖರಿಸಲ್ಪಟ್ಟ ತತ್ವಜ್ಞಾನಕ್ಕೆ ಯಾವ ನ್ಯೂನತೆಯೂ ತಟ್ಟುವುದಿಲ್ಲವೆಂದು ನಮಗೆ ತೋರುವುದು. ಶ್ರೀಕೃಷ್ಣನೆಂಬ ವ್ಯಕ್ತಿಯ ಯೋಗ್ಯತೆಯನ್ನು ಐತಿಹಾಸಿಕ ಸಾಧನೆಗಳಿಂದ ಅಥವಾ ಅನ್ಯ ಸಾಧನೆ

ಗಳಿಂದ ನಿರ್ಣಯಿಸಿ ಗೀತೆಯ ತತ್ವಜ್ಞಾನದ ಯೋಗ್ಯತೆಯನ್ನು ಕಂಡುಕೊಳ್ಳದೆ ಗೀತೆಯ ತತ್ವಜ್ಞಾನವನ್ನು ಪರಿಶೋಧಿಸಿ ಅದರ ಯೋಗ್ಯತೆಯಿಂದಲೇ ಅದನ್ನು ನುಡಿದ ವ್ಯಕ್ತಿಯ ಯೋಗ್ಯತೆಯನ್ನು ನಾವು ನಿರ್ಣಯಿಸಲಿರುವೆವು. ಈ ಪ್ರಯತ್ನವನ್ನು ನೆರವೇರಿಸುವುದಕ್ಕೆ ಒಂದು ಪ್ರಮೇಯವನ್ನು ಮಾತ್ರ ನಾವು ಗೃಹೀತವಾಗಿ ತೆಗೆದುಕೊಳ್ಳುವೆವು. ಅನ್ಯವೇದಾಂತ ವಾಙ್ಮಯಕ್ಕೂ ಗೀತೆಗೂ ಇರುವ ಒಂದು ಮಹತ್ವದ ವ್ಯತ್ಯಾಸವೇನೆಂದರೆ ಇತರರು ತಾವು ಪಡೆದ ದಿವ್ಯ ಅನುಭವಗಳನ್ನು ಮಾತ್ರ ಹೇಳಿರುವರು; ಆದರೆ ಗೀತೆಯ ಕರ್ತೃವು ತಾನೇ ಸೃಷ್ಟಿಯನ್ನು ನಿರ್ಮಿಸಿದವನೆಂದು ಹೇಳಿಕೊಳ್ಳುವನು. ಐತಿಹಾಸಿಕತೆಯ ಅಥವಾ ಸಂಭವನೀಯತೆಯ ದೃಷ್ಟಿಯಿಂದ ಈ ಅವನ ಅಧಿಕಾರವನ್ನು ಅಲ್ಲಗಳೆದು ಇಲ್ಲವೆ ದುರ್ಲಕ್ಷಿಸಿ ಗೀತೆಯ ತತ್ವಜ್ಞಾನವನ್ನು ಪರಿಶೀಲಿಸುವದಕ್ಕಿಂತ ಅದು ನಿಜವೆಂದೇ ನಾವು ತಾತ್ಪೂರ್ತಿಕವಾಗಿ ಭಾವಿಸುವೆವು. ನಾವು ಕುರುಡರಾದ ಭಾವುಕರಲ್ಲ. ಶ್ರೀಕೃಷ್ಣನೆಂಬ ವ್ಯಕ್ತಿಯೂ ಭಗವದ್ಗೀತೆಯ ತತ್ವಜ್ಞಾನವೂ ವಿಚಾರಾಂತ್ಯದಲ್ಲಿ ಹುರುಳಿಲ್ಲದವುಗಳಾಗಿ ಕಂಡು ಬಂದರೆ ನಮಗೆ ಅದರ ಚಿಂತೆ ಇಲ್ಲ. ಆದರೆ ಈ ದೃಷ್ಟಿಯಿಂದ ಆ ತತ್ವಜ್ಞಾನದಲ್ಲಿ ಅಗತ್ಯಾಂಶಗಳಾಗಲಿ, ಮಹತ್ವಾಂಶಗಳಾಗಲಿ ದೊರೆತರೆ ಅವುಗಳನ್ನು ಮುಖ್ಯವಾಗಿ ತೋರಿಸಿಕೊಡಬೇಕೆಂಬುದೇ ನಮ್ಮ ಹವಣಿಕೆ. ಗೀತೆಯನ್ನು ನುಡಿದ ಶ್ರೀಕೃಷ್ಣನೆಂಬ ವ್ಯಕ್ತಿಯು "ಭಗವದ್ ವ್ಯಕ್ತಿ" ಯೆಂದೂ ಪರಮಾತ್ಮನೆಂದೂ ಸೃಷ್ಟಿಕರ್ತನೆಂದೂ ಮುಚ್ಚುಮರೆಯಿಲ್ಲದೆ ನಾವು ಪ್ರತಿಪಾದಿಸಿರುವದು ನಾವು ಕೈಕೊಂಡ ಸತ್ಯಾನ್ವೇಷಣೆಗಾಗಿಯೇ ಎಂಬುದನ್ನು ವಾಚಕರು ದಯವಿಟ್ಟು ಮರೆಯಬಾರದು.

## ತತ್ವವೇ ದೇವರು, ಮನುಷ್ಯಾಕೃತಿಯ ವ್ಯಕ್ತಿಯಲ್ಲ.

ಗೀತೆಯ ಕರ್ತೃವು ಹೀಗೆ ಒಬ್ಬ ವ್ಯಕ್ತಿಯೆನಿಸದೆ ಪರಮ ತತ್ವವೆನಿಸಿದರೆ ಆಧ್ಯಾತ್ಮ ಶಾಸ್ತ್ರದ ಪರಿಶೋಧನೆಗೆ ಅದು ಬಹು ಸಾಧಕವಾಗುವುದು. ಸೃಷ್ಟಿಗೆಲ್ಲ ದೇವರು ಒಬ್ಬನೇ ಎಂಬ ಮಾತು ಸರ್ವಸಮ್ಮತವಾಗಿದ್ದರೂ ಧರ್ಮಗಳು ಅಸಂಖ್ಯವಾಗಿವೆ. ಧರ್ಮದ ದೃಷ್ಟಿಯಿಂದ ದೇವರು ಒಬ್ಬನೇ

ಎಂದು ಬಗೆಯ ಹೊಂದ ಪಂಥಗಳು ಉಳಿದ ಪೂರ್ವದ ಧರ್ಮಪಂಥಗಳನ್ನು ತಮ್ಮಲ್ಲಿ ಅಡಗಿಸಿಕೊಳ್ಳಲಾರದೆ ಅವುಗಳನ್ನು ಹೊರಗಿಟ್ಟಿರುವವು. ಇದರಿಂದ ಜಗತ್ತಿನಲ್ಲಿ ಧರ್ಮಪಂಥಗಳ ಸಂಖ್ಯೆಯು ಬೆಳೆಯುತ್ತಲೇ ಇರುವದು. ಸೃಷ್ಟಿಯನ್ನುಂಟುಮಾಡಿದ ಶಕ್ತಿಯು ಪ್ರತ್ಯಕ್ಷವಾದ ತನ್ನ ಕೃತಿಯೊಳಗಿನ ಕೌಶಲದ ತಿರುಳನ್ನು ಮಾನವರಿಗೆ ಯಥಾಸ್ಥಿತವಾಗಿ ತಿಳಿಸಿ ಹೇಳುವುದು ಶಕ್ಯವಾದರೆ ಮತ್ತು ಆ ಹೇಳುವಿಕೆಯು ಸಮಂಜಸವೂ ವಿಶ್ವಸನೀಯವೂ ಆದರೆ ಈಗಿನ ಆಯಾ ಧರ್ಮಗಳ ನಡುವಿನ ಅಸೂಯೆಯೂ ಹೋರಾಟಗಳೂ ಮಾಯವಾಗಬಹುದೆಂಬ ಹಾರೈಕೆಯು ಯೋಗ್ಯವಲ್ಲವೇ? ಆ ಕಾರಣ ಗೀತೆಯನ್ನು ನುಡಿದ ಶ್ರೀಕೃಷ್ಣನೆಂಬ ಮನುಷ್ಯ ವ್ಯಕ್ತಿಯನ್ನು (Personality) ಕಣ್ಣುಮರೆಮಾಡಿ ಅವನಲ್ಲಿ ವ್ಯಕ್ತವಾಗುವ ತತ್ವವನ್ನು (Principle) ಕಣ್ಣುಮುಂದಿಟ್ಟುಕೊಂಡು ಅದನ್ನು ಪರಿಶೀಲಿಸುವದು ಅಗತ್ಯವು.

ಪುರಾಣಗಳಲ್ಲಿ ಭಗವಂತನೆಂದು ಹೆಸರಾದ ಶ್ರೀಕೃಷ್ಣನ ಚಾರಿತ್ರ್ಯಕ್ಕೂ ಪಾವಿತ್ರ್ಯಕ್ಕೂ ಈ ಪದ್ಧತಿಯ ತಾತ್ವಿಕ ವಿವೇಚನೆಯಿಂದ ಊಣೆಯುಂಟಾಗಿ ತಮ್ಮ ಧರ್ಮವು ಮುಳುಗಿ ಹೋಗುವದೆಂದು ಸನಾತನಿಗಳು ಭಯಪಡುವದಿಲ್ಲ. ಪೌರುಷೇಯಗಳಿಗಿಂತಲೂ ಅಪೌರುಷೇಯ ಸಿದ್ಧಾಂತಗಳನ್ನೇ ನಮ್ಮ ಧರ್ಮವು ಎಂದಿಗೂ ಅವಲಂಬಿಸಿರುವುದು. ಶ್ರೀಕೃಷ್ಣನ ಪೌರುಷೇಯತ್ವದಿಂದ ದೊರೆಯಬಹುದಾದ ಪೋಷಣೆಯು ನಮ್ಮ ಧರ್ಮಕ್ಕೆ ಈ ವರೆಗೆ ಸಾಕಷ್ಟು ದೊರೆತಿರುವದು. ಇನ್ನೂ ಬೇಕೆಂದು ಬಯಸಿದವರಿಗೆ ಅದು ಸಿದ್ಧವಾಗಿಯೇ ಇರುವದು. ಆದರೆ ಶ್ರೀಕೃಷ್ಣನನ್ನು ಅಪೌರುಷೇಯನಾದ ಪರಮ ತತ್ವರೂಪನೆಂದು (Impersonal principle) ಬಗೆದು ಅವನ ಉಕ್ತಿಗಳ ಹೃದ್ಗತವನ್ನು ಕಂಡುಕೊಳ್ಳುವ ಹಸಿವು ನಮ್ಮ ಜನರಲ್ಲಿಯೂ ಹುಟ್ಟಿರುವುದು. ಈ ಹಸಿವು ಹಿಂಗುವದರಿಂದ ಸನಾತನ ಧರ್ಮಕ್ಕೆ ನವಜೀವನವು ದೊರೆತು ಅದು ತನ್ನ ನಾಮಶೇಷವಾದ ಸನಾತನತ್ವವನ್ನು ಪುನಃ ಸಾರ್ಥಕವಾಗಿ ಪಡೆವುದರಲ್ಲಿ ಸಂದೇಹವಿಲ್ಲ.

ಜಗತ್ತಿನಲ್ಲಿ ವಿಶ್ವಧರ್ಮದ (Universal Religion) ಅವಶ್ಯಕತೆಯು ದಿನದಿನಕ್ಕೆ ಬೆಳೆಯುತ್ತಲಿರುವದು. ಸನಾತನ ಧರ್ಮವು ತನ್ನ ದೃಷ್ಟಿಯನ್ನು ಸಾಕಷ್ಟು ವಿಶಾಲವಾಗಿ ಮಾಡಿ ತನ್ನ ಹೊಟ್ಟೆಯಲ್ಲಿ ಎಲ್ಲ ಧರ್ಮಗಳಿಗೂ

ಆಶ್ರಯ ಕೊಟ್ಟು ಅವುಗಳಿಗೆ ಶಾಶ್ವತವೂ ತಾತ್ವಿಕವೂ ಆದ ಶಾಸ್ತ್ರೀಯ ಸಿದ್ಧಾಂತಗಳ ಉಪಪತ್ತಿಯನ್ನು ಹೇಳುವದರಿಂದ ಅದು ತಾನು ವಿಶ್ವಧರ್ಮ ವಾಗಲು ಯೋಗ್ಯವಾಗಿರುವುದೆಂದು ತೋರಿಸಿಕೊಡುವ ಸಮಯವು ಇದೀಗ ಬಂದಿರುವುದು. ಹಾಗೆ ಆಗುವುದಕ್ಕಾದರೂ ಭಗವದ್ಗೀತೆಯ ವಿಷಯದ ನಾವು ನಿರ್ದೇಶಿಸಿದ ಹೊಸ ದೃಷ್ಟಿಯು ಸಹಾಯವಾಗಬಹುದು.

## ಮಹಾಭಾರತವೂ ಸೃಷ್ಟಿಯ ಆದಿಕರ್ತೃವೂ.

ಗೀತೆಯ ಹೃದ್ಗತವನ್ನು ಸಂಪೂರ್ಣವಾಗಿ ತಿಳಿಯಲಿಕ್ಕೆ ಗೀತೆಯಲ್ಲೇ ಸಾರಿದ ಅದರ ಕರ್ತೃವಿನ ಪರಾತ್ಪರಯೋಗ್ಯತೆಯನ್ನು ಗ್ರಹಿಸುವದು ಅವಶ್ಯವು. ಗೀತೆಯ ಕರ್ತೃವು ಪರಾತ್ಪರ ಯೋಗ್ಯತೆಯವನೆಂಬದಕ್ಕೆ ಒಂದು ಕಾಲದ ಭಾರತ ಜನಾಂಗದ ಬೆಂಬಲವಿದ್ದಿತು. ಐತಿಹಾಸಿಕತೆಯ ದೃಷ್ಟಿ ಯಿಂದ ಗೀತೆ ಮಹಾಭಾರತಗಳಿಗಿರುವ ಪರಸ್ಪರ ಸಂಬಂಧವನ್ನು ನಾವು ವಿಚಾರಿಸುವದಿಲ್ಲವಾದರೂ ಗೀತೆಯ ಕರ್ತೃವೇ ಸೃಷ್ಟಿಗೆ ಕರ್ತೃವೆಂಬ ವಿಷಯದಲ್ಲಿ ಮಹಾಭಾರತದ ಸಾಕ್ಷಿಯು ಬಹಳ ಮಹತ್ವದ್ದಾಗಿದೆ. ಗೀತೆಯನ್ನು ಬೋಧಿಸಿದ ವ್ಯಕ್ತಿಯು ಪರಮಾತ್ಮನಹುದೆಂದೂ ಸೃಷ್ಟಿಗೆ ಕರ್ತೃವಹುದೆಂದೂ ಹೇಳುವದಕ್ಕೆ ಮಹಾಭಾರತದಲ್ಲಿ ಸಾಕಷ್ಟು ಆಧಾರ ಉಂಟು. ಕೌರವ ಪಾಂಡವರ ವಂಶವೃತ್ತವು ಮಹಾಭಾರತಕ್ಕೆ ವಿಷಯವು. ಪಾಂಡವರ ಸಚ್ಚರಿತೆಯನ್ನು ಬೆಳಗುವದಕ್ಕೇ ಕೌರವರು ಇರುವರು. ಪಾಂಡವರಾದರೂ ಶ್ರೀಕೃಷ್ಣನ ಮಹಿಮೆಯನ್ನು ಉಜ್ವಲಗೊಳಿಸಿ ಅದನ್ನು ಹಬ್ಬಿಸುವುದಕ್ಕೇ ಇದ್ದರೆಂದು ಧಾರಾಳವಾಗಿ ಹೇಳಬಹುದು. ಮಹಾ ಭಾರತದ ವಿಸ್ತಾರ, ಅದರ ಸಂಕೀರ್ಣತೆ, ಅದರೊಳಗಿನ ಮಹಾವ್ಯಕ್ತಿಗಳ ಸ್ವಭಾವಪರಿಪೋಷಣೆ, ಅದರೊಳಗಿನ ಮೃದು ಅಥವಾ ಕಠೋರ ಪ್ರಸಂಗ ಗಳು ಇವೆಲ್ಲವೂ ಶ್ರೀಕೃಷ್ಣನು ಪರಮಾತ್ಮನೆಂಬುದನ್ನೂ ಆತನು ಆದಿದೈವತ ವೆಂಬುದನ್ನೂ ಆತನು ಜಗಚ್ಚಾಲಕ ಸೂತ್ರಧಾರನೆಂಬುದನ್ನೂ ಸಾರಿ ಸರ್ವಶ್ರುತವಾಗಿಯೂ ಸರ್ವಮಾನ್ಯವಾಗಿಯೂ ಮಾಡುವುದಕ್ಕೆ ಅರ್ಪಿತ ವಾಗಿರುವವು. ಮಹಾಭಾರತ ಕರ್ತೃವೆನಿಸಿದ ವ್ಯಾಸರಾಗಲಿ, ಆ ಕಾಲದ ಇನ್ನಿತರ ಮಹಾ ವ್ಯಕ್ತಿಗಳಾಗಲಿ ಶ್ರೀಕೃಷ್ಣನ ಮಹಿಮೆಯನ್ನು ತಾವು

ಸಂಪೂರ್ಣವಾಗಿ ಅರಿತವರಲ್ಲವೆಂದೂ ಅದನ್ನು ಹಾಗೆ ಅರಿಯುವದು ಯಾರಿಗೂ ಶಕ್ಯವಲ್ಲವೆಂದೂ ಮುಕ್ತಕಂಠದಿಂದ ಹೇಳುತ್ತಲಿರುವರು. ಜಗತ್ತಿಗೆಲ್ಲ ಒಡೆಯನಾದ ಪರಮಾತ್ಮನು ಮನುಷ್ಯದೇಹಧಾರಿಯಾಗಿ ಶ್ರೀಕೃಷ್ಣ ಸ್ವರೂಪದಲ್ಲಿ ತಮ್ಮ ಪ್ರಪಂಚದ ಹವ್ಯಾಸವನ್ನು ಹಿಡಿದು ಅದರ ದೈವಿಕ ಧ್ಯೇಯವನ್ನು ಕೊನೆಗಾಣಿಸುವದಕ್ಕಾಗಿ ಹುಟ್ಟಿ ಬಂದಿರುವನೆಂಬ ನಂಬುಗೆಯು ಆ ಕಾಲದ ಭಾರತ ಜನಾಂಗದ ಅಂತಃಕರಣದಲ್ಲಿ ನೆಲಸಿತ್ತು.

ವ್ಯಾಸರಂತಹ ವಿಭೂತಿಗಳು ಅಂಥ ವ್ಯಕ್ತಿಗಾಗಿ ಮಹಾಭಾರತವನ್ನೇ ಧಾರೆಯೆರೆದುದನ್ನು ನೋಡಿ ಈ ಭಾವನೆಯು ಎಷ್ಟು ಪ್ರಬಲವಾಗಿತ್ತೆಂಬುದನ್ನು ಊಹಿಸಬಹುದು. ಇಂಥ ಅವರ ವಿಶ್ವಾಸವನ್ನು ಈ ಕಾಲದ ನಮ್ಮ ತತ್ವಜ್ಞಾನದ ಅಥವಾ ಶಾಸ್ತ್ರೀಯ ಜ್ಞಾನಗಳ ಅಳತೆಗೋಲಿನಿಂದ ಅಳೆದು ನೋಡುವುದು ಸರಿಯಲ್ಲ. ಅವರ ಭಾವನೆಗಳನ್ನೂ ಕಾರ್ಯಗಳನ್ನೂ ಪರೀಕ್ಷಿಸುವಾಗ ವ್ಯಕ್ತ ಪರಮಾತ್ಮನ ವಿಷಯದ ಈ ಪ್ರಬಲ ತೃಷ್ಣೆಯನ್ನು ಅಲಕ್ಷ್ಯ ಮಾಡಿ ನಡೆಯಲಾಗದು. ಈ ಅವರ ಭಾವನೆಯನ್ನು ಮನ್ನಿಸಿಯೇ ಆ ಕಾಲದ ಭಾರತಸಮಾಜದ ಆಧ್ಯಾತ್ಮಿಕ ಧಾರ್ಮಿಕ, ನೈತಿಕ, ಸಾಮಾಜಿಕ ವೈಭವದ ಹುರುಳನ್ನು ಕಂಡುಕೊಳ್ಳುವುದು ಉಚಿತವು.

ಶ್ರೀಕೃಷ್ಣನೆಂಬ ವ್ಯಕ್ತಿಯು ಆ ಕಾಲದ ಜನತೆಯ ಅಂತಃಕರಣವನ್ನು ಸಮಗ್ರವಾಗಿ ಆಕ್ರಮಿಸಿದ್ದಾಗ ಅದು ಮಹಾಭಾರತವನ್ನು ಮೀಸಲಾಗಿ ಪಡೆದುದಲ್ಲಿ ಆಶ್ಚರ್ಯವೇನು? ಇಂಥ ಅದ್ವಿತೀಯ ವ್ಯಕ್ತಿಯ ಉಕ್ತಿಗಳನ್ನು ವ್ಯಾಸರ ಅಥವಾ ಬೇರೆ ವಿಭೂತಿಗಳ ಆಧಾರಗಳಿಂದ ತಿಳಿಯುವದಕ್ಕಿಂತಲೂ ಆತನು ಸಾರಿದ ತತ್ವಗಳ ಹೃದಯದಲ್ಲಿ ಹೊಕ್ಕು ಆತನ ಉಕ್ತಿಗಳ ಹೃದ್ಗತವನ್ನು ತಿಳಿಯುವುದು ಒಳಿತಲ್ಲವೇ? ಕೇವಲ ಅವನ ಉಕ್ತಿಗಳೊಳಗಿನ ಶಬ್ದಗಳಾಗಲಿ ಶ್ಲೋಕಗಳಾಗಲಿ ಅನ್ಯ ಗ್ರಂಥಗಳಲ್ಲಿಯೂ ಬಂದು ಹೋಗಿರುವದರಿಂದ ಇವುಗಳಲ್ಲಿ ಆಚೆಯದಾವುದು ಈಚೆಯದಾವುದು ಎಂಬದನ್ನು ಈಗಿನ ಐತಿಹಾಸಿಕ ಸೂಕ್ಷ್ಮ ದೃಷ್ಟಿಯಿಂದ ನಿರ್ಣಯಿಸಿ ಗೀತೆಯು ಬೇರೆ ಗ್ರಂಥಗಳ ಉಚ್ಛಿಷ್ಟವಾಗಿರುವದೆಂದು ನಿರ್ಧರಿಸುವದು ಅವಿವೇಕದ ಲಕ್ಷಣವೆಂದು ನಮಗೆ ತೋರುವದು.

## ಗೀತೆಯು ಪರಪ್ರಕಾಶಿತವೇ?

ಹೀಗೆ, ಇತರ ಗ್ರಂಥಗಳಿಂದ ಗೀತೆಯಲ್ಲಿ ಬಂದವುಗಳೆಂದು ಆರಿಸಿ ತೆಗೆದ ಎಷ್ಟೋ ಶಬ್ದಗಳನ್ನೂ ಶ್ಲೋಕಗಳನ್ನೂ ನಾವು ಪರೀಕ್ಷಿಸಿ ನೋಡಿರುವೆವು. ಅವುಗಳಲ್ಲಿ ಕೆಲವು ಮಾತ್ರ ತತ್ವಪ್ರಧಾನವಾದುವೆಂದು ಹೇಳಬಹುದು. ಬಹಳವಾಗಿ ವರ್ಣನಾತ್ಮಕ ಮತ್ತು ಆಲಂಕಾರಿಕ ವಚನಗಳೂ ಸರ್ವಸಾಧಾರಣವಾಗಿ ಬಳಕೆಯಲ್ಲಿರುವ ನೈತಿಕ ಇಲ್ಲವೆ ಆಧ್ಯಾತ್ಮಿಕ ಸೂತ್ರಗಳೂ ಇಂಥ ಶ್ಲೋಕಗಳಲ್ಲಿ ತುಂಬಿರುವವು. **ಗೀತೆಯ ಗಹನ ತತ್ವಜ್ಞಾನಕ್ಕೆ ಪೋಷಕವಾದ ಒಂದು ಶ್ಲೋಕವೂ ನಮಗೆ ಇವುಗಳಲ್ಲಿ ದೊರೆಯಲಿಲ್ಲ.** ಪರೀಕ್ಷಿಸುವವರಿಗೆ ಈ ಪ್ರಮೇಯವು ಅತಿ ಸ್ಪಷ್ಟವಿರುವದರಿಂದ ಇಂಥ ಶಬ್ದಗಳನ್ನೂ ಶ್ಲೋಕಗಳನ್ನೂ ಇಲ್ಲಿ ಉಪಹರಿಸಿ ಚರ್ಚಿಸುವದು ಅನವಶ್ಯವು. ಪೂರ್ವಗ್ರಹವಿಲ್ಲದೆ ಇವುಗಳನ್ನು ನಿರೀಕ್ಷಿಸುವವರಿಗೆ ನಮ್ಮ ಹೇಳಿಕೆಯು ಸರಿಯೆಂದು ತೋರುವದು ಖಂಡಿತ. ಪೂರ್ವಗ್ರಹದೂಷಿತರನ್ನು ಸಮಾಧಾನ ಪಡಿಸುವದು ಉದಾಹರಣೆಗಳನ್ನು ಚರ್ಚಿಸಿಯೂ ಸಾಧ್ಯವಿಲ್ಲ. ಗೀತೆಗೂ ತತ್ಪೂರ್ವದ ಇತರ ಗ್ರಂಥಗಳಿಗೂ ಸಾಮಾನ್ಯವಾದ ಶಬ್ದಗಳನ್ನು ಹೊಸ ಕಲ್ಪನೆಗಳನ್ನು ಬೋಧಿಸುವದಕ್ಕಾಗಿ ಗೀತೆಯಲ್ಲಿ ಬಳಸಿರುವರೆಂಬದು ಲಕ್ಷ್ಯದಲ್ಲಿಡತಕ್ಕ ಸಂಗತಿಯು. ಉದಾ:—ಗೀತೆಯಲ್ಲಿ ಬಂದಿರುವ ಉಪನಿಷತ್ತುಗಳೊಳಗಿನ ವಚನಗಳೂ ಶಬ್ದಗಳೂ ಗೀತೆಯಲ್ಲಿ ವಿಶಿಷ್ಟ ಸಿದ್ಧಾಂತಗಳ ಸಮರ್ಥನೆಗಾಗಿ ಉಪಯೋಗಿಸಲ್ಪಟ್ಟಿವೆ. ಬುದ್ಧಿಯೋಗ, ಕರ್ಮಯೋಗ, ಬ್ರಹ್ಮಯೋಗವೆಂಬ ಗೀತಾವಿಶಿಷ್ಟ ತತ್ವಪ್ರತಿಪಾದನೆಗಳೂ ಗೀತೆಯ ಭಕ್ತಿ, ಪುರುಷೋತ್ತಮ, ಪುರುಷತ್ರಯ, ಅಧ್ಯಾತ್ಮ, ವ್ಯವಸಾಯ, ವ್ಯಭಿಚಾರ, ದೈವಾಸುರ ಸಂಪತ್ತು ಇವೇ ಮೊದಲಾದ ಕಲ್ಪನೆಗಳೂ ಉಪನಿಷತ್ತುಗಳಲ್ಲಿ ದೊರೆಯವು. ಗೀತೆಯೂ ಉಪನಿಷತ್ತುಗಳೂ ಒಂದೇ ವಿಷಯವನ್ನು ಸಂಬಂಧಿಸಿದ ಗ್ರಂಥಗಳಾದರೂ ಇವುಗಳ ವಿಚಾರ ಪ್ರವಾಹಗಳು ಸಮಾಂತರವಾಗಿ (on parallel lines) ಹರಿಯುವವು. ಈ ಕಾರಣ ಶಬ್ದ ಸಾದೃಶ್ಯ ಮಾತ್ರದಿಂದ, ಒಂದನ್ನೊಂದು ಅವಲಂಬಿಸುವವೆಂದು ಊಹಿಸಲಾಗದು; ಮತ್ತು ಗೀತೆಯು ಉಪನಿಷತ್ತು

ಗಳಿಂದ ಪೋಷಿತವಾಗಿದೆಯೆಂದೂ ಅವುಗಳನ್ನೇ ಅನುಸರಿಸುವದೆಂದೂ ಬಗೆಯುವದು ಸಮಂಜಸವಲ್ಲ. ಇದೂ ಅಲ್ಲದೆ ಶ್ಲೋಕಗಳನ್ನು ತೆಗೆದು ಕೊಳ್ಳುವಾಗ ಅವುಗಳೊಳಗಿನ ಶಬ್ದಗಳನ್ನಾಗಲಿ ರಚನೆಯನ್ನಾಗಲಿ ಕೆಲ ಮಟ್ಟಿಗೆ ಮಾರ್ಪಡಿಸಿರುವದು ಸ್ಪಷ್ಟವಾಗಿದೆ. ಈ ಬದಲಾವಣೆಗಳನ್ನು ಕೆಲವು ತತ್ತ್ವಪರವಾದ ಶ್ಲೋಕಗಳಲ್ಲಿ ಬಹು ಮಾರ್ಮಿಕವಾಗಿ ಮಾಡಿದೆ. ಆದರಿಂದ ಗೀತೆಯು ಹೊಸ ದೃಷ್ಟಿಯೂ ತತ್ತ್ವಜ್ಞಾನದ ಗಹನತೆಯೂ ಒಡ ಮೂಡುವವು (೮-೬,೩-೪೨,೧೫-೬). ಶ್ಲೋಕಗಳ ವಿಷಯವೇ ಈ ಪರಿ ಯಾಗಿರುವಾಗ ಶಬ್ದಗಳನ್ನು ಬೇರೆ ಗ್ರಂಥಗಳಿಂದ ಗೀತೆಯಲ್ಲಿ ತೆಗೆದು ಕೊಂಡಿರುವರೆಂದು ವಾದಿಸುವದು ಅಕ್ಷರಗಳನ್ನು ತೆಗೆದುಕೊಂಡಿರುವರೆಂದು ವಾದಿಸುವಷ್ಟೇ ಸಮಂಜಸವು.

## ಗೀತೆಯನ್ನು ತಿಳಿಯಲು ತತ್ತ್ವದೊಂದಿಗೆ ತಾದಾತ್ಮ್ಯ ಹೊಂದಬೇಕು.

ಶ್ರೀಕೃಷ್ಣನು ಗೀತೆಯ ಹದಿನೆಂಟು ಅಧ್ಯಾಯಗಳಲ್ಲಿ ತನ್ನ ಹೃದಯ ವನ್ನು ಸಂಪೂರ್ಣವಾಗಿ ತೆರೆದು ಭಾರತೀಯರ ಅಂತಃಕರಣಕ್ಕೆ ತೋರಿಸಿರು ವನು. ಹೀಗಿದ್ದರೂ ಭಾರತೀಯರಿಗೆ ಗೀತೆಯು ವಿಫಲವಾದುದಕ್ಕೆ ಶ್ರೀಕೃಷ್ಣನ ವಿವರಣೆಯೇ ಕಾರಣವೆಂದು ಬಗೆಯುವದಕ್ಕಿಂತ ನಮ್ಮ ಭಾವನೆಗಳು ಶ್ರೀಕೃಷ್ಣನ ಭಾವನೆಗೆ ಹೊಂದದಿರುವದೇ ಕಾರಣವೆಂದು ತಿಳಿದು ಪುನಃ ಪ್ರಯತ್ನಪಡುವದು ಲೇಸು. ಗೀತೆಯೊಳಗಿನ ಶ್ರೀಕೃಷ್ಣನ ಉಕ್ತಿಗಳು ಎಲ್ಲಿಯೂ ನಿಜವಾಗಿ ದುರ್ಬೋಧವಾಗಿರುವದು ಶಕ್ಯವಲ್ಲ. ಅರ್ಜುನನು ಸರ್ವಸಾಧಾರಣ ತಿಳಿವಳಿಕೆಯುವನಾಗಿದ್ದನು. ಇದು ಅವನು ಕೇಳಿದ ಪ್ರಶ್ನೆಗಳಿಂದ ವ್ಯಕ್ತವಾಗುವದು. ಇಂಥವನಿಗೆ ಗೀತೆಯು ಸುಲಭ ವಾಗಿಯೂ ನಿಃಸಂದೇಹವಾಗಿಯೂ ತಿಳಿಯಿತೆಂದ ಮೇಲೆ ಅದು ನಮಗೆ ಹಾಗೆ ಏಕೆ ತಿಳಿಯಬಾರದು? ಶ್ರೀಕೃಷ್ಣಪರಮಾತ್ಮನಲ್ಲಿ ಅರ್ಜುನನಿಟ್ಟ ನಿರ್ವ್ಯಾಜವೂ ವಿಶ್ವಾಸಪೂರ್ಣವೂ ಆದ ಭಾವವನ್ನು ಅನುಕರಿಸಿ ಭಗವ ದ್ಗೀತೆಯನ್ನು ಪರಿಶೀಲಿಸಿದರೆ ಅರ್ಜುನನಿಗೆ ತಿಳಿದಂತೆಯೇ ಅದು ನಮ ಗಾದರೂ ತಿಳಿಯುವದೆಂದು ನಾವು ನಂಬಿರುವೆವು. ಹೀಗೆ ಶ್ರೀಕೃಷ್ಣನಲ್ಲಿ ತಾದಾತ್ಮ್ಯ ಹೊಂದಿದ ಹೊರತು ಆತನ ಗೀತೆಯ ಗುಟ್ಟು ತಿಳಿಯುವುದು

ಸಾಧ್ಯವಲ್ಲ. ಅಂಥ ಭಾವವನ್ನಿಟ್ಟುಕೊಂಡು ಭಗವದ್ಗೀತೆಯ ಪರಿಶೀಲನೆಯನ್ನು ನಾವು ಯಥಾಮತಿ ಪ್ರಯತ್ನಿಸಿರುವೆವು.

ಕೃಷ್ಣನೆಂಬ ವ್ಯಕ್ತಿಯ ಮನುಷ್ಯಾಕೃತಿಯನ್ನು ತಿಳಿದು ಫಲವಿಲ್ಲ. ಅವನ ಚತುರ್ಭುಜ ಮೂರ್ತಿಯನ್ನು ಭಾವಿಸಿಯೂ ಉಪಯೋಗವಿಲ್ಲ. ಅವನನ್ನು ತತ್ತ್ವತಃ ತಿಳಿಯುವದೇ ನಿಜವಾಗಿಯೂ ತಿಳಿಯುವದು (೧೮-೫೫) ಹೀಗೆ ತನ್ನ ವಿಷಯವನ್ನು ತತ್ತ್ವತಃ ತಿಳಿಸಿ ಹೇಳುವದಕ್ಕಾಗಿಯೇ ಅವನು ಭಗವದ್ಗೀತೆಯನ್ನು ಬೋಧಿಸಿದನು; ಅರ್ಜುನನನ್ನು ಹೇಗಾದರೂ ಯುದ್ಧಕ್ಕೆ ಎಬ್ಬಿಸುವದಕ್ಕಾಗಿ ಅಲ್ಲ. ಶ್ರೀಕೃಷ್ಣನನ್ನು ತತ್ತ್ವತಃ ತಿಳಿದುದರಿಂದಲೇ ಅರ್ಜುನನ ವ್ಯಾಮೋಹವೂ ಸಂದೇಹಗಳೂ ನಿಶ್ಶೇಷವಾಗಿ ನಷ್ಟವಾದವು. ಶ್ರೀಕೃಷ್ಣನ ವಾಗ್ಜಾಲದ ಪ್ರಭಾವದಿಂದಲ್ಲ. ಭಗವದ್ಗೀತೆಯನ್ನು ಯಥೋಚಿತವಾಗಿ ತಿಳಿಯಲಿಚ್ಛಿಸುವವರು ಶ್ರೀಕೃಷ್ಣನನ್ನು ಹಾಗೆಯೇ "ತತ್ತ್ವತಃ" ತಿಳಿಯಲು ಯತ್ನಿಸಬೇಕು. ವ್ಯಕ್ತಿಯ ಸ್ವಭಾವವನ್ನೂ ಅಧಿಕಾರವನ್ನೂ ತಿಳಿಯುವದೇ ತತ್ತ್ವತಃ ತಿಳಿಯುವದು (೪-೯). ಆದುದರಿಂದ ಶ್ರೀಕೃಷ್ಣನು ತನ್ನ ಅಧಿಕಾರವನ್ನೂ ಸ್ವಭಾವವನ್ನೂ ಗೀತೆಯಲ್ಲಿ ಯಾವ ಪ್ರಕಾರವಾಗಿ ಹೇಳಿರುವನೆಂಬದನ್ನು ನೋಡುವ.

## ಅಧ್ಯಾತ್ಮದ ಕ್ಷಿತಿಜ.

ಸಂಭೂತ ಸೃಷ್ಟಿಗೆ ಆದಿಯುಂಟು. ಈ ಕಾರಣದಿಂದ ಅದಕ್ಕೆ ಉತ್ಪತ್ತಿಕರ್ತೃವು ಇರಲೇಬೇಕೆಂಬುದು ಸರ್ವಸಮ್ಮತವು. ಆದರೆ ಇಂಥ ಕರ್ತೃವು ಚಿತ್ ಸ್ವಭಾವವುಳ್ಳವನೋ ಅಥವಾ ಅಚಿತ್ ಸ್ವಭಾವವುಳ್ಳವನೋ ಅವನಿಗೆ ಇಚ್ಛಾಶಕ್ತಿಯು ಇರಬಹುದೋ ಅಥವಾ ಇರಲಿಕ್ಕಿಲ್ಲವೋ ಎಂಬ ಪ್ರಶ್ನೆಗಳು ಉಂಟಾಗಿರುವವು. ಸೃಷ್ಟಿಯ ಉತ್ಪತ್ತಿಗೆ ಕಾರಣವಾಗಿರುವ ತತ್ತ್ವವನ್ನು ಆತ್ಮವೆಂಬ ಹೆಸರಿನಿಂದ ವೇದಾಂತಿಗಳು ಸಂಬೋಧಿಸಿರುವರು. ಈ ಆತ್ಮತತ್ತ್ವವನ್ನಾಗಲಿ ಬೇರೆ ಹೆಸರಿನ ಇದಕ್ಕೆ ಸಮಾನವಾದ ಮತ್ತಾವದಾದರೊಂದು ತತ್ತ್ವವನ್ನಾಗಲಿ ಸೃಷ್ಟಿಯ ಉತ್ಪತ್ತಿಯನ್ನು ಕುರಿತು ವಿಚಾರಮಾಡುವವರೆಲ್ಲರೂ ಒಪ್ಪಲೇ ಬೇಕಾಗುವದು.

ವೇದಾಂತದ ಆತ್ಮತತ್ವವಿಷಯದ ವಿಚಾರಗಳು ಇನ್ನುಳಿದ ಮತಗಳಿಗಿಂತಲೂ ಹೆಚ್ಚು ಶೋಧಕವೂ ಮುಂದುವರಿದುವೂ ಆಗಿರುವದರಿಂದ ಅವುಗಳನ್ನೇ ಇಲ್ಲಿ ನಾವು ವಿಚಾರಿಸುವ.

## ವೇದಾಂತದ ದೂರವೀಕ್ಷಣ ನಲಿಕೆ.

ಸೃಷ್ಟಿಯೊಳಗಿನ ಚೇತನಾಚೇತನ ತತ್ವಗಳನ್ನು ಪರೀಕ್ಷಿಸಿ ಇವು ಗಳಿಗೆ ಆಧಾರವಾಗಿರುವ ಆತ್ಮತತ್ವವೇ ನಿಜವೆಂದೂ ಶಾಶ್ವತವೆಂದೂ ವೇದಾಂತವು ಕಂಡು ಹಿಡಿದದ್ದು ಶ್ಲಾಘ್ಯವೇ ಸರಿ. ಅದು ಬಹಳ ಮಹ ತ್ವದ ಶೋಧವಾಗಿರುವದು. ಆದರೆ ಈ ಶೋಧವನ್ನು ಪೂರ್ತಿಗೊಳಿಸುವ ಷ್ಟರಲ್ಲಿಯೇ ಅದರ ಶೋಧಕ ಶಕ್ತಿಯು ಉಡುಗಿ ಹೋದಂತೆ ತೋರು ವುದು. ಈ ಸತ್ಯವನ್ನು ಕಂಡು ಹಿಡಿವುದರಲ್ಲಿ ಅವರ ಸ್ವಭಾವಸಹಜವಾದ ಅಂತರ್ದೃಷ್ಟಿಯೇ (Intuition) ವೇದಾಂತಿಗಳಿಗೆ ನಿಜವಾಗಿಯೂ ನೆರವಾ ದುದು. ಆತ್ಮದಂಥ ತತ್ವವೊಂದು ಇರಲೇಬೇಕೆಂಬ ವಿಶ್ವಾಸವು ಇತರ ಜನಾಂಗದ ತತ್ವಜ್ಞಾನಿಗಳಿಗೂ ಇಂಥ ಅಂತರ್ದೃಷ್ಟಿಯಿಂದಲೇ ಹೊಳೆದಿರು ವುದು. ಈ ತತ್ವವನ್ನು ವೇದಾಂತಿಗಳು ತಮ್ಮ ಬುದ್ಧಿಯ ಬಲದಿಂದ ತರ್ಕದ ಮಾರ್ಗವನ್ನವಲಂಬಿಸಿ ಮಿಗಿಲಾಗಿ ದೃಢಪಡಿಸಿರುವರು. ಹಾಗೆಯೇ ತಮ್ಮ ಸಂಶೋಧನೆಯನ್ನು ಮುಂದುವರಿಸಿ ಈ ಆತ್ಮತತ್ವವು ಸಮಷ್ಟಿಯೊ (ವಿಶ್ವದೊ)ಳಗೆಲ್ಲ ಒಂದೇ ಆಗಿರುವುದೆಂದೂ ಅವರು ತೋರಿಸಿಕೊಟ್ಟಿರುವರು. ಇತರರು ಇಷ್ಟು ಮಟ್ಟಿಗೆ ಸಾಧಿಸಿರುವುದಿಲ್ಲ. ಜಗತ್ತಿನಲ್ಲಿ ವೇದಾಂತಕ್ಕಿ ರುವ ಮಾನ್ಯತೆಗೆ ಇದೇ ಕಾರಣವು.

## ಅಂತರ್ದೃಷ್ಟಿಯೇ ಮುಖ್ಯವು, ಬುದ್ಧಿಯ ಜಾಣತನವಲ್ಲ,

ಆತ್ಮವು ಒಂದೇ ಎಂಬ ತತ್ವವನ್ನು ಸಾಧಿಸಿದ್ದರಲ್ಲಿ ವೇದಾಂತಿಗಳಿಗೆ ಒಂದು ಭ್ರಮೆಯುಂಟಾಯಿತು. ತಮ್ಮ ತರ್ಕಶುದ್ಧತೆಯ ಮತ್ತು ಸಾಧ ನೆಯ ಬಲದಿಂದಲೇ ಆ ಸತ್ಯವನ್ನು ಶೋಧಿಸಿದೆವೆಂಬ ವಿಶ್ವಾಸವು ಅವರಲ್ಲಿ ಬಲಿಯಿತು. ಸ್ವಭಾವ ಸಹಜವಾದ ಅಂತರ್ದೃಷ್ಟಿಯ (Intuition) ಕಾರ್ಯವನ್ನೂ ಸಹಾಯವನ್ನೂ ಈ ವಿಸ್ವಾಸದ ಭರದಲ್ಲಿ ಅವರು ಮರೆತು

ಬಿಟ್ಟರು. ತರ್ಕವು ಚೇತನಾಚೇತನದ ವಾದವನ್ನು ಪರಿಹರಿಸಬಹುದು. ಆದರೆ ಅದರಾಚೆಗೆ ತರ್ಕಕ್ಕೆ ಗತಿಯು ಶಕ್ಯವಲ್ಲ. ಆದುದರಿಂದಲೇ ವೇದಾಂತವು ತನ್ನ ಒಂದೇ ಶೋಧವನ್ನು ಅವಚಿಕೊಂಡು ಕೂತಿರುವದು ಮತ್ತು ಅದರ ಸುತ್ತಲು ನಿತ್ಯ ನೂತನವಾದ ತರ್ಕದ ಆಧಾರಗಳನ್ನು ಕಾವಲಾಗಿ ನಿಲ್ಲಿಸುತ್ತಲಿರುವುದು.

## ಅಧ್ಯಾತ್ಮದ ಕ್ಷೇತ್ರ.

ಚೇತನಾಚೇತನಗಳ ಅಂತಿಮ ಸತ್ಯವನ್ನು ಈ ಬಗೆಯ ಆತ್ಮತತ್ವದ ಪರಿಶೋಧನೆಯಿಂದ ಕಾಣುವುದು ಶಕ್ಯವಲ್ಲ. ಚೇತನಕ್ಕೂ ಅಚೇತನಕ್ಕೂ ಇರುವ ಎಲ್ಲ ಸಂದರ್ಭಗಳೊಳಗಿನ ಸಂಬಂಧವನ್ನು ಮನುಷ್ಯನು ಅರಿಯಬಿಚ್ಛಿಸುವನು. ಇಷ್ಟೇ ಅಲ್ಲ, ಅವನು ಚೇತನದ ಆಚೆಗಿರುವ ಭಾವನಾ ಸಾಮ್ರಾಜ್ಯದ ಉಗಮವನ್ನೂ ಸತ್ಯಸ್ವರೂಪವನ್ನೂ ಒಗೆಯಲೆಳಸುವನು. ಭಕ್ತಿಯೆಂದರೇನು, ಅದರ ಉಗಮವೆಲ್ಲಿ, ಜೀವನಲ್ಲಿರುವ ದೇವತಾ ವಿಷಯಕ ಭಾವನೆಯು ಕೃತ್ರಿಮವೋ ಸ್ವಾಭಾವಿಕವೋ? ಕೃತ್ರಿಮವಾದರೆ ಅದು ಸಮಷ್ಟಿಯಲ್ಲೆಲ್ಲ ನೈಸರ್ಗಿಕವಾಗಿಯೇ ಏಕೆ ಕಂಡು ಬರುವದು? ಸ್ವಾಭಾವಿಕವಾದರೆ ಮನುಷ್ಯನ ಭಾವನೆಗೆ ಅದರ ಸತ್ಯವು ಏಕೆ ನಿಲುಕುವದಿಲ್ಲ? ಜೀವ ಜೀವರಲ್ಲಿ ಬಲವಾದ ಪ್ರೇಮದ್ವೇಷಾದಿ ಭಾವನೆಗಳು ಎಲ್ಲಿಂದ ಹುಟ್ಟುವವು? ತಂದೆ ತಾಯಿ, ಮಕ್ಕಳು, ಬಂಧುಬಳಗವೆಂಬ ಆಸಕ್ತಿಯು ಏತರಿಂದ? ಇವು ಕೇವಲ ಮನೋಧರ್ಮಗಳಾಗಿರಬಹುದೇ? ಇವೇ ಮೊದಲಾದ ಇನ್ನೂ ಅನೇಕ ಪ್ರಮೇಯಗಳನ್ನು ತಿಳಿಯುವ ತೃಷ್ಣೆಯು ಅವನಲ್ಲಿ ಹೆಚ್ಚುತ್ತಲಿರುವುದು. ಈ ಅವನ ಸಂದೇಹಗಳನ್ನು ವೇದಾಂತವು ಈಗಿನ ತನ್ನ ತರ್ಕಪ್ರಧಾನ (Intellectual) ಮಾರ್ಗದಿಂದ ಪರಿಹರಿಸಲು ಅಸಮರ್ಥವಾಗಿರುವದೆಂದು ವೇದಾಂತಿಗಳನ್ನುಳಿದು ಮಿಕ್ಕವರೆಲ್ಲರೂ ಒಪ್ಪುವರು

## ಅಂತರ್ದೃಷ್ಟಿಯೇ ವೇದಾಂತಕ್ಕೆ ಸಾಧನೆಯು.

ವೇದಾಂತದ ಈ ವ್ಯಂಗವನ್ನು ತೋರಿಸಿ ಅಂತರ್ದೃಷ್ಟಿಯು (Intuition)

ವಿಚಾರ ಪ್ರವೃತ್ತಿಗೆ ಗೀತೆಯು ಬಲವಾದ ಚಲನವನ್ನು ಕೊಡುವದು. ಈ ದೃಷ್ಟಿಯು ಮಹಾತ್ಮರಿಗೆ ಮಾತ್ರ ಸಾಧ್ಯವೆಂದು ಗೀತೆಯು ಒಪ್ಪುವದಿಲ್ಲ. ಇದು ಋಷಿಗಳ ಅಥವಾ ಯೋಗಿಗಳ ಪರೋಕ್ಷ ದೃಷ್ಟಿಯಲ್ಲ. ವಿಭೂತಿಗಳ ಅಥವಾ ಅನುಭಾವಿಗಳ ಸೂಕ್ಷ್ಮ ಅನುಭವ ದೃಷ್ಟಿಯೂ ಅಲ್ಲ. ಸರ್ವಸಾಧಾರಣ ಮನುಷ್ಯಪ್ರಾಣಿಗೆ ಅದು ಸುಲಭಸಾಧ್ಯವಾಗಿರುವುದು. ಇದನ್ನು ಪಡೆಯುವ ಸುಲಭಮಾರ್ಗವನ್ನಾದರೂ ಗೀತೆಯು ತೋರಿಸಿರುವುದು. ಮನುಷ್ಯನಲ್ಲಿ ಬುದ್ಧೀಂದ್ರಿಯವು ಅವನ ಆತ್ಮಭಾವನೆಗಳನ್ನು ಅಂತರ್ದೃಷ್ಟಿಯಿಂದ ಕಂಡುಕೊಳ್ಳುವುದಕ್ಕಾಗಿ ಇರುವುದು. ಆದರೆ ಆದರ ಈ ಶಕ್ತಿಯು ಸಾಧಾರಣ ಮನುಷ್ಯನಲ್ಲಿ ಕುರುಹಿಲ್ಲದೆ ಕಳೆದುಹೋಗಿರುವುದು. ಇದನ್ನು ಪುನಃ ಪಡೆಯುವದು ಎಲ್ಲರಿಗೂ ಸಾಧ್ಯವಾಗಿದೆ ಮನುಷ್ಯನಲ್ಲಿರುವ ಸ್ವಾಭಾವಿಕ ಶ್ರದ್ಧೆಯೇ— ಅದು ಎಷ್ಟೇ ಅಲ್ಪ ಪ್ರಮಾಣದಲ್ಲಿರಲಿ— ಈ ಅಂತರ್ದೃಷ್ಟಿಯ ಬೀಜವು. ಅದನ್ನು ಯೋಗ್ಯವಾಗಿ ಪೋಷಿಸಿ ಬೆಳೆಸಿದರೆ ಭಕ್ತಿ, ವಿಜ್ಞಾನ, ಯೋಗವೆಂಬ ಅದರ ಮುಂದಿನ ಮೆಟ್ಟಲುಗಳನ್ನು ಅವನು ಏರಬಹುದು. ಈ ಅಂತರ್ದೃಷ್ಟಿಯ ಪ್ರಭಾವದಿಂದ ಸಾಮಾನ್ಯ ಮನುಷ್ಯನ ಮನಸ್ಸಿಗೆ ತೋರುವ ಸೃಷ್ಟಿವಿಷಯಕ ಸಂದೇಹಗಳನ್ನೆಲ್ಲವನ್ನೂ ಗೀತೆಯು ನಿಶ್ಶೇಷವಾಗಿ (೭–೨) ಪರಿಹರಿಸುವದಲ್ಲದೆ ಅವುಗಳಿಗೆ ಹೇಳಿದ ಸಮಾಧಾನಗಳನ್ನು ಅವನ ಬುದ್ಧಿಗೆ ಅಂದರೆ ತರ್ಕಶುದ್ಧ ಜ್ಞಾನದೃಷ್ಟಿಗೆ ಅದು ನಿಲುಕಿಸಿ ಕೊಡುವುದು. ಹೀಗೆ ಮಾಡುವಾಗ ಗೀತೆಯು ವೇದಾಂತದಂತೆ ಕೆಳಗಿನಿಂದ ಮೇಲಕ್ಕೆ ಹೋಗದೆ-ಅಚೇತನದಿಂದ ಚೇತನಕ್ಕೆ ಸಾಗದೆ—ಮೇಲಿಂದ ಕೆಳಕ್ಕಿಳಿಯುವದು. ಸೃಷ್ಟಿಗೆ ಕರ್ತೃವು ಇರುವನು. ಅವನು ಚೇತನನಲ್ಲ, ಅಚೇತನನಲ್ಲ; ಇವೆರಡನ್ನೂ ಮೀರಿದವನು. ಅವನು ಅವ್ಯಕ್ತ ಆತ್ಮನು ಮಾತ್ರನಲ್ಲ. ವ್ಯಕ್ತವನ್ನೆಲ್ಲವನ್ನೂ ಒಳಗೊಂಡಿರುವವನು. ಅವನು ಇಚ್ಛಾಶಕ್ತಿವಿಹೀನನಲ್ಲ. ಸೃಷ್ಟಿಯೇ ಅವನ ಮನಸ್ಸಿನಲ್ಲಿ ಮಾಯಾ (ಇಚ್ಛಾ) ರೂಪವಾಗಿ ಉದ್ಭವಿಸಿದ ಭಾವತರಂಗವು. ನಿರಂತರವೂ ವಿರಾಟಸ್ವರೂಪದಲ್ಲಿ ಅವನು ಪ್ರಕಟನಾಗಿರುವವನು. ತಾನೇ ಯುಗಯುಗಾಂತರದಲ್ಲಿ ಪ್ರತ್ಯಕ್ಷ ರೂಪಗೊಂಡು ಅವನು ಸೃಷ್ಟಿಯಲ್ಲಿ ವ್ಯಕ್ತವಾಗುವವನು. ಅವನು ಪುರುಷನು—ಪುರುಷೋತ್ತಮನು. ಅರ್ಜುನನಿಗೆ ಭಗವದ್ಗೀತೆಯನ್ನು ಬೋಧಿಸಿದ ಮನುಷ್ಯದೇಹಧಾರಿಯಾದ ಶ್ರೀಕೃಷ್ಣನು ಅವನೇ!

## ಈ ಅಂತರ್ದೃಷ್ಟಿಯೇ ಗೀತೆಯಲ್ಲಿ ಹೇಳಿದ ಶ್ರದ್ಧೆಯು.

ಶ್ರೀಕೃಷ್ಣನು ಈ ಪ್ರಕಾರ ಸೃಷ್ಟಿಕರ್ತನೆಂದು ಒಪ್ಪುವುದೂ ಒಪ್ಪದಿರುವದೂ ಜೀವನ ಪ್ರಕೃತಿಯನ್ನು ಅವಲಂಬಿಸಿರುವದೆಂದು ಗೀತೆಯಲ್ಲಿ ಹೇಳಿದೆ ( ೩, ೩೧-೩೩ ). ಹಾಗೆ ಒಪ್ಪದವರಿಗೆ ಅಂತರ್ದೃಷ್ಟಿಯು— ಶ್ರದ್ಧೆಯು— ಇರುವದಿಲ್ಲವಾದುದರಿಂದ ಈ ವಿಷಯವಾಗಿ ಅವರಿಗೆ ಉಪದೇಶಿಸುವದನ್ನು ಕೂಡ ಗೀತೆಯು ಕಾರಣಗಳನ್ನು ಹೇಳಿ ನಿರಾಕರಿಸುವುದು. ಆದರೆ ಶ್ರದ್ಧೆಯಿಂದ ಶ್ರೀಕೃಷ್ಣನನ್ನು ಸೃಷ್ಟಿಕರ್ತನೆಂದು ಒಮ್ಮೆ ಒಪ್ಪಿದ ಬಳಿಕ ತಾನು ಸೃಷ್ಟಿಯನ್ನು ಉತ್ಪನ್ನ ಮಾಡಿದ ಕ್ರಮವನ್ನು ಯಥಾರೀತಿಯಾಗಿ ಅವನು ಹೇಳಿರುವಾಗ ಅವನ ಮಾತುಗಳಲ್ಲಿ ನಂಬುಗೆ ನಾಲದಿರುವದು ಸರಿಯಲ್ಲ. ನಮ್ಮ ಬುದ್ಧಿಗೆ ನಿಲುಕುವಂತೆಯೇ ಅವನು ಅವುಗಳನ್ನು ಭಗವದ್ಗೀತೆಯಲ್ಲಿ ಹೇಳಿರುವನು. ಆದರೆ ಅವುಗಳನ್ನು ತಿಳಿಯುವದಕ್ಕೆ ಶ್ರದ್ಧೆಯನ್ನು ಕಳೆದುಕೊಂಡು ತರ್ಕವನ್ನು ಅನುಸರಿಸಲಾಗದು. ಬುದ್ಧಿಯ ಚಿಕಿತ್ಸಕತೆಗೆ ಶ್ರದ್ಧೆಯು ಬೆಂಬಲವನ್ನಿತ್ತು 'ಅವುಗಳನ್ನು ಗ್ರಹಿಸಬೇಕಾಗುವುದು. ಹೀಗೆ ಮಾಡದೆ ಅಶ್ರದ್ಧೆಯನ್ನೇ ಅವಲಂಬಿಸಿದರೆ ಸೃಷ್ಟಿಯ ಗೂಢವು ಸ್ಫುಟವಾಗದು. ಇದು ಜೀವನಿಗೆ ಮಾತ್ರ ಹಾನಿಕರವಾಗುವುದಲ್ಲದೆ ಗೀತೆಗಾಗಲಿ ಶ್ರೀಕೃಷ್ಣನಿಗಾಗಲಿ ಯಾವ ಹಾನಿಯೂ ಇದರಿಂದ ತಟ್ಟದು. ಜೀವರಲ್ಲಿ ಸುಹೃದ್ಭಾವವನ್ನಿಟ್ಟ ಸೃಷ್ಟಿಯ ಪ್ರಭುವು ಇದನ್ನು ಸಹಿಸದೆ ತನ್ನ ಉದಾಸೀನತೆಯನ್ನು ಬಿಟ್ಟು ಆಗಾಗ ಅವತಾರಗಳನ್ನೆತ್ತಿ ಅವರ ಸಹಾಯಕ್ಕೆ ಬಂದೊದಗುವನು. ಇಂಥವುಗಳಲ್ಲಿ ಒಂದಾದ ಕೃಷ್ಣಾವತಾರದಲ್ಲಿ ಶಾಶ್ವತ ಸತ್ಯವೆಲ್ಲವನ್ನೂ ಅವನು ಅರ್ಜುನನ ನಿಮಿತ್ತದಿಂದ ಅವರಿಗೆ ಸುಭೋಧವಾಗಿ ತಿಳಿಯ ಹೇಳಿರುವನು. ಅದನ್ನು ಯಥಾರ್ಥವಾಗಿ ತಿಳಿದವರೇ ಧನ್ಯರು.

## ಶ್ಲೋಕಾರ್ಥವನ್ನು ತಿಳಿಯುವ ನಿರ್ದೋಷ ಪದ್ಧತಿಯು.

ಶ್ರದ್ಧೆಯು ಇಲ್ಲದಿದ್ದರೆ ಅಧ್ಯಾತ್ಮಜ್ಞಾನವು ಬುದ್ಧಿಗೆ ಗೋಚರಿಸದೆಂಬ ಗೀತೆಯ ಮತವನ್ನು ವಿವರಿಸಿದುದಾಯಿತು. ಇನ್ನು ಗೀತೆಯ

ಶ್ಲೋಕಗಳಿಗೆ ಅರ್ಥಮಾಡುವ ಸರ್ವಸಾಧಾರಣ ಪದ್ಧತಿಯಲ್ಲಿರುವ ಕೆಲವು ಅಪ್ರಾಶಸ್ತ್ಯಗಳನ್ನು ಕಂಡುಕೊಳ್ಳುವ. ಶ್ಲೋಕಗಳೊಳಗಿನ ಪಾರಿಭಾಷಿಕ ಶಬ್ದಗಳ ಅರ್ಥವನ್ನು ನಿಘಂಟುಗಳಿಂದ ತೆಗೆದು ಹೇಳುವದುಂಟು. ಇಲ್ಲವೆ ವೇದಾಂತ ವಾಙ್ಮಯದೊಳಗೆ ರೂಢಿಯಲ್ಲಿದ್ದ ಅರ್ಥವನ್ನೇ ಸ್ವೀಕರಿಸುವುದುಂಟು. ಇವೆರಡೂ ತಮ್ಮ ಉದ್ದೇಶಕ್ಕೆ ಸರಿಬಾರದಿದ್ದರೆ ಅನ್ಯ ಆಧಾರಗಳನ್ನು ಶೋಧಿಸಿ, ಇಲ್ಲವೆ ವ್ಯಾಕರಣದ ಅಡ್ಡಹಾದಿಯ ನಿಯಮಗಳನ್ನಾದರೂ ಶೋಧಿಸಿ ತಮಗೆ ಅನುಕೂಲವಾಗಿರುವ ಅರ್ಥವೇ ಗ್ರಾಹ್ಯವೆಂದು ತೋರಿಸಿಕೊಡುವದುಂಟು. ಇಷ್ಟು ಮಾಡಿಯೂ ಶ್ಲೋಕಗಳ ಅರ್ಥವು ನಿಸ್ಸಂದಿಗ್ಧವಾಗಿ ಸ್ಪಷ್ಟವಾಗುವುದೇ ? ಹಾಗೂ ಆಗುವದಿಲ್ಲ. ಈ ಮೂಲಕ ವಿದ್ವಾಂಸರಲ್ಲಿ ಮತಭೇಧಗಳಾಗಿ ಬೆಳೆಯುತ್ತ ಹೋಗಿರುವವು. ಭಗವದ್ಗೀತೆಯು ಅನ್ಯಗುಣಗಳಿಗಾಗಿ ಹೇಗೆ ಜಗತ್ತಿನ ವಾಙ್ಮಯದಲ್ಲೆಲ್ಲ ಹೆಸರುವಾಸಿಯಾಗಿರುವದೋ ಹಾಗೆಯೇ ಅದರೊಳಗಿನ ಎಷ್ಟೋ ಶ್ಲೋಕಗಳ ಅರ್ಥದ ದುರ್ಬೋಧತೆಗಾದರೂ ಅದು ಈಗ ಅದ್ವಿತೀಯವಾಗಿರುವದೆಂದು ಹೇಳಬಹುದು. ಅದರ ಶೈಲಿಯು ಬಹು ಸುಲಭವಾಗಿದೆ; ಆಬಾಲವೃದ್ಧಸ್ತ್ರೀಪುರುಷರಿಗೆ ಅದು ಸುಗಮವಾಗಿಯೂ ಚಿತ್ತಾಕರ್ಷಕವಾಗಿಯೂ ಇದೆ. ಆದರೂ ಎಷ್ಟೋ ಶ್ಲೋಕಗಳು ಹೀಗೆ ದುರ್ಬೋಧವಾಗುವದಕ್ಕೆ ಕಾರಣವೇನೆಂಬುದನ್ನು ನಾವು ಯೋಚಿಸಬೇಕು. ಅಥದಿಂದ ಇತಿಯವರೆಗೆ ಗೀತೆಯನ್ನು ನುಡಿದ ಶ್ರೀಕೃಷ್ಣನ ಮನಸ್ಸಿನಲ್ಲಿ ಈ ಪ್ರಕಾರದ ಅರ್ಥದ ಗಲಿಬಿಲಿಯಾಗುವದು ಸಂಭವನೀಯವಲ್ಲ. ಶ್ರೀಕೃಷ್ಣನ ಆತ್ಮವಿಶ್ವಾಸವನ್ನು ನೋಡಿದರೆ ಹೀಗೆ ಊಹಿಸಬೇಕಾಗುವದು. ಅವನ ಬೋಧನೆಯನ್ನು ಕೇಳಿ ಸುಬುದ್ಧನಾದ ಅರ್ಜುನನಿಗೂ ಇಂಥ ಶಬ್ದಾರ್ಥಗಳನ್ನು ಕುರಿತು ಸಂಶಯವು ಕೊನೆಗೆ ಎಲ್ಲಿಯೂ ಉಳಿಯಲಿಲ್ಲ. ನಮಗೆ ಅದು ದುರ್ಬೋಧವಾಗಿರುವದಕ್ಕೆ ಗೀತೆಯು ತೋರಿಸಿಕೊಟ್ಟ ಕಾರಣಗಳನ್ನು ನಾವು ಮೇಲೆ ವಿಶದ ಮಾಡಿರುವೆವು.

ವೇದಾಂತದ ಎಲ್ಲ ಪಾರಿಭಾಷಿಕ ಶಬ್ದಗಳಿಗೆ ರೂಢಿಯಲ್ಲಿರುವ ಅರ್ಥದೊಳಗಿನ ಅಪೂರ್ಣತೆಯನ್ನೂ ದೋಷವನ್ನೂ ತೆಗೆದೊಗೆದು ನಿಶ್ಚಿತವೂ ಖಂಡಿತವೂ ಆದ ಹೊಸ ಅರ್ಥಗಳನ್ನು ಗೀತೆಯಲ್ಲಿ ಅವುಗಳಿಗೆ ಕೊಟ್ಟಿದೆ.

ಈ ಬಗೆಯ ಹೊಸ ಭಾವವನ್ನು ಅರ್ಜುನನಿಗೆ ತಿಳಿಸಿಹೇಳುವುದಕ್ಕೆ ಆ ಶಬ್ದಗಳ ಹಳೆಯ ಮತ್ತು ಹೊಸ ಅರ್ಥಗಳನ್ನು ಗೀತೆಯಲ್ಲಿ ಶ್ರೀಕೃಷ್ಣನು ವಿಸ್ತರಿಸಿರುವನು. ಇದರಿಂದ ಅವುಗಳೊಳಗಿನ ತಾರತಮ್ಯವು ಅರ್ಜುನನ ಲಕ್ಷ್ಯಕ್ಕೆ ಚೆನ್ನಾಗಿ ಬಂದಿತು. ಈ ಕಾರಣದಿಂದ ಗೀತೆಯಲ್ಲಿ ಶ್ಲೋಕಗಳಲ್ಲಿಯೇ ಅಲ್ಲದೆ ಶ್ಲೋಕಗಳೊಳಗಿನ ಒಂದೊಂದು ಪಾರಿಭಾಷಿಕ ಶಬ್ದದೊಳಗೂ ತತ್ವವು ತುಂಬಿರುವದು. ಇಂಥ ಶಬ್ದಗಳ ಅರ್ಥವನ್ನು ನಿಘಂಟುಗಳಿಂದಾಗಲಿ ಹಳೆಯ ಆಧಾರಗಳಿಂದಾಗಲಿ ಪಡೆಯಲು ಹವಣಿಸುವದರಿಂದ ಗೀತೆಯಲ್ಲಿ ತೋರುವ ದುರ್ಬೋಧತೆಯು ಬಲಿತಿರುವುದು. ಹೀಗೆ ಮಾಡದೆ ಆಯಾ ಶಬ್ದಗಳ ಅರ್ಥವನ್ನು ಗೀತೆಯಿಂದಲೇ ಪಡೆಯಲು ಯತ್ನಿಸಿದರೆ ಈ ಸಂದಿಗ್ಧತೆಯೆಲ್ಲವೂ ಮಾಯವಾಗುವದು. ಗೀತೆಯಲ್ಲಿ ಬಂದಿರುವ ಎಲ್ಲ ಪಾರಿಭಾಷಿಕ ಶಬ್ದಗಳ ವಿಷಯದಲ್ಲೂ ಹೀಗಾಗಿರುವದರಿಂದ ನಾವು ಮುಂದೆ ಮಾಡಿರುವ ಗ್ರಂಥವಿಮರ್ಶೆಯಿಂದಲೇ ಅದರ ಧೋರಣೆಯನ್ನೂ ದೃಷ್ಟಿಕೋನದ ಪ್ರಮಾಣವನ್ನೂ ವಾಚಕರು ತಿಳಿದುಕೊಳ್ಳುವದು ಲೇಸು. ಆದರೂ ಉದಾಹರಣೆಗಾಗಿ ಒಂದೆರಡು ಶಬ್ದಗಳ ಅರ್ಥವನ್ನು ಇಲ್ಲಿ ವಿವರಿಸುವೆವು.

## ಆತ್ಮ ಮತ್ತು ಪುರುಷ.

ಈ ಶಬ್ದಗಳ ಅರ್ಥದಲ್ಲಿ ಗೀತೆಯು ಕಲ್ಪಿಸುವ ವ್ಯತ್ಯಾಸವನ್ನು ವಿಚಾರಿಸುವ. ವೇದಾಂತವು ಈ ಶಬ್ದಗಳಲ್ಲಿ ವ್ಯತ್ಯಾಸವನ್ನು ಭಾವಿಸುವದಿಲ್ಲ. ಅವುಗಳನ್ನು ಸಮಾನಾರ್ಥಕಗಳಾಗಿ ಉಪಯೋಗಿಸುವುದು. ಆದರೆ ಗೀತೆಯು ಹಾಗೆ ಮಾಡುವದಿಲ್ಲ. ಗೀತೆಯಲ್ಲಿ ಆತ್ಮನೆಂದರೆ ಪುರುಷನೆಂಬ ಅರ್ಥವು ಸಾರ್ವತ್ರಿಕವಾಗಿರುವದಿಲ್ಲ. ಇವುಗಳಲ್ಲಿ ಮಹತ್ವದ ಸೂಕ್ಷ್ಮ ತಾತ್ವಿಕ ಭೇದವುಂಟು. ಆತ್ಮವು ಮೂಲತತ್ವವು. ಈ ಮೂಲತತ್ವವು ತನ್ನ ಸ್ವಭಾವಸಹಜವಾದ ಶಕ್ತಿಯಿಂದ ಸುಖವನ್ನು ಬಯಸುವದು. ಹೀಗೆ ಸುಖದ ಬಯಕೆಯು ಆತ್ಮ ಸ್ವಭಾವದಲ್ಲಿ ವ್ಯಕ್ತವಾಗುವನಕ ಅದು ಆತ್ಮವೆನಿಸುವುದು. ಆ ಅಭಿಲಾಷೆಯು ವ್ಯಕ್ತವಾದ ಬಳಿಕ ಅದಕ್ಕೆ ಪುರುಷನೆಂಬ ಸಂಜ್ಞೆಯು ಬರುವುದು. ಈ ಪುರುಷನ ಪುರುಷ ಸ್ವಭಾವವು ಮೂಲ

ಭೂತವಾದ ಆವನ ಆತ್ಮ ಸ್ವಭಾವವನ್ನು ಅವಲಂಬಿಸಿರುವದರಿಂದ ಅವನನ್ನು ಸ್ಥೂಲವಾಗಿ ಆತ್ಮನೆಂಗೂ ಹೇಳಬಹುದು. ಆದರೆ ಪುರುಷ ಸ್ವಭಾವ ಲಕ್ಷಣವಾದ ಸುಖಾಭಿಲಾಷೆಯು ಯಾವ ಆತ್ಮತತ್ವದಲ್ಲಿ ವ್ಯಕ್ತವಾಗಿರುವ ದಿಲ್ಲವೋ ಆ ಆತ್ಮತತ್ವವನ್ನು ಗೀತೆಯು ಪುರುಷನೆಂದು ಸರ್ವಥಾ ಹೇಳುವ ದಿಲ್ಲ.

ಆತ್ಮತತ್ವವು ಆದಿಯಲ್ಲಿ ನಿಷ್ಕ್ರಿಯವು, ನಿರ್ಗುಣವು, ಅವ್ಯಕ್ತವು, ಅಜವು, ಅಚಿಂತ್ಯವು ಎಂಬುದನ್ನು ಗೀತೆಯು ಒಪ್ಪುವುದು. ಇದೇ ಅವ್ಯಯವಾದ ಆತ್ಮತತ್ವವು. ತನ್ನ ಸ್ವೇಚ್ಛೆಯಿಂದ —ಮಾಯೆಯಿಂದ— ಪುರುಷಸ್ವಭಾವವನ್ನು ತಳೆದೊಡನೆಯೇ ಅದು ಕಾರ್ಯಕ್ಷಮವಾಗುವದು, ಗುಣಪ್ರವರ್ತಕವಾಗುವದು, ವ್ಯಕ್ತವಾಗುವದು, ಜನ್ಯವಾಗುವದು, ಚಿಂತ ನೀಯವಾಗುವದು ಎಂಬ ಸಿದ್ಧಾಂತವನ್ನು ಗೀತೆಯು ಪ್ರತಿಪಾದಿಸುವದು. ಹೀಗೆ ಆತ್ಮ ಮತ್ತು ಪುರುಷ ಶಬ್ದಗಳಲ್ಲಿ ಗೀತೆಯು ಕಲ್ಪಿಸುವ ವ್ಯತ್ಯಾಸವು ಬಹಳ ಮಹತ್ವದ್ದಾಗಿದೆ.

## ಗೀತೆಯಲ್ಲಿ ಪುರುಷೋತ್ತಮನೆಂಬ ಹೆಸರಿನ ಸ್ವಾರಸ್ಯವು.

ಸೃಷ್ಟಿಯನ್ನುಂಟು ಮಾಡಿದವನು ನಿಷ್ಕ್ರಿಯ ಆತ್ಮನಲ್ಲ, ಸಕ್ರಿಯ ಪುರುಷನು—ಪುರುಷೋತ್ತಮನು. ಹೀಗೆ ಅವನನ್ನು ಪುರುಷೋತ್ತಮ ನೆಂದು ತಿಳಿಯುವದರಲ್ಲಿ ಸೃಷ್ಟ್ಯುತ್ಪತ್ತಿಯ ಜ್ಞಾನಸಾರವೆಲ್ಲವೂ ಹುದುಗಿ ಕೊಂಡಿರುವುದು (೧೫-೧೯). ಈ ನಮ್ಮ ಕಾಲದಲ್ಲಿ ಜರ್ಮನ್ ತತ್ವವೇತ್ತ ನೊಬ್ಬನು ಮನುಷ್ಯನ ಉತ್ಕರ್ಷೆಯ ಮೆಟ್ಟೊಂದನ್ನು ಕಲ್ಪಿಸಿ ಅದನ್ನು ಪಡೆದವನನ್ನು ಅತಿ ಮಾನುಷ ( Superman ) ನೆಂದೂ ಅದನ್ನು ಪಡೆದ ಜನಾಂಗವು ಅತಿರಾಷ್ಟ್ರವೆಂದೂ ಸಿದ್ಧಾಂತವನ್ನು ಸಾರಿರುವನು. ಪುರು ಷೋತ್ತಮನೆಂದು ಗೀತೆಯಲ್ಲಿ ಹೇಳಿರುವದಾದರೂ ಇದೇ ಕಲ್ಪನೆಯನ್ನನು ಸರಿಸಿದೆ ಎಂದು ನಮ್ಮ ಆಧುನಿಕ ವಿದ್ವಾಂಸರಲ್ಲಿ ಕೆಲವರು ಅಭಿಪ್ರಾಯ ಪಟ್ಟಿರುವರು. ನಮ್ಮ ವೇದಾಂತ ಶಾಸ್ತ್ರದಲ್ಲಿಯೂ ಇಂಥ ಆಧ್ಯಾತ್ಮಿಕ ಅತಿಮಾನುಷರ ಒಂದು ವರ್ಗವನ್ನು ಊಹಿಸಿರುವರು. ಋಷಿಗಳು, ಯೋಗಿಗಳು, ಪರಮಹಂಸರು, ತ್ರಿಕಾಲಜ್ಞರು, ಅನುಭಾವಿಗಳು, ಧರ್ಮ

ಸಂಸ್ಥಾಪಕ ಮತಸಂಸ್ಥಾಪಕ ವಿಭೂತಿಗಳೇ ಮುಂತಾದ ಅಲೌಕಿಕ ಯೋಗ್ಯತೆಯುಳ್ಳ ವ್ಯಕ್ತಿಗಳನ್ನು ಆಧ್ಯಾತ್ಮಿಕ ದೃಷ್ಟಿಯಿಂದ ಪುರುಷರಲ್ಲಿ ಉತ್ತಮರೆಂದು—ಪುರುಷೋತ್ತಮರೆಂದು ಎಣಿಸುವದುಂಟು. ಈ ಭಾವವು ಅಥವಾ ವಿಧಾನವು ಸರ್ವಥಾ ಗೀತೆಯದಾಗಲಾರದು. ಸೃಷ್ಟಿಗೆಲ್ಲ ಪುರುಷೋತ್ತಮನಾದ ಭಗವಂತನಾದ ವ್ಯಕ್ತಿಯು ಒಂದೇ (೧೦-೧೫). ಆವನೇ ಸೃಷ್ಟಿಯನ್ನು ಉಂಟುಮಾಡಿದವನು, ಸೃಷ್ಟಿಗೆ ಶಾಶ್ವತ ಅಧಿಕಾರಿಯು. ಜೀವನು ಎಷ್ಟು ಪ್ರಗತಿಶೀಲನಾಗಿ ಯಾವ ಪದವಿಯನ್ನು ಪಡೆದರೂ ಅವನು ಗೀತೆಯ ಪುರುಷೋತ್ತಮನಾಗಲಾರನು. ಗೀತೆಯಲ್ಲಿ ಯಥಾಕ್ರಮವಾಗಿ ಪುರುಷೋತ್ತಮನ ವಿಷಯದ ಸಂಗತಿಗಳನ್ನೆಲ್ಲವನ್ನೂ ತತ್ವತಃ ವಿಶದ ಪಡಿಸಿದೆ. ಅದನ್ನು ಹೆಚ್ಚಾಗಿ ಚರ್ಚಿಸುವದಕ್ಕೆ ಇದು ಸ್ಥಳವಲ್ಲ. ಕೇವಲ ದಿಗ್ದರ್ಶನವೇ ಇಲ್ಲಿ ನಮ್ಮ ಉದ್ದೇಶವಾಗಿದೆ. ಮುಂದೆ ಸಮಗ್ರ ವಿವರಣೆಯನ್ನೇ ವಾಚಕರು ಸೂಕ್ಷ್ಮವಾಗಿ ಗ್ರಹಿಸಬೇಕೆಂದು ನಾವು ಬೇಡಿಕೊಳ್ಳುವೆವು.

ಮೇಲೆ ತೋರಿಸಿದ ಆತ್ಮ ಮತ್ತು ಪುರುಷ ಶಬ್ದಗಳೊಳಗಿನ ಭೇದವು ಎಷ್ಟು ಮಹತ್ವದ್ದಾಗಿರುವದೆಂಬದನ್ನು ಮನಗಾಣಿಸುವದಕ್ಕೆ ಒಂದು ಪ್ರಮೇಯವನ್ನು ಮಾತ್ರ ಇಲ್ಲಿ ಹೇಳುವೆವು. ಈ ಸೃಷ್ಟ್ಯುತ್ಪತ್ತಿಗೆ ಪರಮ ಆತ್ಮತತ್ವದ ಪರಿವರ್ತನೆಯಿಂದುಂಟಾದ ಪುರುಷೋತ್ತಮನೇ ಆದಿ ಕಾರಣನಲ್ಲದೆ ಪರಮ ಆತ್ಮತತ್ವವಲ್ಲವೆಂದು ಗೀತೆಯು ಅಭಿಪ್ರಾಯ ಪಡುವದು. ಇದಕ್ಕಾಗಿಯೇ ಗೀತೆಯಲ್ಲಿ ವ್ಯಕ್ತ ಪುರುಷೋತ್ತಮನಿಗಿದ್ದ ಮಹತ್ವವೂ ಗೌರವವೂ ಆತ್ಮತತ್ವಕ್ಕೆ ಇರುವದಿಲ್ಲ. ಸೃಷ್ಟಿಯಲ್ಲಿ ವ್ಯಕ್ತವಾಗಿರುವ ಎಲ್ಲ ಜೀವಭೂತ ವ್ಯಕ್ತಿಗಳೂ ಈ ಪುರುಷೋತ್ತಮನನ್ನು ಅನುಸರಿಸಬೇಕೇ ಹೊರತು ಅವ್ಯಕ್ತವೂ ಅಚಿಂತ್ಯವೂ ಆದ ಆತ್ಮತತ್ವವನ್ನು ಅನುಸರಿಸಿದರೆ ಕ್ಲೇಶಕಾರಕವೆಂದು ಗೀತೆಯು ಹೇಳುವದು (೧೨-೩,೫).

## ಗೀತೆಯ ಪರಿಭಾಷೆಯು ವೇದಾಂತದಲ್ಲಿ ರೂಢವಾದುದಲ್ಲ.

ಮೇಲೆ ಆತ್ಮ ಮತ್ತು ಪುರುಷ ಶಬ್ದಗಳ ವಿಷಯವಾಗಿ ತೋರಿಸಿದಂಥ ಅರ್ಥ ಭಿನ್ನತೆಯು ವೇದಾಂತ ವಾಙ್ಮಯದಿಂದ ಗೀತೆಯಲ್ಲಿ ತೆಗೆದು

ಕೊಂಡ ಒಂದೊಂದು ಪಾರಿಭಾಷಿಕ ಶಬ್ದದಲ್ಲಿಯೂ ಕಂಡುಬರುವದೆಂದು ನಾವು ಒತ್ತಿ ಹೇಳುವೆವು. ಗೀತೆಯು ಸಾಂಖ್ಯವು ಕಾಪಿಲ ಸಾಂಖ್ಯವಲ್ಲ, ಗೀತೆಯ ಯೋಗವು ಪಾತಂಜಲ ಯೋಗವಲ್ಲ. ಗೀತೆಯಲ್ಲಿ ಬಂದ ಜ್ಞಾನ, ಕರ್ಮ, ಸಂನ್ಯಾಸ, ಬ್ರಹ್ಮ, ಅಧ್ಯಾತ್ಮ, ಅಧಿಭೂತ, ಅಧಿದೈವ, ಅಧಿಯಜ್ಞ, ಕ್ಷರ, ಅಕ್ಷರ, ಕ್ಷೇತ್ರ, ಕ್ಷೇತ್ರಜ್ಞ ಮೊದಲಾದ ಶಬ್ದಗಳು ನಮಗೆ ಪರಿಚಿತವಾದವುಗಳಲ್ಲ. ಇವೆಲ್ಲವುಗಳೊಳಗಿನ ಗೀತೆಯ ಗಹನವಾದ ಅರ್ಥ ಸ್ವಾರಸ್ಯವನ್ನು ಮುಂದೆ ಬರುವ ಬುದ್ಧಿಯೋಗದ ವಿವೇಚನೆಯಲ್ಲಿ ಸಂದರ್ಭಾನುಸಾರವಾಗಿ ಗೀತೆಯ ಆಧಾರದಿಂದ ನಾವು ವಿಸ್ತರಿಸಿರುವೆವು. ಅವುಗಳನ್ನು ವಾಚಕರು ಅಲ್ಲಿಯೇ ದಯವಿಟ್ಟು ನೋಡಿಕೊಳ್ಳಬೇಕು.

ಗೀತೆಯ ಪಾರಿಭಾಷಿಕ ಶಬ್ದಗಳ ಅರ್ಥವನ್ನು ನಿಘಂಟುಗಳಿಂದ ಪಡೆಯುವದು ಸಾಧ್ಯವಲ್ಲವೆಂಬುವದಕ್ಕೆ ಇನ್ನೊಂದು ಕಾರಣವೇನೆಂದರೆ ಈ ಶಬ್ದಗಳನ್ನು ಅನೇಕ ಪರ್ಯಾಯಾರ್ಥಗಳಲ್ಲಿ ಸಂದೇಹಕ್ಕೆ ಆಸ್ಪದ ಕೊಡದೆ ಪ್ರಯೋಗಿಸುವ ಶ್ರೀಕೃಷ್ಣನ ಕೌಶಲವು. ಇದು ಅವನು ಮಾಡಿರುವ ಆತ್ಮವೆಂಬ ಶಬ್ದದ ಪ್ರಯೋಗದಿಂದ ಚೆನ್ನಾಗಿ ಪ್ರತ್ಯಯಕ್ಕೆ ಬರುವದು. ಈ ಶಬ್ದವು ಗೀತೆಯಲ್ಲಿ ಬಹು ಮಹತ್ವದ್ದಾಗಿರುವದೆಂದು ಹೇಳಬೇಕಾಗಿಲ್ಲ. ಅದನ್ನು ಶ್ರೀಕೃಷ್ಣನು ಬಹು ಕೌಶಲದಿಂದ ವಿವಿಧ ಅರ್ಥಗಳಲ್ಲಿ ಪ್ರಯೋಗಿಸಿರುವನು. ಈ ಅರ್ಥಗಳನ್ನು ಗೀತೆಯಿಂದ ಮಾತ್ರ ಕಂಡುಕೊಳ್ಳಬಹುದೇ ಹೊರತು ನಿಘಂಟುಗಳಿಂದಲ್ಲ. "ಆತ್ಮ" ವೆಂಬ ಶಬ್ದಕ್ಕೆ ಐದು ಪರ್ಯಾಯಾರ್ಥಗಳು ಗೀತೆಯಲ್ಲಿ ಉಂಟು. ಅವು ಯಾವವೆಂದರೆ:—

(೧) ಸಾಂಖ್ಯ ಪದ್ಧತಿಯ ವಿವರಣೆಯಲ್ಲಿ **ಮೂಲ ಆತ್ಮತತ್ವವೆಂದು.** ಉದಾ:- **೧೦-೨೦, ೧೩-೩೨.**

(೨) ಪ್ರಭುತ್ವ, ಭೋಗ, ಸರ್ವವ್ಯಾಪಿತ್ವ, ಸರ್ವಜ್ಞತ್ವ ಇವುಗಳನ್ನು ಸೂಚಿಸುವಾಗ **ಪುರುಷೋತ್ತಮನೆಂದು.** ಉದಾ:-**೨-೫೫, ೩-೪೩, ೪-೩೫, ೬-೧೮, ೨೧, ೩೨, ೨೯; ೫-೭, ೯-೫, ೧೩-೨೪, ೧೫-೧೧.**

**(೩)** ಅಧ್ಯಾತ್ಮ ಭಾವ, ಯೋಗಭಾವ, ವಿಜ್ಞಾನ, ಯುಕ್ತಸ್ಥಿತಿ, ಸಮತ್ವ,

ಇವನ್ನು ಅಥವಾ ಇವುಗಳ ಅಭಾವವನ್ನು ಸೂಚಿಸುವಾಗ **ಜೀವ ಅಥವಾ ಜೀವನ ಆತ್ಮಸ್ವಭಾವವೆಂದು.** ಉದಾ:– **೨–೪೩,೫೫,೬೪, ೩–೧೭,೪೩, ೪–೩೮,೪೦, ೫–೭,೨೧,೨೬, ೬–೫,೭,೮,೨೫,೨೬,೨೯, ೪೭, ೭–೧೮, ೯–೨೬,೨೮,೩೪, ೧೩–೨೪,೨೮, ೧೫–೧೧, ೧೮–೩೭, ೫೬.**

(೪) ವಿಶುದ್ಧತೆಯನ್ನು ಸೂಚಿಸುವಾಗ **ಬುದ್ಧಿ** ಎಂದು. ಉದಾ:– **೫–೭,೧೧,೨೫.**

(೫) ಅಜ್ಞಾನ, ಜಯಿಸೋಣ, ನಿಗ್ರಹ, ವಶಪಡಿಸಿಕೊಳ್ಳೋಣ ಇವುಗಳನ್ನು ಸೂಚಿಸುವಾಗ **ಮನಸ್ಸು** ಅಥವಾ **ಇಂದ್ರಿಯಗಳೆಂದು.** ಉದಾ:– **೨–೬೪, ೩–೪೩, ೫–೭,೨೫, ೬–೫,೭,೧೦,೧೪.**

ಇನ್ನು ಗೀತೆಯ ತತ್ವಜ್ಞಾನದ ಸ್ವರೂಪವನ್ನು ಆಲೋಚಿಸುವ.

## ಗೀತೆಯ ತತ್ವಜ್ಞಾನದ ಸ್ವರೂಪವು.

**ಶ್ರೀಕೃಷ್ಣನೇ ಪರಾತ್ಪರ ಆತ್ಮತತ್ವನು** (**೧೦–೨೦**). ಇವನು ತನ್ನ ಸ್ವೇಚ್ಛೆ—ಮಾಯೆ—ಯಿಂದಲೂ ಆತ್ಮಶಕ್ತಿಯಿಂದಲೂ ಪುರುಷೋತ್ತಮನಾಗುವನು(**೧೨–೨,೩**). ಎಂದರೆ ತನ್ನಲ್ಲಿರುವ ಆತ್ಮಶಕ್ತಿಯಿಂದ ಒಂದು ವಿಶಿಷ್ಟ ಸುಖವನ್ನು ಬಯಸಿ ಅದನ್ನು ಪಡೆಯಲು ಉಪಕ್ರಮಿಸುವನು. ಹೀಗೆ ಅವನು ಪುರುಷೋತ್ತಮನಾದೊಡನೆಯೆ ಕರ್ಮ ತತ್ವವೂ ಪ್ರವೃತ್ತವಾಯಿತೆಂದು ತಿಳಿಯಬೇಕು. ಏಕೆಂದರೆ ಸುಖವನ್ನು ಕೋರಿ ಅದನ್ನು ಪಡೆಯುವ ಪ್ರವೃತ್ತಿಯೇ ಕರ್ಮತತ್ವದ ಸ್ವರೂಪವು (**೮–೩**). ಸುಖವನ್ನು ಕೋರುವ ಪ್ರವೃತ್ತಿಯು ಪುರುಷ ತತ್ವಕ್ಕೆ ಸೇರಿದೆ. ಹೀಗೆ ಕೋರಿದ ಸುಖವನ್ನು ಪಡೆಯುವ ಪ್ರವೃತ್ತಿಯೇ ಪ್ರಕೃತಿ ಎನಿಸುವದು (**೧೩–೨೦**). ಇವೆರಡೂ ಮೊದಲು ಪುರುಷೋತ್ತಮನಲ್ಲಿಯೇ ಉಗಮವಾಗುವವು. ತಾನು ಪ್ರಭುವಾಗಬೇಕೆಂಬುದೇ ಪುರುಷೋತ್ತಮನಾಗಿ ಅವನು ಕೋರುವ ಸುಖವು (**೯–೨೪,೫–೨೯**).

ಏಕಮೇವಾದ್ವಿತೀಯವಾದ ಆತ್ಮತತ್ವದ ಪರಿವರ್ತನೆಯಿಂದ ಈ

ಪುರುಷೋತ್ತಮನು ಉದಯಿಸಿ ತಾನೂ ಏಕಮೇವಾದ್ವಿತೀಯನಾಗಿರು
ವನು. ಇವನು ಪ್ರಭುವೆನಿಸುವ ಬಗೆ ಹೇಗೆ? ಇವನಿಗೆ ಪ್ರಜೆಗಳೆಲ್ಲಿರುವರು?
ಪುರುಷನಾದವನಲ್ಲಿ ಸುಖಾಭಿಲಾಷೆಯು ಅಂಕುರಿಸಿದೊಡನೆ ಕರ್ಮತತ್ವವು
ಅನಿವಾರ್ಯವಾದುದರಿಂದ ಆ ಸುಖವನ್ನು ತನ್ನ ಪ್ರಕೃತಿ ಶಕ್ತಿಯಿಂದ
ಸಾಧಿಸಲು ಅವನು ಉಪಕ್ರಮಿಸುವನು. ತನ್ನ ಸಂಕಲ್ಪವನ್ನು ಕೊನೆ
ಗಾಣಿಸುವದಕ್ಕಾಗಿ ಪುರುಷೋತ್ತಮನಾದರೂ ತನ್ನ ಪ್ರಕೃತಿ ಶಕ್ತಿಗೆ
ಒಂದು ಮೂರ್ತಸ್ವರೂಪವನ್ನು ಕೊಡುವನು (೭-೪,೫,೯-೭,೮,೧೪-೩,೪).
ತಾನು ಎಣಿಸಿದ ಕಾರ್ಯಸಿದ್ಧಿಗೆ ಅನುರೂಪವಾದ ಪ್ರಕೃತಿ ಶಕ್ತಿಯನ್ನು
ತನ್ನ ಒಂದಂಶದಲ್ಲಿ ಸೇರಿಸಿ ಅದನ್ನು ಆ ಕಾರ್ಯಕ್ಕಾಗಿ ನೇಮಿಸುವನು
(೧೦-೪೨). ಪ್ರಕೃತಿ ಶಕ್ತಿಯಿಂದ ಕೂಡಿದ ಪುರುಷೋತ್ತಮನ ಈ
ಅಂಶವೇ ಬ್ರಹ್ಮನೆನಿಸುವದು(೩-೧೫).

ಸ್ವಭಾವದಿಂದ ಹೀಗೆ ಪ್ರಕೃತಿಮಯನಾದರೂ ಈ ಬ್ರಹ್ಮನು ಪುರು
ಷೋತ್ತಮನ ಪುರುಷ ಸ್ವಭಾವದ ಅಂಶನಾಗಿರುವನಷ್ಟೇ. ಆದುದರಿಂದ
ಇವನಲ್ಲಿ ಪುರುಷ ಸ್ವಭಾವವೇ ಮುಖ್ಯವು. ಪುರುಷೋತ್ತಮನ ಕಾರ್ಯ
ಕ್ಕಾಗಿ ನಿಯತನಾದುದರಿಂದ ಇವನ ಪುರುಷ ಸ್ವಭಾವವು ಸ್ವತಂತ್ರವಾದು
ದಲ್ಲ. ಅದು ಪುರುಷೋತ್ತಮನ ಮೂಲ ಸಂಕಲ್ಪವನ್ನು ಅವಲಂಬಿಸಿರು
ವದು. ಇದಕ್ಕಾಗಿಯೇ ಅವನ ನಿಯತ ಪುರುಷ ಸ್ವಭಾವಕ್ಕೆ ಸತ್‌ಭಾವ
ವೆಂಬ ಹೆಸರು. ಪುರುಷನಾದುದರಿಂದ ಇವನು ಸುಖಾಭಿಲಾಷಿಯೇ;
ಆದರೆ ತಾನು ಪುರುಷೋತ್ತಮನ ಯಾವ ಕಾರ್ಯಕ್ಕಾಗಿ ಉಂಟಾದನೋ
ಆ ಕಾರ್ಯದ ಹೊರಗೆ ಅವನು ತನ್ನ ಸುಖವನ್ನು ಬಯಸುವದಿಲ್ಲ. ಆದುದ
ರಿಂದ ಅವನು ಈ ಕಾರ್ಯನಿರತನಾಗಿ ಪಡೆಯುವ ಸುಖಕ್ಕೆ ಆನಂದವೆಂಬ
ಹೆಸರು. ಪುರುಷೋತ್ತಮನಿಗಾಗಿ ಮಾಡುವ ಯಜ್ಞಕಾರ್ಯವನ್ನು
ಏಕಾಗ್ರತೆಯಿಂದ ಲಕ್ಷಿಸಿ ಈ ಆನಂದವನ್ನು ಅವನು ಪಡೆಯುವದರಿಂದ
ಅವನ ಈ ಭಾವವು "ಚಿತ್" ಎನಿಸುವದು. ಅವನ ಈ "ಚಿತ್" ಸ್ವಭಾವ
ವನ್ನೇ ಗೀತೆಯಲ್ಲಿ "ಅಧ್ಯಾತ್ಮ"-ಆತ್ಮನನ್ನು (ಪುರುಷೊತ್ತಮನನ್ನು)
ಲಕ್ಷಿಸುವ ಭಾವ-ಎಂದು ಹೇಳಿದೆ(೮-೩). ಶ್ರೇಷ್ಠವಾದ ಸ್ವತಂತ್ರ ಪುರುಷ
ಸ್ವಭಾವಕ್ಕಾಗಿ ಉತ್ತಮ ಪುರುಷನೆಂಬ ಸಂಜ್ಞೆಯು ಪುರುಷೋತ್ತಮನಿಗೆ

ಬಂದಂತೆ ಅಧ್ಯಾತ್ಮಭಾವಯುಕ್ತ ಪುರುಷರಿಗೆಲ್ಲ ಬ್ರಹ್ಮನೇ ಶ್ರೇಷ್ಠನಾದುದ ರಿಂದ ಇವನು ಕೂಟಸ್ಥ ಪುರುಷನೆಂದು ಹೇಳಿದೆ (೧೫-೧೬). ಪುರುಷೋತ್ತಮನಿಗೂ ಕೂಟಸ್ಥನಾದ ಬ್ರಹ್ಮನಿಗೂ ಇರುವ ಭೇದವು ಇದೇ.

ಪ್ರಜೆಯನ್ನು ಬಯಸಿದ ಪ್ರಭುವಿಗೆ ಬ್ರಹ್ಮನೊಬ್ಬನಿಂದ ಹೇಗೆ ತೃಪ್ತಿಯಾದೀತು? ಪ್ರಜೆಯೇ ಪ್ರಭುವಿನ ಸಂಪತ್ತು. ಹುಟ್ಟಿದವನು ಸುಪುತ್ರನಾದರೆ ಏಕಪುತ್ರಭಾವವೇ ಸಾಕೆಂದು ಸುಭಾಷಿತಕಾರರು ಹೊಗಳಬಹುದು. ಆದರೆ ಪುರುಷೋತ್ತಮನ ಪ್ರಜೋತ್ಪತ್ತಿಯ ಸಂಕಲ್ಪವು ನಿರ್ದೋಷಿಯೂ ನಿಶ್ಚಲ ಸ್ವಭಾವವುಳ್ಳವನೂ ಆದ ಬ್ರಹ್ಮನಲ್ಲಿಯೇ ಸಮಾಪ್ತವಾಗುವದು ಶಕ್ಯವಲ್ಲ. ಅವನಿಂದ ಪ್ರಜೆಗಳ ವೃದ್ಧಿಯಾಗಬೇಕು (೩-೧೦) ನಾವು ನೋಡುವ ಸೃಷ್ಟಿಪ್ರಪಂಚವು ಪ್ರಸ್ಥಾಪಿತವಾಗಬೇಕು(೧೪-೩,೪). ಪ್ರಾಜ್ಞನಾದ ಬ್ರಹ್ಮನ ಭಾವಸ್ಥಿರತೆಯಲ್ಲಿ ಕೌತುಕವಿಲ್ಲ. ಸೂಜ್ಞರಾದ ಪ್ರೌಢರ ಸದ್ವರ್ತನೆಗಿಂತಲೂ ಶಿಶುಗಳ ಬಾಲಕೇಳಿಗಳೇ ಹೆಚ್ಚು ಸಂತೋಷವನ್ನು ಕೊಡುವವು. ಸೃಷ್ಟಿಯನ್ನು ಈ ಪ್ರಕಾರ ಹುಟ್ಟಿಸಿ ನಡೆಯಿಸುವದೇ ಪುರುಷೋತ್ತಮನಿಗಾಗಿ ಬ್ರಹ್ಮನು ಮಾಡತಕ್ಕ ಕರ್ತವ್ಯವು. ಚಿನ್ಮಯನಾಗಿ ಭಾವಸಂತುಷ್ಟಿಯನ್ನು ತಾನು ಮಾತ್ರ ಪುರುಷೋತ್ತಮನಿಗೆ ಅರ್ಪಿಸುವದು ಸಾಲದು. ಈ ಸೃಷ್ಟ್ಯುತ್ಪತ್ತಿ ಕಾರ್ಯವನ್ನು ಅಂಗೀಕರಿಸಿ ಅಂತಹ ಯಜ್ಞವನ್ನೇ ಮಾಡಿ ಅವನು ಪುರುಷೋತ್ತಮನಿಗೆ ಅರ್ಪಿಸಬೇಕು (೩-೧೫).

ಸೃಷ್ಟಿಯನ್ನು ಬ್ರಹ್ಮನು ಹೇಗೆ ಉಂಟುಮಾಡುವನು? ಪುರುಷೋತ್ತಮನಿಂದ ತನ್ನ ಪುರುಷಸ್ವಭಾವವನ್ನು ಪಡೆದಂತೆ ಕರ್ಮತತ್ವವನ್ನು ಅನುಸರಿಸುವ ಪ್ರಕೃತಿಯನ್ನೂ ಬ್ರಹ್ಮನು ಪಡೆದಿರುವನು. ಸೃಷ್ಟಿಗೆ ಸಂಬಂಧಿಸಿರುವ ಯಾವ ಆತ್ಮ ವ್ಯಕ್ತಿಯೇ ಆಗಲಿ ಪುರುಷ ಪ್ರಕೃತಿ ಎಂಬ ತತ್ವಗಳಿಂದ ಅದು ಕೂಡಿರಲಿಕ್ಕೇ ಬೇಕು. ಏಕೆಂದರೆ ಈ ತತ್ವಗಳು ನಿರಂತರವಾಗಿ ಒಂದನ್ನೊಂದು ಹೊಂದಿಕೊಂಡಿರುವವು. ತನ್ನ ಈ ಪ್ರಕೃತಿ ಸ್ವಭಾವದ ವಿಕಾಸದಿಂದ ಬ್ರಹ್ಮನು ಸೃಷ್ಟಿಯನ್ನು ಸೃಜಿಸುವನು.

ಪ್ರಕೃತಿ ತತ್ವವು ಬ್ರಹ್ಮ ಪುರುಷೋತ್ತಮರಲ್ಲಿ ಇದ್ದರೂ ಆದರ

ಸ್ವರೂಪವು ಅವರಲ್ಲಿ ಪೂರ್ಣವಾಗಿ ವ್ಯಕ್ತವಾಗುವದಿಲ್ಲ. ಬ್ರಹ್ಮನಿಂದ ಸೃಷ್ಟ್ಯುತ್ಪತ್ತಿ ಕ್ರಮವು ಮುಂದೆ ಸಾಗುವುದರಲ್ಲಿ ಅದು ಸಂಪೂರ್ಣವಾಗಿ ವ್ಯಕ್ತವಾಗುವದು. ಪ್ರಕೃತಿಯಲ್ಲಿ ಬುದ್ಧಿ ಅಹಂಕಾರ ಇಂದ್ರಿಯಗಳನ್ನೊಳಗೊಂಡ ಮನಸ್ಸು ಮತ್ತು ಶಬ್ದ, ಸ್ಪರ್ಶ, ರಸ, ರೂಪ, ಗಂಧಗಳೆಂಬ ತನ್ಮಾತ್ರಗಳನ್ನೊಳಗೊಂಡ ಪಂಚಮಹಾಭೂತ ತತ್ವಗಳು ಸಮಾವೇಶವಾಗುವವು. ಇವುಗಳಿಗೆ ಗೀತೆಯಲ್ಲಿ ಅಷ್ಟಧಾ ಪ್ರಕೃತಿಯೆಂಬ ಸಂಜ್ಞೆಯುಂಟು (೭-೪). ಇವಲ್ಲದೆ ಸತ್ವ, ರಜ, ತಮ ಎಂಬ ಮೂರು ಗುಣಗಳು ಈ ಪ್ರಕೃತಿಯನ್ನು ಕೂಡಿರುವದೊಂದು ಮಹತ್ವದ ಲಕ್ಷಣವಾಗಿದೆ (೧೪-೫). ಈ ಎಂಟು ಪ್ರಕಾರದ ತತ್ವಗಳೂ ಮೂರು ಗುಣಗಳೂ ಕೂಡಿ ನಡೆಯಿಸುವ ವ್ಯವಹಾರಗಳಿಗೆ ಪ್ರಕೃತಿಯ ಸಂಸೃತಿ ಅಥವಾ ಸಂಸಾರವೆಂಬ ಹೆಸರು.

ತತ್ವ ಶೋಧನೆಗಾಗಿ ಪುರುಷಪ್ರಕೃತಿಗಳು ಹೀಗೆ ಬೇರೆ ಬೇರೆ ಎಂದು ಭಾವಿಸಿ ವಿಚಾರ ಮಾಡಿದರೂ ಪುರುಷನಿಲ್ಲದೆ ಪ್ರಕೃತಿಯ ಚಟುವಟಿಕೆಗಳು ಸಾಗವು. ಪ್ರಕೃತಿಗೆ ಹೀಗೆ ಚಲನವನ್ನು ಕೊಡುವ ಮೂವರು ಪುರುಷರನ್ನು ಗೀತೆಯಲ್ಲಿ ಕ್ಷರಾಕ್ಷರರೆಂದು ವಿಭಾಗಿಸಿರುವರು. ಪುರುಷೋತ್ತಮನು ಅಕ್ಷರನು. ಹಾಗೆಯೇ ಕೂಟಸ್ಥ ಪುರುಷನಾದ ಬ್ರಹ್ಮನೂ ಅಕ್ಷರನೇ. ಅಕ್ಷರರೆನಿಸುವ ಇವರಿಬ್ಬರ ಅಕ್ಷರತ್ವವು ಒಂದೇ ತರಗತಿಯದಲ್ಲ. ಪುರುಷೋತ್ತಮನು ಉತ್ತಮ ಅಕ್ಷರನು; ಬ್ರಹ್ಮನು ಪರಮ(೮-೩)ಆದರೂ ಮಧ್ಯಮ ಅಕ್ಷರನು (೧೫-೧೮). ಸೃಷ್ಟಿಯ ಅಸ್ತಿತ್ವಕ್ಕೆ ಸಂಬಂಧವುಳ್ಳ ಪುರುಷರಿಗೆಲ್ಲ ಪ್ರತ್ಯೇಕವಾದ ನಿಯತ ಭಾವಗಳುಂಟು. ಪುರುಷೋತ್ತಮನ ಭಾವವನ್ನು ಗೀತೆಯು ಯೋಗಭಾವವೆಂದು (೧೦-೭) ಹೇಳುವದು ಸೃಷ್ಟಿಯನ್ನು ಮೀರಿದವನಾದರೂ, ಅದರಲ್ಲಿ ಆತ್ಮ-ತನ್ನದೆಂಬ- ಭಾವವನ್ನಿಟ್ಟು ಇವನು ನಡೆಯುವವನು. ಈ ಭಾವವನ್ನು ಅವನು ಎಂದಿಗೂ ಕಳೆದುಕೊಳ್ಳುವದಿಲ್ಲ. ಇದರಿಂದ ತನ್ನ ನಿಯತ ಭಾವದಲ್ಲಿ ಇವನು ಅಕ್ಷರನು. ಎರಡನೆಯವನಾದ ಬ್ರಹ್ಮನ ನಿಯತ ಭಾವವನ್ನು ಅಧ್ಯಾತ್ಮವೆಂದು ಹೇಳಿದೆ. ತನ್ನ ಕಾರ್ಯಗಳಲ್ಲೇ ಅಲ್ಲದೆ ಅಸ್ತಿತ್ವದಲ್ಲಿಯೂ ಪುರುಷೋತ್ತಮನನ್ನೇ ಇವನು ಲಕ್ಷಿಸುವನಾದುದರಿಂದ ಇವನ ಭಾವಕ್ಕೆ ಅಧ್ಯಾತ್ಮವೆಂದು

ಹೆಸರು (೮-೩). ಈ ಅಧ್ಯಾತ್ಮಭಾವವನ್ನು ಇವನು ಎಂದಿಗೂ ಕಳೆದು ಕೊಳ್ಳುವದಿಲ್ಲ. ಆದುದರಿಂದ ಇವನು ಅಕ್ಷರನು. ಹೀಗೆ ಬ್ರಹ್ಮ ಪುರುಷೋತ್ತಮರಿಬ್ಬರಿಗೂ ಅಕ್ಷರರು. ಅಂದರೆ ತಮ್ಮ ನಿಯತ ಸತ್ವವನ್ನು ಕಾಯ್ದುಕೊಳ್ಳುವವರು. ಆದರೆ ಮೂರನೆಯ ಪುರುಷನನ್ನು ಮಾತ್ರ ಗೀತೆಯು ಕ್ಷರನೆಂದು ಹೇಳುವದು, ಇವನಾರು? ಕ್ಷರನು ಹೇಗಾಗುವನು? ಎಂಬುದನ್ನು ಸ್ವಲ್ಪ ವಿಚಾರಿಸುವ.

ಪುರುಷೋತ್ತಮನಿಗೆ ಬ್ರಹ್ಮನಿಂದ ಸಲ್ಲುವ ಪ್ರಭುತ್ವವೂ ಅಧ್ಯಾತ್ಮಭಾವವೂ ತಪವೂ ನಿರ್ದೋಷವಾಗಿರುವವೆಂದು ಹೇಳಬೇಕಾಗಿಲ್ಲ. ಆದರೆ ಇವುಗಳಲ್ಲಿ ಭಾವ ಪ್ರಾಬಲ್ಯವಿರುವದೇ ಹೊರತು ಕರ್ತೃತ್ವವಾಗಲಿ, ಕರ್ಮವಾಗಲಿ ಇರುವದಿಲ್ಲ. ಪುರುಷೋತ್ತಮನು ಪಡೆಯಬೇಕಾಗಿರುವ ಅಧ್ಯಾತ್ಮಭಾವಯಜ್ಞವು ಕರ್ಮಹೀನವಾದುದಲ್ಲ. ಅಧ್ಯಾತ್ಮಭಾವದಿಂದ ಕೂಡಿದ ಕರ್ಮಗಳನ್ನು (ಯಜ್ಞಗಳನ್ನು) ಬ್ರಹ್ಮನಿಂದ ಅವನು ಪಡೆಯಲೆಣಿಸಿರುವನು. ಅಸಂಖ್ಯ ಪ್ರಜೆಗಳನ್ನುಂಟುಮಾಡುವದಕ್ಕಾಗಿಯೂ ಅವರಲ್ಲಿ ಪುರುಷೋತ್ತಮನಿಗೆ ಬೇಕಾದ ಯೋಗಭಾವವನ್ನೂ ಯಜ್ಞಗಳನ್ನೂ ತಪಸ್ಸುಗಳನ್ನೂ ಬಿತ್ತಿಬೆಳೆದು ಅವನಿಗೆ ಅರ್ಪಿಸುವುದಕ್ಕಾಗಿಯೂ ಬ್ರಹ್ಮನು ಸೃಷ್ಟ್ಯುತ್ಪತ್ತಿಕಾರ್ಯವನ್ನು ಮುಂದುವರಿಸಬೇಕಾಗುವದು. ಈ ಕಾರ್ಯವನ್ನು ಸಾಧಿಸುವದಕ್ಕಾಗಿ ಅವನು ತನ್ನಿಂದ ಉಂಟುಮಾಡುವ ಪುರುಷನೇ ಕ್ಷರನು.

ತನ್ನ ಪುರುಷಸ್ವಭಾವದಿಂದ ಪುರುಷೋತ್ತಮನು ಒಂದು ಅಂಶವನ್ನು ವಿಂಗಡಿಸಿ ಬ್ರಹ್ಮನನ್ನು ನಿರ್ಮಿಸಿದನು. ಹಾಗೆಯೇ ಬ್ರಹ್ಮನಾದರೂ ತನ್ನ ಒಂದು ಅಂಶವನ್ನು ಈ ಸೃಷ್ಟಿಯನ್ನುಂಟುಮಾಡುವುದಕ್ಕೆ ಉಪಯೋಗಿಸುವನು. ತಾನು ನಿರ್ಮಿಸಬೇಕಾಗಿರುವ ಸೃಷ್ಟಿಯಿಂದ ಅನಂತ ಪ್ರವೃತ್ತಿರೂಪವಾದ ಯಜ್ಞವು ಪುರುಷೋತ್ತಮನಿಗೆ ಸಲ್ಲಬೇಕಾಗಿರುವುದು. ಇದು ಸತ್ವದಲ್ಲಿ ನಿಶ್ಚಲವಾಗಿ ನಿಂತ ತನ್ನ ಅಂಶದಿಂದಲೇ ಸಾಧಿಸದು. ಅದರಲ್ಲಿ ಹೆಚ್ಚುಕಡಿಮೆಯಾಗಬೇಕು. ಈ ಬದಲಾವಣೆಯನ್ನು ಅಧ್ಯಾತ್ಮಭಾವಕ್ಕೆ ನಿಯತವಾದ ತನ್ನ ಪುರುಷ ಸ್ವಭಾವದಲ್ಲಿ ಮಾಡುವದು ಶಕ್ಯವಲ್ಲ. ಆದುದರಿಂದ ಅದನ್ನು ತನ್ನ ಅಂಶದ ಪ್ರಕೃತಿಯಲ್ಲಿಯೇ ಬ್ರಹ್ಮನು

ಮಾಡುವನು. ಇದಕ್ಕಾಗಿ ಗುಣಗಳಲ್ಲಿ ಪ್ರವೃತ್ತಿಯುಳ್ಳುಕ್ಕೆ ಅನುಕೂಲ ವಾದ ರಜೋಗುಣವನ್ನೂ ಅಂತಃಕರಣಗಳಲ್ಲಿ ತತ್ಸಮಾನವಾದ ಅಹಂಕಾರ ತತ್ವವನ್ನೂ ಕೈಹಿಡಿದು, ಅವುಗಳಿಗೆ ಪ್ರಧಾನ ಪಟ್ಟವನ್ನು ಕಟ್ಟಿ, ಪ್ರಕೃತಿಯ ಉಳಿದ ತತ್ವಗಳನ್ನು ಜೊತೆಗೊಳಿಸಿ ತನ್ನ ಪುರುಷಸ್ವಭಾವದ ಅಂಶ ವನ್ನು ಈ ಪ್ರಕೃತಿಯ ಸಂಸಾರಕ್ಕೆ ಯಜಮಾನನನ್ನು ಮಾಡಿ, ಮುಂದಿನ ಸೃಷ್ಟ್ಯುತ್ಪತ್ತಿಕ್ರಮವನ್ನು ಬ್ರಹ್ಮನು ಆರಂಭಿಸುವನು. ಬ್ರಹ್ಮನ ಅಂಶ ಭೂತ ಪುರುಷನು ಹೀಗೆ ಅಹಂಕಾರ ತತ್ವವನ್ನು ಹೊಂದಿ ಅಸಂಖ್ಯ ಜೀವರೂಪವಾಗಿಯೂ ಬೆನ್ನು ಬಿಡದ ರಾಜಸ ಪ್ರವೃತ್ತಿಯಿಂದ ಕೂಡಿ ದನನಾಗಿಯೂ ಈ ಸೃಷ್ಟಿಯ ರಚನೆಗೆ ಸಾಧನನಾಗುವನು. ಬ್ರಹ್ಮನ ಸತ್ ಸ್ವಭಾವವು ಈ ಜೀವನಲ್ಲಿ ಬುದ್ಧಿಯಾಗಿಯೂ ಆನಂದ ಸ್ವಭಾವವು ಮನೋರೂಪವಾಗಿಯೂ ಪರಿಣಮಿಸುವವು. ಮುಂದೆ ಈ ಮನಸ್ಸಿನಿಂದಲೇ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳನ್ನು ಪಡೆಯುವದರಿಂದ ಪ್ರಕೃತಿಯ ವಿಕಾಸವು ಇವನಲ್ಲಿ ಪೂರ್ಣವಾಗುವದು. ಹೀಗೆ ಪ್ರಕೃತಿಯ ಸಂಸಾರ ಗ್ರಂಥಿಯಲ್ಲಿ ಭಗವತ್ ಸಂಕಲ್ಪದಿಂದ- ಮಾಯೆಯಿಂದ- ಸಿಲುಕಿದ ಪುರುಷಪ್ರಾಣಿಯನ್ನು ತನ್ನ ಅಧ್ಯಾತ್ಮಭಾವವು ಒಂದು ಕಡೆಗೂ ಪ್ರಕೃತಿಯ ಅಂತಃಕರಣ ಮೂಲಕವಾದ ಭಾವಗಳು ಮತ್ತೊಂದು ಕಡೆಗೂ ಎಳೆ ಯುವವು. ಗೀತೆಯಲ್ಲಿ ಜೀವ ಪುರುಷರು ಅವಶರೆಂದೂ ಪ್ರಕೃತಿಗೆ ಆಧೀನ ರೆಂದೂ ಅವರ ಸ್ವಭಾವದಲ್ಲಿ ಜ್ಞಾನದ ಮೇಲೆ ಅಜ್ಞಾನದ ಆವರಣವಿರುವ ದೆಂದೂ ಅವರು ಯದೃಚ್ಛೆಗೆ ವಶವಾಗಿರುವರೆಂದೂ ಹೇಳಿದುದು ನಾವು ಮೇಲೆ ಮಾಡಿದ ವಿವರಣೆಯಿಂದ ವಿಶದವಾಗಬಹುದು. ಅಧ್ಯಾತ್ಮಭಾವದ ಮತ್ತು ಪ್ರಕೃತಿ ಸ್ವಭಾವದ ಈ ಹೋರಾಟದಲ್ಲಿ ಜೀವ ಪುರುಷನು ಅಸಾ ಮಾನ್ಯವಾದ ಧೃತಿಯಿಂದ ಅಧ್ಯಾತ್ಮಭಾವವನ್ನು ಕಾಪಾಡಿಕೊಳ್ಳದೆ ಹೋದರೆ, ಪ್ರಕೃತಿಯ ಅಜ್ಞಾನಮಯ ಸಂಸಾರದಲ್ಲಿ ಒದ್ದಾಡುತ ದುಃಖ ಗಳಿಗೆ ಈಡಾಗುವನು. ಹೀಗೆ ಅಧ್ಯಾತ್ಮಸ್ವಭಾವವನ್ನು ಕಳೆದುಕೊಳ್ಳುವದ ರಿಂದಲೇ ಇವನಿಗೆ ಕ್ಷರನೆಂದು ಹೆಸರು.

ಹೀಗೆ ಕ್ಷರನಾದನೆಂದು ಇವನು ಹಲುಬುವ ಅಥವಾ ಹತಾಶ ನಾಗುವ ಕಾರಣವಿಲ್ಲ. ಬ್ರಹ್ಮ ಪುರುಷೋತ್ತಮರಿಗೆ ಅಕ್ಷರ ಸ್ಥಿತಿಯು

ಅಥವಾ ನಿತ್ಯ ಸತ್ವಸ್ಥ ಸ್ಥಿತಿಯು ಸ್ವಭಾವಸಹಜವಾಗಿರುವಂತೆ ಇವನಿಗೆ ಇರುವದಿಲ್ಲ. ಆದರೂ ಅದೇ ಸ್ಥಿತಿಯನ್ನು ಸ್ವಯಂ ಪ್ರೇರಣೆಯಿಂದಲೂ ಬುದ್ಧಿಪುರಸ್ಸರವಾಗಿಯೂ ಕ್ಷಣಮಾತ್ರದಲ್ಲಿ ಇವನು ಪಡೆಯಬಹುದೆಂದು ಗೀತೆಯು ಸಾರುವದು (೯–೩೧). ಇದಕ್ಕಾಗಿ ಅವನು ಮಾಡಬೇಕಾಗುವ ಪ್ರಯತ್ನವು ಸುಕರವಾದುದೆಂದೂ ನಿರಾಯಾಸವಾದುದೆಂದೂ ಇಂಥ ಪ್ರಯತ್ನವೇ ಅವನ ಸ್ವಭಾವಸಹಜವಾದುದೆಂದೂ ಹೇಳಿದೆ. ಇಂಥ ಪ್ರಯತ್ನದಿಂದ ಅವನಿಗೆ **ಬ್ರಾಹ್ಮೀ ಸ್ಥಿತಿಯು** ಸುಲಭವಾಗಿ ಸಾಧಿಸುವದು. ಅವನು ಕ್ಷರನಾಗಿ ಅನಾತ್ಮನಾಗಿ ಆಸುರ ವೃತ್ತಿಯಿಂದ ವರ್ತಿಸುವಾಗಲೂ ಅವನು ಬ್ರಹ್ಮನಲ್ಲಿಯೇ ಸ್ಥಿತನಾಗಿ ಇರುವನು. ಏಕೆಂದರೆ ಸೃಷ್ಟಿಯೊಳಗಿನ ಯಾವ ವಸ್ತುವೇ ಆಗಲಿ ಬ್ರಹ್ಮಾಂತರ್ಗತವಾಗಿರಬೇಕಲ್ಲದೆ ಅವನ ಹೊರ ಗಿರುವದು ಶಕ್ಯವಲ್ಲ. ಹಾಗೆ ಬ್ರಹ್ಮನಲ್ಲಿ ಅಯುಕ್ತ ಸ್ಥಿತಿಯಲ್ಲಿಯೂ ಆಸುರ ಸ್ಥಿತಿಯಲ್ಲಿಯೂ ಇರುವದು ನ್ಯಾಯುವಲ್ಲ. ಮನುಷ್ಯನು 'ಆತ್ಮವಂತ' ನಾಗಿ 'ಅಧ್ಯಾತ್ಮ' ಭಾವದಲ್ಲಿ ಅಖಂಡವಾಗಿ ನಿಂತು ನಿತ್ಯ ಸತ್ವಸ್ಥನಾಗು ವದೇ ಅವನಿಗೆ ಬ್ರಹ್ಮನಲ್ಲಿ ನಿಜವಾದ ಸ್ಥಿತಿಯು. ಈ ಸ್ಥಿತಿಯನ್ನು ಅವನು ಪ್ರಯತ್ನದಿಂದ ಪಡೆದರೆ ಅವನಲ್ಲಿ ಪಾಪಕ್ಕೆ ಆಸ್ಪದವಿಲ್ಲದಾಗುವದು. ಅವನು ಹೇಗೆ ವರ್ತಿಸುತ್ತಿದ್ದರೂ ಬ್ರಹ್ಮ ಪುರುಷೋತ್ತಮರಂತೆ ನಿರ್ದೋಷಿಯಾಗಿ ಅಧ್ಯಾತ್ಮ ಸಾಧನೆಯಿಂದ ಅಕ್ಷಯ ಸುಖವನ್ನು ಪಡೆದು ನಿತ್ಯ ನಿರ್ಮುಕ್ತನಾಗುವನು.

ಕ್ಷರ ಪುರುಷನಾದ ಜೀವಭೂತನ ಉತ್ಪತ್ತಿಯನ್ನು ನಾವು ಮೇಲೆ ವರ್ಣಿಸಿದಷ್ಟು ವಿವರವಾಗಿ ಗೀತೆಯಲ್ಲಿ ಕೊಟ್ಟಿರುವದಿಲ್ಲವೆಂಬದು ನಿಜ. ಅದರಲ್ಲಿ ತತ್ವಗಳು ಮಾತ್ರ ನಿರ್ದಿಷ್ಟವಾಗಿವೆ. ವಿವರಣೆಯು ಬಹು ಸಂಕ್ಷೇಪ ವಾಗಿರುವದು. ತತ್ವಗಳನ್ನು ಯಥಾರ್ಥವಾಗಿ ತಿಳಿದರೆ ನಾವು ವಿವರಿಸಿದ ಸಂದರ್ಭಗಳೆಲ್ಲ ಸಯುಕ್ತಿಕವಾಗಿ ಕಾಣಿಸದಿರವು.

ಇನ್ನು ಇದೇ ವಿಚಾರ ಸರಣಿಯನ್ನು ಮುಂದುವರಿಸಿ ಸೃಷ್ಟಿಯೊಳ ಗಿನ ಚಿತ್, ಅಚಿತ್ ಮತ್ತು ಚೇತನಾಚೇತನಗಳ ಸಂಬಂಧವನ್ನು, ಅದು ಗೀತೆಯಲ್ಲಿ ಅಭಿಪ್ರೇತವಾಗಿದ್ದಂತೆ ಇಲ್ಲಿ ವಿವರಿಸುವುದು ಅಗತ್ಯವು. ಏಕೆಂದರೆ ಗೀತೆಯಲ್ಲಿ ನಾವು ತೋರಿಸಿದ ಸೃಷ್ಟಿಯು ಉತ್ಪತ್ತಿತತ್ವಗಳು ಇವು

ಗಳಿಗೆ ಹೇಳುವ ಸಮಾಧಾನದ ಯಥಾರ್ಥತೆಯಿಂದಲೇ ಸಿದ್ಧವಾಗುವವು.
ಸೃಷ್ಟಿಯೊಳಗಿನ ಚಿತ್ ಅಚಿತ್ ಚೇತನಾಚೇತನ ಮೊದಲಾದ ವಿವಿಧ ಅಸ್ತಿತ್ವ
ಗಳೂ ಈ ಜೀವಭೂತನಿಂದ ಆಕೃತಿಗೊಂಡಿರುವವೆಂದು ಗೀತೆಯಿಂದ ಊಹಿ
ಸಬಹುದು. ಅದು ಹೇಗೆಂಬುದನ್ನು ನೋಡುವ.

ಪ್ರಕೃತಿಯು ಎಂಟು ತತ್ವಗಳಿಂದ ಕೂಡಿದ್ದು ಯಾವಾಗಲೂ ಪುರುಷ
ನನ್ನು ಹೊಂದಿರುವದೆಂದು ಹೇಳಿದೆ. ಈ ಎಂಟು ತತ್ವಗಳಲ್ಲಿ ಅಹಂಕಾರ
ತತ್ವವು ಸರ್ವಸಾಧಾರಣವಾಗಿ ಚೇತನಾಚೇತನ ಸೃಷ್ಟಿಯನ್ನೊಳ
ಗೊಂಡಿದ್ದು ವ್ಯಷ್ಟಿ ಮೂರ್ತಿಗಳನ್ನು (Individualities) ಉಂಟುಮಾಡು
ವದು. ಉಳಿದ ಏಳು ತತ್ವಗಳಲ್ಲಿ ಒಂದೊಂದು ತನ್ನ ತನ್ನ ಮಟ್ಟಿಗೆ
ಪ್ರಧಾನತ್ವವನ್ನು ಪಡೆದು ಇತರ ತತ್ವಗಳನ್ನು ಹೆಚ್ಚು ಕಡಿಮೆಯಾಗಿ
ಕೂಡಿಕೊಂಡು ತ್ರಿಗುಣಗಳ ಉತ್ಕರ್ಷಾಪಕರ್ಷೆಯಿಂದ ಅಸಂಖ್ಯ ಆಕಾರ
ರೂಪ ಗುಣಗಳನ್ನು ತೋರಿ ಈ ವ್ಯಷ್ಟಿ ಮೂರ್ತಿಗಳ ಪ್ರಕೃತಿ ವ್ಯಾಪಾರ
ಗಳನ್ನು ನಿರ್ಧರಿಸುವುದು. ಮೊದಲನೆಯದಾದ ಬುದ್ಧಿತತ್ವವು ಉಳಿದ ಆರು
ತತ್ವಗಳೊಂದಿಗೆ ತಾನಿರುವ ಮೂರ್ತಿಯಲ್ಲಿ ಬುದ್ಧಿಯ ವ್ಯಾಪಾರಗಳನ್ನು
ತೋರ್ಪಡಿಸುವದು. ಎರಡನೆಯದಾದ ಮನಸ್ಸು ತನ್ನನ್ನು ಮೀರಿದ
ಬುದ್ಧಿತತ್ವವನ್ನೂ ತನಗಧೀನವಾದ ಪಂಚ ಸೂಕ್ಷ್ಮಮಹಾಭೂತಗಳನ್ನೂ
ಕೂಡಿಕೊಂಡು ಮನಃಪ್ರಧಾನವಾದ ಮೂರ್ತಿಯನ್ನು ಉಂಟುಮಾಡು
ವದು. ಮನಸ್ಸಿನಲ್ಲಿ ಅಂತರ್ಭೂತವಾದ ಇಂದ್ರಿಯ ವಿಷಯಕ ವ್ಯವಸಾ
ಯವೇ ಇಂಥ ಮೂರ್ತಿಯ ಧರ್ಮವು. ಇದಕ್ಕೂ ಕೆಳಗೆ ಸೂಕ್ಷ್ಮ
ಮಹಾಭೂತ ತತ್ವಗಳಿಂದೊದಗುವ ಮೂರ್ತಿಗಳ ಪ್ರಾಂತವಿರುವುದು.
ಆಕಾಶ, ವಾಯು, ತೇಜ, ಅಪ್, ಪೃಥಿವಿ ಇವೇ ಮೊದಲಾದ ತತ್ವಗಳು
ಪ್ರತಿಯೊಂದು ತನ್ನನ್ನುಳಿದ ಏಳು ತತ್ವಗಳನ್ನು ಅವ್ಯಕ್ತವಾಗಿ ಧರಿಸಿ ತನ್ನಿಂದ
ಸಂಕೇತಿತವಾದ ಸ್ಥೂಲ ಮಹಾಭೂತ ಸಂಚಯವನ್ನು ಉಂಟುಮಾಡು
ವದು. ಈ ಪ್ರಕಾರ ಪೃಥ್ವಿಯ ಸ್ಥೂಲ ರಜಃಕಣದಿಂದ ಬುದ್ಧಿಯುಕ್ತ ವ್ಯಷ್ಟಿ
ಅಸ್ತಿತ್ವದ ವರೆಗಿನ ಸೃಷ್ಟಿ ರಚನೆಗೆ ಜೀವಭೂತರೇ ಸಾಧನರು. ಈ ವಿವರಣೆ
ಯನ್ನು ಕೇವಲ ದಿಗ್ದರ್ಶನಕ್ಕಾಗಿ ಇಲ್ಲಿ ಹೇಳಿರುವೆವು. ಇನ್ನು ಈ ಪ್ರಕಾರ

ವಾಗಿ ಉತ್ಪನ್ನವಾಗುವ ಸೃಷ್ಟಿಯೊಳಗಿನ ವ್ಯಕ್ತಿ ವೈಚಿತ್ರ್ಯವನ್ನು ಒಂದೊಂದಾಗಿ ಇಲ್ಲಿ ಹೇಳುವುದು ಸಾಧ್ಯವೂ ಅಲ್ಲ; ಅಂಥ ಅಗತ್ಯವೂ ಇಲ್ಲ. ತತ್ವವನ್ನು ಗ್ರಹಿಸಿದರೆ ಸಮಾಧಾನ ಪೂರ್ವಕವಾಗಿ ಒಂದೊಂದರ ಕ್ರಮವನ್ನು ಕೆಲವು ಮಟ್ಟಿಗೆ ಊಹಿಸಬಹುದು. ಎಲ್ಲವನ್ನೂ ಆಮೂಲಾಗ್ರವಾಗಿ ತಿಳಿಯುವದು, ವಿಶ್ವವೆಲ್ಲವನ್ನೂ ತನ್ನಲ್ಲಿಯೇ ಸಹೇತುಕವಾಗಿ ಉಂಟು ಮಾಡಿ ಸರ್ವಮೂರ್ತಿಗಳಲ್ಲಿಯೂ ವ್ಯಕ್ತಿಗಳಲ್ಲಿಯೂ ಕ್ಷೇತ್ರಜ್ಞನೂ ಅಧಿಯಜ್ಞನೂ ಆಗಿ ನಿಂತ ಪ್ರಭುವಿಗಲ್ಲದೆ ಅನ್ಯರಿಗೆ ಶಕ್ಯವಲ್ಲ(೪-೫,೭-೨೬).

ವೇದಾಂತದಲ್ಲಿ ಸಮಾವೇಶವಾಗುದ ಇನ್ನೊಂದು ವಿಷಯವನ್ನು ಚರ್ಚಿಸುವದು ಉಳಿದಿದೆ. ಮರಣಾನಂತರ ಜೀವನಿಗೆ ಸಂಭವಿಸುವ ಗತಿಯಾವುದೆಂಬುದೇ ಈ ವಿಷಯವು ಇದರ ವಿವಂಚನೆಯಿಂದಲೇ ಸಾಧಾರಣವಾಗಿ ಮನುಷ್ಯನು ವೇದಾಂತ ವಿಷಯವನ್ನು ಸ್ಮರಿಸುವನು. ಅವನ ಈ ಹಂಬಲವನ್ನರಿತು ವೇದಾಂತ ವಿಚಾರಗಳಿಗೆ ಅಧ್ವರ್ಯುಗಳಾದವರು ವ್ಯಕ್ತಿಗಳ ಪಾರಲೌಕಿಕ ಕಲ್ಯಾಣಕ್ಕೆ ತಾವು ಮಧ್ಯಸ್ಥರೆಂಬಂತೆ ಈವರೆಗೆ ವರ್ತಿಸಿರುವರು. ಆಯುಷ್ಯದೊಳಗಿನ ಮಾಸ ಪಕ್ಷಗಳಿಗೂ ಕ್ಷೇಮಾಕ್ಷೇಮಗಳ ಭವಿಷ್ಯವನ್ನು ಜ್ಯೋತಿಷಿಯು ಹೇಳುವಂತೆ ನಮ್ಮ ವೇದಾಂತ ಜ್ಞಾನಿಗಳು ಮೃತ ಮನುಷ್ಯನ ಪರಲೋಕದ ಯಶಾಪಯಶಗಳನ್ನು ಸಾಂಗೋಪಾಂಗವಾಗಿ ಚಿತ್ರಿಸುವರಲ್ಲದೆ ಅವುಗಳ ಮಶಕ್ಕಾಗಿ ಕಟ್ಟಳೆಗಳನ್ನು ಕಲ್ಪಿಸಿರುವರು. ಆದರೆ ಈ ವಿಧಾನಗಳಾವವೂ ಗೀತೆಯಲ್ಲಿ ನಮಗೆ ಕಂಡು ಬಂದಿರುವದಿಲ್ಲ. ಮರಣಾನಂತರದಲ್ಲಿ ಮನುಷ್ಯನಿಗೆ ಪರಲೋಕ ವಾಸವು ಇರುವದೆಂಬ ಕಲ್ಪನೆಯು ಗೀತೆಯಲ್ಲುಂಟು. ಈ ವಾಸವು ಸ್ಥಾನಬದ್ಧವಾಗಿರದೆ ಸ್ಥಿತಿಬದ್ಧವಾಗಿರುವದೆಂದು ನಮಗೆ ತೋರುವದು. ಇದು ಹೇಗೆಯೇ ಇರಲಿ, ಈ ವಾಸವು ಸೃಷ್ಟಿಬಾಹ್ಯವಾಗಿರುವದು ಶಕ್ಯವಲ್ಲ. ಮನುಷ್ಯನ ಮರಣಾನಂತರದ ಗತಿಯ ವಿಷಯವಾಗಿ ಹೇಳಬೇಕಾದುದೆಲ್ಲವನ್ನು ಗೀತೆಯು ಒಂದೇ ಮಾತಿನಲ್ಲಿ ಹೇಳಿದೆ. ಬ್ರಾಹ್ಮೀಸ್ಥಿತಿಯನ್ನು ಪಡೆದವನಿಗೆ ಅಥವಾ ಬುದ್ಧಿಯೋಗ ಯುಕ್ತನಿಗೆ ಇಹದಲ್ಲಿ ಕರ್ಮಬಂಧನವಿಲ್ಲದಂತೆ ಪರಲೋಕದ ಇಷ್ಟಾನಿಷ್ಟ ಅನುಭವಗಳಾದರೂ ಇರುವದೇ ಇಲ್ಲ (೧೪ ೧೨). ಈ ಕಾರಣ ಇಂಥವನ ಪರಲೋಕದ ಜೀವನ ಕ್ರಮವನ್ನು

ಗೀತೆಯು ವಿಚಾರಿಸುವದೇ ಇಲ್ಲ. ಅವರು ನಿರ್ವಿಚಾರರಾಗಿ ಇಹದಲ್ಲಿ ಹೇಗೆ ಸುಖಿಗಳೋ ಹಾಗೆಯೇ ಪರದಲ್ಲಿಯೂ ಸುಖಿಗಳೆಂದು ಅದು ಸೂಚಿಸುವದು. ಯೋಗಯುಕ್ತರಲ್ಲದವರಿಗೆ —ಅತ್ಯಾಗಿಗಳಿಗೆ— ಫಲ ತ್ಯಾಗವನ್ನು ಮಾಡದೆ ಕಾಮಸಂಕಲ್ಪದಿಂದ ಕರ್ಮಪ್ರವೃತ್ತರಾಗುವವರಿಗೆ ಮರಣಾನಂತರದ ವಾಸವು ತಾವು ಈ ಕರ್ಮಭೂಮಿಯಲ್ಲಿ ಸಂಚಯ ಮಾಡಿದ ಪಾಪ ಪುಣ್ಯಗಳ ಫಲವನ್ನುಂಡು ಸವಿಸುವದಕ್ಕೇ ಇರುವದೆಂದು ಅದು ಹೇಳುವದು. ಪರಲೋಕದ ಕ್ಷೇಮ ಸಾಧನೆಗೆ ಗೀತೆಯ ಅಧ್ಯಾತ್ಮ ಶಾಸ್ತ್ರದಲ್ಲಿ ಹೇಳಿರುವ ವಿಧಿಯು ಬಹು ಲಘುವಾಗಿರುವದು. ಆ ವಿಧಿ ಯಲ್ಲಿ ಪ್ರಾಯಶ್ಚಿತ್ತಗಳಿಲ್ಲ; ಸಂಸ್ಕಾರಗಳ ಆಡಂಬರವಿಲ್ಲ; ಕಲ್ಪನೆಗಳ ಗಾಳಿಗೋಪುರಗಳಿಲ್ಲ. ಕಾಮ ಕ್ರೋಧ ಲೋಭಗಳೆಂಬ ತ್ರಿವಿಧ ನರಕ ದ್ವಾರಗಳನ್ನು ಬಿಟ್ಟು, ನಿರ್ಭೀತನಾಗಿ, ಆತ್ಮ ಬುದ್ಧಿ ಮನಸ್ಸು ಇಂದ್ರಿಯ ಗಳಿಂದುಂಟಾದ ಶಕ್ತಿ ಸರ್ವಸ್ವದಿಂದ ಪುರುಷೋತ್ತಮನಲ್ಲಿ ವಿಶ್ವಾಸವಿಟ್ಟು —ಅಥವಾ ಇಡದೆಯೂ— ಸಾತ್ವಿಕ ನಿಯತಕರ್ಮಗಳನ್ನು —ಯಜ್ಞ ದಾನ ತಪ ಗಳನ್ನು—ಮಾಡುವದೇ ಈ ವಿಧಾನವು. ಇದಕ್ಕಿಂತ ಸುಲಭವಾದ ಸರಸ ವಾದ ಸಮರ್ಪಕವಾದ ಧರ್ಮ ದೀಕ್ಷೆಯನ್ನು ಅತ್ಯಂತ ಗಹನ ಅಧ್ಯಾತ್ಮ ತತ್ವಗಳೊಂದಿಗೆ ಗೀತೆಯಲ್ಲಲ್ಲದೆ ಜಗತ್ತಿನ ಇನ್ನಾವ ಧರ್ಮಗ್ರಂಥದಲ್ಲಿಯೂ ಹೇಳಿರುವದಿಲ್ಲ.

## ಭಕ್ತಿಪಂಥಗಳೂ ಭಗವದ್ಗೀತೆಯೂ

ಸೂಕ್ಷ್ಮದೃಷ್ಟಿಯಿಂದ ವೇದಾಂತ ತತ್ವಗಳನ್ನು ಭಗವದ್ಗೀತೆಯ ಮುಖಾಂತರವಾಗಿ ಗ್ರಹಿಸಲು ಅಪೇಕ್ಷಿಸುವವರನ್ನು ಅನುಲಕ್ಷಿಸಿ ಈ ವರೆಗೆ ಈ ಉಪೋದ್ಘಾತದಲ್ಲಿ ನಾವು ವಿವೇಚನೆಯನ್ನು ಮಾಡಿರುವೆವು. ಆದರೆ ಭಗವದ್ಗೀತೆಯನ್ನು ಪೂಜ್ಯವೆಂದು ಭಾವಿಸುವವರಲ್ಲಿ ಇಂಥ ತತ್ವಾ ರ್ಥಿಗಳಲ್ಲದೆ ಇನ್ನೊಂದು ವರ್ಗದವರೂ ಇರುವರು. ಅವರ ದೃಷ್ಟಿ ಯಿಂದಲೂ ಭಗದ್ಗೀತೆಯನ್ನು ಪರ್ಯಾಲೋಚಿಸುವದು ನಮ್ಮ ಕರ್ತವ್ಯವು. ಇವರು ಭಕ್ತರು. ಭಕ್ತಿಯು ಇವರಿಗೆ ಸ್ವಭಾವ ಸಹಜವು. ತಲೆತಲಾಂತರ ವಾಗಿ ಭಕ್ತಿಭಾವನೆಯ ಪ್ರಭಾವವನ್ನು ಇವರು ಅನುಭವದಿಂದ ಕಂಡಿರು

ವರು. ಭಕ್ತಿಯಿಂದ ತಮ್ಮ ಐಹಿಕ ಪಾರಮಾರ್ಥಿಕ ಯೋಗಕ್ಷೇಮುಗ ಳನ್ನು ಸಾಧಿಸಿ, ಅನುಭವಿಸಿ, ಇವರು ತೃಪ್ತಿಯನ್ನು ಪಡೆದಿರುವುದರಿಂದ ಇವರಿಗೆ ಭಕ್ತಿಯೇ ಸತ್ಯವೆಂದೂ ಜ್ಞಾನ ಕರ್ಮಗಳು ಉಪೇಕ್ಷಣೀಯು ವೆಂದೂ ತೋರುವವು. ಇವರು ಭಕ್ತಿಪಂಥದಲ್ಲಿ ಅಗ್ರಗಣ್ಯರು. ಸುಸಂಸ್ಕೃತ ರಲ್ಲಿ ಇವರನ್ನು ಅನುಸರಿಸುವವರು ಅನೇಕರು. ಮತ್ತು ಸ್ತ್ರೀ ವೈಶ್ಯ ಶೂದ್ರ ಮೊದಲಾದವರಿಗೆ ಈ ಮಾರ್ಗವೇ ಪ್ರಶಸ್ತವೆಂದೂ ಸಾಕಷ್ಟು ಪರಿಣಾಮುಕಾರಕವೂ ಫಲಪ್ರದವೂ ಆಗಿರುವದೆಂದೂ ಗೀತೆಯು ಸಾರಿ ಹೇಳುವುದರಿಂದ ಇವರಾದರೂ ಈ ಭಕ್ತಿಪಂಥಕ್ಕೆ ಸೇರಿದವರು. ಹೀಗೆ ಕೇವಲ ಭಕ್ತಿಯನ್ನೇ ಅವಲಂಬಿಸುವವರಿಗೆ ಪ್ರಸ್ತುತದಲ್ಲಿ ನಾವು ಮಾಡಿ ರುವ ಗೀತೆಯ ಪರಿಶೀಲನೆಯಿಂದ ಉಪಯೋಗವೇನು ?

ಭಕ್ತಿಯ ಮಹಿಮೆಯನ್ನು ಹೆಚ್ಚಿಸಿ ಅದನ್ನು ಬೆಳೆಸುವ ಸಂಗೀತ, ಭಜನೆ, ಕೀರ್ತನೆ, ಕಥಾಶ್ರವಣ, ಜಪ, ಪ್ರತೀಕ ಪೂಜನಾದಿ ಭಗವದಾ ರಾಧನೆಯ ಸಾಧನೆಗಳು ಸಮಾಜದಲ್ಲಿ ಹೆಚ್ಚಾಗಿರುವವು. ಆದರೆ ಈ ಸುರ ಸವೂ ಸುಲಭವೂ ಆದ ಸಾಧನೆಗಳನ್ನು ದಾಟಿ ಮುಂದಕ್ಕೆ ಹೋಗುವ ವಿಷಯುದಲ್ಲಿ ಜನರು ಆಸಕ್ತಿವಿಹೀನರಾಗಿರುವಂತೆ ಕಾಣಿಸುವುದು. ಇಂಥ ಭಕ್ತಿಯು ಸಾಕಾಗುವದಿಲ್ಲವೆಂದು ಅನುಭವಕ್ಕೆ ಬಂದುದರಿಂದಲೇ ಕರ್ಮಯುಕ್ತ ಭಕ್ತಿ ಮತ್ತು ಜ್ಞಾನಯುಕ್ತ ಭಕ್ತಿ ಎಂಬ ಪಂಗಡಗಳು ಉಂಟಾಗಿರುವವು. ಈ ಪಂಗಡಗಳ ತತ್ವಜ್ಞಾನವನ್ನು ಪರೀಕ್ಷಿಸುವುದು ನಮ್ಮ ಪ್ರಸ್ತುತ ಉದ್ದೇಶವಲ್ಲ. ಪ್ರಚಲಿತವಾಗಿರುವ ನವವಿಧ ಭಕ್ತಿಯು ವಿಧಾನಗಳು ಎಲ್ಲರಿಗೂ ಪರಿಚಿತವಾಗಿವೆ. ಭಕ್ತರು ಈಗ ಈ ವಿಧಾನಗಳೇ ಭಕ್ತಿತತ್ವದ ಪರಿಸೀಮೆಯೆಂದೂ ಭಕ್ತಿಯ ಪರಮಾವಧಿಯೆಂದೂ ಭಾವಿಸು ವರು. ಆದರೆ ಭಕ್ತಿಯ ಈ ವಿಧಾನಗಳು ಗೀತೆಯುಲ್ಲಿ ಕಂಡುಬರುವದಿಲ್ಲ. ಗೀತೆಯುಲ್ಲಿ ಬಂದಿರುವ ಭಕ್ತಿವಿಷಯುಕ ತತ್ವಜ್ಞಾನದಲ್ಲಿ ವೈಶಿಷ್ಟ್ಯವುಂಟು. ಅದನ್ನೇ ನಾವು ಇಲ್ಲಿ ಚರ್ಚಿಸುವುದರಿಂದ ಪ್ರಚಲಿತ ಭಕ್ತಿಮಾರ್ಗಗಳ ಕುಂದುಕೊರತೆಗಳನ್ನು ಕಂಡುಕೊಳ್ಳುವದು ಸುಲಭವಾಗಬಹುದು.

ಗೀತೆಯುಲ್ಲಿ ಭಕ್ತಿಮಾರ್ಗವು ಉಂಟೆಂದು ಹೇಳುವದಕ್ಕಿಂತ ಭಕ್ತಿಯೇ

ಗೀತೆಯು ಗುಟ್ಟೆಂದು ಹೇಳಬಹುದು. ಬುದ್ಧಿಯನ್ನು ಯೋಗಯುಕ್ತ ವಾಗಿ ಮಾಡಿ ಮನುಷ್ಯನು ಸಾಧಿಸಬೇಕಾದುದು ಪುರುಷೋತ್ತಮನ ನಲ್ಲಿಯ ಭಕ್ತಿಯೇ ಸರಿ. ಆದರೆ ಈ ಭಕ್ತಿಯ ಮಾರ್ಗವು ನಿಶ್ಚಿತವಾಗದೆ. ಇದು ಕುರುಡಭಕ್ತಿಯಲ್ಲ; ಅದಕ್ಕೆ ಸಂಪೂರ್ಣವಾದ ತತ್ತ್ವಜ್ಞಾನದ ತಳಹದಿ ಯುಂಟು. ಭಕ್ತಿಯನ್ನು ಜ್ಞಾನ ಕರ್ಮಗಳಿಗೆ ಸಮಾನವೆಂದೆಣಿಸಿ ಗೀತೆಯು ಅವುಗಳಲ್ಲಿ ಸ್ಪರ್ಧೆಯನ್ನುಂಟುಮಾಡುವದಿಲ್ಲ. ಭಕ್ತಿಯನ್ನೇ ಕರ್ತವ್ಯವೆಂದೂ ಪರಮಶ್ರೇಯವೆಂದೂ, ನಿರುಪಮಯೋಗವೆಂದೂ ನಿಸ್ಸೀಮಧರ್ಮವೆಂದೂ ನಿರ್ಧರಿಸಿ ಜ್ಞಾನ ಕರ್ಮಗಳನ್ನು ಆ ಭಕ್ತಿಗೆ ನೆರವಾಗುವ ನಿಷ್ಠೆಗಳೆಂದು ಅದು ಬಗೆಯುವದು. ಗೀತಾರಹಸ್ಯಕಾರರು, ಭಕ್ತಿಯುಕ್ತ ಕರ್ಮ ಪ್ರಧಾನ ಜ್ಞಾನಯೋಗವೇ ಗೀತೆಯ ನಿಷ್ಕರ್ಷೆಯೆಂದು ಹೇಳಿರುವರು. ಇದನ್ನೇ ಜ್ಞಾನಯುಕ್ತ ಕರ್ಮಪ್ರಧಾನ ಭಕ್ತಿಯೋಗವೆಂದು ಹೇಳುವದು ಹೆಚ್ಚು ಅನುರೂಪವಾದೀತು. ಗೀತೆಯಲ್ಲಿ ಜ್ಞಾನಸಕ್ಕಿಂತಲೂ ಭಕ್ತಿಯೇ ಮುಕ್ತಿಗೆ ಹೆಚ್ಚಿನ ಕಾರಣವು. ಮನುಷ್ಯನಿಗೆ ಸೃಷ್ಟಿಕರ್ತನ ವಿಷಯದ ಸರಿಯಾದ ಭಾವವು ಅಗತ್ಯವು. ಗೀತೆಯಲ್ಲಿ ವರ್ಣಿಸಿರುವ ಪುರುಷೋತ್ತ ಮನೇ ಈ ಸೃಷ್ಟಿಗೆ ಕರ್ತೃವು. ಇವನಲ್ಲಿಟ್ಟ ಭಕ್ತಿಯೇ ಭಕ್ತಿಯು. ಅನ್ಯ ದೇವತೆಗಳಲ್ಲಿಟ್ಟ ಭಕ್ತಿಭಾವವನ್ನು ಗೀತೆಯು ಅವಿಧಿಪೂರ್ವಕವೆಂದೂ 'ವ್ಯಭಿ ಚಾರ'ವೆಂದೂ ಮುಚ್ಚುಮರೆಯಿಲ್ಲದೆ ಹೇಳುವುದು. ಪುರುಷೋತ್ತಮನ ನನ್ನು ಸೃಷ್ಟಿಕರ್ತನೆಂದೂ ಪ್ರಭುತ್ವ ಯಜ್ಞಾದಿಗಳ ಏಕ ಏವ ಭೋಕ್ತೃ ವೆಂದೂ ಯಥಾಸ್ಥಿತವಾಗಿ ಭಾವಿಸುವದರಿಂದ ಅವನ ಭಕ್ತಿಯು ದೊರೆಯು ವದು. ಇಂಥ ಭಕ್ತಿಯಿಂದ ತ್ಯಾಗವೂ ತ್ಯಾಗದಿಂದ ಶಾಂತಿಯೂ ಶಾಂತಿ ಯಿಂದ ಸುಖವೂ ಸುಖದಿಂದ ದುಃಖನಾಶವೂ ದುಃಖನಾಶದಿಂದ ಬಂಧನ ವಿಮುಕ್ತಿಯೂ ಕ್ರಮವಾಗಿ ಪ್ರಾಪ್ತವಾಗುವವು. ಪುರುಷೋತ್ತಮನ ನಲ್ಲಿಟ್ಟ ಭಕ್ತಿಯು ಈ ಸೋಪಾನ ಮಾರ್ಗವನ್ನು ಸಂಪೂರ್ಣವಾಗಿ ಆಕ್ರ ಮಿಸಿ ಅದನ್ನು ಮೀರಿದ ಬ್ರಾಹ್ಮೀಸ್ಥಿತಿ ಬ್ರಹ್ಮನಿರ್ವಾಣಗಳಲ್ಲಿಯೂ ನೆಲೆ ಯಾಗಿ ನಿಲ್ಲುವದು. ಜೀವ ಪುರುಷೋತ್ತಮರು ಸೃಷ್ಟಿಯಲ್ಲಿರುವವರೆಗೂ– ಕಲ್ಪಾದಿಯಿಂದ ಕಲ್ಪಾಂತ್ಯದ ವರೆಗೂ– ಅವರಲ್ಲಿ ಸಂಯೋಗವನ್ನು ಅಥವಾ ದ್ವಂದ್ವೈಕ್ಯವನ್ನು ಉಂಟುಮಾಡುವದು ಜೀವರಲ್ಲಿರುವ ಭಕ್ತಿಭಾವವೇ

ಹೊರತು ಅವರೊಳಗಿನ ಆತ್ಮತತ್ವ ಸಾದೃಶ್ಯ ಮಾತ್ರವಲ್ಲ; ಜೀವನಲ್ಲಿರುವ ಆ ಆತ್ಮತತ್ವ ಸಾದೃಶ್ಯದ ಜ್ಞಾನವಂತೂ ಅಲ್ಲವೇ ಅಲ್ಲ. ಇದೇ ಗೀತೆಯ ಬುದ್ಧಿಯೋಗದ ನಿಷ್ಕರ್ಷೆಯು.

ಭಕ್ತಿಯು ಗೀತೆಯಲ್ಲಿ ಇಂಥ ಪ್ರಧಾನ ತತ್ವವಾದರೂ ಅದರ ಪ್ರಚಲಿತ ಪ್ರಕಾರಗಳನ್ನು ಗೀತೆಯು ಅಧ್ಯಾತ್ಮ ಪ್ರಪಂಚದೊಳಗಿನ ಬಾಲಕ್ರೀಡೆ ಗಳೆಂದು ಬಗೆಯುವದು; ಪ್ರೌಢರ ಜ್ಞಾನಪೂರ್ಣ ಇತಿಕರ್ತವ್ಯತೆಯೆಂದಲ್ಲ. ಈ ಪಂಥಗಳು ಅಭ್ಯಾಸದಿಂದ ಆರಂಭಮಾಡಿ ಜ್ಞಾನದ ಮುಖಾಂತರ ಧ್ಯಾನವನ್ನು ಸೇರುವವು(೧೨-೧೨). ಧ್ಯಾನವೇ ಈ ಪಂಥಗಳ ಪ್ರಯತ್ನದ ಪರಿಸೀಮೆಯು. ನವವಿಧ ಭಕ್ತಿಗಳೆಲ್ಲ ಧ್ಯಾನದಲ್ಲಿ ಅಡಕವಾಗಿರುವವು. ಇಂಥ ಧ್ಯಾನದ ಮೇರೆಯನ್ನು ಮೀರಿ ಭಕ್ತಿಯು ಬಹಳ ಮುಂದುವರಿಯ ಬೇಕೆಂದು ಗೀತೆಯು ವಿಧಿಸುವದು. ಭಕ್ತಿಯ ದೃಢತೆಯನ್ನು ಧ್ಯಾನದ ಪ್ರಮಾಣದಿಂದ ಗೀತೆಯು ಅಳೆಯುವದಿಲ್ಲ; ಧ್ಯಾನವನ್ನು ಮೀರಿ ಪರಿ ಪಕ್ವತೆಯನ್ನು ಪಡೆಯಲಿರುವ ಭಕ್ತಿಯು ಕರ್ಮಫಲ ತ್ಯಾಗದಲ್ಲಿ ಕಾಣಿಸಿ ಕೊಳ್ಳಬೇಕೆಂದು ಸಾರುವದು. ಇದೇ ಭಕ್ತಿಯ ವಿಷಯದ ಗೀತೆಯ ಹೊಸ ದೃಷ್ಟಿಯು. ನವವಿಧ ಭಕ್ತಿಯಲ್ಲಿ ಕರ್ಮಫಲತ್ಯಾಗದ ಪ್ರಯೋಗವಿಲ್ಲ— ಪರೀಕ್ಷೆಯೂ ಇಲ್ಲ; ಪುರುಷೋತ್ತಮನೇ ದೈವತವೆಂಬ ನಿರ್ಬಂಧವೂ ಇಲ್ಲ. ಇವೆಲ್ಲವನ್ನು ಗೀತೆಯು ಅನಿವಾರ್ಯವೆಂದು ನಿರ್ಧರಿಸುವದು. ಭಕ್ತಿ ಯುಕ್ತ ಧ್ಯಾನವು ಎಷ್ಟು ಮುಂದುವರಿದರೂ ಅದರಿಂದ ಶಾಂತಿಯು ದೊರೆಯದು. ಧ್ಯಾನದಿಂದ ಭಕ್ತನು ಪಡೆಯಬೇಕಾದುದು ಕರ್ಮಫಲ ತ್ಯಾಗವೇ. ಇಂಥ ತ್ಯಾಗದಿಂದ ಶಾಂತಿಯು ಜನಿಸುವುದು; ಮತ್ತು ಶಾಂತಿ ಇಲ್ಲದೆ ಮುಕ್ತಿ ಇಲ್ಲ. ಇದಕ್ಕಾಗಿ ಆದಷ್ಟು ಬೇಗನೆ ಶಕ್ತ್ಯನುರೂಪ ಪ್ರಮಾಣದಲ್ಲಿ ಕರ್ಮಫಲ ತ್ಯಾಗದ ಕಡೆಗೆ ಭಕ್ತನು ತಿರುಗಬೇಕು. ಹಾಗೆ ತಿರುಗದೆ ಭಕ್ತಿಯು ಎಷ್ಟು ಪ್ರಬಲವಾದರೂ ಸೂಕ್ಷ್ಮವಾದರೂ ಪ್ರತಾಪ ಶಾಲಿಯಾದರೂ ಅದು ವಿಧಿಪೂರ್ವಕವಲ್ಲ. ನಮ್ಮಲ್ಲಿ ಭಕ್ತಿಯು ಎಷ್ಟು ಉತ್ಕಟವಾಗಿದ್ದರೂ ಅದು ನಮಗೆ ಶಾಂತಿಪ್ರದವಾಗದೆ ಇರುವದಕ್ಕೆ ಗೀತೆಯು ಹೇಳುವ ಕಾರಣವು ವಿಚಾರಾರ್ಹವಲ್ಲವೇ?

ಕರ್ಮಫಲ ತ್ಯಾಗವೆಂದರೆ ಗೀತೆಯಲ್ಲಿ ಕೇವಲ ಫಲವನ್ನು ನಿರಾಕರಿಸು ವದೆಂಬ ಅರ್ಥವಲ್ಲ. "ಇದಂ ನ ಮಮ" ಎಂಬ ಕುರುಡತನದ ತ್ಯಾಗ ವನ್ನು ಗೀತೆಯು ಬೋಧಿಸುವದಿಲ್ಲ. ಗೀತೆಯ ತ್ಯಾಗದಲ್ಲಿ ಫಲವನ್ನು ಬಿಡುವದಕ್ಕಿಂತ ವಿಶಿಷ್ಟ ಭಾವನೆಯಿಂದ ಅದನ್ನು ಸ್ವೀಕರಿಸುವದೇ ಉದ್ದಿಷ್ಟ ವಾಗಿದೆ. ಪುರುಷೋತ್ತಮನೇ ಎಲ್ಲ ಫಲಕ್ಕೂ ಅಧಿಕಾರಿಯು, ಅವನೇ ಎಲ್ಲ ಫಲಗಳನ್ನು ತನ್ನ ಇಚ್ಛೆಯಂತೆ ಕೊಡುವವನು; ಪುರುಷೋತ್ತಮ ನಿಂದ ಪ್ರಾಪ್ತವಾದ ಫಲವು ಪ್ರಿಯವಾಗಲಿ ಅಪ್ರಿಯವಾಗಲಿ ಅದನ್ನು ಅವನಿಗಾಗಿ ಸ್ವೀಕರಿಸುವ ತ್ಯಾಗವೇ ಗೀತೆಯಲ್ಲಿ ಹೇಳಿದ ತ್ಯಾಗವು. ಭಕ್ತಿಯು ಇಂಥ ಕರ್ಮಫಲ ತ್ಯಾಗದಲ್ಲಿ ಪರಿಣಮಿಸಿದರೆ ಭಕ್ತನು ಪುರು ಷೋತ್ತಮನಿಗಾಗಿ ಕರ್ಮ ಮಾಡಿದಂತಾಗುವದು. ಭಕ್ತನಲ್ಲಿ ಕರ್ಮಫಲ ವನ್ನು ಕುರಿತು ಸ್ಪೃಹೆಯು ಇಲ್ಲದಿದ್ದರೂ ಕರ್ಮ ಕರ್ತೃತ್ವ ವಿಷಯದಲ್ಲಿ ಉತ್ಸಾಹವು ತಗ್ಗುವದಿಲ್ಲ. ತನ್ನ ಯೋಗ ಕ್ಷೇಮಗಳ ವಿಷಯದಲ್ಲಿ ಅವನು ನಿಶ್ಚಿಂತನಾಗಿರುವನು. ಶರೀರಕ್ಕೆ ಸಹಜವಾದ ಸುಖದುಃಖಗಳ ಆಘಾತ ಗಳನ್ನು ಅವನು ಸಂತೋಷದಿಂದ ಸಹಿಸುವದು (೫-೨೩). ಇದರಿಂದ ಶಾಂತಿಯು -ಶಾಶ್ವತ ಶಾಂತಿಯು- ಅವನಿಗೆ ದೊರೆಯುವದು. ಇಂಥ ಶಾಂತಿಗೆ ಶಾಶ್ವತ ಸುಖವೇ ಫಲವಾಗಿದೆ. ಹೀಗೆ ಶಾಂತಿ ಸುಖಗಳನ್ನು ಅನುಭವಿಸುತ್ತ ಮುಕ್ತಿಯನ್ನು ಭಗವಂತನ ಪ್ರಸಾದದಿಂದ ಪಡೆಯಲು ಪಾತ್ರನಾಗುವದೇ ಭಕ್ತನ ಜೀವಿತಸಾರ್ಥಕ್ಯವು. ಕರ್ಮಫಲತ್ಯಾಗ, ಶಾಂತಿ, ಸುಖ, ಮೋಕ್ಷವೆಂಬ ಧ್ಯಾನದ ಪರಿಪಕ್ವತೆಯಿಂದ ಫಲಿಸುವ ಸ್ಥಿತಿ ಪರಂಪರೆಯ ವೃದ್ಧಿಯು ಈಗ ನಮ್ಮಲ್ಲಿ ದೃಢಮೂಲವಾದ ಭಕ್ತಿಯಲ್ಲಿ ಇಲ್ಲವೆಂದು ಹೇಳಿದರೆ ತಪ್ಪಾಗಬಹುದೇ?

ಭಕ್ತಿಯ ಪ್ರಚಲಿತ ಭಾವನೆಗಳು ತತ್ವಪ್ರಚುರವಾದುವಲ್ಲ. ರಸ ಪ್ರಚುರವಾದುವು. ಇಂಥ ಭಕ್ತಿಯಿಂದ ಹೆಚ್ಚಿನ ಆನಂದದ ಅನುಭವವು ನಮಗೆ ದೊರೆಯುವದು ನಿಜ. ಆದರೆ 'ಆತ್ಮಬುದ್ಧಿ'ಯಿಂದ ಹುಟ್ಟಿದ ಶಾಂತಿಯಿಂದ ದೊರೆಯುವ ಸುಖವು ಆರಂಭದಲ್ಲಿ ವಿಷಮಯವೆನಿಸುವ ನಿಗ್ರಹದಿಂದ ಹುಟ್ಟಿರಬೇಕು. ಈಗಿನ ನಮ್ಮ ಭಕ್ತಿಯ ಅನುಭವದಲ್ಲಿ ಇಂಥ ನಿಗ್ರಹವೂ ತನ್ಮೂಲಕ ವಿಷಮಯ ಭಾವನೆಯೂ ಸಾಮಾನ್ಯವಾಗಿ

ಕಾಣಿಸಿಕೊಳ್ಳುವದೇ ಇಲ್ಲ. ಆದರಲ್ಲಿ ಆಮೂಲಾಗ್ರಸುಖವೇ ಅನುಭವಕ್ಕೆ ಬರುವದು. ಜ್ಞಾನಕ್ಕಾಗಿ ಮಾಡಿದ ಗಹನ ಪ್ರಯತ್ನದಿಂದ ಬುದ್ಧಿಯು ಪಡೆಯುವ ಸುಖವು, ತಾನು ಗ್ರಹಿಸುವ ಆತ್ಮತತ್ವದಸತ್ಯತೆಗೆ ಸಾಕ್ಷಿಯಾಗಲಾರದೆಂದು ನಾವು ಈ ಮುಂಚೆಯೇ ತೋರಿಸಿರುವೆವು; ಹಾಗೆಯೇ ಭಕ್ತಿಯಿಂದ ಸಕೃದ್ದರ್ಶನದಲ್ಲಿ ಪಡೆಸ ಆನಂದವೂ ಬಂಜೆಯೆಂದು ಬಗೆಯಬಹುದು. ಈ ಆನಂದವನ್ನು ಎಂಥ ಪರಮಾವಧಿಯವರೆಗೆ ಸಾಧಿಸಿದರೂ ಫಲವಿಲ್ಲ. ಇಂಥ ಭಕ್ತಿಗೆ ತತ್‌ಕ್ಷಣ ಪಡೆದ ಆನಂದವೇ ಫಲವು. ನಿಯತ ಕರ್ಮಗಳನ್ನು ಕೈಕೊಂಡು ಕರ್ಮಫಲತ್ಯಾಗದ ಮೆಟ್ಟಲನ್ನು ಭಕ್ತರು ಏರದಿದ್ದರೆ ಮುಂದೆ ದೊರೆಯಬೇಕಾದ ಪುರುಷೋತ್ತಮನ ಅನುಗ್ರಹವು ಅವರಿಗೆ ಲಭಿಸದೆಂದು ಗೀತೆಯು ಹೇಳುವುದು. ಈ ದೃಷ್ಟಿಯಿಂದ ಪ್ರಚಲಿತ ಭಕ್ತಿಪಂಥಗಳ ಸುಧಾರಣೆಯು ಅಗತ್ಯವೆಂದು ತೋರುವದಿಲ್ಲವೇ? ತತ್ವವನ್ನರಿತ ಬಳಿಕ ಅವುಗಳನ್ನು ಸುಧಾರಿಸುವದು ಸುಲಭವಾಗಬಾರದೇ? ಭಕ್ತಿಯಿಂದ ಕರ್ಮಫಲತ್ಯಾಗವನ್ನು ಸಾಧಿಸಿ ಸಂಪೂರ್ಣ ಸಿದ್ಧಿಯನ್ನು ಪಡೆಯುವದು ಸಂಸ್ಕಾರ ಹೀನರಾದ ಸ್ತ್ರೀ, ವೈಶ್ಯ, ಶೂದ್ರರಿಗೂ ಸುಲಭವಾಗಿರುವಾಗ ಸುಬುದ್ಧರಾದ ಶ್ರೇಷ್ಠರಿಗೂ ಜ್ಞಾನಿಗಳಿಗೂ ಪಂಡಿತರಿಗೂ ಅಗು ಏಕೆ ಸುಲಭವಾಗಬಾರದು?

## ಜಿಜ್ಞಾಸುಗಳಿಗೆ ಗೀತೆಯ ಸಂದೇಶವು.

ಜ್ಞಾನ ನಿಷ್ಠೆಯಿಂದ ಅಥವಾ ಭಕ್ತಿನಿಷ್ಠೆಯಿಂದ ವೇದಾಂತ ವಿಷಯವನ್ನು ಪರಾಮರಿಸುವವರಿಗೆ ಗೀತೆಯು ಹೇಳುವ ಸಮಾಧಾನವನ್ನು ಕುರಿತು ವಿವೇಚಿಸಿದ್ದಾಯಿತು. ಇನ್ನು ವೇದಾಂತವೆಂದರೆ ಎಂದಿಗೂ ಮುಗಿಯದ ಹರಟೆ, ಎಂದಿಗೂ ಬಗೆಹರಿಯದ ಸಮಸ್ಯೆ ಎಂದು ತಿಳಿದು ಅದನ್ನು ದೂರವಿಡುವವರಿಗೆ ಗೀತೆಯು ಯಾವ ಸಮಾಧಾನವನ್ನು ಹೇಳುವದೋ ನೋಡುವ. ಅಂಥವರು ಯದೃಚ್ಛೆಯಿಂದಲೂ ಜಿಜ್ಞಾಸೆಯಿಂದಲೂ ಗೀತೆಯ ಕಡೆಗೆ ತಿರುಗಿದರೆ ಅವರನ್ನು ಅದು ನಿರಾಶೆಗೊಳಿಸುವದಿಲ್ಲ. ವೇದಾಂತವು ಹರಟೆಯಲ್ಲ. ಅದು ಬಗೆಹರಿಯದ ಸಮಸ್ಯೆಯೂ ಅಲ್ಲ. ಅದರೊಳಗಿನ ಸಮಸ್ಯೆಯನ್ನು ಬಹು ಸುಲಭವಾಗಿ ಅರಿಯಬಹುದು, ಬಹು

# ವಿಶ್ವವೃಕ್ಷ.




| | ಮಧ್ಯಸ್ಥಿತಿ | (ಅಧಃ) ಕೃಷ್ಣಮಾರ್ಗ |
|---|---|---|
| ಅಧ್ಯಾತ್ಮಭಾವ(ಜ್ಞಾನ) | ಜಿಜ್ಞಾಸೆ | ಅಧಿಭೂತ(ಅಜ್ಞಾನ) |
| ದೈವೀವೃತ್ತಿ | ಸಾಂಖ್ಯವೃತ್ತಿ | ಆಸುರವೃತ್ತಿ |
| ಯೋಗಭಾವ(ಶ್ರದ್ಧಾ ಭಕ್ತಿ) | ಸತ್‌ಭಾವ | ಆಸುರಭಾವ(ಅಶ್ರದ್ಧೆ) |
| ಯಜ್ಞ(ಕರ್ಮ) | ದಾನ ತಪ | ವಿಕರ್ಮ |
| ಅಂತಃಸುಖ | ಭೋಗ(ಇಹಪರ ರಾಜಸ) | ಕಾಮಭೋಗ(ತಾಮಸ) |
| ಕರ್ಮಬಂಧವಿಮುಕ್ತಿ | ಕರ್ಮಬಂಧ(ಸಾತ್ವಿಕ ರಾಜಸ) | ಕರ್ಮಬಂಧ(ತಾಮಸ ದುಃಖ) |
| ಬ್ರಾಹ್ಮೀಸ್ಥಿತಿ | ಪುನರ್ಜನ್ಮ(ಸಾತ್ವಿಕ ರಾಜಸ) | ಪುನರ್ಜನ್ಮ(ಅಶುಭ ದುಃಖ) |
| ಬ್ರಹ್ಮನಿರ್ವಾಣ | ಶ್ರದ್ಧೆ | ತಪ ದಾನ ಶ್ರದ್ಧೆ |
| | ಭಕ್ತಿ | |
| | ಯಜ್ಞ | ವಿನಾಶ |

ಸುಸೂತ್ರವಾಗಿ ಬಗೆಹರಿಸಬಹುದು ಎಂಬುದನ್ನು ಅವರಿಗೆ ಗೀತೆಯು ಮನಸದಟ್ಟುವಂತೆ ತಿಳಿಸಿಹೇಳುವುದು. ಅದು ಹೇಗೆಂಬುದರ ರೂಪರೇಷೆಯನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುವೆವು.

ಗೀತೆಯ ಮುಖ್ಯ ತತ್ವಗಳು ಬಹು ಸುಲಭವಾಗಿಯೂ ಸುಸಂಬದ್ಧವಾಗಿಯೂ ಇವೆ. ಅವುಗಳನ್ನು ಬದಿಗೆ ಕೊಟ್ಟಿರುವ ವಿಶ್ವವೃಕ್ಷದ ಸಹಾಯದಿಂದ ನಾವು ಸೂಚಿಸುವಂತೆ ತಿಳಿದರೆ ಗೀತೆಯ ಸೂಕ್ಷ್ಮ ತತ್ವಗಳ ವಿಸ್ತ್ರುತವಾದ ವಿವರಣೆಗಳನ್ನು ಗ್ರಹಿಸುವದು ಸುಲಭವಾಗುವದು.

ಗೀತೆಯಲ್ಲಿ ಸೃಷ್ಟಿಕರ್ತನಿಗೆ ಪುರುಷೋತ್ತಮನೆಂದು ಹೆಸರು. ಈ ಹೆಸರು ತತ್ವಗರ್ಭಿತವಾಗಿರುವದು. ಆ ತತ್ವವನ್ನು ಸಂಪೂರ್ಣವಾಗಿ ಗ್ರಹಿಸದವರು ಅದರ ಮುಖ್ಯ ಲಕ್ಷಣಗಳನ್ನಾದರೂ ತಿಳಿದರೆ ಸಾಕು. ಈ ಪುರುಷೋತ್ತಮನು ತನ್ನ ಉದ್ದೇಶಕ್ಕಾಗಿಯೇ ಈ ಸೃಷ್ಟಿಯನ್ನೂ ಅದರೊಳಗಿನ ಎಲ್ಲ ವಸ್ತುಗಳನ್ನೂ ಪ್ರಾಣಿಗಳನ್ನೂ ಹುಟ್ಟಿಸುವನು. ಅವುಗಳ ಮೇಲೆ ಪ್ರಭುತ್ವವನ್ನೂ ಅವುಗಳಿಂದ ಸಲ್ಲುವ ಯಜ್ಞತಪಗಳನ್ನೂ ಪಡೆದು ಉಪಭೋಗಿಸಬೇಕೆಂಬುದೇ ಆತನ ಹೇತುವು. ಈ ಉದ್ದೇಶವು ಪ್ರಾಣಿಗಳ ದೃಷ್ಟಿಗೆ ಬಹಳ ಕಠಿಣವಾಗಿಯೂ ಕಠೋರವಾಗಿಯೂ ತೋರಬಹುದು. ಆದರೆ ಅದು ನಿಜವಲ್ಲ. ಈ ವಿಶ್ವವ್ಯವಹಾರದಲ್ಲಿ ಅವನು ಸ್ವಾರ್ಥಕ್ಕಿಂತಲೂ ಪ್ರಾಣಿಗಳ ಹಿತವನ್ನೇ ಹೆಚ್ಚಾಗಿ ನೆನೆಯುವನು. ಹೆತ್ತತಾಯಿಯು ಶಿಶುವಿಗೆ ಮಾಡುವ ಪ್ರೀತಿಯು ಶುಶ್ರೂಷೆಯು ಸ್ವಾರ್ಥರಹಿತವಾಗಿರುವಂತೆ ಪ್ರಾಣಿಗಳ ಮೇಲಿನ ಪುರುಷೋತ್ತಮನ ಪ್ರೇಮವಾದರೂ ನಿರ್ವ್ಯಾಜ್ಯವಾದುದು. ತನ್ನ ಸ್ವಾರ್ಥವಿಷಯಕ ಉದಾಸೀನತೆಗಾಗಿಯೂ ಪ್ರಾಣಿಮಾತ್ರಗಳ ಹಿತಚಿಂತನೆಗಾಗಿಯೂ ಸೃಷ್ಟಿಯೊಳಗಿನ ಆತನ ಹೇತುವು ಪುಣ್ಯಮಯವಾದುದೆಂದೂ ದಿವ್ಯವಾದುದೆಂದೂ ಗೀತೆಯು ಸೂಚಿಸುವದು. ಸೃಷ್ಟ್ಯುತ್ಪತ್ತಿಯ ಸಾದ್ಯಂತ ಪ್ರಕಾರವು ಈ ಪುರುಷೋತ್ತಮನ ದೈವೀ ಮಾಯೆಯ -ಲೀಲೆಯ- ಶುಕ್ಲಗತಿಯೆಂದು ಗೀತೆಯಲ್ಲಿ ಹೇಳಿದೆ. ಈ ಶುಕ್ಲಗತಿಯ ಅಥವಾ ಮಾರ್ಗದ ಸಂಪೂರ್ಣ ಸ್ವರೂಪವನ್ನು ವಿಶ್ವವೃಕ್ಷದಲ್ಲಿ ಬದಿಗೆ ನಾವು ತೋರಿಸಿರುವೆವು.

ಪುರುಷೋತ್ತಮನು ಸೃಷ್ಟಿಗೆ ಕರ್ತೃವಾಗಿಯೂ ಅಧ್ಯಕ್ಷನಾಗಿಯೂ ಸರ್ವಾಧಿಕಾರಿಯಾಗಿಯೂ ಮೂಲ ಆತ್ಮತತ್ವದಿಂದ ಉಂಟಾಗುವನು (೧೦-೨). ಪ್ರಭುತ್ವವನ್ನೂ ಯಜ್ಞವನ್ನೂ ಬಯಸಿ ಇವುಗಳನ್ನು ತನ್ನ ಪ್ರಜೆಗಳಿಂದ ಪಡೆಯಬೇಕೆಂಬುದೇ ಅವನ ದೈವೀಸಂಕಲ್ಪವು, ಅಥವಾ ಮಾಯೆಯು. ಈ ತನ್ನ ಸಂಕಲ್ಪವು ನೆರವೇರಬೇಕೆಂದು ತನ್ನ ಒಂದಂಶಮಾತ್ರದಿಂದ ಬ್ರಹ್ಮನನ್ನು ಅವನು ಹುಟ್ಟಿಸುವನು. ಈ ಬ್ರಹ್ಮನ ಸ್ವಭಾವವು ಅಧ್ಯಾತ್ಮವೆನಿಸುವದು. ಎಂದರೆ ಅದು ಆತ್ಮನಲ್ಲಿ-ಪುರುಷೋತ್ತಮನಲ್ಲಿ-ಚಿತ್ತವುಳ್ಳುದೂ ಅವನ ಕಾರ್ಯದಲ್ಲಿಯೇ ಆಸಕ್ತಿಯುಳ್ಳುದೂ ಆಗಿರುವದು. ಸೃಷ್ಟಿಯನ್ನು ಪುರುಷೋತ್ತಮನಿಗಾಗಿ ನಿರ್ಮಿಸಿ ಅದನ್ನು ಆತನಿಗೆ ಅರ್ಪಿಸುವುದೇ ಈ ಬ್ರಹ್ಮನು ಮಾಡುವ ಕಾರ್ಯವು. ಈ ಸೃಷ್ಟಿಯಲ್ಲಿ ಪ್ರಜೆಗಳೂ ಕರ್ಮ ತತ್ವವೂ ಮಹತ್ವದ ಭಾಗಗಳು. ಪ್ರಜೆಗಳಿಂದ ಪುರುಷೋತ್ತಮನ ಪ್ರಭುತ್ವದ ಸಂಕಲ್ಪವೂ, ಕರ್ಮತತ್ವದಿಂದ ಯಜ್ಞವನ್ನು ಪಡೆಯುವ ಆತನ ಸಂಕಲ್ಪವೂ ಸಾಧಿಸುವವು. ಈ ಪ್ರಜೆಗಳಿಗೆ ಗೀತೆಯಲ್ಲಿ ಭೂತಗ್ರಾಮವೆಂದು ಹೆಸರು. ಮಾನವ ಜಾತಿಯು ಈ ಭೂತಗ್ರಾಮಕ್ಕೆ ಸೇರಿದ ಒಂದು ವರ್ಗವು. ಬುದ್ಧಿ ಶಕ್ತಿಯು ಇವರಿಗೆ ಇರುವದರಿಂದ ಶುಕ್ಲ ಮಾರ್ಗದ ಪರಂಪರೆಯನ್ನು ಬುದ್ಧಿಪುರಸ್ಸರವಾಗಿ ನಡೆಯಿಸುವ ಹೊಣೆಯು ಪ್ರಧಾನವಾಗಿ ಇವರನ್ನು ಸೇರುವದು. ಪುರುಷ ಪ್ರಕೃತಿ ತತ್ವಗಳು ಸೃಷ್ಟಿಯಲ್ಲಿ ಎಲ್ಲೆಲ್ಲಿಯೂ ತುಂಬಿರುವಂತೆ ಮಾನವ ಸ್ವಭಾವರಚನೆಯಲ್ಲಿಯೂ ಇರುವವು. ಮನುಷ್ಯನಲ್ಲಿರುವ ಸುಖಾಭಿಲಾಷೆಯು ಅವನ ಪುರುಷ ಸ್ವಭಾವದಿಂದ ಉಂಟಾದುದು. ತನ್ನ ಪ್ರಕೃತಿ ಸ್ವಭಾವದ ಕಾರ್ಯಕಾರಣ ಶಕ್ತಿಯಿಂದ ತಾನು ಕೋರುವ ಸುಖವನ್ನು ಇವನು ಸಾಧಿಸುವನು.

ಶುಕ್ಲಮಾರ್ಗದಲ್ಲಿ ವರ್ತಿಸಬೇಕೆಂದು ಇವನ ಉತ್ಪತ್ತಿಯು. ಬ್ರಹ್ಮನ ಸಾತ್ವಿಕವಾದ ಅಧ್ಯಾತ್ಮಭಾವವೇ— ಪುರುಷೋತ್ತಮನಲ್ಲಿಟ್ಟ ಚಿತ್ತ ಆಸಕ್ತಿಗಳೇ- ಇವನಿಗಾದರೂ ನಿಯತವಾಗಿವೆ. ಇವನು ಈ ಭಾವ ಜಾಗ್ರತೆಯಿಂದ ಮಾಡುವ ವರ್ತನೆಗೆಲ್ಲ ಗೀತೆಯಲ್ಲಿ ಜ್ಞಾನವೆಂಬ ಹೆಸರು (೧೩-೭-೧೦). ಇಂಥ ಜ್ಞಾನದ ಸ್ಥಿತಿಯನ್ನು ದೈವೀಸಂಪತ್ತೆಂದು ಗೀತೆಯಲ್ಲಿ ಹೇಳಿದೆ. ಜ್ಞಾನ ಸಂಪನ್ನತೆಯ ಅಥವಾ ದೈವೀಸಂಪತ್ತಿನ ಮುಖ್ಯ

ಲಕ್ಷಣವೇನೆಂದರೆ ಅವನ್ನು ಪಡೆದವನಲ್ಲಿ ಪುರುಷೋತ್ತಮನ ವಿಷಯಕ ಯೋಗಭಾವವು ಅಥವಾ ಭಕ್ತಿಯು ತುಂಬಿದ್ದು ಆದರ ಪ್ರೇರಣೆಯಿಂದಲೇ ತಾನು ಮಾಡುವ ಎಲ್ಲ ಕಾರ್ಯಗಳನ್ನು ಅವನು ಕೈಕೊಳ್ಳುವನು. ಪುರುಷೋತ್ತಮನಲ್ಲಿಟ್ಟ ಈ ತರದ ಯೋಗಾಸಕ್ತಿಯಿಂದ ಮಾಡಿದ ಕಾರ್ಯಗಳೆಲ್ಲವೂ ಯಜ್ಞಗಳು. ಇವುಗಳನ್ನು ಮಾಡುವಾಗ ಸ್ವಾರ್ಥಮೂಲಕ ಅಥವಾ ಕಾಮಮೂಲಕ ಸಂಗವೂ ಫಲಾಪೇಕ್ಷೆಯೂ ಕರ್ತೃವಿನಲ್ಲಿ ಇರುವದಿಲ್ಲ. ತನ್ನ ಮನಸ್ಸಾಕ್ಷಿಯಾದ ಪುರುಷೋತ್ತಮನಿಗೆ ಇವೆರಡನ್ನೂ ಅವನು ಅರ್ಪಿಸಿಬಿಡುವನು. ಇದರಿಂದ ಅವನಿಗೆ ಕರ್ಮದ ಲೇಪವೂ ಬಂಧನವೂ ಇಲ್ಲದಾಗುವವು. ಅಂತಃಸುಖವು ದೊರೆಯುವದು. ಕರ್ಮಮಾಡುವಾಗ ಕರ್ತೃವು ಕರ್ತೃತ್ವದಲ್ಲಿಯೂ ಫಲದಲ್ಲಿಯೂ ಇಡುವ ಅಹಂಭಾವವೇ ಬಂಧನಕ್ಕೆ ಕಾರಣವಾಗುವದೆಂದು ಗೀತೆಯ ಖಂಡಿತ ಅಭಿಪ್ರಾಯವು ಇದಕ್ಕಾಗಿಯೇ ಸಂಗವನ್ನೂ ಫಲವನ್ನೂ ಬಿಡುವವನು ಕರ್ಮಬಂಧನದಿಂದ ಮುಕ್ತನಾಗುವನೆಂದು ಅದು ಹೇಳುವದು. ಕರ್ಮಬಂಧನವನ್ನು ಹೀಗೆ ಕಳೆದುಕೊಂಡ ಮನುಷ್ಯರಿಗೆ ಬ್ರಾಹ್ಮೀಸ್ಥಿತಿಯು ದೊರೆಯುವದು. ಈ ನಿಷ್ಪಾಪ ಸ್ಥಿತಿಯಲ್ಲಿ ಎಷ್ಟೋ ಕಾಲವಿದ್ದು ಶುಕ್ಲಮಾರ್ಗವನ್ನು ಅನುಸರಿಸುವ ಮಾನವನು ಯೋಗ್ಯಕಾಲದಲ್ಲಿ ಬ್ರಹ್ಮನಿರ್ವಾಣವನ್ನು ಪಡೆಯುವನು ಈ ಬ್ರಹ್ಮನಿರ್ವಾಣವು ಶಾಶ್ವತವೂ ಅಕ್ಷರವೂ ಆದ ಬ್ರಾಹ್ಮೀಸ್ಥಿತಿಯು. ಬ್ರಹ್ಮನಿಂದ ಹುಟ್ಟಿದ ಪ್ರತಿಯೊಬ್ಬ ಜೀವಭೂತನಿಗೂ ಬ್ರಹ್ಮನಿರ್ವಾಣವನ್ನು ಸೇರುವದೇ ಇತಿಕರ್ತವ್ಯವು. ಇದನ್ನು ಸಾಧಿಸಿದವನು ಕೃತಕೃತ್ಯನು. ಬ್ರಹ್ಮನಂತೆಯೇ ನಿತ್ಯನಿರ್ಮುಕ್ತನು.

ನಿಯತ ಶುಕ್ಲಮಾರ್ಗವನ್ನು ಸಾತ್ವಿಕವೃತ್ತಿಯಿಂದ ಅನುಸರಿಸದೆ ರಾಜಸವೃತ್ತಿಯನ್ನು ತಳೆದು ಮನುಷ್ಯನು ನಡೆಯುವದುಂಟು. ಆಗ ಅವನಲ್ಲಿ ಅಧ್ಯಾತ್ಮಭಾವವಾಗಲಿ ಯೋಗಭಾವವಾಗಲಿ ಇರುವದಿಲ್ಲ. ಆದರೂ ಸದ್ಧೇತು ಸದ್ಭಾವನೆಗಳು ಇರುವವು. ಇದನ್ನು ಗೀತೆಯು ಸಾಂಖ್ಯಮಾರ್ಗವೆಂದು ಹೇಳುವದು. ಸಾತ್ವಿಕಜಿಜ್ಞಾಸೆಯೇ ಈ ಮಾರ್ಗದ ಲಕ್ಷಣವು. ಆ ಮಾರ್ಗದಲ್ಲಿ ಸ್ವಾರ್ಥತ್ಯಾಗ ಪರಾರ್ಥಸಾಧನೆಗಳು ಉಚ್ಚತಮ ಧ್ಯೇಯಗಳೆನಿಸುವವು. ಇವುಗಳನ್ನು ಗೀತೆಯಲ್ಲಿ ಪಾರಿಭಾಷಿಕವಾಗಿ ತಪವೆಂದೂ

ದಾನವೆಂದೂ ಹೇಳಿದೆ. ಗೀತೆಯಲ್ಲಿ ವಿವರಿಸಿದ ಈ ದಾನ-ತಪಗಳ ಅನುಬಂಧ ಗಳನ್ನು ಚರ್ಚಿಸುವದಕ್ಕೆ ಇದು ಸ್ಥಳವಲ್ಲ. ಈ ಸಾಂಖ್ಯಮಾರ್ಗವೂ ಅದರ ದಾನತಪಗಳೆಂಬ ಧ್ಯೇಯಗಳೂ ಗೀತೆಗೆ ಸಮ್ಮತವಾಗಿರುವವೆಂದು ಹೇಳಿ ದರೆ ಸಾಕು. ತಪವನ್ನೂ ದಾನವನ್ನೂ ಆಚರಿಸುವದರಿಂದ ಇಹಪರಭೋಗ ಗಳು ದೊರೆಯುವವೆಂದು ಗೀತೆಯಲ್ಲಿ ಹೇಳಿದೆ. ಈ ಭೋಗಗಳಿಂದ ಕರ್ಮ ಗಳಲ್ಲಿ ಆಸಕ್ತಿಯೂ ಆಸಕ್ತಿಯಿಂದ ಮುಂದಕ್ಕೆ ಸಾತ್ವಿಕ ಬಂಧನವೂ ಉಂಟಾಗುವವು. ಕರ್ಮ ಬಂಧನವು ಸಾತ್ವಿಕವಾದರೂ ಅದರಿಂದ ಪುನ ರ್ಜನ್ಮಗಳು ತಪ್ಪದೆ ಫಲಿಸುವವು. ಆದರೂ ಇವು ಸಾತ್ವಿಕ ಪುನರ್ಜನ್ಮ ಗಳೇ. ಇಂಥ ಸಾತ್ವಿಕ ಪುನರ್ಜನ್ಮಗಳೂ ಯಜ್ಞಚಕ್ರವನ್ನನುಸರಿಸುವ ದಾನತಪಗಳ ಅನುಸರಣೆಯೂ ಕೊನೆಯಿಲ್ಲದೆ ನಡೆಯಬಹುದು. ಆದರೆ ಈ ಸ್ಥಿತಿಯು ರಾಜಸವು. ಇದು ಮಧ್ಯಮ ಸ್ಥಿತಿಯೆಂದು ಗೀತೆಯಲ್ಲಿ ಹೇಳಿದೆ(೧೪-೧೮).

ಸಾಂಖ್ಯಮಾರ್ಗದೊಳಗಿನ ಈ ಅನುಭವಗಳಿಂದ ಮುಂದಕ್ಕೆ ಮನು ಷ್ಯನಲ್ಲಿ ಯೋಗಮಾರ್ಗದ ಆಸಕ್ತಿಯು ಮೊಳೆದೋರಬಹುದು. ಹಾಗಾದರೆ ಮೊದಲು ಪುರುಷೋತ್ತಮನಲ್ಲಿ ಶ್ರದ್ಧೆಯೂ ತದನಂತರ ಭಕ್ತಿಯೂ ಯೋಗಭಾವವೂ ಬೆಳೆಯುವವು. ಪುರುಷೋತ್ತಮನಲ್ಲಿ ಆಸಕ್ತಿಯುಂಟಾಗಿ ಅವನನ್ನು ನೆನೆದು ದಾನತಪಗಳನ್ನಾದರೂ ಆಚರಿಸಿದರೆ ಆ ಕರ್ಮಗಳೇ ಯಜ್ಞಗಳಾಗುವವು. ಮತ್ತು ಅಂಥ ಮನುಷ್ಯನು ಶುಕ್ಲಮಾರ್ಗವನ್ನು ಪ್ರವೇಶಿಸಿದಂತಾಗುವದು.

ಅಧ್ಯಾತ್ಮಸ್ವಭಾವವನ್ನೂ ಸಾಂಖ್ಯಧ್ಯೇಯಗಳನ್ನೂ ನೀಗಿ ಅಧಿಭೂತನ ಅಂದರೆ ಪ್ರಕೃತಿಸ್ವಭಾವಕ್ಕೆ ಅಧೀನನಾಗಿ ಆಸುರವೃತ್ತಿಯನ್ನು ಸೇರುವವನ ಗತಿಯನ್ನು ಇನ್ನು ವಿಚಾರಿಸುವ. ಇವನು ವಿಷಯೋಪಭೋಗಗಳಿಗಾಗಿ ವಿಪರೀತ ಕರ್ಮಗಳನ್ನು ಮಾಡುವನು. ಕಾಮ-ಕ್ರೋಧ-ಲೋಭಗಳು ಇವನಲ್ಲಿ ಬಲಿಯುವವು. ಆಸುರ ಸುಖಗಳನ್ನು ಬಯಸಿ ಅವುಗಳನ್ನು ವಿಶ್ವ ಪ್ರಯತ್ನದಿಂದ ಅವನು ಪಡೆಯುವನು. ಅವುಗಳಿಂದ ದುಃಖಗಳು ಒದಗಿದಾಗ ಹತಾತ್ಮನಾಗಿ ಅವುಗಳನ್ನು ನಿವಾರಿಸುವದಕ್ಕೆ ಪ್ರೌಢಿಮೆಯ ಆತ್ಮವಿಶ್ವಾಸ ದಿಂದ ಭಯಂಕರವಾದ ಆಸುರ ಉಪಾಯಗಳನ್ನು ಅವನು ಕೈಕೊಳ್ಳುವನು.

ಇಂಥ ಭಯಂಕರ ಕರ್ಮಗಳ ಬಂಧನದಿಂದ ಕ್ರೂರವೂ ಕಂಟಕಮಯವೂ ಆದ ಅಶುಭಯೋನಿಗಳಲ್ಲಿ ಪುನರ್ಜನ್ಮಗಳೂ ಪರಮಾವಧಿಯ ದುಃಖ ಪರಂಪರೆಯೂ ಇವನಿಗೆ ಅವಶ್ಯವಾಗಿ ಸಂಭವಿಸುವವು. ಇವುಗಳಿಂದ ಉಪರತಿಯಾಗಿ ಅದರ ಆವೇಗದ ಭರದಲ್ಲಿ ತನ್ನ ಆತ್ಮಸ್ವಭಾವಕ್ಕೆ ಸಹಜವಾದ ಆದರೆ ಕುರುಹಿಲ್ಲದೆ ಕಳೆದುಕೊಂಡಿದ್ದ ಸಾಂಖ್ಯ ಇಲ್ಲವೆ ಅಧ್ಯಾತ್ಮ ವೃತ್ತಿಗಳು ಅವನಲ್ಲಿ ಮೊಳೆದೋರುವವು. ತನ್ನ ಕುರುಡತನದಿಂದಲೇ ತಾನು ಹೊಂದಿದ ಅಧೋಗತಿಯನ್ನು 'ಬಿಡಿಸು ಬಾ' ಎಂದು ಶ್ರದ್ಧೆಯಿಂದ ಅವನು ತನ್ನ ಹೃದಯಸ್ಥನಾದ ಪುರುಷೋತ್ತಮನನ್ನು ಮೊರೆಯಿಡುವನು. ಪುರುಷೋತ್ತಮನಿಂದ ತನ್ನ ತಾತ್ಕಾಲಿಕ ವಾಂಛಿತವನ್ನು ಅವನು ಪಡೆಯುವದರಿಂದ ಅವನಲ್ಲಿ ಶ್ರದ್ಧೆಯು ಬೆಳೆಯುವದು. ಈ ಶ್ರದ್ಧೆಯಿಂದ ಮುಂದೆ ಭಕ್ತಿಯೂ ಬೆಳೆದು ದೈವೀಸಂಪತ್ತಿನ ಅಭಿವೃದ್ಧಿಯಾಗಿ ಅವನು ಶುಕ್ಲಮಾರ್ಗವನ್ನು ಸೇರುವನು. ಅಥವಾ ಸಾಂಖ್ಯವೃತ್ತಿಯೇ ಮೊದಲು ಮೊಳೆದೋರಿದರೆ ದಾನತಪಗಳನ್ನು ಆಚರಿಸುತ್ತ ಕೆಲಕಾಲ ಮಧ್ಯಮ ಸ್ಥಿತಿಯಲ್ಲಿ ಕಳೆಯುವನು. ಮತ್ತು ಶ್ರದ್ಧೆಭಕ್ತಿಗಳಿಂದ ಮುಂದೆ ಶುಕ್ಲಮಾರ್ಗವನ್ನು ಅವನು ಸೇರುವನು.

ಆದರೆ ಆಸುರ ವೃತ್ತಿಯವರಾದ ಕೆಲವರಲ್ಲಿ ಈ ಉಪರತಿಯು ಉಂಟಾಗುವದೇ ಇಲ್ಲ. ಅವರು ಅಧೋಗತಿಯಿಂದಲೇ ಸಾಗುವರು. ಒಂದನ್ನೊಂದು ಮೀರುವಂಥ ಭಯಂಕರ ಕರ್ಮಗಳನ್ನು ಅಧಿಕವಾಗಿ ಮಾಡುತ್ತ ಕೊನೆಗೆ ಅವರು ಅಧೋಗತಿಯನ್ನುಸೇರಿ ನಾಶಹೊಂದುವರು (೧೬-೨೦-೨೧). ಕೃಷ್ಣಮಾರ್ಗವನ್ನು ಅವಲಂಬಿಸಿದವರಿಗೆ ಇದೇ ಪರಮಾವಧಿಯ ಅಧಃಪತನವು.

ಗೀತೆಯ ತತ್ವಜ್ಞಾನವನ್ನು ಎಷ್ಟು ಆಧುನಿಕ ದೃಷ್ಟಿಯಿಂದ ನಿರೀಕ್ಷಿಸಿದರೂ ಅದರೊಳಗಿನ ಆತ್ಮ, ಪುರುಷೋತ್ತಮ, ಬ್ರಹ್ಮ, ಮೊದಲಾದ ವೇದಾಂತಿಕ ಕಲ್ಪನೆಗಳನ್ನು ಬಿಡುವದು ಸಾಧ್ಯವಲ್ಲ. ಈ ತತ್ವಗಳ ವಿಚಾರ ಮಾಡದೆಯೇ ಗೀತೆಯನ್ನು ಓದುವ ವಾಚಕರು ಅನೇಕರಿರಬಹುದು. ಗೀತೆಯಲ್ಲಿ ವಿವರಿಸಿದ ಕರ್ಮವಿಪಾಕದ ಸಿದ್ಧಾಂತಗಳೂ ಸುಖದುಃಖಗಳ ಉಪ

ಪತ್ತಿಗಳೂ ಜ್ಞಾನ ಅಜ್ಞಾನಗಳ ವೃದ್ಧಿ ಕ್ಷಯಗಳಿಗೆ ಹೇಳಿದ ಕಾರಣಗಳೂ ಇವರಿಗಾದರೂ ಸಮ್ಮತವಾಗಬಹುದೆಂದು ನಮಗೆ ತೋರುವದು.

## ಒಂದೆರಡು ಸೂಚನೆಗಳು.

ನಾವು ಗೀತೆಯ ಶ್ಲೋಕಗಳನ್ನು ಕುರಿತು ಮಾಡಿದ ವಿವೇಚನೆಯ ವಿಷಯವಾಗಿ ವಾಚಕರಿಗೆ ಒಂದು ಸೂಚನೆ. ಬಾಲಬೋಧ ಲಿಪಿಯನ್ನು ಅರಿಯದವರಿಗೂ ಅನುಕೂಲವಾಗಲು ಮೂಲ ಶ್ಲೋಕಗಳನ್ನು ಕನ್ನಡ ಲಿಪಿಯಲ್ಲಿ ಕೊಟ್ಟಿರುವೆವು. ಈ ಶ್ಲೋಕಗಳ ಕೆಳಗೆ ಶಬ್ದಶಃ ಅರ್ಥವನ್ನು ಸಹೇತುಕವಾಗಿಯೇ ಕೊಟ್ಟಿರುವದಿಲ್ಲ. ಗೀತೆಯ ಪಾರಿಭಾಷಿಕ ಶಬ್ದಗಳಲ್ಲಿ ಅರ್ಥಲಾಘವವು ಘನಗಂಭೀರವಾಗಿಯೂ ಸೂಕ್ಷ್ಮತತ್ವಪೂರಿತವಾಗಿಯೂ ಇರುವದೆಂದು ಗೀತೆಯನ್ನು ವಿಚಾರ ಪೂರ್ವಕವಾಗಿ ಓದಿದವರೆಲ್ಲರೂ ಒಪ್ಪುವರು. ಲೋ. ಟಿಳಕರು ತಮ್ಮ "ಗೀತಾರಹಸ್ಯ" ದಲ್ಲಿ ಕೆಳಗಿನಂತೆ ಬರೆದಿರುವರು:—

"ಗೀತೆಯ ಸರಲವೂ ಉತ್ತಾನವೂ ಮುಖ್ಯವೂ ಆದ ಅರ್ಥವನ್ನು ಭಾಷಾಂತರದಲ್ಲಿ ತರಲು ನಾವು ಪ್ರಯತ್ನಿಸಿರುವದೇನೋ ನಿಜ, ಆದರೆ ಸಂಸ್ಕೃತ ಶಬ್ದಗಳಲ್ಲಿ ಅದರಲ್ಲಿಯೂ ವಿಶೇಷತಃ ಭಗವಂತನ ಪ್ರೇಮಲವೂ ರಸಾಲವೂ ವ್ಯಾಪಕವೂ ಪ್ರತಿಕ್ಷಣದಲ್ಲಿಯೂ ನೂತನವಾದ ರುಚಿಯನ್ನು ಕೊಡುವುದೂ ಆದ ವಾಣಿಯಲ್ಲಿ ಲಕ್ಷಣದಿಂದ ವ್ಯಂಗ್ಯಾರ್ಥಗಳನ್ನು ಉಂಟುಮಾಡುವ ಯಾವ ಸಾಮರ್ಥ್ಯವಿರುವದೋ ಅದನ್ನು ಯತ್ಕಿಂಚಿತ್ತಾದರೂ ಹೆಚ್ಚು ಕಡಿಮೆ ಮಾಡದೆ ಬೇರೆ ಶಬ್ದಗಳಿಂದ ಇದ್ದಕ್ಕಿದ್ದಂತೆಯೇ ಭಾಷಾಂತರದಲ್ಲಿ ತರುವುದು ಅಶಕ್ಯವಾಗಿದೆ."

ಪುಟ ೫೫೦ ಕನ್ನಡ ಗೀತಾರಹಸ್ಯ.

ಗೀತೆಯ ವಿಚಾರಗಳ ಆಳ ಮತ್ತು ಅಳತೆ ಇವುಗಳನ್ನು ಪರಿಷ್ಕಾರವಾಗಿ ಅರಿಯುವದು ಶಕ್ಯವಾಗಿದ್ದರೆ ಶಬ್ದಗಳನ್ನು ತಿಳಿಯುವುದರಲ್ಲಿ ಪ್ರಯಾಸವೇನು? ಆದರೆ ಅವುಗಳನ್ನು ಶಬ್ದಚಟುಲನೆಯಿಂದಲೇ ತಿಳಿಯುವದು ಶಕ್ಯವಲ್ಲ. ಗೀತೆಯನ್ನು ಉಪದೇಶಿಸಿದ ಶ್ರೀಕೃಷ್ಣನ ಇಂಗಿತವನ್ನು ಅರಿಯಬೇಕು.

ಅದನ್ನು ಅರಿತರೆ ಪರಿಸದ ಸ್ಪರ್ಶದಿಂದ ಕಬ್ಬಿಣವು ಕನಕವಾಗುವಂತೆ ಗೀತೆಯ ಶ್ಲೋಕಾರ್ಥಗಳು ನಿರಾಯಾಸವಾಗಿ ಹೊರಸೂಸುವವು. ಕೇವಲ ಶಬ್ದಚಾಲನೆಯಿಂದಲೇ ಅರ್ಥವು ಕೈಗೂಡದೆ ಹೋದುದಕ್ಕೆ ನಿಮಿತ್ತ ಗಳನ್ನು ಮೋಹಕ ಶೈಲಿಯಲ್ಲಿ ವರ್ಣಿಸಿ ಫಲವೇನು? ಹಾಗೆ ಒಂದೊಂದು ಶಬ್ದಕ್ಕೆ ಒಂದೇ ಅಲ್ಲದೆ ಹತ್ತು ಶಬ್ದಗಳನ್ನು ಸರಿಯಾದುವೆಂದು ಸೇರಿಸಿ ದರೂ ಗೀತೆಯ ಶ್ಲೋಕಗಳ ಭಾವವನ್ನು ಕಂಡುಕೊಳ್ಳುವದು ಶಕ್ಯವಲ್ಲ. ಇದಕ್ಕಾಗಿಯೇ ನಾವು ಶ್ಲೋಕಗಳಿಗೆ ಶಬ್ದಾರ್ಥಗಳನ್ನು ಹೇಳುವ ಗೋಜಿಗೆ ಹೋಗಿರುವದಿಲ್ಲ.

ನಮ್ಮ ಕರ್ನಾಟಕದ ಕರ್ಮವೀರರಾದ ಶ್ರೀಯುತ ದಿವಾಕರ ರಂಗರಾಯರು ತಮ್ಮ "ಗೀತೆಯ ಗುಟ್ಟಿ" ನಲ್ಲಿ ತೋರಿಸಿಕೊಟ್ಟ ಮಾರ್ಗ ವನ್ನೇ ನಾವು ಅನುಸರಿಸಿರುವೆವು. ಅವರು "ಕುರುಕ್ಷೇತ್ರದ ಪುಣ್ಯ ಭೂಮಿಯ ಮೇಲೆ ಅರ್ಜುನನಿಗೆ ಆದ ಮಂತ್ರೋಪದೇಶದ ಪುನರುಚ್ಚಾ ರವು, ಪುನಃಸ್ಫೂರ್ತಿಯು, ಧರ್ಮಕ್ಷೇತ್ರವಾದ ನಮ್ಮ ಹೃದಯಾಕಾಶ ದಲ್ಲಿ ಈ ಕ್ಷಣಕ್ಕೇ ಆಗುವದು ಶಕ್ಯವು. ಅದನ್ನನುಭವಿಸುವ ನಿಶ್ಚ ಯವು ಮಾತ್ರ ಬೇಕು. ಈ ಗೀತೆಯೆಂಬ ಚಿನ್ನದ ಪರೀಕ್ಷೆಯನ್ನು ಅನು ಭವದ ಒರೆಗಲ್ಲಿನ ಮೇಲೆ ಮಾಡಿರಿ" ಎಂದು ಹೇಳಿರುವರು (ಪುಟ ೬೩).

ಹೀಗೆ ಹೃದಯಾಕಾಶದಲ್ಲಿ ಸ್ಫೂರ್ತಿಯು ಹೊಳೆದರೆ ಗೀತೆಯ ಶ್ಲೋಕ ಗಳ ಭಾವವು ಅವುಗಳ ವಿದ್ಯುತ್ ಪ್ರಭಾವದಿಂದಲೇ ಗೋಚರವಾಗುವದು. ಗೀತೆಯು ಈವರೆಗೆ ಅಜ್ಞರ ಅಥವಾ ಸುಜ್ಞರ ಮನಸ್ಸುಗಳನ್ನು ಈ ತನ್ನ ಪ್ರಭಾವದಿಂದಲೇ ಆಕರ್ಷಿಸಿರುವದು. ಶಬ್ದಕ್ಕೆ ಶಬ್ದವನ್ನು ಸರಿಪಡಿಸಿ ಶ್ಲೋಕಗಳ ಅರ್ಥವನ್ನು ನೋಡುವುದರಲ್ಲಿ ಸ್ವಾರಸ್ಯವಿಲ್ಲ. ಗೀತೆಯೊಳಗಿನ ಒಂದೊಂದು ಶಬ್ದದ ಭಾವಗರ್ಭಿತತೆಯನ್ನು ಹೃದಯ ಸ್ಪರ್ಶಿಯಾದ ಭಾವ ಸ್ಫೂರ್ತಿಯಿಂದಲೇ ಕಂಡುಕೊಳ್ಳಬೇಕು. ಅವುಗಳ ಭಾವಾರ್ಥವನ್ನು ಹೇಳುವದಕ್ಕೆ ಶ್ಲೋಕಗಳೊಳಗಿನ ಶಬ್ದಗಳನ್ನು ಪ್ರಾಕೃತ ಶಬ್ದಗಳಿಂದ ಭಾಷಾಂತರಿಸುವದು ಉತ್ತಮಮಾರ್ಗವಲ್ಲ. ಆ ಭಾವಾರ್ಥವನ್ನು ವಿಸ್ತೃತ ಒಪ್ಪುತಪ್ಪುಗಳ ಸೂಕ್ಷ್ಮ ವಿಮರ್ಶೆಯಿಂದಲೇ ತಿಳಿಯುವದು ಶಕ್ಯವು. ನಾವು ಹಾಗೆಯೇ ಮಾಡಿರುವೆವು. ಹೀಗೆ ಮಾಡುವದರಲ್ಲಿಯೂ ಅತಿರೇಕ

ಭಯವುಂಟೆಂಬುದನ್ನು ನಾವು ಮರೆತಿರುವದಿಲ್ಲ. ಎಲ್ಲೆಲ್ಲಿಯೂ ಗೀತೆಯ ವಿಚಾರಸರಣಿಯನ್ನಾಗಲಿ ಶ್ಲೋಕಗಳಲ್ಲಿ ಬಂದಿರುವ ಶಬ್ದಗಳ ಭಾವವನ್ನಾಗಲಿ ಅತಿಕ್ರಮಿಸಬಾರದೆಂಬ ಜಾಗ್ರತೆಯಿಂದ ನಾವು ನಡೆದಿರುವೆವು. ಆದರೂ ಪ್ರಮಾದಗಳು ಒಳಸೇರಿದ ಸಂದರ್ಭಗಳನ್ನು ಸಹೃದಯ ವಾಚಕರು ನಮ್ಮ ಲಕ್ಷ್ಯಕ್ಕೆ ತಂದರೆ ನಾವು ಕೃತಜ್ಞತೆಯಿಂದ ತಿದ್ದುವೆವು. ಗೀತೆಯ ಶ್ಲೋಕಗಳಿಗೆ ನಮ್ಮ ಪದ್ಧತಿಯಿಂದ ಮಾಡಿರುವ ವಿಮರ್ಶೆಯಲ್ಲಿ ಇನ್ನೊಂದು ಸೌಕರ್ಯವುಂಟು. ಮೂಲ ಶ್ಲೋಕಗಳನ್ನು ಓದಿ ತಿಳಿಯಲಾರದ ಸಂಸ್ಕೃತ ಭಾಷೆಯನ್ನರಿಯದ ವಾಚಕರು ಅವುಗಳ ವಿಮರ್ಶೆಯನ್ನೇ ಕ್ರಮವಾಗಿ ಓದುತ್ತ ಹೋದರೆ ಗೀತೆಯ ತತ್ವಾನ್ವೇಷಣೆಯ ಪ್ರವಾಹವು ಸುಸಂಬದ್ಧವಾಗಿಯೂ ಅವ್ಯಾಹತವಾಗಿಯೂ ಸಾಗುವದು.

## ಗೀತಾಧ್ಯಾಯ ಸಂಗತಿ.

ಗೀತೆಯ ಭಾವಾರ್ಥವನ್ನು ಪರಿಶೋಧಿಸುವವರು ತಾವು ನಿಷ್ಕರ್ಷೆ ಮಾಡಿದ ಅರ್ಥವು ಹದಿನೆಂಟು ಅಧ್ಯಾಯಗಳಲ್ಲಿ ಸಂಭಾಷಣೆ ರೂಪವಾಗಿ ಹೇಗೆ ಅನುಸ್ಯೂತವಾಗಿದೆ ಎಂಬುದನ್ನು ತೋರಿಸಿಕೊಡುವ ಪದ್ಧತಿಯೊಂದುಂಟು. ಅದನ್ನನುಸರಿಸಿ ಗೀತಾಧ್ಯಾಯಗಳ ಸಂಗತಿಯನ್ನು ಇಲ್ಲಿ ಸಂಕ್ಷೇಪವಾಗಿ ಮಂಡಿಸಿ ನಾವು ಈ ಉಪೋದ್ಘಾತವನ್ನು ಮುಗಿಸುವೆವು.

ಅರ್ಜುನನಿಂದ ಯುದ್ಧವನ್ನು ನೆರವೇರಿಸುವುದಕ್ಕಾಗಿಯೂ ಉಪನಿಷತ್ತುಗಳ ಸಾರವನ್ನು ಸಂಗ್ರಹಿಸಿ ಮತಭೇದಗಳನ್ನು ಕಿತ್ತೊಗೆದು ಏಕವಾಕ್ಯತೆಯನ್ನುಂಟುಮಾಡುವದಕ್ಕಾಗಿಯೂ ಪಾತಂಜಲಯೋಗವನ್ನು ನೆಲೆಯಾಗಿ ನಿಲ್ಲಿಸುವದಕ್ಕಾಗಿಯೂ ಸಂನ್ಯಾಸ ಮಾರ್ಗವನ್ನು ಸ್ಥಿರಪಡಿಸುವದಕ್ಕಾಗಿಯೂ ಸಂನ್ಯಾಸವನ್ನು ಖಂಡಿಸಿ ಕರ್ಮಮಾರ್ಗವನ್ನು ಸಾರುವುದಕ್ಕಾಗಿಯೂ ಕರ್ಮಾಕರ್ಮದ ಲಾಘವ ಗೌರವಗಳನ್ನು ನಿಶ್ಚಯಿಸಿ ನೀತಿಶಾಸ್ತ್ರವನ್ನು ಏರ್ಪಡಿಸುವದಕ್ಕಾಗಿಯೂ ಗೀತೆಯು ಹೇಳಲ್ಪಟ್ಟಿತೆಂದು ವಿಧವಿಧವಾಗಿ ಅದರ ಹೇತುವನ್ನು ಅನುಮಾನಿಸಿರುವರು. ಗೀತೆಯ ಅಧ್ಯಾಯಾನುಕ್ರಮವಾದ ಸಂಗತಿಯು ಇವುಗಳೊಳಗೆ ಒಂದೊಂದು ಮತವನ್ನು ಹೇಗೆ ಅನುಸರಿಸುವದೆಂದು ಸುಸೂತ್ರವಾಗಿ ತೋರಿಸುವುದು ಅಶಕ್ಯ

ವಲ್ಲ. ಆದರೆ ಹಾಗೆ ಮಾಡಿದ ಉಪಪಾದನೆಗಳು ಪಾಂಡಿತ್ಯದ ದೃಷ್ಟಿ ಯಿಂದ (Scholarly)ಎಷ್ಟು ಸಮರ್ಪಕವಾಗಿ ತೋರಿದರೂ ಮಾನಸ ಶಾಸ್ತ್ರದ ದೃಷ್ಟಿಯಿಂದ(Psycholgically )ಬಹು ವಿಸಂಗತವಾಗಿಯೇ ಇರು ವವು. ಗೀತೆಯ ಅಧ್ಯಾಯಗಳ ಮಥಿತಾರ್ಥವೇನೆಂಬುದು ಬಹು ಪುರಾ ತನ ಕಾಲದಿಂದ ನಿರ್ಣೀತವಾಗಿದ್ದು ಆಯಾ ಅಧ್ಯಾಯಗಳ ಕೊನೆಯಲ್ಲಿ ಸಂಕಲ್ಪರೂಪವಾಗಿ ಅದು ಸೂಚಿಸಲ್ಪಟ್ಟಿರುವದು. ಮಹಾಭಾರತದೊಳಗೆ ಗೀತೆಯ ಮೂಲಸ್ವರೂಪದಲ್ಲಿ ಈ ಸಂಕಲ್ಪಗಳು ಕಂಡುಬರುವದಿಲ್ಲ. ಆದು ದರಿಂದ ಅವು ಹಿಂದಿನಿಂದ ಸೇರಿಸಲ್ಪಟ್ಟಿರಬೇಕು. ಈ ಸಂಕಲ್ಪಗಳಲ್ಲಿ ಸೂಚಿ ಸಿದ ಆಯಾ ಅಧ್ಯಾಯಗಳ ತಾತ್ಪರ್ಯವು ವೇದಾಂತದ ಪೂರ್ವಪರಂಪರೆ ಯನ್ನು ಅನುಸರಿಸಿದ್ದುದರಿಂದ ಪುರಾತನ ಕಾಲದಿಂದ ಅದು ಜನಸಮ್ಮತ ವಾಗಿಯೂ ಇತ್ತು. ಆದರೆ ಗೀತೆಯ ಮೇಲೆ ಈಗೀಗ ಹೊಸ ಬೆಳಕು ಬೀಳ ಹತ್ತಿ ಆ ಸಂಕಲ್ಪಗಳಲ್ಲಿ ಸೂಚಿಸಿರುವ ಅಧ್ಯಾಯಗಳ ತಾತ್ಪರ್ಯವು ಸಮ ರ್ಪಕವಲ್ಲವೆಂದು ತೋರಿ ಅವುಗಳನ್ನು ನಾನಾವಿಧವಾಗಿ ಬದಲಿಸಿರುವರು. ಅದು ಹೇಗೇ ಇರಲಿ, ಆ ಸಂಕಲ್ಪಗಳು ಪುರಾತನವಾದವುಗಳಾದರೂ ಅವು ಗೀತಾಧ್ಯಾಯಗಳ ತಾತ್ಪರ್ಯವನ್ನು ನಿಶ್ಚಯಾತ್ಮಕವಾಗಿ ನಿರ್ಣಯಿಸಲಿಕ್ಕೆ ಉಪಯುಕ್ತವಾಗಲಾರವು. ಮತ್ತು ಮೇಲೆ ಹೇಳಿದ ಮಾನಸಶಾಸ್ತ್ರದ ದೃಷ್ಟಿಯಿಂದ ಅವು ವಿಸಂಗತವಾಗಿಯೂ ಇರುವವು.

ಗೀತೆಯ ಅಧ್ಯಾಯಗಳ ವಿಷಯವನ್ನು ಸುಸಂಗತವಾಗಿ ನಿರ್ಣಯಿಸು ವುದಕ್ಕೆ ಅದನ್ನು ಬೋಧಿಸಲು ಉಪಕ್ರಮಿಸುವಾಗ ಶ್ರೀಕೃಷ್ಣನು ತನ್ನ ಮನಸ್ಸಿನಲ್ಲಿ ಹಿಡಿದ ಸಂಕಲ್ಪವನ್ನು ಪರಿಶೋಧಿಸಿ ಮೊದಲು ನಿರ್ಧರಿಸಬೇಕು. ಮೇಲೆ ವಿವರಿಸಿದ ಮತಗಳೆಲ್ಲ ಈ ದೃಷ್ಟಿಯಿಂದ ನಿರರ್ಥಕವಾಗಿರುವವು. ಗೀತೆಯಲ್ಲಿ ಬುದ್ಧಿಯೋಗವೆಂದು ಹೆಸರಿಟ್ಟು ಅಧ್ಯಾತ್ಮ ಶಾಸ್ತ್ರವನ್ನು ಆಮೂಲಾಗ್ರವಾಗಿ ಅರ್ಜುನನ ಸಂಶಯಗಳೆಲ್ಲ ನಿಃಶ್ಶೇಷವಾಗಿ ಪರಿಹಾರ ವಾಗುವಂತೆ ಶ್ರೀಕೃಷ್ಣನು ಹೇಳತೊಡಗಿದನೆಂದು ನಾವು ತೋರಿಸಿರುವ ಉಪಪತ್ತಿಯೇ ಎಲ್ಲ ದೃಷ್ಟಿಯಿಂದಲೂ ಯಥಾರ್ಥವಾಗಿರುವದು. ಇದನ್ನು ಅರ್ಜುನನು ಕೃತಜ್ಞತಾಪೂರ್ವಕವಾಗಿ ಆಡಿಯೂ (೧೧–೧) ತೋರಿಸಿರುವನು.

ಈ ಉಪಪತ್ತಿಯನ್ನನುಸರಿಸಿ ಗೀತಾಧ್ಯಾಯ ಸಂಗತಿಯ ಸ್ವರೂಪವೇನೆಂಬ ದನ್ನು ಇನ್ನು ನೋಡುವ.

**ಮೊದಲನೆಯ** ಅಧ್ಯಾಯದಲ್ಲಿ ಅರ್ಜುನನ ವಿಷಾದವು ವರ್ಣಿಸಲ್ಪಟ್ಟಿದೆ. **ಎರಡನೆಯ** ಅಧ್ಯಾಯದಲ್ಲಿ ಅರ್ಜುನನು ವಿಷಣ್ಣನಾಗಿ ಮಾಡಿದ ಊಹಾಪೋಹಗಳು ಸರಿಯಲ್ಲವೆಂದೂ ಸರಿಯಾಗಿ ಊಹಿಸಿದರೆ ಯುದ್ಧ ಮಾಡಬಾರದೆಂಬ ಅವನ ನಿಶ್ಚಯವು ಅಯೋಗ್ಯವೆಂದೂ ಮೊದಲು ತೋರಿಸಿದೆ. ಅರ್ಜುನನ ನಿಶ್ಚಯವನ್ನು ಸಡಿಲಿಸುವದಕ್ಕೆ ಬೇಕಾಗುವಷ್ಟೇ ವಿವರಣೆಯು ಈ ಭಾಗದಲ್ಲಿರುವುದು. ಈ ವಿವರಣೆಯನ್ನು ಸಾಂಖ್ಯವೆಂದು ಸಂಬೋಧಿಸಿದೆ. ಇಪ್ಪತ್ತೆಂಟು ಶ್ಲೋಕಗಳಲ್ಲಿಯೇ ಈ ವಿವರಣೆಯನ್ನು ಮುಗಿಸಿ ತತ್‌ಕ್ಷಣವೇ ಅರ್ಜುನನು ನಿಜವಾಗಿಯೂ ಗ್ರಹಿಸಬೇಕಾಗಿರುವ ಬುದ್ಧಿಯೋಗವೆಂಬ ಶಾಸ್ತ್ರವನ್ನು ಶ್ರೀಕೃಷ್ಣನು ಬೋಧಿಸಲಾರಂಭಿಸಿರುವನು, ಈ ಶಾಸ್ತ್ರದ ಸಾಂಗೋಪಾಂಗ ವರ್ಣನೆಯು ಅರ್ಜುನನ ಪರಿಸ್ಥಿತಿಗೆ ಅನುರೂಪವಾಗಿ ಹದಿನೆಂಟನೆಯ ಅಧ್ಯಾಯದ ಕೊನೆಯ ವರೆಗೆ ಸಾಗುವದು. ಈ ಬುದ್ಧಿಯೋಗ ಶಾಸ್ತ್ರದ ಮಹತ್ವವನ್ನೂ ಪರಿಪೂರ್ಣತೆಯನ್ನೂ ವ್ಯವಹಾರ ಮೊದಲುಗೊಂಡು ವೇದಾಂತದ ಕೊನೆಯ ಮೆಟ್ಟಲುಗಳಾದ ಬ್ರಾಹ್ಮೀಸ್ಥಿತಿ ಬ್ರಹ್ಮನಿರ್ವಾಣಗಳ ವರೆಗಿನ ಅದರ ಉಪಯುಕ್ತತೆಯನ್ನೂ ಹೇಳಿ ಈ ಅಧ್ಯಾಯವನ್ನು ಶ್ರೀಕೃಷ್ಣನು ಮುಗಿಸುವನು.

**ಮೂರನೆಯ** ಅಧ್ಯಾಯದಲ್ಲಿ ಬುದ್ಧಿಯೋಗವನ್ನು ಗ್ರಹಿಸಲಿಕ್ಕೆ ಅರ್ಜುನನಿಗಿದ್ದ ಮೊದಲನೆಯ ಅಡಚಣಿಯನ್ನು ಎಂದರೆ ಕರ್ಮವಿಷಯಕ ಅವನ ಅವಾಸ್ತವ ಕಲ್ಪನೆಗಳನ್ನು ಎತ್ತಿಕೊಂಡು **ನಾಲ್ಕನೆಯ** ಅಧ್ಯಾಯದ ಕೊನೆಯ ವರೆಗೆ ಆ ವಿಷಯವೇ ಬುದ್ಧಿಯೋಗದ ದೃಷ್ಟಿಯಿಂದ ವಿವರಿಸಿದೆ. ಅರ್ಜುನನ ಸಂನ್ಯಾಸದ ಕಲ್ಪನೆಯು ಬುದ್ಧಿಯೋಗಾಂತರ್ಗತ ಕರ್ಮದಲ್ಲಿ ಇಲ್ಲದಿದ್ದರೂ ಬೇರೊಂದು ಸಂನ್ಯಾಸವು ಇದ್ದೇ ಇರುವದು ಎಂಬ ನಿಷ್ಕರ್ಷೆಯನ್ನು ಈ ಅಧ್ಯಾಯದ ಕೊನೆಗೆ ಶ್ರೀಕೃಷ್ಣನು ಹೇಳುವನು. **ಐದನೆಯ** ಅಧ್ಯಾಯದಲ್ಲಿ ಈ ಸಂನ್ಯಾಸದ ಹೊಸ ಭಾವವನ್ನು ವಿಶದ ಮಾಡುವನು. ಈ ಸಂನ್ಯಾಸದ ವಿಶೇಷ ಲಕ್ಷಣವೇನಂದರೆ ಅದು ಕರ್ಮ

ವನ್ನು ಬಿಡದೆ— ಮಾಡಿಯೇ ಸಾಧಿಸಬೇಕಾದುದು. ಮತ್ತು ಅಂಥ ಸಂನ್ಯಾಸವನ್ನು ಆಚರಿಸುವವನಲ್ಲಿ ಯೋಗಭಾವವು ಇದ್ದೇ ತೀರಬೇಕಾದುದು.

**ಆರನೆಯ** ಅಧ್ಯಾಯದಲ್ಲಿ ಯೋಗಭಾವವೆಂದರೇನು ಅದು ಬುದ್ಧಿಯೋಗ ಶಾಸ್ತ್ರಕ್ಕೆ ಹೇಗೆ ಪ್ರಾಣಾಧಾರವಾಗಿರುವುದು ಎಂಬುದನ್ನು ಶ್ರೀಕೃಷ್ಣನು ಹೇಳುವನು. ಇಷ್ಟೇ ಅಲ್ಲ, ಈ ಯೋಗಭಾವವೇ ಗೀತೆಯೊಳಗಿನ ಗುಹ್ಯ ಆಧ್ಯಾತ್ಮಶಾಸ್ತ್ರದ ಗುಟ್ಟು; ಈ ಯೋಗಭಾವದಿಂದಲೇ ಎಲ್ಲ ಕರ್ಮಗಳು ಯಜ್ಞಗಳಾಗಿ ಪರಿಣಮಿಸಿ ಬಂಧನರಹಿತವಾಗುವವು. ಕರ್ತೃವು ಕರ್ಮ ಮಾಡಿಯೂ ಸಂನ್ಯಾಸಿಯಾಗುವನು. ಈ ಯೋಗವೇ ಜೀವನಿಗೆ ಪರಮಾವಧಿಯ ಸಾಧ್ಯವು. ಇದು ತಪದಾನಕರ್ಮ ಇವೆಲ್ಲವುಗಳನ್ನೂ ಮೀರಿರುವದು. ಈ ಯೋಗಕ್ಕೆ ಶ್ರೀಕೃಷ್ಣಪುರುಷೋತ್ತಮನೇ ಅಧಿದೇವತೆಯು. ಆ ದೇವಾಧಿದೇವನಿಗೆ ತನ್ನ ಅಂತರಾತ್ಮವನ್ನು ಅರ್ಪಿಸುವವನು ಎಲ್ಲ ಯೋಗಿಗಳಲ್ಲಿ ಶ್ರೇಷ್ಠನೆನಿಸುವನು.

ಕರ್ಮ, ಸಂನ್ಯಾಸ, ಯೋಗವೆಂಬುವು ಗೀತೆಯಲ್ಲಿ ಕೇವಲ ಶಬ್ದಗಳು ಮಾತ್ರವಲ್ಲ. ಅವು ಮಂತ್ರಗಳಾಗಿವೆ. ಇಂಥ ಮಂತ್ರಗಳ ಸ್ವಾರಸ್ಯವನ್ನೂ ಅಂತರಂಗವನ್ನೂ ಆರು ಅಧ್ಯಾಯಗಳಲ್ಲಿ ಅರ್ಜುನನಿಗೆ ತಿಳುಹಿ ತನ್ನ ಮನೋಗತವನ್ನು ಅವನು ಪೂರ್ಣ ಗ್ರಹಿಸುವಂತೆ ಅವನನ್ನು ಸುಬುದ್ಧನನ್ನಾಗಿ ಶ್ರೀಕೃಷ್ಣನು ಮಾಡಿದನು. ಯೋಗವೇ ಸಾಧನವು. ಶ್ರೀಕೃಷ್ಣಪುರುಷೋತ್ತಮನೇ ಮನುಷ್ಯಪ್ರಾಣಿಗೆ ಈ ಸೃಷ್ಟಿಯಲ್ಲಿ ಕೊನೆಯ ಸಾಧ್ಯವಾಗಿರುವನು. ಇದೇ ಬುದ್ಧಿಯೋಗಶಾಸ್ತ್ರದ ಸಿದ್ಧಾಂತ ಸೂತ್ರವಾಗಿದೆ. ಇದನ್ನು ಗ್ರಹಿಸಲಿಕ್ಕೆ 'ವಿಜ್ಞಾನ' ಮೂಲಕ ಸಂಗತಿಗಳನ್ನು ಬುದ್ಧಿಯು ಸಾಧಿಸಬೇಕು. ಈ 'ವಿಜ್ಞಾನ' ವೆಂದರೆ ಪುರುಷೋತ್ತಮನ ವಿಷಯದ ಮನುಷ್ಯನ ಆತ್ಮಸ್ವಭಾವದ ಅನುಭವಕ್ಕೆ ಬರುವ ಯಥಾರ್ಥಜ್ಞಾನವು. ಈ 'ವಿಜ್ಞಾನ' ವನ್ನು ಸಾಧಿಸದೆ ಸೃಷ್ಟಿಸಂಬಂಧದ ಸಾಂಖ್ಯ ಪದ್ಧತಿಯ ಒಣಜ್ಞಾನವು ಎಂದಿಗೂ ಸಮರ್ಪಕವಾಗಲಾರದು. ಶ್ರೀಕೃಷ್ಣನು ಗೀತೆಯಲ್ಲಿ 'ವಿಜ್ಞಾನ' ಸಹಿತವಾಗಿ ಜ್ಞಾನವನ್ನು ಇದಕ್ಕಾಗಿಯೇ ಬೋಧಿಸಿರುವನು. ಈ ವಿಜ್ಞಾನಕ್ಕೆ ಮನುಷ್ಯ ಸ್ವಭಾವದಲ್ಲಿ ಶ್ರದ್ಧೆಯೇ

ಬೀಜವಾಗಿದೆ. ಶ್ರದ್ಧೆಯಿಂದ ಭಕ್ತಿಯೂ ಭಕ್ತಿಯಿಂದ ಯೋಗವೂ ಯೋಗದಿಂದ ಪುರುಷೋತ್ತಮನ ವಿಷಯಕ ವಿಜ್ಞಾನವೂ ಪರಿಣಮಿಸುವವು. ಹೀಗೆ ಶ್ರದ್ಧೆ ಭಕ್ತಿ ಯೋಗ ವಿಜ್ಞಾನಗಳು ದೊರೆಯುತ್ತ ಹೋದಂತೆ ನಿಜವಾದ ಸುಖ, ಬಂಧವಿಮೋಚನೆ, ಬ್ರಾಹ್ಮೀಸ್ಥಿತಿ ಬ್ರಹ್ಮನಿರ್ವಾಣವೆಂಬವು ಮನುಷ್ಯನಿಗೆ ಕ್ರಮೇಣ ಸಾಧಿಸುವವು. ಅವನು ಸೃಷ್ಟಿಯಲ್ಲಿ ಸಾಧಿಸಬೇಕಾದ ಪರಮಧ್ಯೇಯಗಳು ಇವೇ.

**ಏಳನೆಯ** ಅಧ್ಯಾಯದಿಂದ **ಹನ್ನೆರಡನೆಯ** ಅಧ್ಯಾಯದ ವರೆಗೆ ಮೇಲೆ ಹೇಳಿದ ವಿಜ್ಞಾನ ವಿಷಯವನ್ನು ಪರಿಪರಿಯಾಗಿ ಅರ್ಜುನನಿಗೆ ತಿಳಿಯ ಹೇಳಿ ಅವನ ಆ ವಿಷಯದ ಸಂದೇಹಗಳನ್ನು ಹೋಗಲಾಡಿಸಿ ಕೋರಿಕೆಗಳನ್ನು ನೀಡಿ ಶ್ರೀಕೃಷ್ಣನು ಅವನನ್ನು ಜ್ಞಾನ ವಿಜ್ಞಾನ ಪರಿಪೂರ್ಣನನ್ನಾಗಿ ಮಾಡಿರುವನು.

ವೇದಾಂತದ ಪಾರಿಭಾಷಿಕ ಶಬ್ದಗಳನ್ನು ಬಳಸದೆಯೇ ಹೊಸ ಪಾರಿಭಾಷೆಯನ್ನುಂಟುಮಾಡಿ ಸರ್ವಸಾಧಾರಣ ವಿವೇಕ ಬುದ್ಧಿಯಿಂದ ಸಾಮಾನ್ಯಮನುಷ್ಯನು ಗ್ರಹಿಸುವಂತೆ ಈ ವರೆಗಿನ ಗೀತಾ ನಿರೂಪಣೆಯನ್ನು ಶ್ರೀಕೃಷ್ಣನು ಸಾಗಿಸಿರುವನು. ಅದೇ ವಿಷಯವನ್ನು ವಿಜ್ಞಾನ ದೃಷ್ಟಿಯಿಂದ ಆದರೆ ಆ ಕಾಲದ ವೇದಾಂತ ಶಾಸ್ತ್ರದ ಪರಿಭಾಷೆಯಲ್ಲಿ **ಹದಿಮೂರನೆಯ** ಮತ್ತು **ಹದಿನಾಲ್ಕನೆಯ** ಅಧ್ಯಾಯಗಳಲ್ಲಿ ಹೇಳಿದೆ.

**ಹದಿನೈದನೆಯ** ಅಧ್ಯಾಯದಲ್ಲಿ ಹಿಂದಿನ ಅಧ್ಯಾಯಗಳಲ್ಲಿ ಬುದ್ಧಿಯೋಗವೆಂದೂ ಅಧ್ಯಾತ್ಮವೆಂದೂ ಬೋಧಿಸಿದ ಜ್ಞಾನ ವಿಜ್ಞಾನಗಳ ಸಾರವನ್ನು ಸಂಕ್ಷೇಪವಾಗಿ ವರ್ಣಿಸಿ ಅದು ಎಲ್ಲ ಶಾಸ್ತ್ರಗಳನ್ನು ಮೀರಿದ ಶಾಸ್ತ್ರವೆಂದೂ ಅದಕ್ಕೆ ವಿಷಯನಾದ ಪುರುಷೋತ್ತಮನನ್ನು ತತ್ವತಃ ಗ್ರಹಿಸುವದೇ ಜ್ಞಾನದ ಪರಮಾವಧಿಯೆಂದೂ ಶ್ರೀಕೃಷ್ಣನು ನಿಷ್ಕರ್ಷೆಯಿಂದ ಹೇಳಿರುವನು.

ಗೀತೆಯ ರಾಜಮಾರ್ಗವನ್ನು ಹೀಗೆ ಈ ವರೆಗೆ ಹೇಳಿ ಮುಗಿಸಿ **ಹದಿನಾರನೆಯ** ಅಧ್ಯಾಯದಲ್ಲಿ ಈ ರಾಜ ಮಾರ್ಗವನ್ನು ಬಿಟ್ಟು ಹಾದಿ ತಪ್ಪಿ ತಬ್ಬಲಿಗಳಾಗಿ ತಿರುಗುವ ಜೀವರ ಜೀವನ ವಿಷಯವನ್ನು ವರ್ಣಿಸಿದೆ.

ಶ್ರೀಕೃಷ್ಣನು ವಿವರಿಸಬೇಕಾಗಿದ್ದ ಗೀತಾಶಾಸ್ತ್ರವು ಇಲ್ಲಿಗೆ ಮುಗಿಯಿತೆಂದು ಹೇಳಬಹುದು.

**ಹದಿನೇಳನೆಯ** ಮತ್ತು **ಹದಿನೆಂಟನೆಯ** ಅಧ್ಯಾಯಗಳಲ್ಲಿ ಅರ್ಜುನನು ಕೇಳಿದ ಕೊನೆಯ ಸಂದೇಹಗಳಿಗೆ ಸಮಾಧಾನವನ್ನು ಹೇಳಿ ಅವನನ್ನು ತೃಪ್ತಿಪಡಿಸಿದೆ. ಅನಂತರ ಗೀತೆಯ ಸಮಗ್ರ ಬೋಧಾಮೃತದ ಪ್ರಮಾಣಭೂತ ನಿಷ್ಕರ್ಷೆಯನ್ನೂ ತದನುರೋಧವಾಗಿ ಅರ್ಜುನನು ಮಾಡಬೇಕಾಗಿದ್ದ ಕರ್ತವ್ಯವನ್ನೂ ಹೇಳಿ ಅವನ ಹೃದಯವನ್ನು ಸೋಂಕುವ ಆಪ್ತ ಪ್ರೇಮದ ರಸಭರಿತ ಶಬ್ದಗಳಿಂದ ಗೀತೋಪದೇಶದ ಉಪಸಂಹಾರವನ್ನು ಶ್ರೀಕೃಷ್ಣನು ಮಾಡಿರುವನು.

ಕೊನೆಯದೊಂದು ಪ್ರಾರ್ಥನೆ. ಗೀತೆಯ ಗುರಿಯನ್ನು ಹೊಸ ದೃಷ್ಟಿಯಿಂದ ಪರಿಶೋಧಿಸಿ ಅದರ ಹುರುಳನ್ನು ಜನತೆಗೆ ಅರ್ಪಿಸುವ ಪ್ರಯತ್ನದಲ್ಲಿ ಪೂರ್ವದ ಕೆಲವು ಕಲ್ಪನೆಗಳನ್ನು ಅಪರಿಹಾರ್ಯವಾಗಿಯೇ ಟೀಕಿಸಬೇಕಾಯಿತು. ಹೀಗೆ ಮಾಡುವಾಗ ಸಂಯಮನವನ್ನು ನಾವು ಮರೆತಿಲ್ಲ. ಆದರೂ ಪೂರ್ವದ ಅಧಿಕಾರ ಸಂಪನ್ನರಾದ ಬರೆಹಗಾರರಿಗೆ ಕ್ಷಮಾಪಣೆಗಳನ್ನು ಅರ್ಪಿಸುವದು ನಮ್ಮ ಕರ್ತವ್ಯವು. ಪರಮತ ಖಂಡನೆಯಂಥ ಅಪ್ರಿಯ ಪ್ರಸಂಗಗಳಿಗೆ ಅವರು ಅಪರಿಚಿತರಲ್ಲ. ಅವುಗಳಲ್ಲಿ ಆಗ್ರಹವು ಅನಿವಾರ್ಯವು. ಸತ್ಯನಿಷ್ಠೆಗೆ ಆಗ್ರಹವೇ ಜೀವಾಳವಲ್ಲವೇ? ಪರಮತ ಖಂಡನೆಯಲ್ಲಿ ಅವರು ತೋರಿಸಿದ ಆತ್ಮಿಕ ಮತ್ತು ಬೌದ್ಧಿಕ ಪ್ರಚಂಡ ಶಕ್ತಿಯು ಸಾಮಾನ್ಯನಾದ ಪ್ರಸ್ತುತ ಗ್ರಂಥಕರ್ತನಲ್ಲಿಲ್ಲ. ಅವನು ಜನವರಿಯೆ ಪಂಗುವು. ಅವನ ಸತ್ಯಾನ್ವೇಷಣೆಯ ಅಲ್ಪ ಪ್ರಯತ್ನವನ್ನೂ ಅವನೊಳಗಿನ ಸತ್ಯನಿಷ್ಠೆಯ ಅಲ್ಪ ಆಗ್ರಹವನ್ನೂ ಈ ಪುಣ್ಯಾಚರಿತರೂ ಪುಣ್ಯಪ್ರಭಾವಿಗಳೂ ತಮ್ಮ ಸತ್ಯದ ಮೇಲಿನ ಪ್ರೀತಿಗಾಗಿಯೇ ಕ್ಷಮಿಸುವರೆಂದು ವಿಶ್ವಾಸ ಉಂಟು. ಅವರ ಅನುಯಾಯಿಗಳಲ್ಲಿಯೂ ಅದೇ ಭಿಕ್ಷೆಯನ್ನು ಅವನು ಕೈಯೊಡ್ಡಿ ಬೇಡಿಕೊಳ್ಳುವನು.

**ಶ್ರೀಕೃಷ್ಣಾರ್ಪಣಮಸ್ತು.**

———

—ಓಂ—

# ಶ್ರೀಮದ್ಭಗವದ್ಗೀತೆ

## ಮೊದಲನೆಯ ಅಧ್ಯಾಯವು.

**ಅವತರಣಿಕೆ—**

ಶ್ರೀಭಗವದ್ಗೀತೆಯ ಮೊದಲನೆಯ ಅಧ್ಯಾಯದಿಂದ ಮಹಾಭಾರತಕ್ಕೂ ಗೀತೆಗೂ ಇರುವ ಸಂಬಂಧವು ಗೊತ್ತಾಗುವದು. ಈ ಅಧ್ಯಾಯವು ಗೀತೆಗಿಂತ ಮಹಾಭಾರತಕ್ಕೇ ಹೆಚ್ಚಿಗೆ ಸಂಬಂಧಿಸಿದೆ. ಏಕೆಂದರೆ ಯಾವ ಅಧ್ಯಾತ್ಮಶಾಸ್ತ್ರದ ತತ್ವಗಳಿಗಾಗಿ ಭಗವದ್ಗೀತೆಯು ವಿಖ್ಯಾತಿಯನ್ನೂ ಜಗನ್ಮಾನ್ಯತೆಯನ್ನೂ ಪಡೆದಿರುವದೋ ಆ ತತ್ವಗಳು ಈ ಅಧ್ಯಾಯದಲ್ಲಿ ಇಲ್ಲ. ಮಹಾಭಾರತದ ಕಥಾಪ್ರವಾಹದಲ್ಲಿ, ಸಂಗ್ರಾಮಕ್ಕಾಗಿ ನೆರೆದ ಕೌರವಪಾಂಡವರ ಸೈನ್ಯದ ವರ್ಣನೆಯೂ ಅರ್ಜುನನು ಆ ಪ್ರಸಂಗದಲ್ಲಿ ಹೊಂದಿದ ವಿಷಾದದ ವರ್ಣನೆಯೂ ಈ ಅಧ್ಯಾಯದಲ್ಲಿದ್ದು, ಅವು ಮಹಾಭಾರತದ ಕಥಾಭಾಗಗಳೆನಿಸುವವೇ ಹೊರತು ಗೀತೆಗೆ ಆವಶ್ಯಕ ಅಂಶಗಳಾಗಲಾರವು. ಇನ್ನು ಈ ವರ್ಣನೆಗಳನ್ನೇ ಯಾರಾದರೂ ತತ್ವಶೋಧಕ ದೃಷ್ಟಿಯಿಂದ ಪರಿಕ್ಷಿಸಿದರೆ ಪ್ರಯತ್ನವು ನಿಷ್ಫಲವಾದೀತೆಂದು ನಾವು ಹೇಳುವದಿಲ್ಲ. ಮಾನಸಶಾಸ್ತ್ರವನ್ನು ಇಲ್ಲವೆ ನೀತಿಶಾಸ್ತ್ರವನ್ನು ಅನುಲಕ್ಷಿಸಿ ಈ ವರ್ಣನೆಗಳ ಸಂಬಂಧವಾಗಿ ಮಾಡಿದ ಸೂಕ್ಷ್ಮವೂ ಗಹನವೂ ಆದ ಅನೇಕ ಊಹಾಪೋಹಗಳನ್ನು ನಾವು ನೋಡಿರುವೆವು. ಆದರೆ ಈ ಊಹಾಪೋಹಗಳೆಲ್ಲ ಗೀತೆಯ ತತ್ವಜ್ಞಾನಕ್ಕೆ ಅವಶ್ಯವೆಂದು ನಮಗೆ

ತೋರಲಿಲ್ಲ. ತಾಯಿತಸವನ್ನು ತಳೆದು ಭಗವದ್ಗೀತೆಯಂಥ ನಿರುಪಮ ಗ್ರಂಥರತ್ನವನ್ನು ತನ್ನಲ್ಲಿಯೇ ಹುದುಗಿಸಿಕೊಂಡು ಮಾನವ ಜಾತಿಗೆ ಅದನ್ನು ಇತ್ತುದಕ್ಕಾಗಿ ಮಹಾಭಾರತಕ್ಕೆ ಯಾರು ತಾನೆ ಚಿರಋಣಿಯಾಗಲಾರರು? ತಾಯಿಯ ಹೊಟ್ಟೆಯಲ್ಲಿ ಗರ್ಭವು ಏಕಜೀವವಾಗಿರುವಾಗ ಎರಡೆಂಬ ಕಲ್ಪನೆಗೆ ಎಡೆಯಿಲ್ಲದಿರುವದು ನಿಜ. ಆದರೆ ಹುಟ್ಟಿ-ಬೆಳೆದು ಪೌಢಳಾಗಿ ಸ್ವತಂತ್ರ ಬಾಳುವೆಗೆ ಅನುರೂಪಳಾದ ಬಾಲೆಯು ತನ್ನ ಪ್ರಪಂಚವನ್ನು ಬೇರೆಯೆಂದು ಎಣಿಸುವದು ತಪ್ಪಲ್ಲ. ಇದು ನಿಸರ್ಗನಿಯಮವು. ನಾವು ಹೀಗೆ ಹೇಳುವದಕ್ಕೆ ಭಗವದ್ಗೀತೆಯು ಮಹಾಭಾರತದಿಂದ ಈಗ ಪ್ರತ್ಯೇಕವಾದುದಷ್ಟೇ ಕಾರಣವಲ್ಲ. ಗೀತೆಯ ಹುಟ್ಟು ಮಹಾಭಾರತಕ್ಕಿಂತ ಮುಂಚಿನದು· ಮಹಾಭಾರತಕ್ಕಿಂತ ಮೊದಲೇ ಗೀತೆಯು ಎಷ್ಟೋ ಶತಮಾನಗಳಿಂದ ಪ್ರಚಾರದಲ್ಲಿತ್ತೆಂದು ಹೇಳಲಿಕ್ಕೆ ಅಭ್ಯಂತರವಿದ್ದಂತೆ ತೋರುವದಿಲ್ಲ. ಅದು ಮಹಾಭಾರತವನ್ನು ಸೇರಿ ಮತ್ತೆ ಬೇರೆಯಾದುದರಲ್ಲಿ ಯದೃಚ್ಛೆಯ ಪ್ರಾಬಲ್ಯವು ಉಂಟೆಂದು ನಮ್ಮ ನಂಬುಗೆ. ಕಾರಣವು ಏನೇ ಇರಲಿ, ಅದು ಬೇರೆಯಾದ ಬಳಿಕ, ಅದರ ಚರಿತ್ರೆಯು ಪ್ರತ್ಯೇಕವಾಗಿ ಮಿತಿಮೀರಿ ಮುಂದುವರೆದಿರುವದು. ಹಿಂದುಳಿದ ಮಹಾಭಾರತವನ್ನೇ ಅದು ಈಗಲೂ ಅನುಸರಿಸಬೇಕೆಂಬ ಆಗ್ರಹವು ಅಪ್ರಾಸಂಗಿಕವು. ಇದೂ ಅಲ್ಲದೆ ಗೀತೆಯ ಮೇಲೆ ಮಹಾಭಾರತದ ಛಾಯೆಯು ಹೀಗೆ ಬೀಳುವದರಿಂದ ಗೀತೆಯ ಸ್ವತಂತ್ರ ವಿಚಾರಗಳು ಅಂದಗೆಡುವವೆಂದು ನಮಗೆ ತೋರುವದು. ಇದು ಯಥಾರ್ಥವೋ ಅಲ್ಲವೋ ಎಂಬುದನ್ನು ಸುಜ್ಞರಾದ ವಾಚಕರು ಮುಂದೆ ಬರುವ ವಿಷಯಗಳನ್ನೆಲ್ಲ ಪರಾಮರ್ಶಿಸಿ ಕಂಡುಕೊಳ್ಳಬಹುದು.

ಧೃತರಾಷ್ಟ್ರ ಉವಾಚ—

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥೧॥**

ಧರ್ಮಕ್ಷೇತ್ರವೆನಿಸಿದ ಕುರುಕ್ಷೇತ್ರವೆಂಬ ರಣಭೂಮಿಯ ಮೇಲೆ ಯುದ್ಧ ಮಾಡುವ ಲವಲವಿಕೆಯಿಂದ ಕೂಡಿರುವ ನನ್ನ ಮಕ್ಕಳೂ ಪಾಂಡವರೂ ಏನು ಮಾಡಿದರೆಂಬದನ್ನು, ಸಂಜಯಾ, ನನಗೆ ಹೇಳು.

ಈ ಶ್ಲೋಕದಲ್ಲಿ ಧರ್ಮಕ್ಷೇತ್ರ ಕುರುಕ್ಷೇತ್ರಗಳೆಂಬ ಶಬ್ದಗಳಿಗೆ ಅನೇಕ ವಿದ್ವಾಂಸರು ಲಾಕ್ಷಣಿಕ ಅರ್ಥವನ್ನು ಹೇಳುವರು. ಮನುಷ್ಯನ ಶರೀರವೇ ಆ ಕ್ಷೇತ್ರವೆಂದೂ ಆ ಶರೀರದಲ್ಲಿ ಹೋರಾಡುವ ದೈವಾಸುರ ವೃತ್ತಿಗಳೇ ಪಾಂಡವ ಕೌರವ ಸೈನ್ಯಗಳೆಂದೂ ಊಹಿಸುವದುಂಟು. ಹೀಗೆ ತಿಳಿದರೆ ಭಗವದ್ಗೀತೆಯ ಈ ಮೊದಲನೆಯ ಶ್ಲೋಕವು ಬಹು ಗಂಭೀರ ವಾಗಿಯೂ ತತ್ವಪೂರ್ಣವಾಗಿಯೂ ಕಾಣಿಸುವದು. ಗೀತೆಯಲ್ಲಾದರೂ ಮುಂದೆ ದೈವಾಸುರ ವೃತ್ತಿಗಳ ವರ್ಣನೆಯು ವಿಶೇಷವಾಗಿ ಬಂದಿರುವದ ರಿಂದ ಈ ಶ್ಲೋಕಕ್ಕೆ ಈ ಲಾಕ್ಷಣಿಕ ಅರ್ಥವೇ ಸರಿಯಾದುದೆಂದು ಸಕೃದ್ದರ್ಶನಕ್ಕೆ ತೋರುವದೂ ಸಹಜವು. ಆದರೆ ಹೀಗೆ ಅರ್ಥ ಮಾಡುವದ ರಿಂದ ಪ್ರಶ್ನೆ ಕೇಳುವ ಧೃತರಾಷ್ಟ್ರನೂ ಉತ್ತರವನ್ನು ಹೇಳುವ ಸಂಜಯನೂ ಕಾಲ್ಪನಿಕ ವ್ಯಕ್ತಿಗಳಾಗುವರು. ಪ್ರಶ್ನದ ಪ್ರಸಂಗವೂ ಕಾಲ್ಪನಿಕವಾಗು ವದು. ಅರ್ಥಗಾಂಭೀರ್ಯವನ್ನು ಸಾಧಿಸುವದಕ್ಕೆ ಮೇಲೆ ಕಾಣಿಸಿದ ಪ್ರಮೇಯಗಳೆಲ್ಲವನ್ನೂ ಒಪ್ಪಿಕೊಳ್ಳಬಹುದು. ಆದರೆ ಈ ವಿಚಾರಸರಣಿಯಿಂದ ಅರ್ಜುನ ಶ್ರೀಕೃಷ್ಣರೂ ಕಾಲ್ಪನಿಕ ವ್ಯಕ್ತಿಗಳಾಗಿಹೋಗುವರೆಂಬುದನ್ನು ಮರೆಯಲಾಗದು. ಧೃತರಾಷ್ಟ್ರ ಸಂಜಯರು ಕಾಲ್ಪನಿಕ ವ್ಯಕ್ತಿಗಳೆಂದು ಒಪ್ಪುವಷ್ಟು ಕೃಷ್ಣಾರ್ಜುನರು ಕಾಲ್ಪನಿಕ ವ್ಯಕ್ತಿಗಳೆಂದು ಒಪ್ಪುವದು ಸುಲಭವಲ್ಲ. ಗೀತೆಯ ಅಲೌಕಿಕ ತತ್ವಜ್ಞಾನವೇ ಶ್ರೀಕೃಷ್ಣನ ವ್ಯಕ್ತಿತ್ವವನ್ನು (೧೦-೧೪) ನಿರ್ವಿವಾದವಾಗಿ ಸ್ಥಾಪಿಸಲಿಕ್ಕೆ ಸಾಕು.

ಹೀಗೆ ಅರ್ಥವಿಶೇಷವನ್ನು ಸಾಧಿಸುವ ಮೋಹಕ್ಕೊಳಗಾಗಿ ಗೀತೆಯ ಶ್ಲೋಕಗಳ ಅರ್ಥವನ್ನು ಮಾಡುವಾಗ ಪ್ರಸಂಗದ ಔಚಿತ್ಯವನ್ನೂ ಗೀತೆ ಯೊಳಗಿನ ತತ್ವಬೋಧನೆಯ ಮರ್ಯಾದೆಯನ್ನೂ ಲೇಖಕರು ಸಾಮಾನ್ಯ ವಾಗಿ ಮೀರುವದುಂಟು. ಇಂಥ ಸಂದರ್ಭಗಳಲ್ಲಿ ಓದುಗರು ಜಾಗರೂಕ ರಾಗಿರದಿದ್ದರೆ ಗೀತೆಯ ಮೂಲ ಉದ್ದೇಶವು ಅವರಿಗೆ ತಿಳಿಯದೆ ಹೋಗು ವದು.

ಸಂಜಯ ಉವಾಚ—

**ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥೨॥**

ಆ ವೇಳೆಯಲ್ಲಿ ಪಾಂಡವರ ಸೈನ್ಯವು ವ್ಯೂಹವಾಗಿ ನಿಂತಿರುವದನ್ನು ನೋಡಿ ದುರ್ಯೋಧನನು ದ್ರೋಣಾಚಾರ್ಯರ ಸಮೀಪಕ್ಕೆ ಹೋಗಿ ಹೀಗೆ ಹೇಳಿದನು :—

**ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಂ।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥೩॥**

ಗುರುಗಳೇ, ದ್ರುಪದಪುತ್ರನೂ ನಿಮ್ಮ ಶಿಷ್ಯನೂ ಬುದ್ಧಿಶಾಲಿಯೂ ಆಗಿರುವ ಧೃಷ್ಟದ್ಯುಮ್ನನು ವ್ಯೂಢವಾಗಿ ರಚಿಸಿರುವ ಪಾಂಡವರ ಈ ದೊಡ್ಡ ಸೈನ್ಯವನ್ನು ನೋಡಿರಿ.

**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ ।**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥೪॥**

ಇಲ್ಲಿ ಮಹಾಧನುರ್ಧಾರಿಗಳೂ ಯುದ್ಧದಲ್ಲಿ ಭೀಮಾರ್ಜುನರಿಗೆ ಸಮಾನರೂ ಆದ ಹಲವು ಜನ ವೀರರು, ಯುಯುಧಾನನು, ಸಾತ್ಯಕಿಯು, ವಿರಾಟನು, ಮಹಾರಥನಾದ ದ್ರುಪದನು,

**ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ ।**
**ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥೫॥**

ಧೃಷ್ಟಕೇತುವು, ಚೇಕಿತಾನನು, ವೀರ್ಯಶಾಲಿಯಾದ ಕಾಶಿರಾಜನು, ಪುರುಜಿತ್ತು, ಕುಂತಿಭೋಜನು ಮತ್ತು ನರಶ್ರೇಷ್ಠನಾದ ಶೈಬ್ಯನು,

**ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥೬॥**

ಹಾಗೆಯೇ ಪರಾಕ್ರಮಿಯಾದ ಯುಧಾಮನ್ಯು, ಬಲಶಾಲಿಯಾದ ಉತ್ತಮೌಜನು, ಸುಭದ್ರೆಯ ಮಗನಾದ ಅಭಿಮನ್ಯು ಮತ್ತು ದ್ರೌಪದಿಯ ಮಕ್ಕಳು ಇವರೆಲ್ಲರು ಮಹಾರಥಿಗಳಾಗಿರುವರು.

**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ॥ ೭ ॥**

ಎಲೈ ಬ್ರಾಹ್ಮಣಶ್ರೇಷ್ಠನೇ, ಇನ್ನು ನಮ್ಮ ಸೈನ್ಯದಲ್ಲಿ ಪ್ರಮುಖರಾದ ಸೇನಾನಾಯಕರ ಹೆಸರುಗಳನ್ನು ನಾನು ಹೇಳುವೆನು ಕೇಳು.

**ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ॥ ೮ ॥**

ನೀವು, ಭೀಷ್ಮನು, ಕರ್ಣನು, ಜಯಶೀಲನಾದ ಕೃಪನು, ಅಶ್ವತ್ಥಾಮನು, ವಿಕರ್ಣನು, ಸೋಮದತ್ತನ ಮಗನು (ಭೂರಿಶ್ರವಸ್ಸು).

**ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ ।**
**ನಾನಾ ಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥ ೯ ॥**

ಇನ್ನೂ ಅನೇಕ ಜನ ಶೂರರು ಅನೇಕ ಪ್ರಕಾರದ ಶಸ್ತ್ರಾಸ್ತ್ರಗಳಿಂದ ಕಾದುವವರು ನನಗಾಗಿ ಪ್ರಾಣದಾಸೆಯನ್ನು ತೊರೆದಿರುವರು. ಇವರೆಲ್ಲರೂ ಯುದ್ಧದಲ್ಲಿ ಪ್ರವೀಣರು.

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಂ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಂ ॥ ೧೦ ॥**

ಭೀಷ್ಮನ ಮೇಲ್ವಿಚಾರಣೆಯಲ್ಲಿದ್ದ ಈ ನಮ್ಮ ಸೈನ್ಯವು ಈ ಯುದ್ಧಕಾರ್ಯವನ್ನು ನೆರವೇರಿಸಲಿಕ್ಕೆ ಸಾಲದಂತೆಯೂ ಭೀಮನ ಮೇಲ್ವಿಚಾರಣೆಯಲ್ಲಿದ್ದ ಅವರ ಸೈನ್ಯವು ಸಾಕಾಗಿಯೂ ಇರುವದು.

ದುರ್ಯೋಧನನು ಹೀಗೆ ಹೇಳುವದಕ್ಕೆ ಕಾರಣವೇನೆಂದು ಚರ್ಚಿಸುವದುಂಟು. ಭೀಷ್ಮನು ಶಿಖಂಡಿಗಿದಿರಾಗಿ ಶಸ್ತ್ರವನ್ನು ಹಿಡಿಯಲಾರೆನೆಂಬ ಪ್ರತಿಜ್ಞೆಯನ್ನು ಮಾಡಿದ್ದರಿಂದ ತನ್ನ ಅಪರಿಮಿತವಾದ ಸೈನ್ಯದ ಸಾಮರ್ಥ್ಯವು ಕುಗ್ಗಿಹೋದಂತೆ ಅವನಿಗೆ ತೋರಿದುದು ಇದಕ್ಕೆ ಕಾರಣವಿರಬಹುದು. ಇದು ಮುಂದಿನ ಶ್ಲೋಕದಿಂದ ವ್ಯಕ್ತವಾಗುವದು.

ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।
ಭೀಷ್ಮಮೇವಾಭಿರಕ್ಷಂತು ಭವಂತಂ ಸರ್ವ ಏವ ಹಿ ॥೧೧॥

ಸೈನ್ಯದ ಪ್ರವೇಶದ್ವಾರಗಳಲ್ಲೆಲ್ಲ ನೇಮಿಸಿದಂತೆ ಅವರವರು ನಿಂತು ಕೊಂಡು ಭೀಷ್ಮರನ್ನು ಎಲ್ಲರೂ ಎಲ್ಲ ಕಡೆಯಿಂದಲೂ ರಕ್ಷಿಸಬೇಕು.

ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।
ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥೧೨॥

ಇಷ್ಟರಲ್ಲಿಯೇ ಆ ದುರ್ಯೋಧನನಿಗೆ ಸಂತೋಷವನ್ನುಂಟು ಮಾಡುವಂತೆ ಪ್ರತಾಪಶಾಲಿಯೂ ಕುರುಕುಲ ಪಿತಾಮಹನೂ ಆದ ಭೀಷ್ಮನು ಗಟ್ಟಿಯಾಗಿ ಸಿಂಹನಾದವನ್ನು ಮಾಡಿ ಶಂಖವನ್ನು ಊದಿದನು.

ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।
ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋऽಭವತ್ ॥೧೩॥

ಆ ಮೇಲೆ ಶಂಖ, ಭೇರಿ, ಪಣವ, ಆನಕ, ಗೋಮುಖ ಇವೇ ಮೊದ ಲಾದ ವಾದ್ಯಗಳು ಏಕಕಾಲದಲ್ಲಿ ಬಾರಿಸಲ್ಪಟ್ಟವು. ಒಟ್ಟುಗೂಡಿದ ಆ ಧ್ವನಿಯು ಪ್ರಚಂಡವಾಗಿ ಹಬ್ಬಿತು.

ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।
ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥೧೪॥

ಇಷ್ಟರಲ್ಲಿಯೇ, ಬಿಳಿಯ ಕುದುರೆಗಳನ್ನು ಹೂಡಿದ ದೊಡ್ಡ ರಥದಲ್ಲಿ ಕುಳಿತಿರುವ ಕೃಷ್ಣಾರ್ಜುನರು ತಮ್ಮ ದಿವ್ಯ ಶಂಖಗಳನ್ನು ಊದಿದರು.

ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।
ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥೧೫॥

ಶ್ರೀಕೃಷ್ಣನು ಪಾಂಚಜನ್ಯವನ್ನೂ ಅರ್ಜುನನು ದೇವದತ್ತವೆಂಬ ಶಂಖವನ್ನೂ ಪ್ರಚಂಡ ಕಾರ್ಯಗಳನ್ನು ಮಾಡುವ ಭೀಮಸೇನನು ಪೌಂಡ್ರವೆಂಬ ದೊಡ್ಡ ಶಂಖವನ್ನೂ ಊದಿದರು.

ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।
ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥ ೧೬ ॥

ಕುಂತೀಪುತ್ರನಾದ ಯುಧಿಷ್ಠಿರರಾಜನು ಅನಂತವಿಜಯವೆಂಬ ಶಂಖವನ್ನೂದಿದನು. ನಕುಲನು ಸುಘೋಷವೆಂಬ ಶಂಖವನ್ನೂ ಸಹದೇವನು ಮಣಿಪುಷ್ಪಕವೆಂಬ ಶಂಖವನ್ನೂ ಊದಿದರು.

ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥ ೧೭ ॥
ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।
ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ ಪೃಥಕ್ ॥ ೧೮ ॥

ಮಹಾಧನುರ್ಧಾರಿಯಾದ ಕಾಶಿರಾಜನು, ಮಹಾರಥಿಯಾದ ಶಿಖಂಡಿಯು, ಧೃಷ್ಟದ್ಯುಮ್ನನು, ವಿರಾಟನು, ಪರಾಜಯವನ್ನರಿಯದ ಸಾತ್ಯಕಿಯು, ದ್ರುಪದರಾಜನು, ದ್ರೌಪದಿಯ ಪುತ್ರರು, ಮಹಾಬಾಹುವಾದ ಅಭಿಮನ್ಯುವು ಇವರೆಲ್ಲರೂ ಎಲೌ ಧೃತರಾಷ್ಟ್ರನೇ, ತಮ್ಮ ತಮ್ಮ ಶಂಖಗಳನ್ನು ಊದಿದರು.

ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।
ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥ ೧೯ ॥

ಒಟ್ಟುಗೂಡಿದ ಆ ಮಹಾಘೋಷವು ಭೂವ್ಯೋಮಾಕಾಶಗಳಲ್ಲೆಲ್ಲ ನಾದ ವಿಡುಗಿಸಿ ಕೌರವರ ಹೃದಯಗಳನ್ನು ಬಿರಿಯಿಸಿತು.

ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥ ೨೦ ॥

**ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।**

ಅರ್ಜುನ ಉವಾಚ—

**ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥ ೨೧ ॥**

ಎಲೈ ಧೃತರಾಷ್ಟ್ರರಾಜನೇ, ಆಗ ಯುದ್ಧರಂಗದಲ್ಲಿ ಸನ್ನದ್ಧರಾಗಿ ನಿಂತ ಕೌರವರನ್ನು ಕಪಿಧ್ವಜನಾದ ಅರ್ಜುನನು ನೋಡಿ, ತನ್ನ ಬಿಲ್ಲಿಗೆ ಹೆದೆಯೇರಿಸಿ, ಶ್ರೀಕೃಷ್ಣನನ್ನು ಕುರಿತು ಇಂತು ನುಡಿದನು.

**ಯಾವದೇತಾನ್ನಿರೀಕ್ಷ್ಯೇಽಹಂ ಯೋದ್ಧುಕಾಮಾನವಸ್ಥಿತಾನ್ ।**
**ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥ ೨೨ ॥**

ಯುದ್ಧಾಪೇಕ್ಷೆಯುಳ್ಳವರಾಗಿ ನಿಂತಿರುವ ಇವರನ್ನೆಲ್ಲ ನಾನು ನೋಡುವೆನು. ರಣದಲ್ಲಿ ಯಾರೊಡನೆ ಯುದ್ಧ ಮಾಡಬೇಕಾಗಿರುವದೋ ಅವರನ್ನೂ ನೋಡುವೆನು.

**ಯೋತ್ಸ್ಯಮಾನಾನವೇಕ್ಷ್ಯೇಽಹಂ ಯ ಏತೇಽತ್ರ ಸಮಾಗತಾಃ ।**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥ ೨೩ ॥**

ದುರ್ಬುದ್ಧಿಯಾದ ದುರ್ಯೋಧನನಿಗೆ ಯುದ್ಧದಲ್ಲಿ ಹಿತವನ್ನು ಮಾಡಬೇಕೆಂದು ಇಲ್ಲಿ ಒಟ್ಟುಗೂಡಿಸಿರುವ ಯೋದ್ಧರನ್ನು ನಾನು ನೋಡುವೆನು.

ಸಂಜಯ ಉವಾಚ—

**ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾರಥೋತ್ತಮಮ್ ॥ ೨೪ ॥**
**ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಂ ।**
**ಉವಾಚ ಪಾರ್ಥ ಪಶ್ಯೈತಾನ್ಸಮವೇತಾನ್ ಕುರೂನಿತಿ ॥ ೨೫ ॥**

ಧೃತರಾಷ್ಟ್ರರಾಜನೇ ಕೇಳು, ಅರ್ಜುನನು ಹೀಗೆ ಶ್ರೀ ಕೃಷ್ಣನಿಗೆ ಹೇಳಿದೊಡನೆಯೇ ಶ್ರೀಕೃಷ್ಣನು ಉತ್ತಮವಾದ ರಥವನ್ನು ಭೀಷ್ಮ ದ್ರೋಣಾದಿಗಳಿಗೂ ಎಲ್ಲ ಅರಸರಿಗೂ ಇದಿರಾಗಿ ನಿಲ್ಲಿಸಿ ಇಂತೆಂದನು :— ಎಲೈ ಪಾರ್ಥನೇ, ಇಲ್ಲಿ ನೆರೆದ ಈ ಕೌರವರನ್ನು ನೋಡು.

**ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್ ।**
**ಆಚಾರ್ಯಾನ್ಮಾತುಲಾನ್ ಭ್ರಾತೄನ್ ಪುತ್ರಾನ್ ಪೌತ್ರಾನ್**
**ಸಖೀಂಸ್ತಥಾ ॥ ೨೬ ॥**

**ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ।**
**ತಾನ್ ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ ಬಂಧೂ**
**ನವಸ್ಥಿತಾನ್ ॥ ೨೭ ॥**

**ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ।**

ಅರ್ಜುನ ಉವಾಚ—

**ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಂ ॥೨೮॥**

ಆ ರಣಾಂಗಣದಲ್ಲಿ ಎರಡು ಸೈನ್ಯಗಳಲ್ಲಿಯೂ ನೆರೆದ ಹಿರಿಯರನ್ನೂ ಮಾವಂದಿರನ್ನೂ ಸ್ನೇಹಿತರನ್ನೂ ಅರ್ಜುನನು ನೋಡಿದನು. ಬಾಂಧವರೆಲ್ಲರು ಹೀಗೆ ಸಿದ್ಧರಾದುದನ್ನು ನೋಡಿ ಖಿನ್ನನಾಗಿ ಪರಮಕಾರುಣ್ಯದಿಂದ ಅವನು ಇಂತು ನುಡಿದನು :—ಎಲೈ ಕೃಷ್ಣಾ, ಯುದ್ಧಕ್ಕೆ ಉತ್ಸುಕರಾಗಿ ನಿಂತಿರುವ ಈ ಸ್ವಜನಗನ್ನು ನೋಡಿ,

**ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ।**
**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥ ೨೯ ॥**
**ಗಾಂಡೀವಂ ಸ್ರಂಸತೇ ಹಸ್ತಾತ್ ತ್ವಕ್ಚೈವ ಪರಿದಹ್ಯತೇ ।**
**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥ ೩೦ ॥**

ನನ್ನ ಅವಯವಗಳು ಶಿಥಿಲವಾಗುತ್ತಿರುವವು; ಬಾಯಿ ಒಣಗುತ್ತಲಿರುವದು; ಮೈಯಲ್ಲಿ ನಡುಗು ಹುಟ್ಟಿದೆ; ರೋಮಾಂಚಗಳು ಎದ್ದಿವೆ; ಕೈಯಿಂದ ಗಾಂಡೀವಧನುಸ್ಸು ಜಾರಿ ಬೀಳುತ್ತಲಿದೆ; ಮೈಯಲ್ಲಿ ದಾಹವಾಗುತ್ತಲಿದೆ; ನಿಲ್ಲಲು ನನಗೆ ತ್ರಾಣವಿಲ್ಲದಾಗಿದೆ; ನನ್ನ ಮನಸ್ಸು ಭ್ರಮಣಗೊಳ್ಳುವದೋ ಎಂಬಂತಿದೆ.

**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ।**
**ನ ಚ ಶ್ರೇಯೋನುಪಶ್ಯಾಮಿ ಹತ್ವಾ ಸ್ವಜನಮಾಹವೇ ॥ ೩೧ ॥**

ಎಲೈ ಕೇಶವನೇ, ನನ್ನ ಕಣ್ಣಿಗೆ ದುಶ್ಚಿಹ್ನಗಳು ಬೀಳುತ್ತಲಿವೆ; ಯುದ್ಧದಲ್ಲಿ ಸ್ವಜನರನ್ನು ಕೊಲ್ಲುವದರಿಂದ ಶ್ರೇಯವು ಉಂಟಾದೀತೆಂದು ನನಗೆ ಕಾಣಲೊಲ್ಲದು.

**ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।**
**ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ॥೩೨॥**

ಎಲೈ ಕೃಷ್ಣಾ, ಜಯವನ್ನೂ ರಾಜ್ಯವನ್ನೂ ಸುಖಗಳನ್ನೂ ನಾನು ಅಪೇಕ್ಷಿಸುವದಿಲ್ಲ. ಎಲೈ ಗೋವಿಂದನೇ, ರಾಜ್ಯದಿಂದಲೂ ಭೋಗಗಳಿಂದಲೂ ಹೆಚ್ಚೇನು, ಈ ಜೀವಿತದಿಂದಲೂ ಪ್ರಯೋಜನವೇನು?

**ಯೇಷಾಮರ್ಥೇ ಕಾಂಕ್ಷಿತನ್ನೋ ರಾಜ್ಯಂ ಭೋಗಾಸ್ಸುಖಾನಿ ಚ ।**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥ ೩೩ ॥**

ಯಾರಿಗಾಗಿ ನಾವು ಈ ರಾಜ್ಯವನ್ನೂ ಭೋಗಗಳನ್ನೂ ಸುಖಗಳನ್ನೂ ಬಯಸಬೇಕೋ, ಅವರೇ ತಮ್ಮ ಪ್ರಾಣಧನಾದಿಗಳ ಆಶೆಯನ್ನು ಬಿಟ್ಟು ಯುದ್ಧಕ್ಕೆ ನಿಂತಿರುವರು.

**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।**
**ಮಾತುಲಾಶ್ಶ್ವಶುರಾಃ ಪೌತ್ರಾಃ ಶ್ಯಾಲಾಸ್ಸಂಬಂಧಿನಸ್ತಥಾ ॥ ೩೪ ॥**
**ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥ ೩೫ ॥**

ಆಚಾರ್ಯರು, ತಂದೆಗಳು, ಮಕ್ಕಳು, ಹಾಗೆಯೆ ತಾತಂದಿರು, ಸೋದರಮಾವಂದಿರು, ಮಾವಂದಿರು, ಮೊಮ್ಮಕ್ಕಳು, ಭಾಮೈದುನಂದಿರು, ಸಂಬಂಧಿಗಳು ಇವರು ನನ್ನನ್ನು ಕೊಂದರೂ ಚಿಂತೆಯಿಲ್ಲ, ಎಲೈ ಮಧುಸೂದನನೇ, ನಾನು ಇವರನ್ನು ಕೊಲ್ಲಲಿಚ್ಛಿಸುವದಿಲ್ಲ. ಮೂರು

ಲೋಕಗಳ ಪ್ರಭುತ್ವಕ್ಕಾಗಿಯೂ ನಾನು ಇವರನ್ನು ಕೊಲ್ಲಲು ಒಲ್ಲೆನೆಂದಿರು ವಾಗ, ಇನ್ನು ಭೂಮಿಗಾಗಿ ಇವರನ್ನು ಕೊಲ್ಲಲೇ ?

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಸ್ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥ ೩೬ ॥**

ಎಲೈ ಜನಾರ್ದನನೇ, ಧೃತರಾಷ್ಟ್ರನ ಈ ಮಕ್ಕಳನ್ನು ಕೊಂದು ನಾವು ಸಾಧಿಸುವ ಹಿತವಾವುದು? ಘೋರ ಕರ್ಮಗಳನ್ನು ಮಾಡುವ ಇವರನ್ನು ಕೊಂದರೆ ಪಾಪವು ಮಾತ್ರ ತಟ್ಟುವದು.

**ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್।**
**ಸ್ವಜನಂ ಹಿ ಕಥಂ ಹತ್ವಾ ಸುಖಿನಸ್ಸ್ಯಾಮ ಮಾಧವ ॥ ೩೭ ॥**

ಆದುದರಿಂದ ಧೃತರಾಷ್ಟ್ರನ ಮಕ್ಕಳನ್ನೂ ನಮ್ಮ ಬಾಂಧವರಾದ ಕೌರವರನ್ನೂ ಕೊಲ್ಲುವದು ಉಚಿತವಲ್ಲ. ಎಲೈ ಮಾಧವನೇ, ಸ್ವಜನರನ್ನು ಕೊಂದು ನಾವು ಸುಖಿಗಳಾಗುವದು ಹೇಗೆ?

**ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಂ ॥ ೩೮ ॥**

ಲೋಭದಿಂದ ಮನಸ್ಸು ಕೆಟ್ಟುಹೋದ ಇವರು ಕುಲನಾಶದ ಮತ್ತು ಮಿತ್ರದ್ರೋಹದ ಪಾತಕಗಳನ್ನು ಕಾಣದೆ ಹೋದರೂ

**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥ ೩೯ ॥**

ಕುಲಕ್ಷಯದಿಂದಾಗುವ ದೋಷವನ್ನು ಕಾಣುವ ನಮಗೆ ಈ ಪಾಪ ದಿಂದ ಪರಾಙ್ಮುಖರಾಗಬೇಕೆಂದು ಹೇಗೆ ತಿಳಿಯದೆ ಹೋದೀತು ?

**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಸ್ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥ ೪೦ ॥**

ಎಲೈ ಜನಾರ್ದನನೇ! ಕುಲಕ್ಷಯದಿಂದ ಸನಾತನವಾದ ಕುಲಧರ್ಮಗಳು ನಾಶವಾಗಿ ಹೋಗುವವು. ಧರ್ಮವು ನಾಶವಾದರೆ ಕುಲವೆಲ್ಲ ಅಧರ್ಮದಲ್ಲಿ ಮುಳುಗುವದು.

**ಅಧರ್ಮಾಭಿಭವಾತ್ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥ ೪೧ ॥**

ಎಲೈ ಕೃಷ್ಣಾ! ಅಧರ್ಮವು ಹೆಚ್ಚಾದರೆ ಕುಲಸ್ತ್ರೀಯರು ದೂಷಿತರಾಗುವರು. ಸ್ತ್ರೀಯರು ದೂಷಿತರಾದರೆ ವರ್ಣಸಂಕರವು ಉಂಟಾಗುವದು.

**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥ ೪೨ ॥**

ಸಂಕರದಿಂದ ಕುಲಘಾತಕರಾದವರಿಗೂ ಅವರ ಕುಲಕ್ಕೂ ನರಕವಾಸವು ಪ್ರಾಪ್ತವಾಗುವದು ಮತ್ತು ಪಿಂಡೋದಕಗಳು ಲೋಪವಾಗಿ ಅವರ ಪಿತೃಗಳಿಗೆ ಅಧೋಗತಿಯುಂಟಾಗುವದು.

**ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥ ೪೩ ॥**

ಕುಲಘಾತಕರ ವರ್ಣಸಂಕರಕಾರಕ ದೋಷಗಳಿಂದ ಸನಾತನವಾದ ಜಾತಿಧರ್ಮಗಳೂ ಕುಲಧರ್ಮಗಳೂ ನಾಶವಾಗುವವು.

**ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥ ೪೪ ॥**

ಎಲೈ ಜನಾರ್ದನನೇ, ಕುಲಧರ್ಮಗಳನ್ನು ಕಳೆದುಕೊಂಡವರಿಗೆ ನರಕವಾಸವು ತಪ್ಪದೆಂದು ನಾವು ಕೇಳುವೆವು.

**ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಂ ।**
**ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥ ೪೫ ॥**

ಅಹಹಾ! ರಾಜ್ಯಸುಖಾದಿಗಳ ಮೋಹಕ್ಕೊಳಗಾಗಿ ಸ್ವಜನರನ್ನು ಕೊಲ್ಲುವ ಮಹತ್ಪಾಪವನ್ನು ಮಾಡಲೆಣಿಸಿರುವೆವಲ್ಲ!

**ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥ ೪೬ ॥**

ನಿಃಶಸ್ತ್ರನಾದ ಮತ್ತು ಅವಿರೋಧಿಯಾದ ನನ್ನನ್ನು ಶಸ್ತ್ರಧಾರಿಗಳಾದ ಧೃತರಾಷ್ಟ್ರನ ಮಕ್ಕಳು ಕೊಂದರೂ ಅದು ನನಗೆ ಕ್ಷೇಮವೇ ಸರಿ.

ಸಂಜಯ ಉವಾಚ—

**ಏವಮುಕ್ತ್ವಾಽರ್ಜುನಸ್ಸಂಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥ ೪೭ ॥**

ಈ ಪ್ರಕಾರ ನುಡಿದು ಶೋಕದಲ್ಲಿ ಮುಳುಗಿದ ಅರ್ಜುನನು ರಥದಲ್ಲಿಯೇ ಧನುರ್ಬಾಣಗಳನ್ನು ಬದಿಗಿರಿಸಿ ಕುಳಿತುಬಿಟ್ಟನು.

**ಮೊದಲನೆಯ ಅಧ್ಯಾಯವು ಸಮಾಪ್ತವು.**



ಓಂ

# ಎರಡನೆಯ ಅಧ್ಯಾಯವು

**ಅವತರಣಿಕೆ—**

ಭಗವದ್ಗೀತೆಯು ನಿರ್ಮಾಣವಾಗಲಿಕ್ಕೆ ಕಾರಣವಾದ ಅರ್ಜುನ ವಿಷಾದವು ಮೊದಲನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ. ಆ ಅಧ್ಯಾಯವು ಗೀತಾಭರಣಕ್ಕೆ ಕುಂದಣದ ಹಾಗಿದ್ದರೂ ಅದರಲ್ಲಿ ಅಧ್ಯಾತ್ಮಶಾಸ್ತ್ರದ ಆರಂಭವು ಕಂಡುಬರುವದಿಲ್ಲ. ಆ ಶಾಸ್ತ್ರವಿವೇಚನೆಯ ಆರಂಭವು ಈ ಎರಡನೆಯ ಅಧ್ಯಾಯದಲ್ಲಿಯೇ ಆಗಿರುವದರಿಂದ ಇದಕ್ಕೆ ಹೆಚ್ಚು ಮಹತ್ವವುಂಟು. ಈ ಅಧ್ಯಾಯದೊಳಗಿನ ಶ್ಲೋಕಗಳ ಅರ್ಥವನ್ನು ಸರಿಯಾಗಿ ಗ್ರಹಿಸುವದಕ್ಕೆ ಇದರೊಳಗಿನ ವಿಷಯಗಳು ಹೇಗೆ ವಿವರಿಸಲ್ಪಟ್ಟಿರುವವೆಂಬದನ್ನು ಲಕ್ಷ್ಯಕ್ಕೆ ತಂದುಕೊಳ್ಳಬೇಕು.

ಮೊದಲನೆಯ ಅಧ್ಯಾಯದಲ್ಲಿ ಅರ್ಜುನನು ತೋರಿಸಿದ ಮನಃಸ್ಥಿತಿಯನ್ನು ಈ ಅಧ್ಯಾಯದ ಆರಂಭದಲ್ಲಿಯೇ ಶ್ರೀಕೃಷ್ಣನು ಸಿಟ್ಟಿನಿಂದ ತಿರಸ್ಕಾರವಾಗಿ ನಿಷೇಧಿಸುತ್ತಾನೆ. ಶ್ರೀಕೃಷ್ಣನು ಪ್ರತಿಕೂಲನಾದುದರಿಂದ ಯುದ್ಧ ಮಾಡಬಾರದೆಂಬ ಆವನ ನಿಶ್ಚಯವು ಶಿಥಿಲವಾಗಿರಬಹುದು. ಆದರೂ ಮೊದಲಿನ ತನ್ನ ನಿಶ್ಚಯವನ್ನೂ ಅದಕ್ಕೆ ತಾನು ಪೂರ್ವದಲ್ಲಿ ಹೇಳಿದ ಕಾರಣವನ್ನೂ ಪುನಃ ಸಾಶಂಕಬುದ್ಧಿಯಿಂದಲೂ ಯುದ್ಧ ಮಾಡಬಾರದೆಂಬ ಮನೋನಿಶ್ಚಯದಿಂದಲೂ ಶ್ರೀಕೃಷ್ಣನಿಗೆ ಅರ್ಜುನನು ಹೇಳುವನು. ಬಳಿಕ ಶ್ರೀಕೃಷ್ಣನು ತನ್ನ ನಿರೂಪಣೆಯನ್ನು ಪ್ರಾರಂಭಿಸುವನು. ಈ ಅಧ್ಯಾಯದ ೩೮ನೆಯ ಶ್ಲೋಕದ ವರೆಗೆ ಯುದ್ಧ ಮಾಡಬಾರದೆಂಬ ಅರ್ಜುನನ ಮನೋನಿಶ್ಚಯವನ್ನು ಶ್ರೀಕೃಷ್ಣನು ಸಾಂಖ್ಯ (Intellectual) ದೃಷ್ಟಿಯಿಂದ ಪರೀಕ್ಷಿಸಿ, ಅದು ಅಯೋಗ್ಯವೂ ನಿರರ್ಥಕವೂ ಎಂದು ಹೇಳುವನು. ಅರ್ಜುನನು ಯುದ್ಧವನ್ನು ಮಾಡಲೇಬೇಕು; ಆದರೆ ಸುಖದುಃಖ, ಲಾಭಾಲಾಭ, ಜಯಾಪಜಯ ಇವುಗಳನ್ನು ಸಮಾನವಾಗಿ ಭಾವಿಸಿ ಯುದ್ಧ

ಮಾಡಬೇಕು (೨-೩೮). ಸುಖದುಃಖಾದಿಗಳ ವಿಷಯದ ಈ ಸಮಭಾವಕ್ಕೆ ಉಪಪತ್ತಿಯನ್ನು ಸಾಂಖ್ಯದಲ್ಲಿ ಹೇಳಿರುವದಿಲ್ಲ. ಇದನ್ನು ಹೇಳುವದಕ್ಕೆ ಬುದ್ಧಿಯೋಗವನ್ನು ಶ್ರೀಕೃಷ್ಣನು ನಿರೂಪಿಸಲಾರಂಭಿಸುವನು. ಈ ಬುದ್ಧಿ (Intuitional) ಯೋಗವು ಸಾಂಖ್ಯವೆಂದು ಹೇಳಿದ ಉಪಪಾದನೆಯಿಂದ ಭಿನ್ನವಾಗಿದೆ. ಈ ಅಧ್ಯಾಯದ ಕೊನೆಯ ವರೆಗೆ ಬುದ್ಧಿಯೋಗದ ಸಾದ್ಯಂತ ಸ್ವರೂಪವನ್ನು ಅರ್ಜುನನಿಗೆ ತಿಳಿಯುವಂತೆ, ಆದರೂ ಸಂಕ್ಷೇಪವಾಗಿ ಶ್ರೀಕೃಷ್ಣನು ವಿವರಿಸಿರುವನು. ಸಾಂಖ್ಯಕ್ಕೂ ಬುದ್ಧಿಯೋಗಕ್ಕೂ ಇರುವ ಸಂಬಂಧವನ್ನು ಸಂದರ್ಭಾನುಸಾರವಾಗಿ ವಿಮರ್ಶಿಸುವದು ಉಚಿತವು (೨-೩೯ ವಿವರಣೆ).

ಸಂಜಯ ಉವಾಚ—

**ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ॥ ೧ ॥**

ದೀನನಾಗಿ ಕಣ್ಣೀರಿಕ್ಕುವ ಮತ್ತು ಖಿನ್ನನಾದ ಅರ್ಜುನನನ್ನು ಕುರಿತು ಶ್ರೀಕೃಷ್ಣನು ಈ ಪ್ರಕಾರ ನುಡಿದನು.

ಶ್ರೀಭಗವಾನುವಾಚ—

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥ ೨ ॥**
**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥ ೩ ॥**

ಎಲ್ಲ ದೃಷ್ಟಿಯಿಂದಲೂ ಸಂಪೂರ್ಣ ವಿಚಾರ ಮಾಡಿ, ಯುದ್ಧ ಮಾಡದಿರುವದೇ ತನ್ನ ಕರ್ತವ್ಯವೆಂದು ಅರ್ಜುನನು ನಿಶ್ಚಯಿಸಿದ್ದನು. ಈ ಅವನ ನಿಶ್ಚಯಕ್ಕೆ ಆಧಾರವಾಗಿದ್ದ ವಿಚಾರಸರಣಿಯನ್ನು ಶ್ರೀಕೃಷ್ಣನಿಗೆ ಅವನು ಸಂಪೂರ್ಣವಾಗಿ ಅರುಹಿ ತೋರಿಸಿದ್ದನು. ಅರ್ಜುನನು ನುಡಿದುದನ್ನೆಲ್ಲ ಕಿವಿಯಿಂದ ಕೇಳಿಯೂ ಶ್ರೀಕೃಷ್ಣನು ತನ್ನ ಮೌನವನ್ನು ಬಿಟ್ಟಿರಲಿಲ್ಲ. ಅರ್ಜುನನ ವಿಚಾರಗಳು ತನಗೆ ಸಮ್ಮತವೋ ಅಲ್ಲವೋ ಎಂಬುದನ್ನು ಅವನು ತಿಳಿಯ

ಗೊಡಲಿಲ್ಲ. ಶ್ರೀಕೃಷ್ಣನು ಹಿಡಿದ ಮೌನದಿಂದ ತಾನು ಮಾಡಿದ ನಿಶ್ಚಯಕ್ಕೆ ಅವನ ಸಮ್ಮತಿಯುಂಟೆಂದು ಅರ್ಜುನನು ಊಹಿಸಿದ್ದು ಸ್ವಾಭಾವಿಕವು. ಆದುದರಿಂದ ಈ ಶ್ಲೋಕಗಳಲ್ಲಿ ಶ್ರೀಕೃಷ್ಣನಾಡಿದ ಬಿರುನುಡಿಯನ್ನು ಕೇಳಿ ಅವನಿಗೆ ಆಶ್ಚರ್ಯವೆನಿಸಿರಬಹುದು ಇದು ಅರ್ಜುನನ ಈಗಿನ ಮನಸ್ಥಿತಿಯು.

ಒಂದೇ ಛಲವನ್ನು ಹಿಡಿದು ಮಾತನಾಡುವ ಪಕ್ಷಪಾತಿಯನ್ನು ಮಧ್ಯದಲ್ಲಿ ತಡೆಯುವದರಿಂದ ಅಥವಾ ವಿರೋಧಿಸುವದರಿಂದ ಏನೂ ಪ್ರಯೋಜನವಾಗುವದಿಲ್ಲೆಂಬುದು ಸಾಧಾರಣ ಅನುಭವದ ಮಾತು. ಅವನ ಆವೇಶದ ಭರವು ಹರಿದು ಹೋಗಲಿಕ್ಕೆ ಆಸ್ಪದವನ್ನು ಕೊಟ್ಟು ಅನಂತರದಲ್ಲಿ ಅವನೊಂದಿಗೆ ಮಾತನಾಡುವದೇ ವಿಹಿತವು. ಮೊದಲನೆಯ ಅಧ್ಯಾಯದಲ್ಲಿ ಅರ್ಜುನನು ತನ್ನ ವಾಕ್ಪಾಂಡಿತ್ಯವನ್ನು ನಡೆಯಿಸಿದಾಗ ಶ್ರೀಕೃಷ್ಣನು ಇದೇ ಕಾರಣಕ್ಕಾಗಿ ಮೌನವನ್ನು ಹಿಡಿದಿದ್ದನೆಂಬುದು ಸ್ಪಷ್ಟವು. ಈಗ ಅರ್ಜುನನು ತನ್ನ ಸಿದ್ಧಾಂತವನ್ನು ಹೇಳಿ ಸಮಾಧಾನವನ್ನು ತಾಳಿದ ಮೇಲೆ ಶ್ರೀಕೃಷ್ಣನು ಅವನು ಮಾಡಿದ ನಿಶ್ಚಯದ ವಿಷಯವಾಗಿ ತನಗೆ ತೋರಿದುದನ್ನು ಖಂಡಿತ ವಾಗಿಯೂ ಕಟುವಾಗಿಯೂ ಹೇಳಿಬಿಟ್ಟನು. ಅರ್ಜುನನ ವಿಚಾರಸರಣಿ ಯಲ್ಲಾಗಲಿ ಅವನು ಮಾಡಿದ ನಿಶ್ಚಯದಲ್ಲಾಗಲಿ ದಯೆಯೂ ಧರ್ಮವೂ ಶ್ರೀಕೃಷ್ಣನಿಗೆ ಕಾಣಿಸಲಿಲ್ಲ; ಅಲ್ಲದೆ ಆರ್ಯನಾದವನಿಗೆ ಅನುಚಿತವಾದ, ಕೀರ್ತಿಗೆ ಕಲಂಕವನ್ನು ತರುವ, ಸ್ವರ್ಗವನ್ನು ಕಳೆದುಕೊಳ್ಳುವ ಹೇಡಿತನವೇ ಅವನಿಗೆ ಕಾಣಿಸಿತು. ಇದಕ್ಕೆ ಅರ್ಜುನನ ಹೃದಯದೌರ್ಬಲ್ಯವೇ ಕಾರಣ ವೆಂಬುದನ್ನು ತಿಳಿದು, ಅದನ್ನು ಬಿಟ್ಟುಕೊಟ್ಟು, ಜಾತಿವಂತನಾದ ಆರ್ಯನ ಹಾಗೆ ಅವನ ಕರ್ತವ್ಯವನ್ನು ಶ್ರೀಕೃಷ್ಣನು ಅರ್ಜುನನಿಗೆ ಗಂಡಸುತನದಿಂದ ಮಾಡೆಂದು ಹೇಳಿದನು. ವರ್ಣಧರ್ಮದಲ್ಲಿ ದೃಢತರ ವಿಶ್ವಾಸವೂ ಆ ಧರ್ಮದ ಕಟ್ಟಾಚರಣೆಯೂ ಆರ್ಯನ ಲಕ್ಷಣಗಳಾಗಿವೆ.

ಅರ್ಜುನ ಉವಾಚ—

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥ ೪**

ಶ್ರೀಕೃಷ್ಣನು ಹೀಗೆ ಅವನನ್ನು ಗದ್ದರಿಸಿದ ಮಾತ್ರಕ್ಕೆ ಅರ್ಜುನನಿಗೆ ಉಂಟಾದ ಸಂದೇಹವು ನಷ್ಟವಾಗುವಂತಿರಲಿಲ್ಲ. ತನ್ನ ನಿಶ್ಚಯವು ಬುದ್ಧಿವಂತಿಕೆಯದೆಂದೇ ಅವನ ಅಭಿಪ್ರಾಯವಾಗಿತ್ತು. ಅದು ಹೇಗೆಂಬು ದನ್ನು ಸಾರಾಂಶವಾಗಿ ಶ್ರೀಕೃಷ್ಣನಿಗೆ ಪುನಃ ಹೇಳಿ, ತಾನು ಮಾಡಿದ ನಿಶ್ಚಯವೇ ತನಗೆ ಸರಿದೋರುವದೆಂದು ಅವನು ನುಡಿದನು. ಅವನು ಎಂದದ್ದು—"ಪರಮ ಪೂಜ್ಯರಾದ ಭೀಷ್ಮದ್ರೋಣರನ್ನು ನಾನು ಎದುರಿಸಿ ಬಾಣದಿಂದ ಹೇಗೆ ಹೊಡೆಯಲಿ?"

**ಗುರೂನಹತ್ವಾ ಹಿ ಮಹಾನುಭಾವಾನ್ ।**
**ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ॥**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ ।**
**ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್ ॥ ೫ ॥**

ಮಹಾತ್ಮರಾದ ಗುರು ಜನರನ್ನು ಕೊಲ್ಲುವದನ್ನು ಬಿಟ್ಟು ಭಿಕ್ಷೆಬೇಡಿ ಹೊಟ್ಟೆ ಹೊರೆದುಕೊಳ್ಳುವದು ಕೂಡ ಶ್ರೇಯಸ್ಕರವು. ಅರ್ಥಾಭಿಲಾಷಿ ಗಳಾದ ಈ ಗುರುಗಳನ್ನು ಕೊಂದು ನಾವು ಇಹದಲ್ಲಿ ಅವರ ರಕ್ತದಿಂದ ತೊಡೆದ ಭೋಗಗಳನ್ನು ಭೋಗಿಸಬೇಕಾಗುವದು.

**ನ ಚೈತದ್ವಿದ್ಮಃ ಕತರನ್ನೋ ಗರೀಯೋ ।**
**ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ॥**
**ಯಾನೇವ ಹತ್ವಾ ನ ಜಿಜೀವಿಷಾಮ ।**
**ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥ ೬ ॥**

ನಾವು ಅವರನ್ನು ಜಯಿಸುವದು ಲೇಸೋ ಅಥವಾ ಅವರು ನಮ್ಮನ್ನು ಜಯಿಸುವದು ಲೇಸೋ ಈ ಎರಡರಲ್ಲಿ ಯಾವದು ನಮಗೆ ಹೆಚ್ಚಿನದು ಎಂಬದು ನಮಗೆ ತಿಳಿಯದಂತಾಗಿದೆ. ಯಾರನ್ನು ಕೊಂದು ಜೀವಿಸುವ ಇಚ್ಛೆಯು ನಮಗೆ ಇಲ್ಲವೋ ಆ ಕೌರವರೇ ಯುದ್ಧಕ್ಕೆ ಎದುರಾಗಿ ನಿಂತಿರುವರು.

ಈ ಶ್ಲೋಕಗಳೊಳಗಿನ ಅರ್ಜುನನ ಭಾವನೆಯು ಅಲ್ಲಿ ನೆರೆದ ಸೈನಿಕ ರೆಲ್ಲರನ್ನು ಸಂಬಂಧಿಸಿರುವದಿಲ್ಲ. ತನ್ನ ಗುರುಜನರನ್ನೂ ಆಪ್ತೇಷ್ಟರನ್ನೂ

ಮಾತ್ರ ಅನುಲಕ್ಷಿಸಿರುವದು. ಆದುದರಿಂದ ಈ ಪ್ರಮೇಯದಲ್ಲಿ "ಬಹುಜನರ ಹೆಚ್ಚಿನ ಸುಖ" ವೆಂಬ ಕರ್ಮಾಕರ್ಮದ ಲಾಘವ ಗೌರವವನ್ನು ಅರ್ಜುನನ ವಿಚಾರಗಳಲ್ಲಿ ಹುಡುಕುವದು ಅಪ್ರಾಸಂಗಿಕವೆಂದು ತೋರುವದು. ಇದೂ ಅಲ್ಲದೆ ಮುಂದಿನ ಶ್ಲೋಕದಲ್ಲಿ ತನಗುಂಟಾದ ಧರ್ಮಸಂಕಟದ ಕಾರಣವನ್ನು ಅವನೇ ಹೇಳಿರುವನು.

**ಕಾರ್ಪಣ್ಯದೋಷೋಪಹತಸ್ವಭಾವಃ ।**
**ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾಃ ॥**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ ।**
**ಶಿಷ್ಯಸ್ತೇಽಹಂ ಶಾಧಿಮಾಂ ತ್ವಾಂ ಪ್ರಪನ್ನಂ** ॥ ೭ ॥

ನನ್ನ (ಕ್ಷಾತ್ರ) ಸ್ವಭಾವವು ಕಾರ್ಪಣ್ಯದೋಷದಿಂದ ಹತಬಲವಾಗಿದೆ. ಈ ಪ್ರಸಂಗದಲ್ಲಿ ಧರ್ಮವೇನೆಂಬುದು ನನ್ನ ಮನಸ್ಸಿಗೆ ತಿಳಿಯದಾಗಿದೆ. ಆದುದರಿಂದ ನಾನು ನಿನ್ನನ್ನು ಕೇಳುವೆನು. ನನ್ನ ಶ್ರೇಯವು ಖಂಡಿತವಾಗಿ ಯಾವುದರಲ್ಲಿ ಉಂಟೆಂಬುದನ್ನು ನನಗೆ ಹೇಳಬೇಕು. ನಾನು ನಿನಗೆ ಶಿಷ್ಯನಾಗಿದ್ದೇನೆ. ನಿನಗೆ ಶರಣು ಬಂದಿರುವೆನಾದುದರಿಂದ ನನ್ನನ್ನು ಬೋಧಿಸು.

ಗೀತೆಯ ಅರ್ಥವು ಸುಸಂಗತವಾಗಿ ತಿಳಿಯಬೇಕಾದರೆ ಉಪಕ್ರಮ ಉಪಸಂಹಾರಗಳನ್ನು ಗಮನಿಸಬೇಕೆಂದು ಪ್ರತಿಪಾದಿಸಲ್ಪಟ್ಟಿರುವದು. ಇದು ಯೋಗ್ಯವೇ. ಆದರೆ ಅರ್ಜುನನು ಶಸ್ತ್ರಸನ್ಯಾಸವನ್ನು ಮಾಡಿದುದರಿಂದ ಗೀತಾನಿರೂಪಣೆಯು ಉಪಕ್ರಮಿಸಲ್ಪಟ್ಟಿತೆಂದೂ ಅವನು ಪುನಃ ಶಸ್ತ್ರಗ್ರಹಣ ಮಾಡಿದಲ್ಲಿಗೆ ಗೀತಾನಿರೂಪಣೆಯು ಉಪಸಂಹಾರವಾಯಿತೆಂದೂ ತಿಳಿಯಬಾರದು. ಯುದ್ಧಕಾರ್ಯಕ್ಕೂ ಗೀತಾನಿರೂಪಣೆಗೂ ಕೇವಲ ನಿಮಿತ್ತಮಾತ್ರ ಸಂಬಂಧವುಂಟೆಂದು ನಮಗೆ ತೋರುವದು.

ಅರ್ಜುನನನ್ನು ಯುದ್ಧಕ್ಕೆ ಎಬ್ಬಿಸುವದೇ ಗೀತೆಯ ಉದ್ದೇಶವೆಂಬುದು ಸರಿಯಲ್ಲ. ಶ್ರೀಕೃಷ್ಣಪುರುಷೋತ್ತಮನು ಸೃಷ್ಟಿಯನ್ನು ಉದ್ದೇಶಪೂರ್ವಕವಾಗಿ ಸ್ವೇಚ್ಛೆಯಿಂದ ಉಂಟುಮಾಡಿರುವನು. **ಆ ಉದ್ದೇಶವಾವುದು, ಮನುಷ್ಯನು ಮಾಡುವ ಪ್ರತಿಯೊಂದು ಕಾರ್ಯವು ಈ ತನ್ನ**

ಉದ್ದೇಶಕ್ಕೆ ಹೇಗೆ ಸಂಬಂಧಪಟ್ಟಿದೆಯೆಂಬುದನ್ನು ಅವನಿಗೆ ತೋರಿಸುವದು; ಇದರಿಂದ ತನ್ನ ಕೃತ್ಯದ ಯೋಗ್ಯತಾಯೋಗ್ಯತೆಗಳನ್ನು ಕಂಡುಕೊಳ್ಳುವ ಸುಲಭ ಸಾಧನೆಯನ್ನು ಅವನ ಸ್ವಾಧೀನಪಡಿಸುವದು; ಹೀಗೆ ಅವನ ಕಾರ್ಯಗಳಲ್ಲಿ ಮಾತ್ರವಲ್ಲದೆ ಅವನ ವಿಚಾರಗಳಲ್ಲಿಯೂ ಪರಿಪೂರ್ಣತೆಯನ್ನು ಉಂಟುಮಾಡಿ ವೇದಾಂತ ದೃಷ್ಟಿಯಿಂದ ಅವನನ್ನು ಸುಸಂಸ್ಕೃತನನ್ನಾಗಿ ಮಾಡುವದು; ಹಾಗು ಕರ್ಮಪರಾಯಣತೆಯ ವಿಷಯದಲ್ಲಿ ಧೈರ್ಯಧೃತಿಗಳಿಂದ ಕೂಡಿದ ಉತ್ತಮವೂ ಅಚಲವೂ ಆದ ಹೆಗ್ಗುರಿಯನ್ನು ಅವನಲ್ಲಿ ನೆಲೆಗೊಳಿಸುವದು—ಗೀತೆಯನ್ನು ಉಪದೇಶಿಸುವದರಲ್ಲಿ ಶ್ರೀಕೃಷ್ಣನಿಗಿದ್ದ ಉದ್ದೇಶವು ಇದೇ. ಆದುದರಿಂದಲೇ ಗೀತೆಯಲ್ಲಿ ಜೀವ, ಬ್ರಹ್ಮ, ಪುರುಷೋತ್ತಮರ ವಿಷಯದ ನಿರೂಪಣೆಯು ಎಲ್ಲೆಲ್ಲಿಯೂ ತುಂಬಿರುವದು. ಈ ಪರಿಪೂರ್ಣ ದೃಷ್ಟಿಯಿಂದ ಆಯುಷ್ಯದೊಳಗಿನ ಎಲ್ಲ ಕರ್ಮಗಳನ್ನು — ಯುದ್ಧವನ್ನೂ — ಮಾಡಬೇಕೆಂದು ಅದು ಮುಕ್ತಕಂಠದಿಂದ ಪ್ರತಿಪಾದಿಸುವದು. ಗೀತೆಯಲ್ಲಿ ಯುದ್ಧಸಂಬಂಧದ ಉಲ್ಲೇಖಗಳು ಬಂದಿರುವದಕ್ಕೆ ಇದೇ ಕಾರಣವು. ಈ ಶ್ಲೋಕದಲ್ಲಿ ಅರ್ಜುನನು ಶ್ರೀಕೃಷ್ಣನನ್ನು ಪ್ರಾರ್ಥಿಸಿದ್ದಕ್ಕಾಗಿಯೇ ಗೀತೆಯನ್ನು ಉಪದೇಶಿಸುವ ಉಪಕ್ರಮವಾಯಿತು. ಗೀತಾನಿರೂಪಣೆಯು ಸಮಾಪ್ತವಾದ ನಂತರ ನಾನು ಹೇಳಿದುದನ್ನೆಲ್ಲವನ್ನೂ ಸಮಗವಾಗಿ ಲಕ್ಷ್ಯಗೊಟ್ಟು ಕೇಳಿದೆಯೋ ಮತ್ತು ನಿನ್ನ ಸಮ್ಮೋಹವು ನಷ್ಟವಾಯಿತೇ ಎಂದು ಕೇಳಿದುದಕ್ಕೆ ಅವನು ಹೌದು ನಷ್ಟವಾಯಿತೆಂದು ಹೇಳಿದಲ್ಲಿಗೆ ಗೀತೆಯ ಉಪಸಂಹಾರವಾಗುವದೆಂದು ತಿಳಿಯಬೇಕು.

ನಹಿ ಪ್ರಪಶ್ಯಾಮಿ ಮಮಾಪನುದ್ಯಾದ್ ।
ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಂ ॥
ಅವಾಪ್ಯ ಭೂಮಾವಸಪತ್ನಮೃದ್ಧಂ।
ರಾಜ್ಯಂ ಸುರಾಣಾಮಪಿಚಾಧಿಪತ್ಯಂ ॥ ೮ ॥

ಪೃಥ್ವಿಯ ನಿರಂಕುಶ ಸಾಮ್ರಾಜ್ಯವಷ್ಟೇ ಅಲ್ಲ; ದೇವಲೋಕದ ಆಧಿಪತ್ಯವು ಬಂದರೂ ಅದು ಇಂದ್ರಿಯಗಳನ್ನು ದಹಿಸಿಬಿಡುವ ನನ್ನ ಶೋಕವನ್ನು ಕಳೆದೀತೆಂದು ನನಗೆ ತೋರುವದಿಲ್ಲ.

ಸಂಜಯ ಉವಾಚ—

**ಏವ ಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।**
**ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ॥೯॥**

ಈ ಪ್ರಕಾರ ನುಡಿದು "ನಾನು ಯುದ್ಧ ಮಾಡಲಾರೆನು" ಎಂದು ಶ್ರೀಕೃಷ್ಣನಿಗೆ ಹೇಳಿ ಅರ್ಜುನನು ಸುಮ್ಮನಾದನು.

**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥ ೧೦ ॥**

ಎರಡೂ ಸೈನ್ಯಗಳ ಮಧ್ಯದಲ್ಲಿ ವಿಷಾದಗ್ರಸ್ತನಾಗಿ ಕುಳಿತ ಅರ್ಜುನ ನನ್ನು ಕುರಿತು ಸಸುನಗುತ್ತ ಶ್ರೀಕೃಷ್ಣನು ಹೀಗೆ ಹೇಳಿದನು.

ಶ್ರೀಕೃಷ್ಣನು ಮುಗುಳುನಗೆಯಿಂದ ಮಾತಾಡಿದುದಕ್ಕೆ ಕಾರಣ ವೇನಿರಬಹುದು? ಆ ನಗೆ ಅರ್ಥಶೂನ್ಯವಾಗಿರಬಹುದೋ? ಅಥವಾ ಅದು ಅರ್ಜುನನ ಸ್ಥಿತಿಯನ್ನು ನೋಡಿ ಮಾಡಿದ ಉಪಹಾಸಕ್ಕಾಗಿರಬಹುದೋ? ಇವೆರಡೂ ಸಂಭವನೀಯವೆಂದು ನಮಗೆ ತೋರುವದಿಲ್ಲ. ಏಕೆಂದರೆ, ಪ್ರಸಂಗವು ಉಪಹಾಸ ಮಾಡುವಂಥದಾಗಿರಲಿಲ್ಲ. ಅರ್ಜುನನ ಮೇಲಿನ ಶ್ರೀಕೃಷ್ಣನ ಪ್ರೇಮವಾದರೂ ಹಾಗೆ ಉಪಹಾಸಕ್ಕೆ ಅವಕಾಶ ಕೊಡು ವಂಥದಾಗಿರಲಿಲ್ಲ. ಈ ಮಂದಹಾಸಕ್ಕೆ ನಮಗೆ ತೋರುವ ಕಾರಣ ವೇನೆಂದರೆ, ಕೃಷ್ಣಾವತಾರದಲ್ಲಿ ತಾನು ಮಾಡಬೇಕೆಂದಿದ್ದ ಅತ್ಯಂತ ಮಹತ್ವದ ಕಾರ್ಯವನ್ನು—ಮನುಷ್ಯ ಜಾತಿಗೆ ತನ್ನ ಶಾಶ್ವತ ಅನುಗ್ರಹ ವೆಂದು ಗೀತೆಯನ್ನು ಬೋಧಿಸುವ ಕಾರ್ಯವನ್ನು—ಮಾಡುವ ಸಮಯವು ಬಂದೊದಗಿತೆಂದು ಆ ಕಾರ್ಯದಲ್ಲಿ ಶ್ರೀಕೃಷ್ಣನಿಗಿದ್ದ ಉತ್ಕಂಠೆಯೂ ಉಲ್ಲಾಸವೂ ಮಂದಹಾಸವಾಗಿ ಪ್ರಕಟವಾಗಿರಬೇಕು.

ಶ್ರೀಭಗವಾನುವಾಚ—

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥ ೧೧ ॥**

ಯಾರಿಗಾಗಿ ಶೋಕಿಸಬಾರದೋ ಅವರಿಗಾಗಿ ದುಃಖಪಡುವೆ; ಮೇಲೆ ಬುದ್ಧಿವಂತಿಕೆಯ ಮಾತುಗಳನ್ನಾಡುವೆ. ಆದರೆ, ನಿಜವಾದ ಪಂಡಿತರು ಇರುವವರನ್ನಾಗಲಿ ಹೋದವರನ್ನಾಗಲಿ ಕುರಿತು ದುಃಖ ಪಡುವದಿಲ್ಲ.

ಇಂಥ ನಿಜವಾದ ಪಂಡಿತರು ಯಾರಿರಬಹುದು? ಅವರನ್ನು ಮುಂದೆ (೪-೧೯, ೨೦) ವರ್ಣಿಸಿದೆ. ಮಿಕ್ಕವರೆಲ್ಲ ಗೀತೆಯ ಮತದಂತೆ ಹೆಸರಿಗೆ ಪಂಡಿತರೆಂದೇ ತಿಳಿಯಬೇಕು. ಅವರನ್ನು ಗೀತೆಯು ಪಂಡಿತರೆಂದು ಒಪ್ಪುವ ದಿಲ್ಲ. ಗೀತೆಯಲ್ಲಿ ಹೇಳಿದ ಹಾಗೆ "ತತ್ವದರ್ಶಿ"ಗಳಾದವರೇ ನಿಜವಾದ ಪಂಡಿತರು.

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಂ ॥ ೧೨ ॥**

ಇಂಥ ನಿಜವಾದ ಪಂಡಿತರಾದರೂ ಸತ್ತವರಿಗಾಗಿ ದುಃಖಪಡದೆ ಇರುವದಕ್ಕೆ ಕಾರಣವೇನು? ಇಲ್ಲಿ ಯುದ್ಧಕ್ಕಾಗಿ ಸೇರಿದು ಮರಣಕ್ಕೆ ಸನ್ನದ್ಧರಾದ ನಾನು (ಶ್ರೀಕೃಷ್ಣನು), ನೀನು (ಅರ್ಜುನನು), ಮಿಕ್ಕುಳಿದ ಈ ಅರಸರು—ಇವರನ್ನೇ ಕುರಿತು ವಿಚಾರಿಸುವ. ನಾನು, ನೀನು, ಈ ಅರಸರು ಮೊದಲು ಇರಲಿಲ್ಲವೆಂದು ಹೇಳಲಾಗದು; ಹಾಗೆಯೇ ಇನ್ನು ಮುಂದೆ ನಾವೆಲ್ಲರೂ ಜನ್ಮ ತಾಳುವದಿಲ್ಲೆಂದೂ ಹೇಳಲಾಗದು. ನಿಜವಾದ ಪಂಡಿತರು ಈ ವಿಷಯವನ್ನು ಖಂಡಿತವಾಗಿ ತಿಳಿದಿರುವರಾದುದರಿಂದ ಅವರು ದುಃಖಪಡುವದಿಲ್ಲ. ವ್ಯಕ್ತಿಗಳು ನಾಶವಾಗುವರೆಂದಲ್ಲವೇ ನೀನು ಶೋಕ ಮಾಡುವದು? ಎಲ್ಲ ವ್ಯಕ್ತಿಗಳು ಶಾಶ್ವತರೆಂದೂ ಅವರ ಬರಹೋಗುಗಳು ನಿಶ್ಚಿತವಾದುವೆಂದೂ ಈ ಪಂಡಿತರು ಅರಿತಿರುವರು. ಆದುದರಿಂದ ದುಃಖ ವನ್ನುಂಟು ಮಾಡುವ ಮರಣವೆಂಬ ದೃಶ್ಯವನ್ನು ಅವರು ಒಪ್ಪುವದಿಲ್ಲ, ಲಕ್ಷಿಸುವದೂ ಇಲ್ಲ.

**ದೇಹಿನೋಽಸ್ಮಿನ್ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ ೧೩ ॥**

ಮರಣವು ನಿಜವೆಂದು ಭಾವಿಸಕೂಡದಾದರೆ, ಕಣ್ಣುಮುಂದೆ

ನಡೆಯುವ ಈ ದೃಶ್ಯಕ್ಕೆ ಅರ್ಥವೇನು? ದೇಹಧಾರಿಯಾದವನಿಗೆ ತನ್ನ ದೇಹದಲ್ಲಿಯೇ ಕೌಮಾರ, ಯೌವನ, ವಾರ್ಧಕ್ಯಗಳು ಹೇಗೆ ಪ್ರಾಪ್ತ ವಾಗುವವೋ ಹಾಗೆಯೇ ತದನಂತರ ದೇಹಾಂತರವೂ ಸಂಭವಿಸುವದು. ಮರಣವೆಂದರೆ ಆತ್ಮದ ಸಮಾಪ್ತಿಯಲ್ಲ; ಆತ್ಮವು ಇನ್ನೊಂದು ದೇಹವನ್ನು ಸೇರುವದು ಹೀಗೆ ಆತ್ಮನು ಶಾಶ್ವತನಾಗಿದ್ದು ಮರಣವೆಂಬುದೊಂದು ಕೇವಲ ಸ್ಥಿತ್ಯಂತರವಾಗಿದೆ. ಇದನ್ನು ತಿಳಿದವರೇ ಪಂಡಿತರು, ಧೀರರು. ಇಂಥ ಧೀರರು ಎಂದಿಗೂ ಮೋಹಕ್ಕೊಳಗಾಗರು.

**ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣ ಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥ ೧೪ ॥**

ಮರಣ ಕಾಲಕ್ಕೆ ಜೀವಾತ್ಮನ ಅನುಭವಪ್ರಪಂಚದಲ್ಲಿ ಏನಾದರೂ ನಷ್ಟವಾಗುವದೆಂಬ ಮಾತು ಸುಳ್ಳಲ್ಲ; ಅಜ್ಞಾನಿಯಾದವನು ಯಾವ ವಿಷಯೇಂದ್ರಿಯಪ್ರಪಂಚದ ಸಹವಾಸದಲ್ಲಿದ್ದನೋ ಅದು ಅಕಸ್ಮಾತ್ತಾಗಿ ನಷ್ಟವಾಗುವದು. ಆದರೆ ವಿಷಯೇಂದ್ರಿಯ ಸಂಯೋಗ (ಮಾತ್ರಾಸ್ಪರ್ಶ) ದಿಂದ ಉಂಟಾಗುವ ಈ ಅನುಭವಪ್ರಪಂಚವು ಆತ್ಮನ ಅಸ್ತಿತ್ವಕ್ಕೆ ಆವಶ್ಯಕ ವಲ್ಲವೆಂಬುದನ್ನು ಅರ್ಜುನನು ಗ್ರಹಿಸಬೇಕು. ಮಾತ್ರಾಸ್ಪರ್ಶದಿಂದ ಇಚ್ಛಾದ್ವೇಷ ಸುಖದುಃಖಾದಿ ಅನುಭವಗಳು ಆತ್ಮನಿಗೆ ಬರುವವಾದರೂ ಅವು ಆತನ ಶರೀರಕ್ಕೆ ಸಂಬಂಧಪಟ್ಟವುಗಳಾಗಿವೆ. ಅವು ಬಂದು ಬಂದು ಹೋಗುವವು--ಅಶಾಶ್ವತಗಳಾದವು; ನಿತ್ಯನಾದ ಆತ್ಮನು ಅವುಗಳ ವಿಷಯ ದಲ್ಲಿ ಆತ್ಮೀಯ ಭಾವನೆಯನ್ನು ಧರಿಸುವದು ಉಚಿತವಲ್ಲ. ದೇಹದೊಂದಿಗೆ ಈ ಅನುಭವಗಳು ನಾಶಹೊಂದುವವೆಂದು ಆತ್ಮನೂ ನಾಶಹೊಂದುವನೋ? ಇಲ್ಲ. ಆಗಂತುಕವಾದ ಈ ಅನುಭವಗಳಿಂದ ಪೂರ್ಣವಾಗಿ ತಪ್ಪಿಸಿಕೊಳ್ಳು ವದು ಆತ್ಮನ ಇಚ್ಛೆಯನ್ನು ಅವಲಂಬಿಸಿರುವದಿಲ್ಲ. ಒಂದು ವೇಳೆ ಅಂತಹ ಇಚ್ಛೆಯನ್ನು ಅವನು ಹಿಡಿದರೂ ತಪ್ಪಿಸಿಕೊಳ್ಳುವದು ಸಾಧ್ಯವಲ್ಲ. ಆದುದ ರಿಂದ ಅರ್ಜುನನು ಈ ಮಾತ್ರಾಸ್ಪರ್ಶಗಳನ್ನೂ ಅವುಗಳ ಸಂಯೋಗ ವಿಯೋಗಗಳನ್ನೂ ದೃಢಮನಸ್ಸಿನಿಂದ ಸಹಿಸಬೇಕು; ಮತ್ತು ಅವುಗಳಿಗಾಗಿ ಮರುಗಬಾರದು.

**ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥ ೧೫ ॥**

ಮರಣದಲ್ಲಿ ನಿಜವಾಗಿ ನಷ್ಟವಾಗುವವು ಈ ಮಾತ್ರಾಸ್ಪರ್ಶಗಳೇ. ಆದರೆ ತಿಳಿದವನು—ಪಂಡಿತನು—ಅವುಗಳಿಗಾಗಿ ಶೋಕ ಮಾಡಬಾರದು. ಸುಖದುಃಖಗಳನ್ನು ಸಮಾನವಾಗಿ ಕಾಣುವವನು ತನ್ನಲ್ಲಿ ತೋರುವ ಮನಸ್ಸಿನ ಶಾಂತಿ-ಸಮಾಧಾನಗಳ ಮೂಲಕ ಅಮೃತತ್ವವನ್ನು ಪಡೆಯಲಿಕ್ಕೆ ಯೋಗ್ಯನೆಂದು ಹೇಳಬೇಕು. ಏಕೆಂದರೆ, **ಅಮೃತತ್ವವೆಂದರೆ ದುಃಖದ ಅಭಾವವೇ ಹೊರತು ಬೇರೆಯಲ್ಲ.** ಸುಖದುಃಖಗಳನ್ನು ಸಮಾನವಾಗಿ ಭಾವಿಸುವುದು ಸಾಧಿಸಿದರೆ, ನಿತ್ಯಸುಖದ ಸೀಮೆಯನ್ನು ಸೇರಿದ ಹಾಗೆಂದು ತಿಳಿಯಬೇಕು.

ಸುಖದುಃಖಗಳನ್ನು ಸಮಾನವಾಗಿ ಭಾವಿಸುವದಕ್ಕೆ ಕಾರಣ ವೇನೆಂಬುದನ್ನೂ ಹಾಗೆ ಭಾವಿಸಿದ ಮಾತ್ರಕ್ಕೆ ಅಮೃತತ್ವವು ಹೇಗೆ ದೊರೆ ವುದೆಂಬುದನ್ನೂ ಇಲ್ಲಿ ವಿವೇಚಿಸಲ್ಪಡುವ ಸಾಂಖ್ಯನಿರೂಪಣೆಯಲ್ಲಿ ವ್ಯುತ್ಪತ್ತಿ ಪೂರ್ವಕವಾಗಿ ವಿವರಿಸಿರುವದಿಲ್ಲ. ಆದರೂ **ಸುಖದುಃಖಗಳಲ್ಲಿ ಸಮ ದೃಷ್ಟಿಯೂ ಅದರಿಂದೊದಗುವ ಅಮೃತತ್ವವೂ ಕಾರ್ಯಕಾರಣಗಳೆಂಬ ಸಿದ್ಧಾಂತವು** ಮಹತ್ವದ ಸೃಷ್ಟಿನಿಯಮಗಳಲ್ಲಿ ಒಂದಾಗಿದೆ.

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥೧೬॥**

ಶ್ರೀಕೃಷ್ಣನ ಹೇಳಿಕೆಯಲ್ಲಿ ಅನುಲಕ್ಷಿತನಾದ ಪಂಡಿತನು ಆತ್ಮವ್ಯಕ್ತಿಯ ಸನಾತನತ್ವವನ್ನು ತಿಳಿದಿರುವನು. ಈ ಮೂಲಕ ಅವನಿಗೆ ಸಾಮಾನ್ಯ ಮನುಷ್ಯರ ಹಾಗೆ ಮರಣ ವಿಷಯದ ವ್ಯಾಮೋಹವು ಉಂಟಾಗುವದಿಲ್ಲ. ಮಾತ್ರಾಸ್ಪರ್ಶದ ಆಘಾತಗಳನ್ನು ಲೆಕ್ಕಿಸದೆ, ಸುಖದುಃಖಗಳನ್ನು ಸಮಾನ ವಾಗಿ ಭಾವಿಸಿ, ಅಮೃತತ್ವವನ್ನು ಅನುಭವಿಸಲು ಯೋಗ್ಯನಾದವನೇ ಇವನು. ಅವನು ತತ್ತ್ವದರ್ಶಿಯಾದುದರಿಂದಲೇ ಅವನಿಗೆ ಈ ಸಾಧನೆಗಳೆಲ್ಲ ಕೈಸೇರು ವವು. ಇರುವದೇನು? ಇಲ್ಲದುದೇನು? ಎಂಬುದರ ಅಂತವನ್ನೇ ಅವನು

ತಿಳಿದಿರುವನು. ಅವನಿಗೆ ಈ ವಿಷಯದಲ್ಲುಂಟಾದ ಪೂರ್ಣಜ್ಞಾನದ ನಿಷ್ಕರ್ಷೆಯೇನೆಂದರೆ, ಇರುವದು ಎಂದಿಗೂ ಇಲ್ಲದಾಗದು, ಮತ್ತು ಇಲ್ಲದುದು ಎಂದಿಗೂ ಉಂಟಾಗದು. ಅಂಥ ತತ್ವದರ್ಶಿಯು ಅನುಭವದಿಂದ ತಿಳಿದ ಈ ಸತ್ಯವನ್ನು ಅರ್ಜುನನು ಒಪ್ಪಿಕೊಳ್ಳಬೇಕು.

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಂ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥ ೧೭ ॥**

ಹಾಗೆ ಒಪ್ಪಿದ ಪಕ್ಷಕ್ಕೆ ಮನುಷ್ಯನಾಗಲಿ ಆತ್ಮವಾಗಲಿ ಸಾಯುವ ದೆಂದು ಹೇಳುವದರಲ್ಲಿ ಅರ್ಥವೇನು? ಸಾಯುವದೆಂದರೆ ಇಲ್ಲದಾಗುವದು. ಯಾವುದು ಇರುವದೆಂದು ನಾವು ಹೇಳುವೆವೋ ಅದು ಇಲ್ಲವಾಗುವದು ಶಕ್ಯವೇ ಇಲ್ಲ. ಇಲ್ಲದಾಗುವದೆಂದು ಅಭಾವವನ್ನು ಸೂಚಿಸಲು ನಾವು ಹೇಳುವದು ಉಂಟಾಗುವದೂ ಶಕ್ಯವಲ್ಲ. ಎಂದ ಮೇಲೆ, ಮರಣವೆಂದರೆ **ಅತ್ಯಂತ ನಾಶವೆಂಬರ್ಥವು ಈ ಜಗತ್ತಿನಲ್ಲಿ ಅಸಂಭವನೀಯವೇ ಸರಿ. ಜಗತ್ತೆಂದರೆ ಅಸ್ತಿತ್ವಗಳ ಸಮೂಹವು ಅಥವಾ ಸಮುಚ್ಚಯವು. ಇಂಥ ಜಗತ್ತಿನೊಳಗಿನ ಎಲ್ಲ ಅಸ್ತಿತ್ವಗಳನ್ನು ವ್ಯಾಪಿಸಿ ನಿಂತ ತತ್ವವು ಅವಿನಾಶಿಯಾದುದರಿಂದಲೂ ವಿನಾಶಿಯಾದ ವಸ್ತುವು ಈ ತತ್ವದಿಂದ ಉಂಟಾಗುವದು ಶಕ್ಯವಲ್ಲವಾದುದರಿಂದಲೂ ಈ ಅವ್ಯಯ ತತ್ವವನ್ನು ಯಾರು ಹೇಗೆ ನಾಶಮಾಡಬಲ್ಲರು?** ಅದು ಯಾರಿಂದಲೂ ಆಗದು. ಎಂದ ಬಳಿಕ ನಾಶವಾಗುವದು ಮೃತವಾಗುವದು ಎಂಬ ಭಯವೇಕೆ?

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ ೧೮ ॥**

ದೇಹಗಳು ನಾಶವುಳ್ಳವುಗಳೆಂದು ಹೇಳುವದುಂಟು; ನಿಜ. ಆದರೆ ದೇಹಗಳು ನಾಶವಾಗುವವೆಂದೇ ಅರ್ಜುನನು ಶೋಕ ಮಾಡುವನೋ ಹೇಗೆ? ಇದು ಶಕ್ಯವಲ್ಲ. ದೇಹವು ಯಾವನ ಸೊತ್ತಾಗಿದೆಯೋ ಆ ಆತ್ಮನು ನಿತ್ಯನು, ಅವಿನಾಶಿಯು ಮತ್ತು ಅಪ್ರಮೇಯನು. ಇಂಥ ಆತ್ಮನು ಸಾಯುವನೆಂಬ ಭಯವು ಅವಾಸ್ತವವು. ಆದುದರಿಂದ ಅರ್ಜುನನು ಯುದ್ಧವನ್ನು ಮಾಡಲೇ ಬೇಕು.

**ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಂ।**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥ ೧೯ ॥**

ಯಥಾರ್ಥ ಜ್ಞಾನವನ್ನು ಪಡೆದ ಪಂಡಿತನ ಮತವು ಮೇಲೆ ವಿವರಿಸಲ್ಪಟ್ಟಿದೆ. ಅದೇ ಕೇವಲ ಸತ್ಯವಾಗಿರುವದು. ಆದ ಕಾರಣ ಕೊಲ್ಲುವರೆಂದೂ ಕೊಲ್ಲಲ್ಪಡುವರೆಂದೂ ಯಾರಾದರೂ ತಿಳಿದರೆ ಅವರು ಅಜ್ಞರೆಂದೇ ಹೇಳಬೇಕು. ಆತ್ಮನು ಕೊಲ್ಲುವವನೂ ಅಲ್ಲ ಕೊಲ್ಲಲ್ಪಡುವವನೂ ಅಲ್ಲ.

**ನ ಜಾಯತೇ ಮ್ರಿಯತೇ ವಾ ಕದಾಚಿ।**
**ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ॥**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ।**
**ನ ಹನ್ಯತೇ ಹನ್ಯಮಾನೇ ಶರೀರೇ ॥ ೨೦ ॥**

ಈ ಆತ್ಮವು ಯಾವ ಕಾಲದಲ್ಲಿಯೂ ಹುಟ್ಟುವದಿಲ್ಲ; ಅಥವಾ ಸಾಯುವದೂ ಇಲ್ಲ. ಈ ಮಾತು ನಿಜವಾದರೂ ಜನ್ಮಮರಣ ರೂಪದ ಸ್ಥಿತ್ಯಂತರಗಳು ಅದಕ್ಕೆ ಸಂಭವಿಸುವ ಹಾಗೆ ಕಾಣುವದುಂಟು. ಹಾಗೆ ಕಾಣಿಸಿದ್ದಕ್ಕಾಗಿಯೇ ಅದು ಹುಟ್ಟುವದೇ ನಿಜ, ಸಾಯುವದೇ ನಿಜ ಎಂದು ತಿಳಿಯುವದಾದರೆ ಅದು ಹುಟ್ಟಿ ಸತ್ತುಹೋಗುವದು, ಮರಳಿ ಹುಟ್ಟುವದಿಲ್ಲ ಎಂದಾದರೂ ಹೇಳಲಾಗದು. ಸಾರಾಂಶವೇನೆಂದರೆ, ಅದು ಸಾಯುವದು ಪುನಃ ಹುಟ್ಟುವದಕ್ಕಾಗಿಯೇ. ಹೀಗೆ ಅನುಮಾನ ಮಾಡಬಹುದಾದರೂ ಈ ವಿಷಯದಲ್ಲಿ ನಿಜವೇನೆಂಬುದನ್ನು ಅರ್ಜುನನು ಶ್ರೀಕೃಷ್ಣನಿಂದ ತಿಳಿಯುವದೇ ಲೇಸು. ಆತ್ಮನು ಜನ್ಮರಹಿತನು, ನಿತ್ಯನು, ಶಾಶ್ವತನು, ಪುರಾಣನು. ಅವನ ಶರೀರವು ಕೊಲ್ಲಲ್ಪಟ್ಟರೂ ಅವನು ಕೊಲ್ಲಲ್ಪಡುವದಿಲ್ಲ.

**ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಂ।**
**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಂ ॥ ೨೧ ॥**

ಈ ರೀತಿಯಾಗಿ ಆತ್ಮನು ಅವಿನಾಶಿಯೆಂದೂ ನಿತ್ಯನೆಂದೂ ಜನ್ಮರಹಿತನೆಂದೂ ಅವ್ಯಯನೆಂದೂ ತಿಳಿದವನು ಮತ್ತೊಬ್ಬನನ್ನು ಹೇಗೆ ಕೊಲ್ಲುವನು ಅಥವಾ ತಾನು ಕೊಲ್ಲಿಸಿಕೊಳ್ಳುವನಾದರೂ ಹೇಗೆ? ಇದು ಶಕ್ಯವಲ್ಲ.

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ।**
**ನವಾನಿ ಗೃಹ್ಣಾತಿ ನರೋಽಪರಾಣಿ॥**
**ತಥಾ ಶರೀರಾಣಿ ವಿಹಾಯ ಜೀರ್ಣಾ।**
**ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ ೨೨ ॥**

ಶರೀರವು ಕೊಲ್ಲಲ್ಪಡುವದೆಂಬ ಮಾತು ಶ್ರೀಕೃಷ್ಣನಿಗೆ ಸಮ್ಮತವು. ಆದರೆ ಶರೀರವೆಂದರೆ ಆತ್ಮನಲ್ಲ. ಅದು ಆತ್ಮನಿಗೆ ಪರಿಧಾನಮಾತ್ರವಾಗಿದೆ. ಜೀರ್ಣವಾದ ವಸ್ತ್ರವನ್ನು ತ್ಯಾಗಮಾಡಿ ಮನುಜನು ಹೊಸ ವಸ್ತ್ರವನ್ನು ಧರಿಸುವ ಹಾಗೆ ಶರೀರದೊಳಗಿನ ಆತ್ಮನು ಜೀರ್ಣವಾದ ತನ್ನ ಶರೀರವನ್ನು ಬಿಟ್ಟುಕೊಟ್ಟು ನೂತನ ಶರೀರವನ್ನು ಪಡೆವನು. ಉಡುಗೆಯನ್ನು ಈ ರೀತಿ ಬದಲಿಸಿದ್ದಕ್ಕಾಗಿ ಯಾರಾದರೂ ಶೋಕಮಾಡಿದುದನ್ನು ಅರ್ಜುನನು ಕೇಳಬಲ್ಲನೋ?

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ।**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥ ೨೩ ॥**

ಸಾಯುವದು ದೇಹವೇ ಹೊರತು ಆತ್ಮನಲ್ಲ. ಈ ಆತ್ಮನು ಶಸ್ತ್ರ, ಅಗ್ನಿ, ನೀರು, ಗಾಳಿ ಮುಂತಾದವುಗಳ ಆಘಾತಕ್ಕೆ ಒಳಪಟ್ಟ ಹಾಗೆ ತೋರುವನಾದರೂ ಅವನನ್ನು ಶಸ್ತ್ರವು ಗಾಯಪಡಿಸಲಾರದು, ನೀರು ತೋಯಿಸಲಾರದು, ಗಾಳಿಯು ಒಣಗಿಸಲಾರದು. ಈ ಬಗೆಯ ಆಘಾತ ಗಳಿಗೆಲ್ಲ ಅವನು ಒಳಗಾಗನು.

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವಚ।**
**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥ ೨೪ ॥**

ಹೀಗೆ ಶಸ್ತ್ರದಿಂದ ಗಾಯಪಡದವನೂ ಬೆಂಕಿಯಿಂದ ಸುಡದವನೂ ನೀರಿನಿಂದ ನೆನೆಯದವನೂ ಗಾಳಿಯಿಂದ ಒಣಗದವನೂ ಆದ ಆತ್ಮನು ನಿತ್ಯನು, ಸರ್ವಗತನು, ಸ್ಥಿರನು, ಅಚಲನು, ಸನಾತನನೂ ಆಗಿರುವನು. ಅವನು ಸರ್ವಗತನಾದುದರಿಂದಲೇ ಈ ಉಪಾಧಿಗಳೆಲ್ಲ ಅವನಿಗೆ ಸಂಭವಿಸುವ

ಹಾಗೆ ತೋರುವವು. ಆದರೂ ಇವುಗಳಲ್ಲಿ ಯಾವುದರ ಬಾಧೆಯೂ ಅವನಿಗೆ ಆಗುವದಿಲ್ಲ.

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ।**
**ತಸ್ಮಾದೇವಂ ವಿದಿತ್ವೈನಂ ನಾನು ಶೋಚಿತುಮರ್ಹಸಿ ॥ ೨೫ ॥**

ಈ ಆತ್ಮನನ್ನು ಅವ್ಯಕ್ತನೆಂದೂ ಅಚಿಂತ್ಯನೆಂದೂ ವಿಕಾರರಹಿತನೆಂದೂ ಹೇಳುವರು. ಆ ಕಾರಣ, ಇವನನ್ನು ಇಂಥವನೆಂದು ತಿಳಿದು ಅರ್ಜುನನು ಶೋಕಮಾಡುವದು ಉಚಿತವಲ್ಲ.

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಂ ।**
**ತಥಾಪಿ ತ್ವಂ ಮಹಾಬಾಹೋ ನೈನಂ ಶೋಚಿತುಮರ್ಹಸಿ ॥ ೨೬ ॥**

ಆತ್ಮದ ಸ್ವಭಾವವನ್ನು ಇಷ್ಟು ಸೂಕ್ಷ್ಮವಾಗಿ ಪರಿಕಿಸಿ ನೋಡುವದೇ ಅರ್ಜುನನಿಗೆ ಬೇಡವಾಗಿದ್ದರೆ ತನಗೆ ದೃಷ್ಟಿಗೋಚರವಾದ ಸಂಗತಿಗಳ ಆಧಾರದಿಂದಲೇ ಈ ಪ್ರಶ್ನೆಯನ್ನು ಅವನು ನಿರ್ಧರಿಸಬೇಕು. ಹಾಗಾದರೆ ಆತ್ಮನು ನಿತ್ಯ ಹುಟ್ಟುತ್ತಿರುವದೂ ಹಾಗೂ ನಿತ್ಯ ಸಾಯುತ್ತಿರುವದೂ ನಿಜವೆಂದು ಅವನು ನಂಬಬೇಕಾದೀತು; ಹೀಗೆ ನಂಬಿದರೂ ಅವನು ಶೋಕ ಮಾಡುವದು ಉಚಿತವಲ್ಲ.

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥ ೨೭ ॥**

ಹುಟ್ಟಿದವನು ಸಾಯುವದು ಪ್ರತ್ಯಕ್ಷವಷ್ಟೇ. ಸ್ವಲ್ಪ ವಿಚಾರ ಮಾಡಿ ನೋಡಿದರೆ, ಸಾಯುವವನೂ ಮರಳಿ ಹುಟ್ಟುವನೆಂದು ಅರ್ಜುನನು ಒಪ್ಪಿಕೊಳ್ಳಬಹುದು. ಅಪರಿಹಾರ್ಯವಾದ ಈ ಜನ್ಮ-ಮರಣದ ಚಕ್ರಗತಿಗಾಗಿ ಅರ್ಜುನನು ಶೋಕಮಾಡುವದೇಕೆ?

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿವೇದನಾ ॥ ೨೮ ॥**

ಹುಟ್ಟುವದಕ್ಕೆ ಮೊದಲು ಅವ್ಯಕ್ತ ಸ್ಥಿತಿಯಲ್ಲಿದ್ದು ಮಧ್ಯದಲ್ಲಿ ಎಲ್ಲ ಜೀವಿಗಳು ವ್ಯಕ್ತವಾಗುತ್ತವೆ. ಈ ವ್ಯಕ್ತ ಸ್ಥಿತಿಯಲ್ಲಿ ಕೆಲವು ಕಾಲವಿದ್ದು

ಬಳಿಕ ಮರಣದ ತರುವಾಯ ಮರಳಿ ಅವ್ಯಕ್ತ ಸ್ಥಿತಿಯನ್ನು ಸೇರುವವು. ಇದಕ್ಕಾಗಿ ಶೋಕಮಾಡುವದೇಕೆ?

**ಆಶ್ಚರ್ಯವತ್ಪಶ್ಯತಿ ಕಶ್ಚಿದೇನಮ್ ।**
**ಆಶ್ಚರ್ಯವದ್ವದತಿ ತಥೈವ ಚಾನ್ಯಃ ॥**
**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ।**
**ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥ ೨೯ ॥**

ಆತ್ಮದ ವಿಷಯವಾಗಿ ಯಾವ ಕಲ್ಪನೆಯನ್ನು ಸ್ವೀಕರಿಸಿದರೂ ಅಭ್ಯಂತರವಿಲ್ಲ. ಅದು ಇರುವದೇನೋ ಖಂಡಿತ; ಅದರ ವಿಷಯವಾಗಿ ಯಥಾರ್ಥ ಜ್ಞಾನವು ಯಾರಿಗೂ ಇರುವದಿಲ್ಲ. ಹೀಗಿದ್ದರೂ ಆತ್ಮನನ್ನು ಕುರಿತು ಅನೇಕರು ಅನೇಕ ವಿಧವಾಗಿ ಹೇಳುವರು. ಮನಸ್ಸಿನಲ್ಲಿ ಆತ್ಮ ವಿಷಯದ ಕಲ್ಪನೆಯು ಉಂಟಾದರೆ ಕೆಲವರು ಅದನ್ನು ಆಶ್ಚರ್ಯದಿಂದ ನೋಡುವರು; ಇನ್ನು ಕೆಲವರು ಅದರ ವಿಷಯವಾಗಿ ಆಶ್ಚರ್ಯದಿಂದ ಮಾತಾಡುವರು; ಮತ್ತೆ ಕೆಲವರು ಆಶ್ಚರ್ಯದಿಂದ ಅದನ್ನು ಕುರಿತು ಶ್ರವಣಮಾಡುವರು. ಹೀಗೆ ಆತ್ಮವಿಶ್ವಾಸದಿಂದ ನೋಡಿಯೂ ಆಡಿಯೂ ಕೇಳಿಯೂ ಆತ್ಮವನ್ನು ಅವರು ಅರಿತವರಲ್ಲ. ಏಕೆಂದರೆ, ಆಶ್ಚರ್ಯವೆಂಬ ಮನೋಭಾವನೆಯು ಜ್ಞಾನಮೂಲಕವಾಗಿ ಹುಟ್ಟುವದಿಲ್ಲ; ಅಜ್ಞಾನದಿಂದ ಉಂಟಾಗುವದು. ಆತ್ಮನ ವಿಷಯದ ಆಶ್ಚರ್ಯದ ಭಾವನೆಯು ನಿಃಶೇಷ ವಾಗಿ ಕಳೆದುಹೋಗುವ ವರೆಗೆ ಆತ್ಮನ ಯಥಾರ್ಥ ಜ್ಞಾನವು ಆಯಿತೆಂದು ಹೇಳಲಾಗದು.

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥ ೩೦ ॥**

ಎಲ್ಲರ ದೇಹಗಳಲ್ಲಿಯೂ ವಾಸವಾಗಿರುವ ಈ ಆತ್ಮತತ್ವವು ನಿತ್ಯ ವೆಂಬುವದು, ಅವಧ್ಯವೆಂಬುವದು ಖಂಡಿತ. ಆದುದರಿಂದ ತನ್ನ ಬಾಂಧವರಿ ಗಾಗಿ ಮಾತ್ರವಲ್ಲ, ಜಗತ್ತಿನೊಳಗಿನ ಯಾವತ್ತು ಭೂತಮಾತ್ರಕ್ಕಾಗಿಯೂ ಅರ್ಜುನನು ಹಲುಬುವದು ಉಚಿತವಲ್ಲ.

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ॥ ೩೧ ॥**

ಅನ್ಯರ ಮರಣಕ್ಕಾಗಿ ಶೋಕಪಡುವ ಕಾರಣವಿಲ್ಲವೆಂದು ಈ ವರೆಗಿನ ವಿವೇಚನೆಯಿಂದ ನಿಶ್ಚಿತವಾದರೂ ಅರ್ಜುನನು ಸ್ವಹಸ್ತದಿಂದಲೇ ಅವರನ್ನು ಕೊಲ್ಲಲಿಕ್ಕೆ ಏಕೆ ಹಿಂಜರಿಯಬಾರದೆಂಬ ವಿಷಯವನ್ನು ಇನ್ನೂ ಹೇಳಿರುವ ದಿಲ್ಲ. ಅದನ್ನು ಈಗ ಶ್ರೀಕೃಷ್ಣನು ಹೇಳಲನುವಾಗುವನು. ಅರ್ಜುನನ ಸ್ವಧರ್ಮವನ್ನು ನೋಡಿದರೂ ಯುದ್ಧಕಾರ್ಯದಿಂದ ಅವನು ಹಿಂಜರಿಯ ಕೂಡದು. ಕ್ಷತ್ರಿಯನಾದವನಿಗೆ ಧರ್ಮಯುದ್ಧವನ್ನು ಮಾಡುವದರಲ್ಲಿಯೇ ಶ್ರೇಯಸ್ಸುಂಟಲ್ಲದೆ ಬೇರೆ ಬಗೆಯಿಂದ ಇಲ್ಲ.

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಂ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಂ ॥ ೩೨ ॥**

ದೈವಗತಿಯಿಂದಲೇ ಒದಗಿದ, ತೆರೆದಿಟ್ಟ ಸ್ವರ್ಗದ್ವಾರದಂತಿರುವ ಇಂಥ ಯುದ್ಧಪ್ರಸಂಗವು ಯಾವ ಕ್ಷತ್ರಿಯರಿಗೆ ಲಭಿಸುವದೋ ಅವರು ಖಂಡಿತ ವಾಗಿಯೂ ಸುಖಿಯಾದವರು—ಸುದೈವಿಗಳೆಂದರ್ಥ.

**ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥ ೩೩ ॥**

ರಣಾಂಗಣದ ವರೆಗೆ ಬಂದು ಈ ಧರ್ಮಸಂಗ್ರಾಮವನ್ನು ಮಾಡಲು ಅರ್ಜುನನು ಒಲ್ಲೆನೆಂದರೆ ಅವನು ತನ್ನ ಸ್ವಧರ್ಮವನ್ನೂ ಕೀರ್ತಿಯನ್ನೂ ಹೋಗಲಾಡಿಸಿಕೊಳ್ಳುವನು. ಅಲ್ಲದೆ ಯಾವ ಪುಣ್ಯವನ್ನು ದೊರಕಿಸಬೇಕೆಂದು ಅವನು ಧರ್ಮಕೀರ್ತಿಗಳನ್ನು ಕಳೆದುಕೊಳ್ಳುವ ಸಾಹಸವನ್ನು ಮಾಡುತ್ತ ಲಿರುವನೋ ಅದು ಕೈಸೇರದೆ ಅವನಿಗೆ ಪಾಪವು ಮಾತ್ರ ಖಂಡಿತವಾಗಿ ತಟ್ಟುವದು.

ತನ್ನ ಧರ್ಮವನ್ನೂ ಕೀರ್ತಿಯನ್ನೂ ಅರ್ಜುನನು ಈ ಮೊದಲೇ ಎಸೆದುಬಿಟ್ಟದ್ದು ಶ್ರೀಕೃಷ್ಣನಿಗೆ ಗೊತ್ತಿತ್ತು. ಅವುಗಳ ಅಭಿಲಾಷೆಯು

ಆವನಿಗೆ ಈಗ ಇರುವದೇ ಇಲ್ಲ. ತಾನು ನೂತನವಾಗಿ ಹುಡುಕಿ ತೆಗೆದ ಅಹಿಂಸಾಧರ್ಮಕ್ಕೆ ಸರಿಹಚ್ಚಿ ನೋಡಿ ಇವು ಅಧರ್ಮವಾದುವೆಂದು ಅವನು ಎಣಿಸಿದ್ದನು. ಆದರೆ ಪಾಪಭೀರುತ್ವವೂ ಪುಣ್ಯದ ಆಕಾಂಕ್ಷೆಯೂ ಅವನಲ್ಲಿ ಈಗಾದರೂ ತೀವ್ರವಾಗಿದ್ದುವು. ಯುದ್ಧಮಾಡುವದನ್ನು ಅಲ್ಲಗಳೆದು ದಕ್ಕಾಗಿ ತನಗೆ ಪಾಪವು ತಟ್ಟುವ ಕಾರಣವೇನು ಎಂಬುದನ್ನು ಅರಿಯದೆ ಅವನು ತನ್ನ ನಿಶ್ಚಯವನ್ನು ಬಿಡುವ ಮನಃಸ್ಥಿತಿಯಲ್ಲಿರಲಿಲ್ಲ. ಮತ್ತು ಈ ಅವನ ಪ್ರಶ್ನೆಗೆ ಖಂಡಿತವಾದ ಕೊನೆಯ ಉತ್ತರವು ಇಲ್ಲಿ ನಡೆದ ಸಾಂಖ್ಯ ನಿರೂಪಣೆಯಲ್ಲಿ ದೊರೆವುದು ಶಕ್ಯವಿರಲಿಲ್ಲ.

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಂ ।**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥ ೩೪ ॥**

ಎಲ್ಲರೂ ಅವನ ಅಪಕೀರ್ತಿಯನ್ನು ಆಡಿಕೊಳ್ಳುವರು. ಅಪಕೀರ್ತಿಯನ್ನು ಸಹಿಸುವದು ಸಂಭಾವಿತನಿಗೆ ಮರಣಕ್ಕಿಂತಲೂ ಹೆಚ್ಚು ಕಠಿಣವಲ್ಲವೇ ?

**ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಂ ॥ ೩೫ ॥**

ಅವನ ಸರಿಸಮಾನರಾದ ಮಹಾರಥಿಗಳು ಅವನು ಅಂಜಿಕೆಯಿಂದ ಯುದ್ಧವನ್ನು ಬಿಟ್ಟನೆಂದು ತಿಳಿಯುವರು; ಮತ್ತು ಅವನನ್ನು ಈಗ ಸನ್ಮಾನ್ಯನೆಂದು ಭಾವಿಸುವ ಈ ಮಹಾರಥಿಗಳೇ ಅಲ್ಪನೆಂದು ಹೀಯಾಳಿಸುವರು.

**ಅವಾಚ್ಯವಾದಾಂಶ್ಚ ಬಹೂನ್ವದಿಷ್ಯಂತಿ ತವಾಹಿತಾಃ ।**
**ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥ ೩೬ ॥**

ಅವನ ವೈರಿಗಳು ಆಡಬಾರದಂಥ ಎಷ್ಟೋ ಮಾತುಗಳನ್ನು ಅವನ ವಿಷಯವಾಗಿ ಆಡಲಾರಂಭಿಸುವರು; ಮತ್ತು ಅವನ ಸಾಮರ್ಥ್ಯವನ್ನು ಹೀಯಾಳಿಸುವರು. ಅವನಿಗೆ ಇದಕ್ಕಿಂತಲೂ ಹೆಚ್ಚಿನ ದುಃಖವು ಇನ್ನಾವುದು ?

ಇದು ವರೆಗೆ ಅರ್ಜುನನು ತನ್ನ ಆಯುಷ್ಯವನ್ನು ಧರ್ಮ-ಕೀರ್ತಿ-ಸಾಮರ್ಥ್ಯಗಳನ್ನು ಪಡೆಯುವದರಲ್ಲಿಯೇ ಕಳೆದಿದ್ದನು. ಕ್ಷಣಿಕ ವೈರಾಗ್ಯದ ಭರದಲ್ಲಿ ಈ ತನ್ನ ಮೊದಲಿನ ಧ್ಯೇಯಗಳು ಅವನಿಗೆ ಕಾಣಿಸದೆ ಹೋದರೂ ಅವುಗಳನ್ನು ಹೋಗಲಾಡಿಸಿಕೊಂಡ ಬಳಿಕ ಅವನ ಅಪಹಾಸ್ಯವು ಯಾವ ಪರಿಯಿಂದಾಗುವದೆಂಬುದನ್ನು ವರ್ಣಿಸಿ, ಅವನಲ್ಲಿ ಆ ಧ್ಯೇಯಗಳ ಬಗೆಗೆ ಅಭಿಮಾನವನ್ನು ಪುನಃ ಹುಟ್ಟಿಸಬೇಕೆಂದು ಶ್ರೀಕೃಷ್ಣನು ಯತ್ನಿಸುತ್ತಿರುವನು. ಈ ಧ್ಯೇಯಗಳನ್ನು ಬಿಟ್ಟಮಾತ್ರಕ್ಕೆ ಪಾಪವಿಮುಕ್ತನಾಗುವ ಅವನ ಪ್ರಯತ್ನವಾದರೂ ಸಫಲವಾಗುವದೇನು ? ಅದೂ ಇಲ್ಲ. ಎಂದಮೇಲೆ ಧರ್ಮ-ಕೀರ್ತಿ-ಸಾಮರ್ಥ್ಯಗಳನ್ನಾದರೂ ಬಿಡುವುದೇಕೆ ?

**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ ।**
**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥ ೩೭ ॥**

ಯುದ್ಧವಾಡಿ ಸತ್ತರೆ ಸ್ವರ್ಗವು ದೊರೆಯುವದು, ಗೆದ್ದರೆ ಪೃಥ್ವಿಯ ಸಾಮ್ರಾಜ್ಯವನ್ನೇ ಉಪಭೋಗಿಸಬಹುದು. ಆದುದರಿಂದ ನೀನು ಯುದ್ಧ ಮಾಡಲು ನಿಶ್ಚಯಿಸಿ ಎದ್ದುನಿಲ್ಲಬೇಕು.

ಸ್ವರ್ಗವನ್ನಾಗಲಿ ಭೋಗಗಳನ್ನಾಗಲಿ ದೊರಕಿಸುವದಕ್ಕೆ ತಾನು ಮಾಡುವ ಯುದ್ಧದ ಆಧ್ಯಾತ್ಮಿಕ ಉಪಪತ್ತಿಯೇನೆಂಬುದನ್ನು ತಿಳಿಯುವದು ಅವಶ್ಯವಲ್ಲ. ಕ್ಷಾತ್ರಧರ್ಮವನ್ನನುಸರಿಸಿ ಯುದ್ಧ ಮಾಡುವದರಿಂದಲೇ ಅವು ದೊರೆಯುವವು. ಗೀತೆಯ ಅಧ್ಯಯನದಲ್ಲಿ ಅರ್ಜುನನು ಜ್ಞಾನಿಯು ಅಹುದೋ ಅಲ್ಲವೋ ಎಂಬ ಒಂದು ಪ್ರಶ್ನೆಯು ಮೇಲಿಂದ ಮೇಲೆ ಉಪಸ್ಥಿತವಾಗುವದು. ಶ್ರೀಕೃಷ್ಣನು ಬೋಧಿಸಿದ ಬಳಿಕ ಅರ್ಜುನನು ಜ್ಞಾನವಿಜ್ಞಾನಗಳಲ್ಲಿ ನಿಷ್ಣಾತನಾದುದೇನೋ ನಿಜ. ಆದರೆ ಈಗ ಅವನು ಕೇವಲ ಆರ್ಯನೆಂದು ಬಗೆದು ಶ್ರೀಕೃಷ್ಣನು ಬೋಧಿಸುತ್ತಲಿರುವನು. ಆರ್ಯನೆಂದರೆ, ಆರ್ಯರ ವರ್ಣಧರ್ಮದ ನಿಯಮಗಳನ್ನು ನಿಷ್ಠೆಯಿಂದ ಪಾಲಿಸುವವನೆಂದರ್ಥ. ಜ್ಞಾನಿಯಾದರೂ ಈ ನಿಯಮಗಳನ್ನೇ ಯಥಾಪ್ರಕಾರ ಪಾಲಿಸುವನು. ಆದರೆ ಜ್ಞಾನಿಯು ತನ್ನ ವರ್ಣಧರ್ಮದ ಉಪಪತ್ತಿಯನ್ನಷ್ಟೇ ಅಲ್ಲದೆ ಜ್ಞಾನವಿಜ್ಞಾನಪೂರ್ಣವಾದ ಆಧ್ಯಾತ್ಮಿಕ

ಧರ್ಮವನ್ನಾದರೂ ನಿಃಸಂದೇಹವಾಗಿ ತಿಳಿದಿರುವನು. ಕೇವಲ ಆರ್ಯ ನೆನಿಸುವವನಿಗೆ ಈ ಜ್ಞಾನವು ಇರುವದಿಲ್ಲ. ಆರ್ಯ ಮತ್ತು ಜ್ಞಾನಿ ಅಥವಾ ಪಂಡಿತ ಎಂಬ ಶಬ್ದಗಳಿಗೆ ಈ ಪ್ರಕಾರದ ಅರ್ಥಗಳು ಗೀತೆಯಲ್ಲಿ ಉದ್ದಿಷ್ಟ ವಾಗಿವೆ. ಇದೂ ಅಲ್ಲದೆ ತನ್ನ ಕರ್ತವ್ಯವನ್ನು ನಿಷ್ಠೆಯಿಂದ ಮಾಡಿದ್ದಕ್ಕಾಗಿ ಆರ್ಯನಿಗೆ ಇಹಪರಗಳಲ್ಲಿ ಭೋಗಗಳೂ ಸುಖಗಳೂ ದೊರೆಯುವವು. ಆದರೆ ಜ್ಞಾನಿಗೆ ಇಹದಲ್ಲಿ ಶಾಂತಿಯೂ ಪರದಲ್ಲಿ ಮುಕ್ತಿಯೂ ಸಾಧಿಸು ವವು. ಅರ್ಜುನನು ಈಗ ಆರ್ಯನೆನಿಸುವನು, ಜ್ಞಾನಿಯಲ್ಲ. ಅವನು ಸ್ವರ್ಗಕ್ಕಾಗಿ ಅಥವಾ ಭೋಗಕ್ಕಾಗಿ ಯುದ್ಧವನ್ನು ಮಾಡಬಹುದು.

**ಸುಖದುಃಖೇ ಸಮೇಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥ ೩೮ ॥**

ಸುಖದುಃಖ ಲಾಭಾಲಾಭ ಜಯಾಪಜಯಗಳನ್ನು ಸಮಾನವಾಗಿ ಭಾವಿಸಿ ಅರ್ಜುನನು ಯುದ್ಧಕ್ಕೆ ಪ್ರವೃತ್ತನಾಗಬೇಕು. ಹೀಗೆ ಮಾಡಿದರೆ ಅವನಿಗೆ ಪಾಪವು ತಟ್ಟುವದಿಲ್ಲ ಮತ್ತು ಪಾಪದಿಂದ ನಿವೃತ್ತನಾಗಬೇಕೆಂಬ ಅವನ ನಿರ್ಧಾರವು ನೆರವೇರುವದು.

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇತ್ವಿಮಾಂ ಶೃಣು ।**
**ಬುದ್ಧ್ಯಾಯುಕ್ತೋ ಯಯಾ ಪಾರ್ಥ ಕರ್ಮಬಂಧಂ**
**ಪ್ರಹಾಸ್ಯಸಿ ॥ ೩೯ ॥**

ಈ ವರೆಗಿನ ವಿವರಣೆಯನ್ನು ಸಾಂಖ್ಯವೆಂಬ ನಿಷ್ಠೆಯನ್ನನುಸರಿಸಿ ನಿನ್ನ ಹಿತಕ್ಕಾಗಿ ನಾನು ಹೇಳಿದೆನು. ಇನ್ನು ಬುದ್ಧಿಯುಕ್ತನಾದರೆ ನೀನು ಕರ್ಮ ಮಾಡಿಯೂ ಕರ್ಮಬಂಧನವನ್ನು ಹೇಗೆ ತಪ್ಪಿಸುವೆ ಎಂಬುದನ್ನು ಕೇಳು.

ಈ ವರೆಗೆ ಮಾಡಿದ ನಿರೂಪಣೆಗೆ ಸಾಂಖ್ಯವೆಂದು ಹೆಸರಿಟ್ಟರೂ ಈ ಸಾಂಖ್ಯವು ಕಾಪಿಲ ಸಾಂಖ್ಯವಲ್ಲವೆಂಬ ವಿಷಯದಲ್ಲಿ ಮತಭೇದವಿಲ್ಲ. ಆದರೆ ಇಲ್ಲಿ ಹೇಳಿದ ಸಾಂಖ್ಯದ ವೈಶಿಷ್ಟ್ಯವೇನು? ಇದಕ್ಕೂ ಕಾಪಿಲ ಸಾಂಖ್ಯಕ್ಕೂ ಸಂಬಂಧವಾಗಲಿ ಸಾಮ್ಯವಾಗಲಿ ಎಷ್ಟುಮಟ್ಟಿಗೆ ಇರುವದು ಎಂಬ ವಿಚಾರ ಗಳು ಬಹಳ ಸಂದಿಗ್ಧವಾಗಿ ಉಳಿದು ಹೋಗಿವೆ. ಅನುಕೂಲ ಕಂಡ ಹಾಗೆಲ್ಲ

ಇಲ್ಲಿ ಹೇಳಿದ ಸಾಂಖ್ಯದ ಸಂಬಂಧವನ್ನು ಕಾಪಿಲ ಸಾಂಖ್ಯದೊಂದಿಗೆ ಹೊಂದಿಸುವದು ಇಲ್ಲವೆ ಬಿಡಿಸುವದು ಸರಿಯಲ್ಲವೆಂದು ನಮಗೆ ತೋರುವದು.

ಈ ಅಧ್ಯಾಯದಲ್ಲಿ ಮೇಲೆ ಮಾಡಿದ ವಿವೇಚನೆಗೆ ಸಾಂಖ್ಯವೆಂಬ ಹೆಸರನ್ನು ಸಾರ್ಥಕವಾಗಿಯೂ ಸಹೇತುಕವಾಗಿಯೂ ಶ್ರೀಕೃಷ್ಣನು ಕೊಟ್ಟಿರುವನು. ಗೀತೆಯ ಮುಖ್ಯ ವಿಷಯವಾದ ಬುದ್ಧಿಯೋಗದ ಅನುಭವವು ತತ್ಪೂರ್ವದ ಯಾವ ಮನಃಸ್ಥಿತಿಯಲ್ಲಿ ಉದಯಿಸುವದೋ ಆ ಸಾಂಖ್ಯವೆನಿಸುವ ಮನಃಸ್ಥಿತಿಯನ್ನು ಗೀತೆಯಲ್ಲಿ ಹೇಳಬೇಕಾದುದು ಉಚಿತವು. ಈ ಮನಃಸ್ಥಿತಿಯಿಂದ ಬುದ್ಧಿಯೋಗವು ಉದಯಿಸುವದಾದರೂ ಅದನ್ನೇ ಬುದ್ಧಿಯೋಗವೆಂದು ಹೇಳುವದು ಯುಕ್ತವಲ್ಲ. ಏಕೆಂದರೆ, ಬುದ್ಧಿಯೋಗದ ಯಾವ ಲಕ್ಷಣಗಳೂ ಅದರಲ್ಲಿ ರೂಪುಗೊಂಡಿರುವದಿಲ್ಲ. ಈ ಮನಃಸ್ಥಿತಿಯು ಬುದ್ಧಿಯೋಗದಿಂದ ಪ್ರತ್ಯೇಕವಾಗಿದೆ ಎಂದು ತೋರಿಸುವದಕ್ಕಾಗಿಯೇ ಗೀತೆಯಲ್ಲಿ ಅದಕ್ಕೆ ಸಾಂಖ್ಯವೆಂಬ ಹೆಸರನ್ನಿಟ್ಟಿದೆ. **ವ್ಯಕ್ತಿಭೂತನಾದ ಭಗವಂತನನ್ನು (೧೦-೧೪)—ಪುರುಷೋತ್ತಮ ಶ್ರೀಕೃಷ್ಣನನ್ನು—ಒಪ್ಪಿಕೊಳ್ಳುವದೇ ಗೀತೆಯ ಬುದ್ಧಿಯೋಗಶಾಸ್ತ್ರದ ವೈಶಿಷ್ಟ್ಯವಾಗಿದೆ. ಬುದ್ಧಿಯಲ್ಲಿ ಅಂಕುರಿಸಿ ಬೆಳೆದ ಆ ಭಗವಂತನಲ್ಲಿಯ ಶ್ರದ್ಧೆಯೂ ತದನುಸಾರವಾಗಿ ಬುದ್ಧಿಯಲ್ಲಿ ಪರಿಣಮಿಸುವ ಯೋಗಯುಕ್ತತೆಯೂ ಈ ಬುದ್ಧಿಯೋಗದ ಮುಖ್ಯ ಲಕ್ಷಣಗಳಾಗಿವೆ.** ಈ ಲಕ್ಷಣಗಳು ಮನುಷ್ಯನ ಬುದ್ಧಿಯಲ್ಲಿ ಉದಯಿಸುವ ಮೊದಲು ಕೇವಲ ಜಿಜ್ಞಾಸೆಯಿಂದ ಪ್ರೇರಿತವಾದ ಶುಷ್ಕಬುದ್ಧಿವಾದವು—ಗೀತೆಯಲ್ಲಿ ಇದೇ ಪ್ರಜ್ಞಾವಾದವೆನಿಸಿದೆ—ಮನುಷ್ಯನ ಮನಸ್ಸಿನಲ್ಲಿ ಭ್ರಮಿಸುತ್ತಲಿರುವದು. **ಈ ಮನಃಸ್ಥಿತಿಯನ್ನೂ ಅದರಲ್ಲಿ ತುಂಬಿದ ಒಣ ಬುದ್ಧಿವಾದವನ್ನೂ ಗೀತೆಯಲ್ಲಿ ಸಾಂಖ್ಯವೆಂದು ಹೇಳಿದೆ.** ಈ ಸಾಂಖ್ಯಸ್ಥಿತಿಯ ಉಪಯೋಗವೂ ಮಹತ್ವವೂ ಏನೆಂದರೆ, ಬುದ್ಧಿಯೋಗವನ್ನು ಪಡೆಯುವದಕ್ಕೆ ಮೊದಲು ಮನುಷ್ಯನು ಇಂಥ ಮನಃಸ್ಥಿತಿಯನ್ನು ದಾಟಬೇಕಾಗುವದು. ಸಾರಾಂಶವೇನೆಂದರೆ, **ಬುದ್ಧಿಯೋಗವೆಂದರೆ ಪೌರುಷೇಯನಾದ ಪರಮೇಶ್ವರನಲ್ಲಿಟ್ಟ ನಿಷ್ಠೆಯನ್ನವಲಂಬಿಸಿದ ತತ್ವಜ್ಞಾನವೆಂದೂ ಸಾಂಖ್ಯವೆಂದರೆ**

ಇಂಥ ನಿಷ್ಠೆಯ ಅಭಾವದಲ್ಲಿ ಸೃಷ್ಟಿಯ ನಿಯಮಗಳನ್ನು ಕುರಿತು ರಚಿಸಿದ ತತ್ವಜ್ಞಾನವೆಂದೂ ಗೀತೆಯ ಅಭಿಪ್ರಾಯವು. ಗೀತೆಯಲ್ಲಿ ಹೇಳಿದ ಸಾಂಖ್ಯದೊಳಗಿನ ಅಂದರೆ ಅರ್ಜುನನಿಗಾಗಿ ಅವನ ಪ್ರಜ್ಞಾವಾದವನ್ನನುಲಕ್ಷಿಸಿ ಶ್ರೀಕೃಷ್ಣನು ಹೇಳಿದ ಪ್ರಜ್ಞಾವಾದದೊಳಗಿನ ಈ ಈಶ್ವರನ ವಿಷಯದ ವಿಮುಖತೆಯನ್ನು ಬಿಟ್ಟರೆ ಈ ಸಾಂಖ್ಯಕ್ಕೂ ಕಾಪಿಲಸಾಂಖ್ಯದ ತತ್ವಗಳಿಗೂ ಬೇರೆ ಯಾವ ಸಂಬಂಧವೂ ಇರುವದಿಲ್ಲ. ಇದೂ ಅಲ್ಲದೆ ಸಾಂಖ್ಯವೆಂದರೆ ಜ್ಞಾನಮಾರ್ಗವೆಂದೂ ಸನ್ಯಾಸಮಾರ್ಗವೆಂದೂ ಪ್ರಸಂಗಾನುಸಾರವಾಗಿ ಅರ್ಥ ಮಾಡುವದು ಸರಿಯಲ್ಲ.

ಗೀತೆಯಲ್ಲಿ ಹೇಳಿರುವ ಸಾಂಖ್ಯವಿವರಣೆಯನ್ನು ಸ್ವಲ್ಪ ಸೂಕ್ಷ್ಮವಾಗಿ ಪರೀಕ್ಷಿಸಿ ನೋಡಿದರೆ ನಾವು ಮೇಲೆ ಹೇಳಿದ ಪ್ರಮೇಯವು ವಿಶದವಾಗುವದು. ಈ ಸಾಂಖ್ಯದಲ್ಲಿ ಆತ್ಮಸ್ವಭಾವವೂ ಆದರ ಅವಿನಾಶತ್ವವೂ ಮುಖ್ಯವಾಗಿ ವರ್ಣಿತವಾಗಿವೆ. ತಾನು ಏಕೆ ಯುದ್ಧ ಮಾಡಬಾರದೆಂಬ ಅರ್ಜುನನ ಸಂಶಯಕ್ಕೆ ಆತ್ಮವು ಅಮರವಾದುದೆಂಬ ಕಾರಣವನ್ನು ಮಾತ್ರವೇ ಈ ಸಾಂಖ್ಯದಲ್ಲಿ ಶ್ರೀಕೃಷ್ಣನು ಹೇಳಿರುವನು. ಈ ಹೊರತು ಉಲ್ಲೇಖಿತವಾದ ಕಾರಣಗಳೆಂದರೆ ಸುಖದುಃಖಗಳನ್ನು ಸಮಾನವಾಗಿ ನೋಡುವದು, ಅಪರಿಹಾರ್ಯವನ್ನು ಕುರಿತು ಶೋಕಿಸದಿರುವದು, ಸ್ವಧರ್ಮೋಚಿತವಾಗಿ ನಡೆಯುವದು, ಕರ್ಮವನ್ನು ಬಿಡದಿರುವದು, ಪಾಪದಿಂದ ನಿವೃತ್ತನಾಗುವದು ಇವೇ. ಈ ವಿಷಯಗಳ ಉಪಪತ್ತಿಯನ್ನು ಈ ಸಾಂಖ್ಯನಿರೂಪಣೆಯಲ್ಲಿ ಯಾವ ಪ್ರಮಾಣದಲ್ಲಿಯೂ ಚರ್ಚಿಸದೆ ಕೇವಲ ಸಾಮಾನ್ಯ ನೀತಿವಚನಗಳಂತೆ ಅವುಗಳನ್ನು ಶ್ರೀಕೃಷ್ಣನು ನುಡಿದಿರುವನು. ಇವೆಲ್ಲವುಗಳ ತಾತ್ವಿಕ ಉಪಪತ್ತಿಯನ್ನು ಬುದ್ಧಿಯೋಗವಿಭಾಗದಲ್ಲಿ ಹೇಳಿರುವದು ನಿಜ. ಆದರೆ ಇದರಿಂದ ಇಲ್ಲಿಯೇ ಸಮಾಪ್ತವಾದ ಸಾಂಖ್ಯವಿವೇಚನೆಗೆ ಯಾವ ಮಹತ್ವವೂ ಬರಲಾರದು. ಅಲ್ಲದೆ, ಗೀತಾವಿಶಿಷ್ಟವಾದ ಈ ಸಾಂಖ್ಯದಲ್ಲಿ ಗೀತೆಯ ದೃಷ್ಟಿಯಿಂದಲೇ ಇರುವ ಕೊರತೆಯು ಯಾವುದೆಂದರೆ, ಶ್ರೀಕೃಷ್ಣನ ಪುರುಷೋತ್ತಮತ್ವವೂ ಆವನಲ್ಲಿ ಮನುಷ್ಯನಿಗೆ ಇತಿಕರ್ತವ್ಯವಾದ ಭಕ್ತಿಯೂ ಅದರಲ್ಲಿ ಸಮಾವೇಶವಾಗಿರುವದಿಲ್ಲ. ಈ ವಿಷಯಗಳನ್ನೆಲ್ಲ

ಆಲೋಚಿಸಿದರೆ ಗೀತೆಯ ವಿಶಿಷ್ಟಸಾಂಖ್ಯದ ಅಪೂರ್ಣತೆಯು ಕಂಡು ಬರುವದು.

ಶ್ರೀಕೃಷ್ಣನು ಈ ವರೆಗೆ ಮಾಡಿದ ಸಾಂಖ್ಯನಿರೂಪಣೆಯಿಂದ ಅರ್ಜುನನ ಮನಸ್ಸಿನ ಮೇಲೆ ಯಾವ ಪರಿಣಾಮವಾಗಿರಬಹುದೆಂಬದನ್ನಾದರೂ ಇಲ್ಲಿ ಪರೀಕ್ಷಿಸಿ ನೋಡುವ. ಅವನು ಮೊದಲು ಕೇಳಿದ ಪ್ರಶ್ನೆಗಳೆಲ್ಲವೂ ಸಮರ್ಪಕವಾದ ಉತ್ತರವಿಲ್ಲದೆ ಯಥಾಸ್ಥಿತನಾಗಿ ನಿಂತು ಹೋದವು. ಶ್ರೀಕೃಷ್ಣನು ಮೊದಲು ಆಡಿದ ಬಿರುನುಡಿಯಿಂದ ಸಡಲಿದ ಅವನ ದೃಢನಿಶ್ಚಯವು ಸ್ವಲ್ಪ ಹೆಚ್ಚು ಶಿಥಿಲವಾಗಿರಬಹುದೆಂದು ನಾವು ಊಹಿಸಬಹುದು. ಏಕೆಂದರೆ, ಆತ್ಮವು ಅಮರವೆಂಬ ಸತ್ಯವು ಅವನಿಗೆ ತಿಳಿದಿತ್ತೆಂಬುದರಲ್ಲಿ ಸಂಶಯವಿಲ್ಲ. ಆದರೂ ಮೊದಲನೆಯ ಅಧ್ಯಾಯದಲ್ಲಿ ಯುದ್ಧನಿರಾಕರಣೆಯನ್ನು ನಿಶ್ಚಯಿಸುವಾಗ ತಾನು ಮಾಡಿದ ವಿಚಾರದಲ್ಲಿ ಈ ಪ್ರಮೇಯವನ್ನು ಅವನು ಎಣಿಸಿರಲಿಲ್ಲ. ಹಾಗಿದ್ದರೂ ಅರ್ಜುನನಂಥ ಶಿಷ್ಯನಿಗೆ ಆತ್ಮದ ಅಮರತ್ವದಂಥ ಸಾಧಾರಣವೂ ಸಹಜಸಿದ್ಧವೂ ಆದ ತತ್ವವನ್ನು ಹೀಗೆ ಪರಿಪರಿಯಿಂದ ತಿಳಿಸಿ ಹೇಳುವದು ಅವಶ್ಯವಾಗಿತ್ತೆಂದು ನಮಗೆ ತೋರುವದಿಲ್ಲ. ಅರ್ಜುನನ ಮಹತ್ವದ ಇತರ ಆಕ್ಷೇಪಗಳನ್ನು ಈ ಸಾಂಖ್ಯವಿವರಣೆಯಲ್ಲಿ ಶ್ರೀಕೃಷ್ಣನು ಉಚ್ಚರಿಸಲೂ ಇಲ್ಲ. ಪೂಜ್ಯರಾದ ಗುರುಜನರನ್ನು ಏಕೆ ವಧಿಸಬೇಕು? ರಾಷ್ಟ್ರದ ಕ್ಷಯಕ್ಕೆ ಅವಿಚಾರದಿಂದ ಏಕೆ ಕಾರಣನಾಗಬೇಕು? ಕುಲಧರ್ಮಗಳ ಅಳಿವೂ ವರ್ಣಸಂಕರಾದಿಗಳೂ ಸಮಾಜದ ಭವಿತವ್ಯಕ್ಕೆ ಭಯಸೂಚಕಗಳಾಗುವದಿಲ್ಲವೇ? ಇವೇ ಮೊದಲಾದ ವಿಷಯಗಳ ಬಗೆಗೆ ಒಂದಕ್ಷರವನ್ನಾದರೂ ಈ ಸಾಂಖ್ಯನಿರೂಪಣೆಯಲ್ಲಿ ಹೇಳಿರುವದಿಲ್ಲ. ಈ ಶಂಕೆಗಳು ಶ್ರೀಕೃಷ್ಣನಿಗೆ ಕ್ಷುಲ್ಲಕವಾಗಿ ತೋರಿರಬಹುದು. ಆದರೂ ಅರ್ಜುನನ ಸಮಾಧಾನಕ್ಕಾಗಿ ಅವುಗಳಿಗೆ ಶ್ರೀಕೃಷ್ಣನು ಉತ್ತರ ಕೊಟ್ಟಿರಬಹುದಾಗಿತ್ತು. ಸಾಂಖ್ಯನಿರೂಪಣೆಯ ಮೇರೆಗೆ ಈ ಸಂಶಯಗಳಿಗೆ ಸಮಾಧಾನ ಹೇಳುವದು ಶಕ್ಯವಾಗಲಿಲ್ಲೆಂದೇ ಅವುಗಳ ಗೋಜಿಗೆ ಶ್ರೀಕೃಷ್ಣನು ಹೋಗಲಿಲ್ಲೆಂದು ನಮಗೆ ತೋರುವದು.

ಆತ್ಮದ ಅವಿನಾಶಿತ್ವವನ್ನು ಹೀಗೆ ಹೆಚ್ಚಿಸಿ ಹೇಳುವದು ಶ್ರೀಕೃಷ್ಣನಿಗಾದರೂ ಬೇಕಾಗಿತ್ತು. ತನಗುಂಟಾದ ಧರ್ಮಸಂಕಟವನ್ನು ಅರ್ಜುನನು

ಬಹು ಗಂಭೀರವಾಗಿಯೂ ಪರಿಣಾಮಕರವಾಗಿಯೂ ಬಣ್ಣಿಸಿದ್ದನು. ಆವನ ಧರ್ಮಸಂಕಟದ ವರ್ಣನೆಯನ್ನು ನಿಸ್ತೇಜವಾಗಿ ಮಾಡುವ ಯಾವುದಾದರೊಂದು ತತ್ವವನ್ನು ಆವನೆದುರಿಗೆ ಇರಿಸಬೇಕೆಂದು ಶ್ರೀಕೃಷ್ಣನ ಸಂಕೇತವಿದ್ದಂತೆ ತೋರುವದು. ಇದಕ್ಕಾಗಿ ಅರ್ಜುನನಿಗೆ ಚೆನ್ನಾಗಿ ಗೊತ್ತಿದ್ದ ಆತ್ಮದ ಅವಿನಾಶಿತ್ವವನ್ನೇ ಅವನು ಹೆಚ್ಚಾಗಿ ಒತ್ತಿಒತ್ತಿ ಹೇಳಬೇಕಾಯಿತು. ಬುದ್ಧಿಯೋಗವನ್ನು ಹೇಳಿದರೆ ಅವನ ಸಂಶಯಗಳೆಲ್ಲವೂ ನಷ್ಟವಾಗುವವೆಂಬ ಪೂರ್ಣ ಅರಿವು ಶ್ರೀಕೃಷ್ಣನಿಗೆ ಇದ್ದಿತು. ಆದರೆ ಬುದ್ಧಿಯೋಗದ ಪ್ರವೇಶಕ್ಕೆ ಇನ್ನೂ ಅವಕಾಶವಿತ್ತು; ಮತ್ತು ಅರ್ಜುನನು ಹೇಳಿದ ಪ್ರಜ್ಞಾವಾದಕ್ಕೆ—ಸಾಂಖ್ಯವಿಚಾರಕ್ಕೆ—ಪ್ರತಿಯಾಗಿ ತಾನೂ ಪ್ರಜ್ಞಾವಾದವನ್ನು ಹೇಳಿ ತರುವಾಯ ಬುದ್ಧಿಯೋಗದ ನಿರೂಪಣೆಗೆ ಇಲ್ಲಿ ಶ್ರೀಕೃಷ್ಣನು ಆರಂಭಿಸುವನೆಂಬುದು ಸ್ಪಷ್ಟವಾಗಿದೆ.

ನಾವು ಮೇಲೆ ಹೇಳಿದ ಕಾರಣಗಳಿಗಾಗಿ ಗೀತೆಯಲ್ಲಿ ಬಂದ ಸಾಂಖ್ಯವನ್ನು ಒಂದು ಶಾಸ್ತ್ರವೆಂದು ಹೇಳಲಾಗದು. ಅದು ಒಂದು ನಿಷ್ಠೆಯೆಂಬುದು ನಿಜ. **ನಿಷ್ಠೆಯೆಂದರೆ ಸಂಪೂರ್ಣ ಜ್ಞಾನವಿಲ್ಲದ ಸ್ಥಿತಿಯಲ್ಲಿ ಶ್ರದ್ಧೆಯಿಂದ ಆಚರಿಸಲ್ಪಡುವ ಧರ್ಮಭಾವನೆಯೆಂಬರ್ಥ.**

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥ ೪೦ ॥**

ಈ ಬುದ್ಧಿಯೋಗವನ್ನು ಸಾಧಿಸಲು ಮಾಡುವ ಪ್ರಯತ್ನವು ಎಷ್ಟು ಅಲ್ಪವಾದರೂ ನಿಷ್ಫಲವಾಗದು. ಅಂಥ ಪ್ರಯತ್ನದಿಂದ ವಿಪರೀತ ಪರಿಣಾಮವೂ ಆಗುವದಿಲ್ಲ. ಈ ಬುದ್ಧಿಯೋಗವೆಂಬ ಧರ್ಮವನ್ನು ಅಲ್ಪ ಪ್ರಮಾಣದಲ್ಲಿ ಆಚರಿಸಿದರೂ ಅದು ಮನುಷ್ಯನನ್ನು ಮಹಾಭಯದಿಂದ ರಕ್ಷಿಸುವದು.

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ।**
**ಬಹುಶಾಖಾಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಂ ॥ ೪೧ ॥**

ಈ ಬುದ್ಧಿಯೋಗವನ್ನು ಸಾಧಿಸುವದಕ್ಕೆ ವ್ಯವಸಾಯಾತ್ಮಕ ಬುದ್ಧಿಯನ್ನು ಏಕಾಗ್ರವಾಗಿ ಮಾಡಬೇಕಾಗುವದು. ಅವ್ಯವಸಾಯಿಗಳಾದವರ

ಬುದ್ಧಿಯು ಚಂಚಲವಿದ್ದು ಕಂಡಕಡೆಗೆಲ್ಲ ಹೊಯ್ದಾಡುವದು—ಅನೇಕಾಗ್ರ ವುಳ್ಳದ್ದಾಗಿರುವದು.

ವ್ಯವಸಾಯಾತ್ಮಕ ಬುದ್ಧಿ ಎಂದರೇನೆಂಬುದನ್ನು ಗ್ರಹಿಸಬೇಕು. ಮನುಷ್ಯಸ್ವಭಾವ ರಚನೆಯಲ್ಲಿ ಬುದ್ಧಿಯ ಸ್ಥಾನವು ಮಧ್ಯದಲ್ಲಿರುವದು. ಅದರ ಕೆಳಗೆ ಮನಸ್ಸು ಮತ್ತು ಇಂದ್ರಿಯ ಸ್ವಭಾವಗಳೂ ಮೇಲೆ ಆತ್ಮ ಸ್ವಭಾವವೂ ಇರುವವು. ಮೇಲಿನಿಂದ ಅಂದರೆ ಆತ್ಮಸ್ವಭಾವದಿಂದ ಉದ್ಭವಿಸುವ ಪ್ರೇರಣೆಗಳೂ ಕೆಳಗಿನಿಂದ ಅಂದರೆ ಇಂದ್ರಿಯ ಹಾಗು ಮನಃಸ್ವಭಾವ ದಿಂದ ಬರುವ ಪ್ರೇರಣೆಗಳೂ ಬುದ್ಧೀಂದ್ರಿಯದಲ್ಲಿ ಕಲೆಯುವವು. ಈ ದ್ವಿವಿಧ ಪ್ರೇರಣೆಗಳಲ್ಲಿ ಒಂದನ್ನು ಸ್ವೀಕರಿಸುವ ಕೆಲಸವನ್ನು ಸ್ವಭಾವಸಿದ್ಧವಾಗ ಅಧಿಕಾರದಿಂದ ಬುದ್ಧಿಯು ಮಾಡಬೇಕಾಗುವದು. ಅದಕ್ಕಿರುವ ಈ ಅಧಿಕಾರವನ್ನನುಲಕ್ಷಿಸಿಯೇ ಅದಕ್ಕೆ ಸದಸದ್ವಿವೇಕಬುದ್ಧಿ ಎಂಬ ಹೆಸರು ಬಂದಿದೆ. ಆದರೆ, ಈ ಹೆಸರು ಗೀತೆಯಲ್ಲಿ ಹೇಳಬೇಕಾಗಿರುವ ವಿಶಿಷ್ಟವಾದ ಅರ್ಥವನ್ನು ವ್ಯಕ್ತಪಡಿಸಲಾರದು. ಆದುದರಿಂದ ಬುದ್ಧಿಯ ವ್ಯವಹಾರ ಗಳನ್ನು ಸೂಚಿಸುವದಕ್ಕಾಗಿ ಅದಕ್ಕೆ ಬೇರೆ ಹೆಸರುಗಳು ಕೊಟ್ಟಿವೆ. **ಮನಸ್ಸು ಮತ್ತು ಇಂದ್ರಿಯ ವ್ಯವಹಾರಗಳನ್ನು ನಿರ್ವಹಿಸುವದರಲ್ಲಿ ತತ್ಪರವಾದಾಗ ಬುದ್ಧಿಗೆ ವ್ಯವಸಾಯಾತ್ಮಕ ಬುದ್ಧಿ** ಎಂದು ಗೀತೆಯಲ್ಲಿ ಹೆಸರು. ಏಕೆಂದರೆ, ಮನಸ್ಸೂ ಇಂದ್ರಿಯಗಳೂ ತಮ್ಮ ತಮ್ಮ ವ್ಯವಸಾಯ ಗಳನ್ನು ಮಾಡುತ್ತಿದ್ದರೂ ಅವುಗಳ ಕಾರ್ಯದ ಹೊಣೆಯನ್ನು ಬುದ್ಧೀಂದ್ರಿ ಯವೇ ಹೊರಬೇಕಾಗುವದು. ಇನ್ನು ಈ ವ್ಯವಸಾಯಾತ್ಮಕ ಬುದ್ಧಿಯು ಏಕಾಗ್ರವಾಗುವದೆಂದರೇನೆಂಬುದನ್ನು ವಿಚಾರಿಸುವ.

ಆತ್ಮಸ್ವಭಾವದಿಂದ ಬರುವ ಪ್ರೇರಣೆಗಳಿಗೆ ಸಮ್ಮತಿಸಿ ಆ ಪ್ರೇರಣೆ ಗಳನ್ನೇ ಬುದ್ಧಿಯು ಅನುಸರಿಸಿದರೆ ಅದು ಏಕಾಗ್ರವಾಗುವದು ಎಂದು ಗೀತೆಯು ಹೇಳುವದು. ಏಕೆಂದರೆ, ಪರಮಾತ್ಮನನ್ನು—ಪುರುಷೋತ್ತಮ ನನ್ನು—ಗುರುತಿಸುವ ಶಕ್ತಿಯು ಜೀವನಲ್ಲಿ ಅವನ ಆತ್ಮಸ್ವಭಾವಕ್ಕೆ ಮಾತ್ರ ಇರುವದು. ಜೀವನ ಪರಮಾತ್ಮ ವಿಷಯಕವಾದ ಭಾವನೆಗಳೆಲ್ಲ ಅವನ ಆತ್ಮಸ್ವಭಾವಮೂಲಕವಾಗಿರುವವೆಂಬ ತತ್ವವನ್ನು ಗೀತೆಯು ಹೇಳುವದು ಬುದ್ಧಿಯು ಹೀಗೆ ಆತ್ಮಪ್ರೇರಿತವಾದಾಗ ಅದು ನಿರ್ಮಲಿನ

ವಾಗಿ ಏಕಾಗ್ರವು ಅಂದರೆ ಪರಮಾತ್ಮರತವು ಅಥವಾ ಪರಮಾತ್ಮಾಭಿಮುಖವು ಆಗುವದು. ಈ ಸ್ಥಿತಿಯಲ್ಲಿಯೂ ಬುದ್ಧಿಯ ಇಂದ್ರಿಯ ವಿಷಯದ ವ್ಯವಸಾಯಾತ್ಮಕ ಸಂಸಾರವು ನಿಂತುಹೋಗುವದಿಲ್ಲ; ನಡೆಯುತ್ತಲೇ ಇರುವದು. **ಏಕಾಗ್ರತೆಯ ಮೂಲಕ ಶುದ್ಧವಾದ ಬುದ್ಧಿಯ ಇಂದ್ರಿಯ ವಿಷಯಕ ವ್ಯವಹಾರಗಳು ಜೀವನಿಗೆ ಬಾಧಕವಾಗದೆ ಎಂಥ ಪರಿಸ್ಥಿತಿಯಲ್ಲಿಯೂ ಸಾಧಕವೇ ಆಗುವವೆಂಬುದನ್ನು ವಿವೇಚಿಸುವದೇ ಗೀತೆಯ ಮುಖ್ಯ ವಿಷಯವಾಗಿದೆ. ಬುದ್ಧಿಯೋಗವೆಂದರೆ ಇದೇ.** ಅದನ್ನು ಕುರಿತು ಇಲ್ಲಿ ವಿಸ್ತಾರವಾಗಿ ವಿವರಿಸುವದು ಅವಶ್ಯವಾಗಿಲ್ಲ. ಏಕಾಗ್ರವಾದ ಈ ಬುದ್ಧಿಯನ್ನೇ ಚಿತ್ತವೆಂದೂ ಚೇತಸ್ ಎಂದೂ ಗೀತೆಯಲ್ಲಿ ಹೇಳಿರುವರೆಂಬುದನ್ನು ಗಮನಿಸಿದರೆ ಮುಂದಿನ ನಿರೂಪಣೆಯನ್ನು ಗ್ರಹಿಸುವದು ಸುಲಭವಾದೀತು. ವ್ಯವಸಾಯಿ ಹಾಗು ಅವ್ಯವಸಾಯಿ ಎಂಬವು ಗೀತೆಯಲ್ಲಿ ಪಾರಿಭಾಷಿಕ ಶಬ್ದಗಳಾಗಿವೆ. ಬುದ್ಧಿಯು ಏಕಾಗ್ರವಾದುದರಿಂದ ಅದರ ವ್ಯವಸಾಯಗಳು ನಿರ್ದೋಷವಾಗಿದ್ದರೆ ಆ ಬುದ್ಧಿಯನ್ನು ವ್ಯವಸಾಯಿ ಎಂದು ಗೀತೆಯು ಹೇಳುವದು. **ಆದರೆ ಬುದ್ಧಿಯು ಏಕಾಗ್ರವಾಗಿರದಾಗ ಅದರ ವ್ಯವಸಾಯಗಳು ಗೀತೆಯ ದೃಷ್ಟಿಯಿಂದ ಸದೋಷವಾಗಿವೆ ಎಂದು ಸೂಚಿಸುವದಕ್ಕಾಗಿ ಆ ಬುದ್ಧಿಯನ್ನು ಅವ್ಯವಸಾಯಿ ಎಂದು ಅದು ಹೇಳುವದು. ಅವ್ಯವಸಾಯಿ ಎಂದರೆ ವ್ಯವಸಾಯರಹಿತವಾದ, ವ್ಯವಸಾಯದ ಅಭಾವವುಳ್ಳ ಬುದ್ಧಿಯೆಂದು ತಿಳಿಯಬಾರದು.**

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥ ೪೨ ॥**
**ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಂ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥ ೪೩ ॥**
**ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಂ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ ೪೪ ॥**

ವ್ಯವಹಾರಕುಶಲವಾದರೂ ಗುರಿ ಇಲ್ಲದೆ ನಾನಾ ದಿಕ್ಕುಗಳಲ್ಲಿ ಹರಿದಾಡುವದರಿಂದ ಅವ್ಯವಸಾಯಿ ಎನಿಸುವ ಬುದ್ಧಿಯ ಸ್ಥೂಲಪ್ರಕಾರ

ಗಳನ್ನು ಪ್ರಪಂಚದಲ್ಲಿ ಯಾವಾಗಲೂ ಕಾಣಬಹುದು. ಅಂಥ ಬುದ್ಧಿಯನ್ನು ಅವ್ಯವಸಾಯಿಯೆಂದು ಗುರುತಿಸುವದು ಸುಲಭವು. ಆದರೆ ಈ ಅವ್ಯಸಾಯಿತೆಯು ಅತ್ಯಂತ ಸೂಕ್ಷ್ಮಗಾಮಿಯು. ಲೌಕಿಕ ವ್ಯವಹಾರಗಳಲ್ಲಿ ಮುಳುಗಿದವರನ್ನು ಇದು ಬಾಧಿಸುವದು ಹಾಗಿರಲಿ. ಆದರೆ ಐಹಿಕವನ್ನೆಲ್ಲ ತ್ಯಾಗ ಮಾಡಿ ಪಾರಮಾರ್ಥಿಕವನ್ನು ಬಯಸುವವರನ್ನಾದರೂ ಈ ಅವ್ಯವಸಾಯಿತೆಯು ಸೋಂಕದೆ ಬಿಡುವದಿಲ್ಲ. ವೇದವಾದಿಗಳೇ ಇದಕ್ಕೆ ದೃಷ್ಟಾಂತವಾಗಿದ್ದಾರೆ. ಇಹದಲ್ಲಿ ಪ್ರಾಪಂಚಿಕ ಹವ್ಯಾಸಗಳೆಲ್ಲವನ್ನು ಬಿಟ್ಟವರಾದರೂ ಇವರು ತಮ್ಮ ಪಾರಲೌಕಿಕ ಆಕಾಂಕ್ಷೆಗಳಲ್ಲಿ ಕೇವಲ ಸ್ವಾರ್ಥಪರರಾಗಿ ನಡೆಯುವರು. ಅನಭಿಜ್ಞರಾದ ಈ ವೇದವಾದಿಗಳು ವೇದಗಳಲ್ಲಿ ಹೇಳಿದ ವಿಷಯಗಳನ್ನು ಬಿಟ್ಟರೆ ಲೋಕದಲ್ಲಿ ಸಾರ್ಥಕವಾದುದು ಇಲ್ಲವೆಂದು ಬಹು ಮನೋಹರವಾಗಿ ಬಣ್ಣಿಸಿ ಹೇಳುವರು. ಇಂಥ ವೇದವಾದಿಗಳ ಆತ್ಮ ಸ್ವಭಾವವು ಕಾಮಪರವಾಗಿರುವದು. ಅವರು ಸ್ವರ್ಗಸುಖಗಳನ್ನು ಬಯಸಿ ಅವುಗಳಿಗಾಗಿ ಪ್ರಯಾಸಪಡುವರು. ಇಂಥ ಸ್ವರ್ಗಸುಖಗಳನ್ನು ಗಳಿಸುವದರಿಂದ ಕೊನೆಗೆ ಕರ್ಮಬಂಧನ ಪುನರ್ಜನ್ಮಾದಿಗಳೇ ತಮ್ಮ ಪಾಲಾಗುವವೆಂಬುದನ್ನು ಇವರು ಅರಿತವರಲ್ಲ. ಸುಖಸಂಪತ್ತುಗಳನ್ನು ಪ್ರಾಪ್ತ ಮಾಡಿಕೊಳ್ಳುವದಕ್ಕಾಗಿ ಇವರು ಅನೇಕ ಯಜ್ಞಯಾಗಾದಿಗಳನ್ನು ಮಾಡುವರು. **ಸುಖಸಂಪತ್ತುಗಳಿಗೆ ಮನಸೋತುದರಿಂದ 'ಚೇತಸ್' ಎಂದರೆ ಮೇಲೆ ಹೇಳಿದ ಏಕಾಗ್ರ ಬುದ್ಧಿಯು ಇವರಲ್ಲಿ ನಷ್ಟವಾಗಿ ಹೋಗುವದು. ಏಕಾಗ್ರ ಬುದ್ಧಿಯನ್ನು ಕಳೆದುಕೊಂಡ ಬಳಿಕ ವ್ಯವಸಾಯಾತ್ಮಕ ಬುದ್ಧಿಯು ಕೆಡುವದು ಖಂಡಿತವು.**

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ |**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ||೪೫||**

ವೇದಗಳಲ್ಲಿ ಹೇಳಿರುವ ವಿಷಯಗಳೆಲ್ಲ ತ್ರಿಗುಣಾಧೀನವಾಗಿವೆ (೧೫-೧-೨). ಅವುಗಳಲ್ಲಿ ವರ್ಣಿಸಿದ ಸ್ವರ್ಗಾದಿಸಾಧ್ಯಗಳಾದರೂ ಹಾಗೆಯೇ ತ್ರಿಗುಣಾಧೀನವಾದುವು. ಸಾಂಖ್ಯನಿರೂಪಣೆಯಲ್ಲಿ (೨-೩೭) ಸ್ವರ್ಗವನ್ನು ಪಡೆಯಲು ಯುದ್ಧಮಾಡೆಂದು ಅರ್ಜುನನಿಗೆ ಶ್ರೀಕೃಷ್ಣನು ಹೇಳಿದ್ದರೂ

ಬುದ್ಧಿಯೋಗವನ್ನನುಸರಿಸಿ ಯುದ್ಧಮಾಡುವಾಗ ಸ್ವರ್ಗಾದಿಗಳ ಆಕಾಂಕ್ಷೆಯನ್ನು ಅವನು ಮನಸ್ಸಿನಲ್ಲಿ ಹಿಡಿಯಲಾಗದು. ಬುದ್ಧಿಯೋಗವನ್ನು ಸಾಧಿಸಲಿಕ್ಕೆ ಅರ್ಜುನನು ತ್ರಿಗುಣಗಳನ್ನು ದಾಟಬೇಕು. ಮೂರು ಲೋಕಗಳಲ್ಲಿ ತ್ರಿಗುಣರಹಿತವಾದ ವಸ್ತುವು ಕಿಂಚಿತ್ತಾದರೂ ಇರುವದಿಲ್ಲೆಂಬುದು ನಿಜ (೧೮-೪೦); **ತ್ರಿಗುಣಗಳನ್ನು ದಾಟಲಿಕ್ಕೆ ತನ್ನೊಳಗಿನ ಮೂರು ಗುಣಗಳನ್ನು ನಿಃಶೇಷವಾಗಿ ಹೋಗಲಾಡಿಸಿಕೊಳ್ಳಬೇಕೆಂದು ಅರ್ಥವಲ್ಲ. ತ್ರಿಗುಣಗಳನ್ನು ಮೀರಿದ ತತ್ತ್ವವನ್ನು ಎಂದರೆ ಪುರುಷೋತ್ತಮ ಶ್ರೀಕೃಷ್ಣನನ್ನು ಗುರಿಯಾಗಿಟ್ಟುಕೊಂಡು ವ್ಯವಹರಿಸಬೇಕೆಂದು ಅರ್ಥವು (೧೪-೨೬).** ಈ ರೀತಿಯಾಗಿ ತ್ರಿಗುಣಗಳನ್ನು ದಾಟಿದರೂ—ನಿಸ್ತ್ರೈಗುಣ್ಯನಾದರೂ—ತ್ರಿಗುಣಗಳಲ್ಲಿ ವ್ಯವಹರಿಸುವದು ಮಾತ್ರ ತಪ್ಪುವದಿಲ್ಲ. ಹೀಗೆ ತ್ರಿಗುಣಗಳಲ್ಲಿ ಪ್ರಮಾದವಿಲ್ಲದೆ ವ್ಯವಹರಿಸುವದಕ್ಕೆ ಅರ್ಜುನನು ನಿರ್ದ್ವಂದ್ವನಾಗಬೇಕು.

ಮೂರರಲ್ಲಿ ಒಂದೊಂದು ಗುಣವು ಪ್ರಬಲವಾದಾಗ ಮಿಕ್ಕೆರಡು ಗುಣಗಳು ಬಲಹೀನವಾಗುವ ವಿಷಯವನ್ನು ಮುಂದೆ (೧೪-೧೦) ವಿವರಿಸಿದೆ. ಗುಣಗಳ ಈ ಬಗೆಯ ಮೇಲಾಟದಲ್ಲಿ ಅವುಗಳಿಗೆ ಸಹವಾಸಿಯೂ ಸಾಕ್ಷಿಯೂ ಆಗುವ ಜೀವಪುರುಷನು ಒಂದು ಗುಣದ ಪರಿಣಾಮದ ವಿಷಯವಾಗಿ ಪ್ರೀತಿಯನ್ನೂ ಉಳಿದ ಎರಡು ಗುಣಗಳ ಪರಿಣಾಮದ ವಿಷಯವಾಗಿ ಅಪ್ರೀತಿಯನ್ನೂ ತಳೆಯುವನು ಜೀವಪುರುಷನ ಈ ಬಗೆಯ ಪ್ರೀತಿ ಅಪ್ರೀತಿಗಳಿಗೆ–ಇಚ್ಛಾದ್ವೇಷಿಗಳಿಗೆ–ದ್ವಂದ್ವವೆಂಬ ಹೆಸರು. **ಇಂಥ ದ್ವಂದ್ವಬುದ್ಧಿಯನ್ನು ಜೀವಪುರುಷನು ತ್ರಿಗುಣಗಳ ವ್ಯವಹಾರದಲ್ಲಿ ಬೆಳೆಸದಿದ್ದರೆ ನಿರ್ದ್ವಂದ್ವನೆನಿಸುವನು.** ಈ ನಿರ್ದ್ವಂದ್ವ ಸ್ಥಿತಿಯನ್ನು ಸಾಧಿಸಿದರೆ ಅರ್ಜುನನಿಗೆ ಆ ಮುಂದಿನ ನಿಸ್ತ್ರೈಗುಣ್ಯತೆಯು ಸುಲಭವಾಗಿ ಕೈಗೂಡುವದು.

ಇಂಥ ನಿರ್ದ್ವಂದ್ವ ಸ್ಥಿತಿಯು ಸಾತ್ತ್ವಿಕವೆನಿಸುವದು. ಆದರೆ ಈ ಸತ್ವವು ತ್ರಿಗುಣಗಳನ್ನು ಮೀರಿರುವದು. **ತ್ರಿಗುಣಾಂತರ್ಗತ ಸತ್ತ್ವಕ್ಕಿಂತಲೂ ಈ ಸತ್ತ್ವಗುಣವು ಶ್ರೇಷ್ಠವಾದುದು. ಆದುದರಿಂದ ಇದಕ್ಕೆ ನಿತ್ಯಸತ್ತ್ವವೆಂಬ ವಿಶಿಷ್ಟ ಹೆಸರು.** ತ್ರಿಗುಣಗಳೊಳಗಿನ ಸತ್ವಕ್ಕೆ ಉಚ್ಚನೀಚಾ

ವಸ್ಥೆಗಳುಂಟು. ಆದರೆ ಈ ನಿತ್ಯಸತ್ವವನ್ನು ಸಾಧಿಸಿದರೆ ನಿರ್ದ್ವಂದ್ವ ಸ್ಥಿತಿಯು ತಾನಾಗಿಯೇ ಪರಿಣಮಿಸುವದು.

ನಿಸ್ತ್ರೈಗುಣ್ಯತೆಯಾಗಲಿ ನಿರ್ದ್ವಂದ್ವತೆಯಾಗಲಿ ನಿತ್ಯಸತ್ವಸ್ಥ ಸ್ಥಿತಿಯಾಗಲಿ ಕೇವಲ ಆಧ್ಯಾತ್ಮಿಕ ಭಾವಗಳು—ಸಾಧಕನಿಗೆ ಅನುಭವದಿಂದ ಇವೆಲ್ಲ ಪ್ರತ್ಯಕ್ಷವಾಗಬಹುದು. ಆದರೆ ಅರ್ಜುನನಂಥವನು ಈ ಆಧ್ಯಾತ್ಮ ಭಾವಗಳನ್ನು ಹೇಗೆ ಕಂಡುಕೊಳ್ಳಬೇಕು? ಈ ಆಧ್ಯಾತ್ಮ ಭಾವಗಳನ್ನು ಪಡೆದವನು ಎಲ್ಲ ವ್ಯವಹಾರಗಳಲ್ಲಿಯೂ ತನ್ನ ಯೋಗಕ್ಷೇಮದ ಸಂಕಲ್ಪವನ್ನು ತೊರೆದಿರುವನು. **ಅಹಂಕಾರಮೂಲಕ ಅಥವಾ ಕಾಮಮೂಲಕ ಸಂಕಲ್ಪವನ್ನು ತ್ಯಾಗಮಾಡುವದೇ ಈ ಆಧ್ಯಾತ್ಮಿಕ ಸ್ಥಿತಿಯ ಮಹತ್ವದ ಲಕ್ಷಣವಾಗಿದೆ. ವ್ಯವಹಾರದಲ್ಲಿ ಇಂಥ ನಿಷ್ಕಾಮಭಾವವನ್ನಿಡುವದಕ್ಕೆ ನಿರ್ಯೋಗಕ್ಷೇಮಸ್ಥಿತಿಯೆಂದು ಹೆಸರು.**

ನಿರ್ಯೋಗಕ್ಷೇಮಸ್ಥಿತಿಯನ್ನು ಪಡೆಯಲಿಕ್ಕೆ ಒಂದೇ ಮಾರ್ಗವುಂಟು. ಆತ್ಮವಂತನಾಗುವದೇ ಅದು. ಆತ್ಮವಂತನಾಗುವದೆಂದರೇನು? ಅರ್ಜುನನಿಗೆ ಆತ್ಮವು ಎಂದುತಾನೆ ಇರಲಿಲ್ಲ? ಅಂಥ ಆತ್ಮವನ್ನು ಈಗ ಅವನು ಪಡೆಯುವದು ಹೇಗೆ? ಆತ್ಮವಂತನಾಗು ಎಂಬುವದಕ್ಕೆ ಇದು ಅರ್ಥವಲ್ಲ. ಅರ್ಜುನನ ಆತ್ಮಸ್ವಭಾವವು ನಿತ್ಯನಿರಂತರವಾಗಿ ಇರುವದು. ಆದರೆ ಅದು ತನ್ನ ನಿಯತ ವಿಷಯವನ್ನು ಗಮನಿಸದೆ ಬಧಿರವಾಗಿ ಇರುವದು. ಆತ್ಮಸ್ವಭಾವಕ್ಕೆ ನಿಯತವಾದ ವಿಷಯವು ಆಧ್ಯಾತ್ಮ ಅಥವಾ ವಿಜ್ಞಾನವೆಂದೂ ಅಥವಾ ಪುರುಷೋತ್ತಮ ಶ್ರೀಕೃಷ್ಣನಲ್ಲಿ ಆಸಕ್ತಿಯೆಂದೂ ಗೀತೆಯಲ್ಲಿ ಪ್ರತಿಪಾದಿಸಿದೆ. ನಿರ್ಮಲ ಸ್ಥಿತಿಯಲ್ಲಿರುವಾಗ ಆತ್ಮಸ್ವಭಾವಕ್ಕೆ ಪರಮಾತ್ಮನಲ್ಲಿ—ಪುರುಷೋತ್ತಮನಲ್ಲಿ—ಆಸಕ್ತಿಯು ನಿಸರ್ಗಸಿದ್ಧವು, ಸಹಜವು. ಇಂಥ ಆಸಕ್ತಿಯು ಯಾವನಲ್ಲಾದರೂ ಲೋಪವಾದರೆ ಅಥವಾ ಬತ್ತಿಹೋದರೆ ಗೀತೆಯು ಆ ಮನುಷ್ಯನನ್ನು ಅನಾತ್ಮನೆಂದು ಹೇಳುವದು (೬–೬). ಹೀಗೆ ಅನಾತ್ಮನಾದವನು ತನ್ನ ಪ್ರಯತ್ನದಿಂದ ತಿರುಗಿ ತನ್ನ ಆಧ್ಯಾತ್ಮಸ್ವಭಾವವನ್ನು ಪಡೆದರೆ ಅವನನ್ನೇ ಆತ್ಮವಂತನೆಂದು ಹೇಳುವದು (೨–೪೫, ೪–೪೧). ಆದುದರಿಂದ ನಿರ್ಯೋಗಕ್ಷೇಮಿಯಾಗುವದಕ್ಕೂ ನಿರ್ದ್ವಂದ್ವನಾಗುವದಕ್ಕೂ ಇಲ್ಲವೆ ನಿಸ್ತ್ರೈಗುಣ್ಯನಾಗುವದಕ್ಕೂ ಆತ್ಮವಂತನಾಗುವದೇ

ಮೊದಲನೆಯ ಮೆಟ್ಟಿಲೆಂಬುದನ್ನು ಗ್ರಹಿಸಬೇಕು. ಕ್ರಮವಾಗಿ ಇಲ್ಲಿ ವಿವರಿಸಿದ ಐದು ಕಾರಣಗಳೂ ಮನುಷ್ಯನಿಗೆ ಮುಕ್ತಾವಸ್ಥೆಯನ್ನು ಕೈಗೂಡಿಸುವವೆಂಬ ತತ್ವವು ಇಲ್ಲಿ ಶ್ರೀಕೃಷ್ಣನಿಂದ ವಿವರಿಸಲ್ಪಡುತ್ತಲಿರುವ ಬುದ್ಧಿಯೋಗ ಶಾಸ್ತ್ರದ ರಹಸ್ಯವಾಗಿದೆ.

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ ೪೬ ॥**

ಬ್ರಾಹ್ಮಣ ಕುಲದಲ್ಲಿ ಜನ್ಮವೆತ್ತಿದಕ್ಕಾಗಿಯೇ ವೇದಮೂರ್ತಿಯೆನಿಸುವ ಬ್ರಾಹ್ಮಣನು ನಿಜವನ್ನರಿತ ಬ್ರಾಹ್ಮಣನಲ್ಲ. ಗೀತೆಯಲ್ಲಿ ಹೇಳಿದಂತೆ ವೇದಗಳ ನಿಜವಾದ ಯೋಗ್ಯತೆಯನ್ನು ಬಲ್ಲವನೇ ತತ್ವವನ್ನರಿತ ಬ್ರಾಹ್ಮಣನೆಂದು ತಿಳಿಯಬೇಕು. ಆಧ್ಯಾತ್ಮಶಾಸ್ತ್ರಕ್ಕೆ ವೇದಗಳು ಮೊದಲಲ್ಲ ಅಥವಾ ಕೊನೆಯೂ ಅಲ್ಲ. ಜ್ಞಾನವೆಂಬ ವೃಕ್ಷಕ್ಕೆ ವೇದಗಳು ಚಿಗುರೆಲೆಗಳಂತಿವೆ (೧೫-೧). ಯಾವ ಬ್ರಾಹ್ಮಣನು ಅವುಗಳನ್ನು ಹೀಗೆ ತಿಳಿಯುವನೋ ಅವನೇ ಸತ್ಯಜ್ಞಾನವನ್ನರಿತವನು. ಈ ಸತ್ಯಜ್ಞಾನವನ್ನು ತಿಳಿಯಬೇಕಾದರೆ ಜನ್ಮಸಿದ್ಧ ಬ್ರಾಹ್ಮಣನಿಗಾದರೂ ಆತ್ಮವಂತನಾಗದಿದ್ದರೆ ಗತಿಯಿಲ್ಲ. ಎಲ್ಲೆಲ್ಲಿಯೂ ನೀರಿನ ಸಮೃದ್ಧಿಯಿಂದ ತುಂಬಿದ ಸ್ಥಳದಲ್ಲಿ ಬಾವಿಗಳನ್ನು ಯಾರು ಬಯಸುವರು? ಅದೇ ರೀತಿಯಾಗಿ ಆತ್ಮವಂತನಾದ ಬಳಿಕ ಬ್ರಾಹ್ಮಣನಾದರೂ ವೇದಗಳನ್ನು ಬಯಸುವದಿಲ್ಲ.

ವೇದಪರಾಯಣತೆಯಿಂದ ಬಹಳವಾದರೆ ಜ್ಞಾನದ ಬಾಯಾರಿಕೆಯು ತಣಿದು ಬುದ್ಧಿಯು ಸಮಾಧಾನಪಡಬಹುದು. ಆದರೆ ಆತ್ಮವಂತನಾದಾಗ ಪುರುಷೋತ್ತಮನಲ್ಲಿಟ್ಟ ಭಕ್ತಿಯ ಪ್ರತ್ಯಕ್ಷ ಅನುಭವದಿಂದ ಆತ್ಮಸ್ವಭಾವವು ಸಂತುಷ್ಟವಾಗಿ ತೃಪ್ತಿಯನ್ನು ಪಡೆದು ಬುದ್ಧಿಯನ್ನಾದರೂ ತನ್ನಲ್ಲಿಯೇ ರಮಿಸುವಂತೆ ಮಾಡುವದು. ಜ್ಞಾನಿಯೆನಿಸುವ ಬ್ರಾಹ್ಮಣನು ಆತ್ಮವಂತನಾದರೆ ಶಬ್ದಬ್ರಹ್ಮವನ್ನು—ವೇದಗಳನ್ನು—ಮೀರಿದ ಸತ್ಯವು ಅವನಿಗೆ ಪರಿಚಿತವಾಗುವದರಿಂದ ಅವನು ವೇದಗಳನ್ನು ಲಕ್ಷಿಸಲಾರನು.

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂರ್ಮಾತೇ ಸಂಗೋಽಸ್ತ್ವಕರ್ಮಣಿ॥೪೭॥**

ಕರ್ಮ ಮಾಡುವ ಅಧಿಕಾರಮಾತ್ರವೇ ಜೀವಾತ್ಮನಿಗೆ ಕೊಟ್ಟಿದೆ. ಇದಕ್ಕಾಗಿ ಅವಶ್ಯವಾಗಿದ್ದ ಇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರ ಮೊದಲಾದ ಎಲ್ಲ ಸಾಧನ ಸಾಮುಗ್ರಿಗಳು ಹೇತುಪುರಸ್ಸರವಾಗಿ—ಅವನು ಕರ್ಮ ಮಾಡಬೇಕೆಂದು ಅವನಲ್ಲಿ ಒದಗಿಸಲ್ಪಟ್ಟಿವೆ. ಕರ್ಮ ಮಾಡುವದ ಕ್ಕಾಗಿ ಹೀಗೆ ಅಧಿಕೃತನಾದ ಕಾರಣ ಅವನಿಗೆ ಕರ್ಮ ಮಾಡುವ ಅಧಿಕಾರವು ನಿರ್ವಿವಾದವಾಗಿ ಉಂಟು. ಆದರೆ ಇದೇ ಪ್ರಕಾರದ ಅಧಿಕಾರವು ತಾನು ಮಾಡಿದ ಕರ್ಮದಿಂದ ಒದಗುವ ಫಲಕ್ಕೂ ತನಗುಂಟೆಂದು ಅವನು ತಿಳಿಯ ಬಾರದು. ಕರ್ಮ ಮಾಡುವ ಅಧಿಕಾರವನ್ನು ಅವನಿಗೆ ಸಲ್ಲಿಸಿದ ಪರಮಾತ್ಮನು ಇಂಥ ಫಲದ ಅಧಿಕಾರವನ್ನು ತನಗಾಗಿಯೇ ಕಾದಿಟ್ಟು ಕೊಂಡಿರುವನು. ಇದಕ್ಕಾಗಿ ಅರ್ಜುನನು ಕರ್ಮಫಲಕ್ಕೆ ತನ್ನ ಬಾಧ್ಯತೆ ಯನ್ನು ಎಂದಿಗೂ ಕೇಳಕೂಡದು. ಮತ್ತು ಫಲದಾಸೆಯಿಂದ ಅವನು ಎಂದಿಗೂ ಕರ್ಮ ಮಾಡಲುದ್ಯುಕ್ತನಾಗಕೂಡದು. ಮಾಡಿದ ಕರ್ಮದ ಫಲವು ಕರ್ತೃವಿಗೇ ಇಲ್ಲದ ಮೇಲೆ ಅಂಥ ಕರ್ಮವನ್ನು ಮಾಡುವದಾದರೂ ಏಕೆಂದು ಕರ್ಮವನ್ನು ಬಿಟ್ಟುಬಿಡುವ ಪ್ರಯತ್ನವನ್ನು ಅರ್ಜುನನು ಮಾಡಬಾರದು.

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥೪೮॥**

ಕರ್ಮವನ್ನು ಮಾಡಿದರೆ ಆ ಕರ್ಮದಿಂದ ಫಲವು ನಿಷ್ಪನ್ನವಾಗುವದು ಖಂಡಿತ. ಇಂಥ ಫಲವನ್ನು ಉಪಭೋಗಿಸುವ ಅಧಿಕಾರವು ಕರ್ತೃವಿಗಿಲ್ಲ. ಎಂದ ಮೇಲೆ ಈ ಫಲಕ್ಕೆ ಗತಿ ಯಾವದು ? ಇದೂ ಅಲ್ಲದೆ ತಾನು ಮಾಡುವ ಕರ್ಮಕ್ಕೆ ಅನುಕೂಲವಾದ ಹೇತುವು ಕರ್ತೃವಿನಲ್ಲಿ ಇರಬೇಕಲ್ಲವೇ ? ಹೇತು ವಿಲ್ಲದೆ ಕರ್ಮ ಮಾಡುವದು ಮನುಷ್ಯಸ್ವಭಾವಕ್ಕೆ ಸಹಜವೂ ಅಲ್ಲ; ಶಕ್ಯವೂ ಅಲ್ಲ. ಇದು ಗೀತೆಗೆ ಸಮ್ಮತವು. ಅದಕ್ಕಾಗಿಯೇ ಕರ್ತೃವಿನಲ್ಲಿ ಯಾವ ಹೇತುವು ಜಾಗ್ರುತವಾಗಿರಬೇಕೆಂಬುದನ್ನು ಈ ಶ್ಲೋಕದಲ್ಲಿ ಹೇಳಿದೆ. **ಯಾವ ಕರ್ಮವನ್ನೇ ಆಗಲಿ ಕರ್ತೃವು ಯೋಗಸ್ಥನಾಗಿ ಮಾಡಬೇಕು. ಯೋಗಸ್ಥನೆಂಬುದಕ್ಕೆ ಬುದ್ಧಿಯೋಗಸ್ಥನೆಂದರ್ಥ.** ಬುದ್ಧಿಯೋಗ

ಸ್ಥಿತಿಯು ಆತ್ಮವಂತನಾಗುವದರಿಂದ ಹೇಗೆ ಸಾಧಿಸುವದೆಂಬುದು ಹಿಂದೆ ವಿವರಿಸಲ್ಪಟ್ಟಿದೆ. ಆತ್ಮವಂತನಾಗುವದರಿಂದ ಮನುಷ್ಯನ ಸ್ವಾಭಾವಿಕ ಆಸಕ್ತಿಯು ಸರ್ವಸ್ವವಾಗಿ ಪುರುಷೋತ್ತಮ ಶ್ರೀಕೃಷ್ಣನಲ್ಲಿ ಹೇಗೆ ತೊಡಗುವದೆಂಬುದನ್ನು ಹೇಳಿದೆ. **ಪುರುಷೋತ್ತಮನಲ್ಲಿ ಆಸಕ್ತಿಯನ್ನಿಡುವದಕ್ಕೇ ಅವನಲ್ಲಿ ಯೋಗಯುಕ್ತನಾಗುವದೆಂದೂ ಅಥವಾ ಯೋಗಸ್ಥಿತನಾಗುವನೆಂದೂ ಗೀತೆಯಲ್ಲಿ ಪಾರಿಭಾಷಿಕವಾಗಿ ಹೇಳಿದೆ. ಯಾವ ಕರ್ಮವನ್ನಾಗಲಿ ಇಂಥ ಯೋಗಭಾವದಿಂದ—ಪುರುಷೋತ್ತಮನಲ್ಲಿಟ್ಟ ಆಸಕ್ತಿಯಿಂದ—ಮಾಡಿದರೆ ಆ ಕರ್ಮವೇ ಯಜ್ಞವೆನಿಸುವದು.** ಹೀಗೆ ಯಜ್ಞಾರ್ಥವಾಗಿ ಮಾಡಿದ ಕರ್ಮದಿಂದ ಬಂಧನವು ಎಂದಿಗೂ ಸಂಭವಿಸದು (೩-೯). ಈ ಶ್ಲೋಕದಲ್ಲಿ ಯೋಗಯುಕ್ತನಾಗಿ ಕರ್ಮ ಮಾಡಬೇಕೆಂಬುದೇ ಮುಖ್ಯ ಉಪದೇಶವು. ಹಾಗೆ ಮಾಡುವದರಿಂದ ಕರ್ಮದ ಫಲವು ಸೇರಬೇಕಾದಲ್ಲಿ ಸೇರುವದು. ಮತ್ತು ಕರ್ತೃವಿಗೆ ಕರ್ಮ ಮಾಡುವದಕ್ಕಾಗಿ ಅವಶ್ಯವಾದ ಹೇತುವಾದರೂ ಸಿದ್ಧವಾಗುವದು. ಇಷ್ಟೇ ಅಲ್ಲ; **ಕರ್ತೃತ್ವದಲ್ಲಾಗಲಿ ಫಲಾಪೇಕ್ಷೆಯಲ್ಲಾಗಲಿ ಕರ್ತೃವಿನ ಅಹಂಭಾವವು ಇಲ್ಲದಾಗುವದು. ಇದಕ್ಕೇ ಗೀತೆಯಲ್ಲಿ ಸಂಗವಿಲ್ಲದಿರುವಿಕೆಯೆಂದು ಹೇಳಿದೆ.**

ನಾವು ಮೇಲೆ ತೋರಿಸಿ ಕೊಟ್ಟಂತೆ ಪುರುಷೋತ್ತಮನಲ್ಲಿಟ್ಟ ಆಸಕ್ತಿಯಿಂದ (ಬುದ್ಧಿ) ಯೋಗವನ್ನು ಸಾಧಿಸುವದೇ ಈ ಶ್ಲೋಕದೊಳಗಿನ ಮುಖ್ಯ ಕಲ್ಪನೆಯು. ಈ ಯೋಗಸ್ಥಿತಿಯನ್ನು ಉಪೇಕ್ಷಿಸಿ ಕೇವಲ ಸಂಗವನ್ನು ಎಂದರೆ ಕರ್ಮದ ಫಲವನ್ನಷ್ಟೇ ಬಿಟ್ಟರೆ ಸಾಕೆಂದು ತಿಳಿಯುವದರಿಂದ ಅರ್ಥಹಾನಿಯಾಗುವದು. ಅಲ್ಲದೆ ಗೀತಾಶಾಸ್ತ್ರಕ್ಕೆ ಅನುಗುಣವಾದ ಯಾವ ಸಿದ್ಧಾಂತ ಶ್ರೇಣಿಯನ್ನು ಇಲ್ಲಿ ಅರ್ಥಭರಿತವಾದ ಗಂಭೀರ ಶಬ್ದಸಮುಚ್ಚಯದಿಂದ ಶ್ರೀಕೃಷ್ಣನು ಸೂಚಿಸುತ್ತಿರುವನೋ ಅದು ಕಣ್ಣುಮರೆಯಾಗುವದೆಂದು ನಮಗೆ ತೋರುವದು. ಇರಲಿ.

ಯೋಗಸ್ಥನಾಗಿ ಸಂಗವನ್ನು ಬಿಟ್ಟರೆ ಕರ್ತೃವಿನ ಉತ್ಸಾಹಕ್ಕೆ ಭಂಗವುಂಟಾಗುವದಿಲ್ಲ; ಕಾರ್ಯವು ಕೈಗೂಡಲಿ ಕೈಗೂಡದಿರಲಿ, ಅವನು ನಿಸ್ಪೃಹನಾಗಿ ಕಾರ್ಯಕ್ಷಮನಾಗುವನು. ಅವನ ನಿಸ್ಪೃಹತೆಯಿಂದ

ಮನಸ್ಸಿನಲ್ಲಿ ಸಮತೆಯು ಎಂದರೆ ಸಮಾನವೃತ್ತಿಯು ಬೆಳೆದು ಬೇರೂರು ವದು. ಕರ್ಮ ಮಾಡುವ ವಿಷಯದಲ್ಲಿ ಬುದ್ಧಿಯೋಗದಿಂದ ಮನುಷ್ಯನಿಗಾಗುವ ಲಾಭವೆಂದರೆ ಈ ಸಮಾನವೃತ್ತಿಯೇ ಸರಿ. ಗೀತೆಯಲ್ಲಿ ವರ್ಣಿಸಿದಂತೆ ಈ ಸಮಾನವೃತ್ತಿಯೊಂದರಿಂದಲೇ ಪರಮಸಿದ್ಧಿಯನ್ನು ಪಡೆಯಬಹುದೆಂಬುದನ್ನು ಗಮನಿಸಿದರೆ ಅದರ ಮಹತ್ವವು ತಿಳಿದು ಬರುವದು. ಆದುದರಿಂದ ಈ ಸಮಾನವೃತ್ತಿಯನ್ನೇ ಯೋಗವೆಂದು ಹೇಳಬಹುದು. ಯೋಗಿಯಾದವನ ಯೋಗಸಂಪನ್ನತೆಗೆ ವ್ಯವಹಾರದಲ್ಲಿ ಪ್ರಕಟವಾಗುವ ಅವನ ಈ ಸಮತೆಯೇ ಗುರುತು.

ಯೋಗಶಬ್ದದಲ್ಲಿ ತುಂಬಿದ ಗೀತಾವಿಶಿಷ್ಟವಾದ ಗಹನ ತತ್ವಜ್ಞಾನವು ಲಕ್ಷ್ಯಕ್ಕೆ ಬಾರದಿರುವದರಿಂದ ಯೋಗವೆಂದರೆ ಅಥವಾ ಸಮತ್ವವೆಂದರೆ ಫಲಾಶೆಯನ್ನು ಬಿಟ್ಟು ಕರ್ಮ ಮಾಡುವದೆಂದೇ ಹೇಳುವದುಂಟು. ಕೇವಲ ಪರಾರ್ಥಕ್ಕಾಗಿ ಹೆಣಗುವದೆಂದೂ ಅಥವಾ ನಿಃಸ್ವಾರ್ಥ ಬುದ್ಧಿಯಿಂದ ವರ್ತಿಸುವದೆಂದೂ ಆಧುನಿಕ ತತ್ವಶೋಧಕರು ಇದಕ್ಕೆ ಅರ್ಥ ಮಾಡಿರುವರು. ಪರೋಪಕಾರವಾಗಲಿ ನಿಃಸ್ವಾರ್ಥತೆಯಾಗಲಿ ಗೀತೆಗೆ ಸಮ್ಮತವೆಂಬುದರಲ್ಲಿ ಸಂದೇಹವಿಲ್ಲ. ಆದರೂ ಇವೇ ಪರಮಸಾಧ್ಯವೆಂದು ಗೀತೆಯು ಒಪ್ಪುವದಿಲ್ಲ. ಇವುಗಳನ್ನು ಗೀತೆಯು "ಸದ್ಭಾವ"ದಲ್ಲಿ ಸೇರಿಸುವದು (೧೭-೨೬). ಆಧುನಿಕರ ಈ ಮೇಲೆ ಹೇಳಿದ ಧ್ಯೇಯಗಳ ಯೋಗ್ಯತೆಯನ್ನು ಪರಮಸತ್ಯದ ಮತ್ತು ಉಚ್ಚತಮ ತತ್ವಜ್ಞಾನದ ದೃಷ್ಟಿಯಿಂದ ಗೀತೆಯು ನಿರ್ಧರಿಸುವದು. ಪುರುಷೋತ್ತಮ ಶ್ರೀಕೃಷ್ಣನೇ ಪರಮಸತ್ಯವೆಂದು ಗೀತೆಯಲ್ಲಿ ಪ್ರತಿಪಾದಿಸಿರುವದು; ಆಧುನಿಕರ ಈ ಧ್ಯೇಯಗಳಲ್ಲ. ಅವನು ಮನುಷ್ಯರೊಂದಿಗೆ ಭಾವನಾತ್ಮಕ (emotional) ವ್ಯವಹಾರಗಳಲ್ಲಿ ತೊಡಗಿರುವವನಾದುದರಿಂದ ಅವರಿಗೆ ಸುಗಮನಾಗಿರುವನು. ಇಷ್ಟೇ ಅಲ್ಲ; ಅವನನ್ನು ಅರಿಯುವದಕ್ಕಾಗಿ ಮನುಷ್ಯನಲ್ಲಿ ನಿಯತವಾದ ಆತ್ಮಸ್ವಭಾವವು ಜಾಗೃತವಾದರೆ ಪುರುಷೋತ್ತಮನಷ್ಟು ಸತ್ಯಸಂಸಿದ್ಧವಾದ ಅನುಭವವು ಅವನಿಗೆ ಇನ್ನೊಂದಿಲ್ಲ; ಮತ್ತು ಜಗತ್ತಿನೊಳಗಿನ ಇದಿತರ ಸತ್ಯಗಳೆಲ್ಲ ಅವನಿಗೆ ಬಹು ಅಲ್ಪವಾಗಿ ಕಾಣಲಾರಂಭಿಸುವವು.

ಗೀತೆಯಲ್ಲಿ ಬೋಧಿಸಿದ ಅನಾಸಕ್ತಿಯೆಂದರೆ ಕೇವಲ ಕರ್ಮಫಲ ವನ್ನಾಗಲಿ ಆಸಕ್ತಿಯನ್ನಾಗಲಿ ಬಿಟ್ಟು ಕರ್ಮ ಮಾಡುವದೆಂಬರ್ಥವಲ್ಲ. ಆದರೆ ಪುರುಷೋತ್ತಮನ ವಿಷಯದ ಆಸಕ್ತಿಧರ್ಮವು ನಿಸ್ಸೀಮವಾಗಿ ನಲ್ಲಬೇಕೆಂದು ಅದಕ್ಕೆ ವಿರುದ್ಧವಾದ ಅನ್ಯ ಆಸಕ್ತಿಗಳೆಲ್ಲವನ್ನೂ ಬಿಟ್ಟು ಬಿಡುವದು. ಹೀಗೆ ಅನ್ಯ ಆಸಕ್ತಿಗಳನ್ನು ಬಿಟ್ಟ ಮಾತ್ರಕ್ಕೆ ಮನುಷ್ಯನಲ್ಲಿ ಆಸಕ್ತಿಯು ನಿಃಶೇಷವಾಗುವದೆಂದು ತಿಳಿಯಬಾರದು. ಆದರೆ ಅವನು ಧರ್ಮಕ್ಕೆ ವಿರುದ್ಧವಲ್ಲದ ಪುರುಷೋತ್ತಮನ ಆಸಕ್ತಿಯಲ್ಲಿ (೭-೧) ಮುಳುಗಿ ಹೋಗಿರುವನು. ಅವನು ಬಿಟ್ಟ ಆಸಕ್ತಿಯೊಂದಿಗೆ ಕರ್ಮಫಲ ದೃಷ್ಟಿಯು ಅಳಿದು ಹೋಗುವದೆಂದು ತಿಳಿಯಬಾರದು. ಕರ್ಮವನ್ನಾಗಲಿ ಫಲವನ್ನಾಗಲಿ ಪ್ರಸಂಗಾನುಸಾರವೇ ಅಲ್ಲ, ಪ್ರಸಂಗೋಚಿತವಾಗಿಯೂ ಅವನು—ಮತ್ತಾವ ಆಸಕ್ತಿಗ್ರಸ್ತ ಅಜ್ಞಾನಿಯ ಹಾಗೆಯೇ—ಪ್ರಯತ್ನ ಪೂರ್ವಕವಾಗಿ ಸಂಘಟಿಸಿ ಪ್ರಾಪ್ತಕರ್ಮವನ್ನು ನಿರ್ವಹಿಸುವನು (೩–೨೫, ೧೮–೨೬). ಕಾರ್ಯನಿರ್ವಾಹಕತೆಯ ವಿಷಯದಲ್ಲಾಗಲಿ ಫಲವನ್ನು ಪಡೆ ಯುವ ವಿಷಯದಲ್ಲಾಗಲಿ ಇವನಿಗೆ ಯಾವ ನಿರ್ಬಂಧವೂ ಇರುವದಿಲ್ಲ. ತಾನು ಮಾಡಿದ ಕಾರ್ಯದಿಂದ ಪ್ರಾಪ್ತವಾದ ಫಲವನ್ನು ತನ್ನ ಇಷ್ಟದಂತೆ ಬಳಸುವ ವಿಷಯದಲ್ಲಿ ಮಾತ್ರ ನಿರ್ಬಂಧವಿರುವದು. ಆದುದರಿಂದ ಗೀತೆಯಲ್ಲಿ ವರ್ಣಿಸಿದ ಈ ಅನಾಸಕ್ತನಾದ ತತ್ವಜ್ಞಾನಿಯು ಕರ್ಮದಿಂದಾಗಲಿ ಕರ್ಮ ಫಲದಿಂದಾಗಲಿ ಓಡಿಹೋಗುವದಿಲ್ಲ. ತನ್ನ ಶಕ್ತಿಸರ್ವಸ್ವದಿಂದಲೂ ಅವು ಗಳನ್ನು ಅವನು ಉಂಟುಮಾಡುವನು. ಹೀಗೆ ಮಾಡುವಾಗ ಫಲವು ಯಾವದೇ ದೊರೆಯಲಿ, ಅದನ್ನು ಅನಾಸಕ್ತಿಯಿಂದಲೂ ನಿರಹಂಕಾರದಿಂದಲೂ ತನ್ನ ಮನಃಸಾಕ್ಷಿಯಾದ ಪುರುಷೋತ್ತಮ ಶ್ರೀಕೃಷ್ಣನ ಚರಣಕ್ಕೆ ತಕ್ಷಣವೇ ಅರ್ಪಿಸಿಬಿಡುವನು. ಇದೇ ಅವನು ಮಾಡುವ ಸಂಗತ್ಯಾಗವು; ಇದೇ ಅವನ ಸಮತ್ವವು.

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥ ೪೯ ॥**

ಯೋಗಸಂಸ್ಥಿತನಾಗಿ -- ಬುದ್ಧಿಯೋಗವನ್ನವಲಂಬಿಸಿ — ಮಾಡಿದ

ಕರ್ಮಕ್ಕಿಂತಲೂ ಫಲಾಭಿಲಾಷಿಯಾಗಿ ಕೌಶಲದಿಂದ ಮಾಡಿದ ಕರ್ಮವು ಹೀನವೇ ಸರಿ. ಆದುದರಿಂದ ಅರ್ಜುನನು ಬುದ್ಧಿಯೋಗವನ್ನವಲಂಬಿಸಬೇಕು. ಫಲದಲ್ಲಿ ಆಸಕ್ತಿಯನ್ನಿಟ್ಟು ಕರ್ಮ ಮಾಡುವವರು ಎಂಥ ಕುಶಲರಾದರೂ ಎಷ್ಟು ಯಶೋವಂತರಾದರೂ ಕೃಪಣರೆಂದೇ ತಿಳಿಯಬೇಕು.

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।**
**ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು**
**ಕೌಶಲಮ್ ॥ ೫೦ ॥**

ಉಪಸ್ಥಿತವಾದ ಕರ್ಮವು ಸುಕೃತವಾಗಲಿ ದುಷ್ಕೃತವಾಗಲಿ ಬುದ್ಧಿಯೋಗವನ್ನನುಸರಿಸುವವನು ಅವುಗಳ ಗುಣಾವಗುಣಗಳನ್ನು ಲೆಕ್ಕಿಸುವದಿಲ್ಲ. ಬುದ್ಧಿಯೋಗಯುಕ್ತನಾಗುವದರಿಂದ ಕರ್ಮದ ಗುಣಾವಗುಣಗಳು ಅಳಿದು ಹೋಗುವವು. ಆದುದರಿಂದ ಅರ್ಜುನನು ಬುದ್ಧಿಯೋಗವನ್ನು ಅನುಸರಿಸಬೇಕು. ಬುದ್ಧಿಯೋಗವೆಂದರೆ ಕರ್ಮ ಮಾಡುವ ಕೌಶಲವು.

ಅರ್ಜುನನಿಗೆ ಯುದ್ಧವು ಕರ್ತವ್ಯವಾಗಿತ್ತು. ಇದು ದುಷ್ಕೃತವೆಂದೇ ಕಲ್ಪಿಸುವ. ಬುದ್ಧಿಯೋಗಸ್ಥಿತನಾಗಿ ಇದನ್ನು ಅವನು ಮಾಡಿದರೆ ಅವನಿಗೆ ಪಾಪವು ತಗಲದು. ಇದು ಬುದ್ಧಿಯೋಗದ ಪ್ರಭಾವವಾಗಿದೆ. ತನ್ನ ದೃಷ್ಟಿಯಿಂದ ಒಳ್ಳೆಯದು ಯಾವದು ಕೆಟ್ಟದು ಯಾವದು ಎಂಬುದನ್ನು ಆಲೋಚಿಸಿ ಕರ್ಮಗಳನ್ನು ಕೈಕೊಳ್ಳುವವನಿಗೆ ಪರಿಣಾಮದಲ್ಲಿ ಆ ಕರ್ಮಗಳ ಇಷ್ಟಾನಿಷ್ಟ ಫಲಗಳನ್ನು ಭೋಗಿಸಬೇಕಾಗುವದು (೧೮-೧೨). ಆದರೆ ಬುದ್ಧಿಯೋಗವನ್ನನುಸರಿಸುವಾಗ ಕರ್ತೃವಿನ ಆಸಕ್ತಿಯು ಅವನು ಮಾಡುವ ಕರ್ಮವನ್ನೂ ಗುಣತ್ರಯಗಳನ್ನೂ ಮೀರಿ ಪುರುಷೋತ್ತಮನನ್ನು ಕೂಡಿರುವದರಿಂದ ಆ ಕರ್ಮಗಳ ಗುಣದೋಷಗಳು ಕರ್ತೃವಿಗೆ ಅಂಟುವದಿಲ್ಲ. ಪಾಪವಾಗಲಿ ಪುಣ್ಯವಾಗಲಿ ಕರ್ಮವನ್ನು ಅವಲಂಬಿಸಿರುವದಿಲ್ಲ ಎಂಬುದನ್ನು ಅರ್ಜುನನು ತಿಳಿಯಬೇಕು. ಅವು ಕರ್ತೃವಿನ ಬುದ್ಧಿಯನ್ನು ಅವಲಂಬಿಸಿರುವವು. ಪಾಪಪುಣ್ಯಗಳ ಬಾಧೆಯು ತಪ್ಪಬೇಕಾದರೆ ಬುದ್ಧಿಯು ಹೇಗಿರಬೇಕೆಂಬ ವಿಷಯವು ಗೀತೆಯ ಬುದ್ಧಿಯೋಗಶಾಸ್ತ್ರದಲ್ಲಿ ನಿಶ್ಚಿತವಾಗಿದೆ. ಬುದ್ಧಿಯೋಗಶಾಸ್ತ್ರವನ್ನರಿತವನು ಕರ್ಮಗಳ ಗುಣ

ದೋಷಗಳನ್ನು ಎಲ್ಲ ಸಂದರ್ಭಗಳಲ್ಲಿಯೂ ಚೆನ್ನಾಗಿ ಬಲ್ಲನು. **ಆದುದ ರಿಂದಲೇ ಅವನಲ್ಲಿ ಕರ್ಮ ಮಾಡುವ ಕೌಶಲವು ಅಂದರೆ ಕರ್ಮ ಮಾಡಿಯೂ ಅದರ ಪಾಪಪುಣ್ಯ ಫಲಗಳಿಂದ ಅಲಿಪ್ತನಾಗಿರುವ ಚಾತುರ್ಯವು ನೆಲೆಗೊಂಡಿರುವದು. ಗೀತೆಯಲ್ಲಿ ಹೇಳಿದ ಕರ್ಮ ಕೌಶಲವು ಫಲವನ್ನು ಪಡೆಯುವ ಕ್ರಮವನ್ನು ಸಂಬಂಧಿಸಿಲ್ಲ. ಆದರೆ ಯಥಾಶಕ್ತಿ ಉಂಟುಮಾಡಿದ ಫಲವನ್ನು — ಅದು ಇಷ್ಟವಾಗಿರಲಿ, ಅನಿಷ್ಟವಾಗಿರಲಿ — ಬಿಟ್ಟುಬಿಡುವದರಲ್ಲಿ** ಎಂದರೆ **ಪುರುಷೋತ್ತಮ ಶ್ರೀಕೃಷ್ಣನಿಗೆ ಅದನ್ನು ತಾನು ನಿರ್ಮಮನಾಗಿ ಅರ್ಪಿಸುವದರಲ್ಲಿ ಇದೆ** ಎಂಬುದನ್ನು ಮರೆಯಬಾರದು.

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ |**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಂ || ೫೧ ||**

ಬುದ್ಧಿಯೋಗಯುಕ್ತನಾಗಿ ಕರ್ಮದಿಂದ ಪ್ರಾಪ್ತವಾದ ಫಲವನ್ನು ಕೌಶಲದಿಂದ ಬಿಟ್ಟು ಮನುಷ್ಯನು ಜನ್ಮಬಂಧನದಿಂದ ಮುಕ್ತನಾಗುವನು. ಇಷ್ಟೇ ಅಲ್ಲ. ದುಃಖರಹಿತವಾದ (ಶಾಶ್ವತ) ಪದವನ್ನು ಸೇರುವನು.

ಕರ್ಮಕೌಶಲವನ್ನು ಸಾಧಿಸಿದರೆ ಮನುಷ್ಯನು ಕೃತಕೃತ್ಯನಾಗುವ ನೇನು? ಈ ಕೌಶಲವನ್ನು ಯಾವ ಕಾರಣಕ್ಕಾಗಿ ಪಡೆಯಬೇಕು? ಆದರಿಂದ ಕರ್ಮಬಂಧನವು ತಪ್ಪುವದು. ಅಯೋಗತಃ ಎಂದರೆ ಬುದ್ಧಿಯೋಗಸ್ಥಿತ ನಾಗದೆ (೨–೪೮) ಮಾಡಿದ ಕರ್ಮದಿಂದ ಮನುಷ್ಯನು ಪಡೆಯುವ ಸುಖ ವನ್ನಾಗಲಿ ದುಃಖವನ್ನಾಗಲಿ ಅನುಭವಿಸುವದಕ್ಕಾಗಿ ಪ್ರತಿಫಲವೆಂದು ಅವನಿಗೆ ಪುನಃ ದುಃಖವನ್ನಾಗಲಿ ಸುಖವನ್ನಾಗಲಿ ಅನುಭವಿಸಬೇಕಾಗು ವದು. ಈ ಸುಖದುಃಖಾನುಭವದ ಅವಶೇಷವು ಬುದ್ಧಿಯೋಗದಲ್ಲಿ ಪ್ರವೇಶವಾಡ ಹೊರತು ಜನ್ಮಜನ್ಮಾಂತರಕ್ಕೂ ಕೊನೆಗಾಣುವದಿಲ್ಲವಾದುದ ರಿಂದ ಮನುಷ್ಯನು ಪುನಃ ಪುನಃ ಜನ್ಮವೆತ್ತಬೇಕಾಗುವದು (೧೩–೨೧). ಇದಕ್ಕೇ ಪುನರ್ಜನ್ಮ ಅಥವಾ ಜನ್ಮಬಂಧವೆಂದು ಹೇಳುವದು. ಹೀಗೆ ಪ್ರಾಪ್ತವಾದ ಜನ್ಮಗಳು ಬಹುಶಃ ದುಃಖಮಯವಾಗಿಯೇ ಕಾಣುವವು. ಏಕೆಂದರೆ, ಗೀತೆಯಲ್ಲಿ ಶಾಶ್ವತ ಸುಖದ ಮಾರ್ಗವೆಂದು ನಿಯಮಿಸಿದ

ಕ್ರಮಕ್ಕೆ ವಿಪರೀತವಾಗಿ ಈ ನಶ್ವರ ಸುಖದುಃಖಗಳ ನಿರಂತರ ಪಲ್ಲಟವೂ ಅದನ್ನು ಹೊಂದಿದ ಜನ್ಮಪರಂಪರೆಯೂ ಸಾಗುವವು. **ಆದರೆ ಬುದ್ಧಿಯೋಗವನ್ನನುಸರಿಸಿ ನಡೆದರೆ, ದುಃಖವು ನಿರ್ಮೂಲವಾಗುವದು. ಇಂಥ ದುಃಖರಹಿತವಾದ 'ಪದ'ವನ್ನು ಎಂದರೆ ಸ್ಥಿತಿಯನ್ನು ಯಾವ ಮನುಷ್ಯನಾದರೂ ಪ್ರಾಪ್ತಮಾಡಿಕೊಳ್ಳಬಹುದು. ಗೀತೆಯಲ್ಲಿ ಯೋಗಸ್ಥಿತಿಯೆಂದು ಹೇಳಿದುದಾದರೂ ಇದೇ** (೬-೨೦-೨೩). ಜಗತ್ತಿನೊಳಗೆ ದುಃಖವು ತಾನಾಗಿಯೇ ಉದ್ಭವಿಸುವದಿಲ್ಲ. ಅದು ಸಕಾರಣವಾಗಿರುವದು. ನಿಯತಯೋಗಭಾವವನ್ನುಳಿದು ಅಯೋಗಭಾವವನ್ನು ಅವಲಂಬಿಸಿದುದಕ್ಕಾಗಿ ಪ್ರಾಯಶ್ಚಿತ್ತವೆಂದು ಅದು ಸಂಭವಿಸುವದು. ದುಃಖವಿಷಯಕವಾದ ಈ ಕಲ್ಪನೆಗಳೆಲ್ಲ ಗೀತೆಯ ತತ್ತ್ವಜ್ಞಾನಕ್ಕೆ ಮೂಲಭೂತವಾಗಿವೆ. ದುಃಖದ ಉಪಪತ್ತಿಯನ್ನು ಗೀತೆಯಲ್ಲಿ ವಿವರಿಸಿದ ಮೇರೆಗೆ ತಿಳಿದುಕೊಂಡರೆ ಮನುಷ್ಯನು ಎಲ್ಲವನ್ನು ತಿಳಿದಂತಾಗುವದೆಂದು ಅದು ಹೇಳುವದು.

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥ ೫೨ ॥**

ಅರ್ಜುನನು ಇದು ವರೆಗೆ ವೇದಾಂತ ವಿಷಯದ ಎಷ್ಟೋ ಸಂಗತಿಗಳನ್ನು ಕೇಳಿರುವನು ಮತ್ತು ಇನ್ನೂ ಅನೇಕ ಸಂಗತಿಗಳನ್ನು ಕೇಳಬೇಕೆಂಬ ಇಚ್ಛೆಯು ಅವನಲ್ಲಿರಬಹುದು. ಆದರೆ, ಸದ್ಯಕ್ಕೆ ಅವನನ್ನು ಆವರಿಸಿದ ವ್ಯಾಮೋಹ ದೋಷವು ಅವನು ಮೊದಲು ಕೇಳಿದ್ದರ ಪರಿಣಾಮವಾಗಿದೆ. ಈ ವ್ಯಾಮೋಹವನ್ನು ದಾಟಿ ಅವನು ಆಚೆಗೆ ಹೋಗಬೇಕು. ಹೀಗಗಾಲಿಕ್ಕೆ ಬುದ್ಧಿಯೋಗವೇ ಅವನಿಗೆ ಉಪಯುಕ್ತವಾದೀತು. ಅದರ ಸಹಾಯದಿಂದ ಒಂದು ಬಾರಿ ವ್ಯಾಮೋಹವು ನಷ್ಟವಾಯಿತೆಂದರೆ ಈ ವರೆಗೆ ಕೇಳಿದುದೂ ಇನ್ನು ಮುಂದೆ ಕೇಳಬೇಕಾದುದೂ ಅನವಶ್ಯವೆಂದು ಅವನಿಗೆ ಕಂಡುಬರುವದು.

**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥ ೫೩ ॥**

ಈ ಪೂರ್ವದಲ್ಲಿ ಅರ್ಜುನನು ಕೇಳಿದ ಅನೇಕ ಸಂಗತಿಗಳ ಸಂಸ್ಕಾರವು ಅವನ ಮನಸ್ಸಿನ ಮೇಲೆ ಆಗಿರುವದು ನಿಜ. ಆ ಅಪಸಿದ್ಧಾಂತಗಳಿಂದಲೇ ಈಗ ಅವನ ಬುದ್ಧಿಯು ವ್ಯಗ್ರವಾಗಿರುವದು. ಆ ಪೂರ್ವಗ್ರಹಗಳನ್ನು ಬಿಟ್ಟು ಅದು ನಿಶ್ಚಲವೂ ಶಾಂತವೂ ಆಯಿತೆಂದರೆ ಶ್ರೀಕೃಷ್ಣನು ಬೋಧಿಸುತ್ತಲಿರುವ ಬುದ್ಧಿಯೋಗವು ಅವನಿಗೆ ಸುಲಭವಾಗಿ ಸಾಧಿಸುವದು ಮತ್ತು ವೇದಾಂತ ವಿಷಯದ ಸಂಗತಿಗಳನ್ನು ಇನ್ನೂ ಕೇಳಬೇಕೆಂಬ ಅವನ ಲವಲವಿಕೆಯು ಬಿಟ್ಟುಹೋಗುವದು.

ಗೀತೆಯಲ್ಲಿ ಬೋಧಿಸಿದ ವಿದ್ಯೆಗೂ ಅರ್ಜುನನಿಗೆ ತತ್ಪೂರ್ವದಲ್ಲಿ ಕೇಳಿ ಪರಿಚಿತವಾದ ವೇದಾಂತ ವಿದ್ಯೆಗೂ ಸಾಮ್ಯವಾಗಲಿ ಸಾದೃಶ್ಯವಾಗಲಿ ಸ್ವಲ್ಪವೇ ಇದ್ದು ವ್ಯತ್ಯಾಸವು ಮಾತ್ರ ಹೆಚ್ಚಾಗಿದೆಯೆಂಬ ಸಂಗತಿಯನ್ನು ಈ ಶ್ಲೋಕದಿಂದ ತಿಳಿಯಬಹುದು. ಇದನ್ನು ತಿಳಿದರೆ ಬುದ್ಧಿಯೋಗದ ಮುಂದಿನ ವಿವರಣೆಯನ್ನು ಗ್ರಹಿಸುವದು ಸುಲಭವಾದೀತು.

ಅರ್ಜುನ ಉವಾಚ—

**ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಂ ॥ ೫೪ ॥**

ಸ್ಥಿತಪ್ರಜ್ಞನ ಎಂದರೆ ಯಾವನ ಬುದ್ಧಿಯು ಸ್ಥಿರವೂ ಶುದ್ಧವೂ ಆಗಿರುವದೋ ಅವನ ಲಕ್ಷಣವೇನು? ಅವನು ಹೇಗೆ ಮಾತಾಡುವನು? ಕೂಡುವನು ಹೇಗೆ? ಮತ್ತು ನಡೆಯುವನಾದರೂ ಹೇಗೆ?

ಸ್ಥಿತಪ್ರಜ್ಞತೆಯೆಂದರೆ ಬುದ್ಧಿಯ ಒಂದು ಪೂರ್ಣ ಹಾಗು ಸಂಪನ್ನ ಸ್ಥಿತಿಯು. ಅದನ್ನು ಪಡೆದವನನ್ನು ತ್ರಿಗುಣಾತೀತನೆಂದು, ನಿರ್ದ್ವಂದ್ವನೆಂದು, ನಿತ್ಯಸತ್ವಸ್ಥನೆಂದು, ಯೋಗಸ್ಥನೆಂದು ಮೊದಲಾಗಿ ಈ ವರೆಗೆ ಶ್ರೀಕೃಷ್ಣನು ಪದೇ ಪದೇ ವರ್ಣಿಸಿರುವನು. ಆದರೆ ಆ ವರ್ಣನೆಯೆಲ್ಲವೂ ಬುದ್ಧಿಯೋಗಿಯ ಭಾವವನ್ನು (attitude) ಸಂಬಂಧಿಸಿತ್ತು. ಅಂಥ ಭಾವಪರಿಪೂರ್ಣನಾದ ಮನುಷ್ಯನಿರುವದು ಸಂಭವನೀಯವೆಂದು ಅರ್ಜುನನ ಮನಸಿಗೆ ಹೊಳೆದಿದೆ. ಆದರೂ ಅಂಥವನನ್ನು ಕಂಡುಹಿಡಿಯುವದಕ್ಕೆ ವ್ಯಾವರ್ತಕ ಲಕ್ಷಣಗಳು ಯಾವವಿರಬಹುದು? ಎಂಬುದೇ ಅವನ ಪ್ರಶ್ನೆ.

ಶ್ರೀಭಗವಾನುವಾಚ—

**ಪ್ರಜಹಾತಿ ಯದಾ ಕಾಮಾನ್ಸರ್ವಾನ್ ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥ ೫೫ ॥**

ಇಂದ್ರಿಯಗಳ ಮತ್ತು ಇಂದ್ರಿಯ ವಿಷಯಗಳ ಸಂಯೋಗದಿಂದುಂಟಾಗುವ ತುಷ್ಟಿಗಾಗಿ ಮನುಷ್ಯನ ಮನಸ್ಸು ಹಾತೊರೆಯುವದು. ಮನಸ್ಸಿನ ಈ ವೃತ್ತಿಯು—ಕಾಮವಾಸನೆಯು—ಸಹಜವಾಗಿದ್ದರೂ ಅದು ಅವನ ಶ್ರೇಯಕ್ಕೆ ಬಾಧಕವಾಗಿದೆ. ಸಾಧಾರಣವಾಗಿ ಮನುಷ್ಯನ ಮನಸ್ಸಿನಲ್ಲಿ ಉದ್ಭವಿಸುವ ಇಂಥ ಕಾಮನೆಗಳನ್ನು ಸ್ಥಿತಪ್ರಜ್ಞನು ತನ್ನಲ್ಲಿ ಉದ್ಭವಿಸದಂತೆ ಕೊಂದುಬಿಡುವನು; ಎಂದರೆ, ಅವು ತನ್ನಲ್ಲಿ ಹುಟ್ಟಲು ಆಸ್ಪದ ಕೊಡುವದಿಲ್ಲ. ಇಂದ್ರಿಯ ತುಷ್ಟಿಯ ವಿಷಯದಲ್ಲಿ ಅವನು ಪರಾಙ್ಮುಖನೂ ಆಗಿರುವದಿಲ್ಲ. ಅವನ ಮನಸ್ಸು ಮತ್ತು ಇಂದ್ರಿಯ ಸ್ವಭಾವಗಳು ಅವನ ಆತ್ಮಸ್ವಭಾವದಿಂದ ದೊರೆಯುವ ಆತ್ಮತೃಪ್ತಿಯ ಸುಖವನ್ನೇ ಸೇವಿಸಿ ರಮಿಸುವವು. ಇಂಥವನನ್ನು ಸ್ಥಿತಪ್ರಜ್ಞನೆಂದು ಹೇಳುವರು.

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥ ೫೬ ॥**

ದುಃಖವೆಂಬುವದು ಮನಸ್ಸಿಗಾಗುವ ವೇದನೆಯೇ ಸರಿ. ತಾನು ಹಾರೈಸಿದ ಇಂದ್ರಿಯ ವಿಷಯಕ ಕಾಮನೆಗಳು ತೃಪ್ತಿಪಡದೆ ಹೋದರೆ ಮನಸ್ಸು ವ್ಯಥಿತವಾಗುವದು. ತನ್ನ ಆತ್ಮಸ್ವಭಾವವನ್ನು ಮನಃಸ್ವಾಧೀನವಾಗಿಟ್ಟುಕೊಂಡವನಿಗೆ ಈ ದುಃಖವು ತನ್ನ ಆತ್ಮನಿಗೇ ಆಗುವದೆಂದು ತೋರುವದು. ಇಂದ್ರಿಯ ವಿಷಯಕ ಸುಖವನ್ನಾದರೂ ತನ್ನ ಆತ್ಮನು ಅನುಭವಿಸುವನೆಂದು ಅವನು ಭಾವಿಸುವನು. ಆದರೆ ಸ್ಥಿತಪ್ರಜ್ಞನು ಹೀಗೆ ಭಾವಿಸುವದಿಲ್ಲ. ದುಃಖಪಡುವುದಕ್ಕೆ ಎಂಥ ಮಹತ್ವದ ಕಾರಣವು ಒದಗಿದರೂ ಅವನ ಮನಸ್ಸು ಉದ್ವಿಗ್ನವಾಗುವದಿಲ್ಲ; ಅಥವಾ ಸುಖಪ್ರಾಪ್ತಿಯಾದರೆ ಉತ್ಸಾಹಭರಿತವಾಗುವದಿಲ್ಲ. ಈ ಸ್ಥಿತಪ್ರಜ್ಞನಿಗೆ ರಾಗ, ಭಯ, ಕ್ರೋಧ ಮೊದಲಾದ ಮನೋವಿಕಾರಗಳಿರುವದಿಲ್ಲ. ಈ ಭಾವನೆಗಳು ಅವನಿಗೆ ಸಂಭವಿಸುವದಕ್ಕೆ ಕಾರಣವೇ ಇರುವದಿಲ್ಲವೆಂದು ಮಾತ್ರ ತಿಳಿಯು

ಬಾರದು. ಅಂಥ ಭಾವನಗಳುಂಟಾಗುವದಕ್ಕೆ ಪ್ರಬಲವಾದ ಕಾರಣಗಳು ಒದಗಿದರೂ ಅವುಗಳ ಉದ್ವೇಗದಿಂದ ತನ್ನ ಸಮತ್ವ ಬುದ್ಧಿಯು ಕೆಡದ ಹಾಗೆ ಅವನು ಕಾದುಕೊಳ್ಳುವನು. ಈ ರೀತಿಯಾಗಿ ಬುದ್ಧಿಯು ಸ್ಥಿರವಾದ ವನನ್ನೇ ಮುನಿಯೆಂದು ಹೇಳುವರು.

**ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಂ ।**
**ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭ ॥**

ಎಲ್ಲ ವಿಷಯುಗಳಲ್ಲಿಯೂ ಆಸಕ್ತಿರಹಿತನಾಗಿ ಯಾವನು ನಡೆಯು ವನೋ ಶುಭಾಶುಭಗಳು ಪ್ರಾಪ್ತವಾದರೂ ಆಲ್ಹಾದ ದ್ವೇಷಗಳು ಯಾವನಿಗೆ ಇಲ್ಲವೋ ಅವನ ಬುದ್ಧಿಯು ಸ್ಥಿರವಾದುದು.

**ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೮ ॥**

ಆಮೆಯು ತನ್ನ ಅವಯುವಗಳನ್ನು ಒಳಗೆಳೆದುಕೊಳ್ಳುವಂತೆ ಯಾವನು ತನ್ನ ಇಂದ್ರಿಯಗಳೆಲ್ಲವನ್ನು ಅವುಗಳ ವಿಷಯುಗಳಿಂದ ಹಿಂದೆಗೆಯುವನೋ ಅವನನ್ನು ಸ್ಥಿತಪ್ರಜ್ಞನೆಂದು ಹೇಳುವರು. ಇಂದ್ರಿಯ ವ್ಯವಹಾರದಲ್ಲಿ ಅನಾಸಕ್ತಿ ಮಾತ್ರವಲ್ಲದೆ ಇಂದ್ರಿಯ ಸಂಯುಮನವಾದರೂ ಅವಶ್ಯವೆಂದು ಈ ಶ್ಲೋಕದಲ್ಲಿ ಸೂಚಿಸಿದೆ.

**ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ ೫೯ ॥**

ಇಂದ್ರಿಯುಗಳನ್ನು ವಿಷಯುಗಳಿಂದ ದೂರವಿಟ್ಟರೆ ವಿಷಯುಗಳನ್ನು ನಿವಾರಿಸಿದಂತಾಗುವದು ನಿಜ. ಆದರೆ ಇಂದ್ರಿಯ ನಿಗ್ರಹವನ್ನು ಹೀಗೆ ಸಾಧಿಸಿದರೆ ಫಲವಿಲ್ಲ. ವಿಷಯುಗಳ ಸಂಬಂಧದಲ್ಲಿ ಸ್ವಾರಸ್ಯವಾಗಲಿ ಪ್ರೇಮ ವಾಗಲಿ ಮೊದಲು ಮನಸ್ಸಿನಲ್ಲಿ ನೆಲಸಿರುವದು. ಮನಸ್ಸು ಅವುಗಳನ್ನು ಪ್ರೋತ್ಸಾಹಿಸುವದರಿಂದಲೇ ಇಂದ್ರಿಯುಗಳು ವಿಷಯುಗಳ ಹಿಂದೆ ಓಡುವ ವೆಂಬುದನ್ನು ಮರೆಯುಬಾರದು. ಆದುದರಿಂದ ಇಂದ್ರಿಯುಗಳನ್ನು ನಿಗ್ರಹಿಸು ವಾಗ ಮನಸ್ಸಿನಲ್ಲಿ ಬೇರೂರಿದ ವಿಷಯುದ ಸ್ವಾರಸ್ಯವನ್ನು ಮೊದಲು

ನಿರ್ಮೂಲವಾಗಿ ಮಾಡಬೇಕು. ಈ ಸ್ವಾರಸ್ಯವು ಅಳಿದು ಹೋಗಲಿಕ್ಕೆ ಒಂದೇ ಉಪಾಯವು ಉಂಟು. ತನ್ನೊಳಗಿನ ಶ್ರೇಷ್ಠತಮವಾದ ಆತ್ಮ ಸ್ವಭಾವವನ್ನವಲಂಬಿಸಿರುವ ತತ್ವವನ್ನು ಎಂದರೆ ಪುರುಷೋತ್ತಮನಲ್ಲಿಯ ಆತ್ಮಸ್ವಭಾವದ ನೈಸರ್ಗಿಕ ಆಸಕ್ತಿಯನ್ನು ಕಂಡುಕೊಳ್ಳುವದೇ ಈ ಏಕೋಪಾಯವು.

**ಯತತೋಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥ ೬೦ ॥**

ಇಂದ್ರಿಯಗಳ ನಿಗ್ರಹವನ್ನಾಗಲಿ ಸಂಯಮವನ್ನಾಗಲಿ ಮಾಡುವದು ಆಡುವಷ್ಟು ಸುಲಭವಲ್ಲ. ಇದಕ್ಕಾಗಿ ಪ್ರಯತ್ನಪಡುವ ದೊಡ್ಡ ಜ್ಞಾನಿಗಳ ಮನಸ್ಸನ್ನಾದರೂ ಬಲಾಢ್ಯವಾದ ಈ ಇಂದ್ರಿಯಗಳು ಬಲಾತ್ಕಾರದಿಂದ ಎಳೆದೊಯ್ಯುವವು.

**ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।**
**ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೧ ॥**

ಆದುದರಿಂದಲೇ ಇಂದ್ರಿಯಗಳನ್ನು ನಿಗ್ರಹಿಸುವಾಗ ಬುದ್ಧಿಯೋಗ ಯುಕ್ತನಾಗಬೇಕು; ಮತ್ತು ಮನಸ್ಸನ್ನೂ ಬುದ್ಧಿಯನ್ನೂ ಶ್ರೀಕೃಷ್ಣ ಪರವಾಗಿ ಮಾಡಬೇಕು ಹೀಗೆ ಮಾಡಿದರೆ ಇವುಗಳನ್ನು ನಿಗ್ರಹಿಸುವ ವಿಷಯದಲ್ಲಿ ದೊಡ್ಡ ಜ್ಞಾನಿಗಳಿಗೂ ಬರುವ ಅಪಯಶವು ಅರ್ಜುನನ ಪಾಲಿಗೆ ಬರಲಾರವು. ಹೀಗೆ ಇಂದ್ರಿಯಗಳನ್ನು ವಶಪಡಿಸಿಕೊಂಡವನ ಬುದ್ಧಿಯು ಸ್ಥಿರವಾಯಿತೆಂದು ತಿಳಿಯಬೇಕು.

**ಧ್ಯಾಯತೋ ವಿಷಯಾನ್ಪುಂಸಃ ಸಂಗಸ್ತೇಷೂಪಜಾಯತೇ ।**
**ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿ**
**ಜಾಯತೇ ॥ ೬೨ ॥**
**ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥ ೬೩ ॥**

ಮನುಷ್ಯನಲ್ಲಿ ಇಂದ್ರಿಯಗಳ ವರ್ಚಸ್ಸು ಬಹು ಸೂಕ್ಷ್ಮವಾಗಿ ಹುಟ್ಟಿ ಬೆಳೆಯುವದು. ಅವನು ಇಂದ್ರಿಯಗಳ ಮುಖಾಂತರ ವಿಷಯಗಳಲ್ಲಿ ವ್ಯವಹರಿಸಬೇಕಾಗುವದು. ಹೀಗೆ ವ್ಯವಹರಿಸುವಾಗ ಯಾವದೊಂದು ವಿಷಯವನ್ನು ಕುರಿತು ನಿರ್ವ್ಯಾಜವಾಗಿ ಅವನು ಆಗಾಗ ಧ್ಯಾನಮಾಡ ಬೇಕಾಗುವದು. ಹೀಗೆ ಧ್ಯಾನಮಾಡುವದರಿಂದ ಸಂಗವು ಎಂದರೆ ಅದರಲ್ಲಿ ಸ್ನೇಹವು ಬೆಳೆಯುವದು. ಸಂಗದಿಂದ ಕಾಮವು ಎಂದರೆ ಆಸಕ್ತಿಯು ಉತ್ಪನ್ನವಾಗುವದು; ಕಾಮವು ಕೈಗೂಡದಿದ್ದರೆ ಅದರಿಂದ ಕ್ರೋಧವು ಹುಟ್ಟುವದು. ಕ್ರೋಧದಿಂದ ಪರಂಪರೆಯಾಗಿ ಅವಿವೇಕವೂ ಅವಿವೇಕದಿಂದ ಬುದ್ಧಿಭ್ರಮೆಯೂ ಬುದ್ಧಿಭ್ರಮೆಯಿಂದ ಬುದ್ಧಿನಾಶವೂ ಒಂದರ ಹಿಂದೆ ಒಂದು ಜನಿಸುವವು. ಕೊನೆಗೆ ಮನುಷ್ಯನು ಬುದ್ಧಿನಾಶದಿಂದ ಹಾಳಾಗು ವನು.

**ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥ ೬೪ ॥**

ಇಂದ್ರಿಯಗಳು ವಿಷಯಗಳಲ್ಲಿ ವಿಹರಿಸುವಾಗ ಮನುಷ್ಯನು ಬಹು ಜಾಗ್ರತೆಯಿಂದ ಇರಬೇಕು. ಆ ಪ್ರಸಂಗದಲ್ಲಿ ಅವನು ವಿಷಯಗಳನ್ನು ಕುರಿತು ಅಪರಿಹಾರ್ಯವಾಗಿ ಧ್ಯಾನಮಾಡಬೇಕಾಗುವದು ನಿಜ. ಆದರೆ ಈ ಧ್ಯಾನದಿಂದ ತನ್ನಲ್ಲಿ ಅವುಗಳ ವಿಷಯದ ಇಚ್ಛಾದ್ವೇಷಗಳು ಮೊಳೆ ದೋರದ ಹಾಗೆ ಅವನು ಎಚ್ಚರದಿಂದ ಇರಬೇಕು. ತನ್ನ ಆತ್ಮಸ್ವಭಾವ ಸಹಜವಾದ ಆಸಕ್ತಿಯನ್ನೆಲ್ಲವನ್ನೂ ಪುರುಷೋತ್ತಮನಿಗೆ ಅರ್ಪಿಸಿ ಇಂದ್ರಿಯ ಸ್ವಭಾವವನ್ನು ಸ್ವಾಧೀನದಲ್ಲಿಡುವವನೇ ಶಾಂತಿಯನ್ನು ಪಡೆಯುವನು (೨-೬೧).

**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥ ೬೫ ॥**

ಮೇಲೆ ಹೇಳಿದಂತೆ ಶಾಂತಿಯು ಕೈಗೂಡಿದರೆ ದುಃಖವು ನಿಃಶೇಷ ವಾಗಿ ಅಳಿದು ಹೋಗುವದು. ಶಾಂತಚಿತ್ತನಾದವನ ವ್ಯವಸಾಯಾತ್ಮಕ ಬುದ್ಧಿಯು ದೃಢವಾಗಿಯೂ ಇರುವದು.

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಂ ॥ ೬೬ ॥**

ಯಾವನ ಆತ್ಮವು ಯುಕ್ತ ಎಂದರೆ ಬುದ್ಧಿಯೋಗಯುಕ್ತ ಅಥವಾ ಪುರುಷೋತ್ತಮಪರತವಾಗಿರುವದಿಲ್ಲವೋ ಅವನ ವ್ಯವಸಾಯಾತ್ಮಕ ಬುದ್ಧಿಯಲ್ಲಿ ಸ್ಥಿರತೆಯಾಗಲಿ ದೃಢತೆಯಾಗಲಿ ಇರುವದಿಲ್ಲ. ಇದಕ್ಕೆ ಕಾರಣವೇನೆಂದರೆ ಯೋಗಯುಕ್ತನಾಗಿ ಇರದವನಿಗೆ ಯೋಗ್ಯವಾದ ಭಾವನೆಗಳಿರುವದಿಲ್ಲ. ಇಲ್ಲಿ ಭಾವನೆಯೆಂದರೆ ಸೃಷ್ಟಿಯ ಕಾರ್ಯಕಾರಣಗಳ ವಿಷಯದ ಜ್ಞಾನವು ಎಂದು ಅರ್ಥ. ಇಂಥ ಭಾವನೆಗಳು ಸರಿಯಾದವಿದ್ದರೆ ಅವು ಸಾತ್ವಿಕವೆನಿಸುವವು (೧೮–೨೦). ಇಲ್ಲಿ ಈ ಸಾತ್ವಿಕ ಭಾವನೆಗಳೇ ಉದ್ದಿಷ್ಟವಾಗಿವೆ. ಈ ಪ್ರಕಾರದ ನಿಜವಾದ ಭಾವನೆಗಳಿಲ್ಲದಿರುವವನಿಗೆ ಶಾಂತಿಯು ದೊರೆಯುವದು ಶಕ್ಯವಲ್ಲ. ಮತ್ತು ಶಾಂತಿಯಿಲ್ಲದವನಿಗೆ ಸುಖವೆಲ್ಲಿಯದು ?

**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ ೬೭ ॥**

ಸಾತ್ವಿಕ ಭಾವನೆಗಳಾಗಲಿ ಶಾಂತಿಯಾಗಲಿ ಸುಖವಾಗಲಿ ಇಲ್ಲದ ಮನುಷ್ಯನು ತನ್ನ ಮನಸ್ಸನ್ನು ಇಂದ್ರಿಯಗಳ ಹಿಂದೆ ಸ್ವೈರವಾಗಿ ಸಂಚರಿಸಲಿಕ್ಕೆ ಬಿಡುವನು. ಸಮುದ್ರದ ಮೇಲಿನ ನಾವೆಯನ್ನು ಗಾಳಿಯು ಎಳೆದೊಯ್ಯುವಂತೆ ಇಂಥ ಮನುಷ್ಯನ ಬುದ್ಧಿಯನ್ನು ಇಂದ್ರಿಯಗಳು ಎಳೆದೊಯ್ಯುವವು. ಬುದ್ಧಿಯನ್ನು ಕಳೆದುಕೊಂಡ ಬಳಿಕ ಸಂಭವಿಸುವ ಉತ್ಪಾತ ಪರಂಪರೆಯನ್ನು ಮೇಲೆ ವಿವರಿಸಿದೆ (೨–೬೨, ೬೩).

**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೮ ॥**

ಇದಕ್ಕಾಗಿ ವಿಷಯಗಳಿಂದ ತನ್ನ ಇಂದ್ರಿಯಗಳನ್ನೆಲ್ಲ ತಡೆಯುವವನ ಬುದ್ಧಿಯು ಸ್ಥಿರವಾದುದು.

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥ ೬೯ ॥**

ಜೀವರೆಲ್ಲರೂ ಯಾವ ಇಂದ್ರಿಯ ವ್ಯವಸಾಯದಲ್ಲಿ ಜಾಗರೂಕರಾಗಿರುವರೋ ಎಂದರೆ ದಕ್ಷತೆಯಿಂದಲೂ ಉಲ್ಲಾಸದಿಂದಲೂ ವರ್ತಿಸುವರೋ ಅದರಲ್ಲಿ ಈ ಇಂದ್ರಿಯ ನಿಗ್ರಹಿಯಾದವನು ನಿದ್ರಿತನಾಗಿರುವನು. ಮತ್ತು ಆತ್ಮಸ್ವಭಾವಜಾಗೃತಿಗೆ ಸಹಜವಾದ ಪುರುಷೋತ್ತಮನ ವಿಷಯದ ಯಾವ ಭಾವನೆಯಲ್ಲಿ ಇವನು ಜಾಗರೂಕನಾಗಿರುವನೋ ಅದರಲ್ಲಿ ಜೀವರೆಲ್ಲರೂ ನಿದ್ರಿತರಾಗಿರುವರು ಎಂದರೆ ಉತ್ಸಾಹವಿಲ್ಲದೆ ಇರುವರು.

**ಆಪೂರ್ಯಮಾಣಮಚಲಪ್ರತಿಷ್ಠಂ ।**
**ಸಮುದ್ರಮಾಪಃ ಪ್ರವಿಶಂತಿ ಯದ್ವತ್ ॥**
**ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ ।**
**ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥ ೭೦ ॥**

ಇಂದ್ರಿಯ ಸ್ವಭಾವ ವಿಷಯದಲ್ಲಿ ಸ್ಥಿತಪ್ರಜ್ಞನು ನಿದ್ರಿತನಾಗಿರುವನೆಂದು ಹೇಳಿದುದರಿಂದ ಅವನು ಅವುಗಳಲ್ಲಿ ವರ್ತಿಸುವದೇ ಇಲ್ಲವೆಂದು ತಿಳಿಯಬಾರದು. ಎಲ್ಲ ದಿಕ್ಕುಗಳಿಂದ ನೀರಿನ ಪ್ರವಾಹಗಳು ಹರಿದು ಒಂದು ಕೂಡುತ್ತಲಿದ್ದರೂ ಸಮುದ್ರರಾಜನು ಹೇಗೆ ತನ್ನ ನಿಶ್ಚಲವಾದ ಪ್ರತಿಷ್ಠೆಯನ್ನು ಕಳೆದುಕೊಳ್ಳುವದಿಲ್ಲವೋ ಹಾಗೆ ಇಂದ್ರಿಯಗಳಿಂದ ಉದ್ಭವಿಸುವ ಕಾಮನೆಗಳ ಆವೇಗಗಳು ತನ್ನಲ್ಲಿ ಪ್ರವೇಶಿಸುತ್ತಲಿದ್ದರೂ ಯಾವನ ಬುದ್ಧಿಯು ಚಲಿಸುವದಿಲ್ಲವೋ ಅವನಿಗೇ ಶಾಂತಿಯು ದೊರೆಯುವದು (೫-೨೩); ಕಾಮನೆಗಳನ್ನು ಅನುಸರಿಸುವ ಕಾಮಾತುರನಿಗಲ್ಲ.

**ವಿಹಾಯ ಕಾಮಾನ್ಯಃ ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥ ೭೧ ॥**

ಎಲ್ಲ ಕಾಮನೆಗಳನ್ನು ಬಿಟ್ಟು ವ್ಯವಹಾರಗಳಲ್ಲಿ ನಿಸ್ಪೃಹನಾಗಿ ನಡೆಯುವ ನಿರ್ಮಮನೂ ನಿರಹಂಕಾರಿಯೂ ಆದ ಮನುಷ್ಯನಿಗೆ ಶಾಂತಿಯು ದೊರೆಯುವದು.

**ಏಷಾ ಬ್ರಾಹ್ಮೀಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥ ೭೨ ॥**

ಇಂಥ ಶಾಂತಿಮಯ ಜೀವಿತಕ್ಕೇ ಬ್ರಾಹ್ಮೀ ಸ್ಥಿತಿಯೆಂದು ಹೆಸರು. ಈ ಸ್ಥಿತಿಯು ಪ್ರಾಪ್ತವಾದ ಬಳಿಕ ಕರ್ತವ್ಯ ವಿಷಯದಲ್ಲಿ ವ್ಯಾಮೋಹವು ಎಂದಿಗೂ ಸಂಭವಿಸದು. ಅಂತಕಾಲದ ವರೆಗೆ ಈ ಬ್ರಾಹ್ಮೀಸ್ಥಿತಿಯಲ್ಲಿಯೇ ಇದ್ದು ಕೊನೆಗೆ ಬ್ರಹ್ಮನಿರ್ವಾಣವನ್ನು ಮನುಷ್ಯನು ಪಡೆಯುವನು.

ಇಲ್ಲಿ ಅಂತಕಾಲವೆಂದರೆ ಪ್ರಾಪ್ತವಾದ ಜನ್ಮದ ಅಥವಾ ಶರೀರದ ಅಂತಕಾಲವಾಗಿರಲಾರದೆಂದು ನಮಗೆ ತೋರುವದು. ತನ್ನ ಕರ್ಮಗಳ ಬಂಧನದಿಂದ ಪ್ರಾಪ್ತವಾಗುವ ಜನ್ಮಪರಂಪರೆಯ ಅಂತಕಾಲವೇ ಉದ್ದಿಷ್ಟವಾಗಿರಬಹುದು. ಏಕೆಂದರೆ, ತನ್ನ ಕಲ್ಮಷಗಳನ್ನು ಸಂಪೂರ್ಣವಾಗಿ ನಾಶಿಸುವದಕ್ಕೆ ಜ್ಞಾನಿಗಾದರೂ ಅನೇಕ ಜನ್ಮಗಳನ್ನು ಜ್ಞಾನಸ್ಥಿತಿಯಲ್ಲಿಯೇ ಕಳೆಯಬೇಕಾಗುವದೆಂದು ಮುಂದೆ (೬-೧೯) ಹೇಳಿದೆ. ಬ್ರಾಹ್ಮೀಸ್ಥಿತಿ ಮತ್ತು ಬ್ರಹ್ಮನಿರ್ವಾಣ ಇವುಗಳಲ್ಲಿರುವ ತಾರತಮ್ಯವನ್ನು ಕುರಿತು ಮುಂದೆ (೧೮-೫೬) ನಾವು ವಿವರಿಸುವೆವು.

ಈ ಅಧ್ಯಾಯದಲ್ಲಿ ಬುದ್ಧಿಯೋಗಶಾಸ್ತ್ರದ ಸಂಕ್ಷಿಪ್ತವಾದ ಆದರೂ ಸಾದ್ಯಂತವಾದ ಶಬ್ದಚಿತ್ರವನ್ನು ಶ್ರೀಕೃಷ್ಣನು ನಿರೂಪಿಸಿರುವನು ಹಾಗು ಬುದ್ಧಿಯನ್ನು ಏಕಾಗ್ರವಾಗಿ ಮಾಡಿ ಶಾಂತಿಯನ್ನು ಪ್ರಾಪ್ತಮಾಡಿಕೊಳ್ಳುವ ಮೊದಲು ಬ್ರಾಹ್ಮೀಸ್ಥಿತಿಯನ್ನೂ ಆ ಬಳಿಕ ಬ್ರಹ್ಮನಿರ್ವಾಣವನ್ನೂ ಸಾಧಿಸುವ ವರೆಗಿನ ಎಲ್ಲ ಮುಖ್ಯಾಮುಖ್ಯವಾದ ವಿಷಯಗಳನ್ನು ಸುಸಂಬದ್ಧವಾಗಿ ಅರ್ಜುನನಿಗೆ ತಿಳಿಸಿ ಹೇಳಿರುವನು.

**ಎರಡನೆಯ ಅಧ್ಯಾಯವು ಸಮಾಪ್ತವು.**

---

ಓಂ

# ಮೂರನೆಯ ಅಧ್ಯಾಯವು

---

**ಅವತರಣಿಕೆ—**

ಶ್ರೀಕೃಷ್ಣಾರ್ಜುನರ ಈಗಿನ ಮನಃಸ್ಥಿತಿಯನ್ನು ಗ್ರಹಿಸಿದರೆ ಈ ಅಧ್ಯಾಯದಲ್ಲಿ ಬರುವ ವಿಷಯಗಳನ್ನು ತಿಳಿಯುವದು ಸುಲಭವಾಗುವದು.

ಅರ್ಜುನನ ಮನಸ್ಸು ಮೊದಲಿನಿಂದಲೇ ಕಳವಳಗೊಂಡಿತ್ತು. ಅದು ಶೋಕಾಕುಲತೆಯಿಂದ ಮುಂದುಗಾಣವಾಗಿತ್ತು. ಆದರೂ ತಾನು ಯುದ್ಧ ಮಾಡಬಾರದೆಂಬ ನಿರ್ಧಾರವನ್ನು ಅವನು ಮಾಡಿಯೇ ಇದ್ದನು. ತನ್ನ ಆ ನಿರ್ಧಾರವನ್ನು ಪುಷ್ಟೀಕರಿಸುವದಕ್ಕಾಗಿ ಅವನು ಅನೇಕ ಕಾರಣಗಳನ್ನು ಹೇಳಿದ್ದನು. ಆದರೆ ಅವುಗಳನ್ನೆಲ್ಲ ಅರ್ಥಶೂನ್ಯವೆಂದೂ ಅಪ್ರಾಸಂಗಿಕ ವೆಂದೂ ಶ್ರೀಕೃಷ್ಣನು ಒಪ್ಪಲಿಲ್ಲ. ಆದರೂ ತನ್ನ ನಿಶ್ಚಯವನ್ನೇ ಪುರಸ್ಕರಿ ಸಲು ಅರ್ಜುನನು ಯತ್ನಿಸುವದು ಸಹಜವು. ಶ್ರೀಕೃಷ್ಣನ ಹೇಳಿಕೆಯಲ್ಲಿ ತನ್ನ ನಿರ್ಧಾರಕ್ಕೆ ಅನುಕೂಲವಾದ ಸಂಗತಿಗಳನ್ನು ಅಥವಾ ತಾನು ಅದ ರಲ್ಲಿ ತೋರಿಸಬಹುದಾದ ತಪ್ಪುಗಳನ್ನು ಅವನು ಹುಡುಕುತಲಿದ್ದನು. ಶ್ರೀಕೃಷ್ಣನ ಬೋಧನೆಯು ಅವನಿಗೆ ಸಂದಿಗ್ಧವಾಗಿ ತೋರಿತು. ತಾನು ಯುದ್ಧವನ್ನು ಮಾಡಬೇಕೋ ಅಥವಾ ಮಾಡಬಾರದೋ ಎಂಬದನ್ನು ಶ್ರೀಕೃಷ್ಣನು ಒಂದೇ ಮಾತಿನಲ್ಲಿ ಏಕೆ ಹೇಳಬಾರದು? ಇದೂ ಅಲ್ಲದೆ ಬುದ್ಧಿಗಿಂತಲೂ ಕರ್ಮವು ಕನಿಷ್ಠವೆಂದು ಶ್ರೀಕೃಷ್ಣನೇ ಹೇಳಿದನಲ್ಲವೇ (೨. ೪೯)? ಅತ್ಯಂತ ಸಾಹಸದಿಂದ ಬುದ್ಧಿಯು ವಿವೇಕವನ್ನೇ ಅವಲಂಬಿಸಿ ಯುದ್ಧಮಾಡಬಾರದೆಂದು ಅರ್ಜುನನು ನಿಶ್ಚೈಸಿದ್ದನು. ಹೀಗಿರುವಾಗ ಯುದ್ಧದಂಥ ಗರ್ಹ್ಯವಾದ ಕರ್ಮಕ್ಕಿಂತಲೂ ತಾನು ಮಾಡಿದ ನಿಶ್ಚಯವು ಶ್ರೇಷ್ಠವಲ್ಲವೇ? ಶ್ರೀಕೃಷ್ಣನು ಆ ನಿಶ್ಚಯವನ್ನು ಧಿಕ್ಕರಿಸುವದೇಕೆ? ಅರ್ಜುನನಿಂದ ಕರ್ಮಮಾಡಿಸುವ ಇಂಥ ಅಟ್ಟಹಾಸದ ಆಗ್ರಹವಾದರೂ ಏಕೆ?

ಇನ್ನು ಶ್ರೀಕೃಷ್ಣನ ಮನಃಸ್ಥಿತಿಯನ್ನು ನೋಡುವ. ಸೃಷ್ಟಿಯೊಳಗಿನ ಜೀವಿಗಳಿಗೆಲ್ಲ ಅವನೇ ವಿಧಾತನು. ಹಾಗೆಯೇ ಅನನು ಎಲ್ಲ ಪರಿಸ್ಥಿತಿಗಳಿಗೂ ಪ್ರೇರಕನಾಗಿದ್ದನು. ಸೃಷ್ಟಿಯ ಉತ್ಪತ್ತಿ-ಸ್ಥಿತಿ-ಲಯಗಳು ಅವನ ಕೈಗಾರಿಕೆಯಾಗಿದ್ದವು. ಈ ತನ್ನ ಕರ್ಮಗಳ ಮರ್ಮವನ್ನು ಅಥವಾ ಕೌಶಲವನ್ನು ಅರ್ಜುನನಿಗೆ ನಿಶ್ಶೇಷವಾಗಿಯೂ ನಿಸ್ಸಂದೇಹವಾಗಿಯೂ ಹೇಳಲು ಮನಃಪೂರ್ವಕವಾಗಿ ಅವನು ಸಿದ್ಧನಾಗಿದ್ದನು. ಈ ಬೋಧನೆಗೆ ಅರ್ಜುನನ ವಿಷಾದವು ನಿಜವಾದ ಕಾರಣವಲ್ಲ; ಅದು ನಿಮಿತ್ತಮಾತ್ರವು. ನಿಜವಾದ ಕಾರಣವೇನೆಂದರೆ ನಾವು ಈ ಮೊದಲು ಹೇಳಿದಂತೆ ಕೃಷ್ಣಾವತಾರದಲ್ಲಿ ತಾನೆಸಗಬೇಕಾಗಿದ್ದ ಅತ್ಯಂತ ಮಹತ್ವದ ಕರ್ತವ್ಯವನ್ನು-ಎಂದರೆ ಗೀತಾನಿರೂಪಣೆಯನ್ನು-ನೆರವೇರಿಸುವದು. ಆದುದರಿಂದ ತಾನು ಸೃಷ್ಟಿಯನ್ನುಂಟುಮಾಡಿದ ಕ್ರಮವನ್ನೂ, ಆ ಸೃಷ್ಟಿಯಲ್ಲಿ ಕರ್ಮವನ್ನು ನೆಲೆಗೊಳಿಸಿದ ಉದ್ದೇಶವನ್ನೂ ಅರ್ಜುನನಿಗೆ ಪೂರ್ಣ ಮನವರಿಕೆಯಾಗುವ ಹಾಗೆ ತಿಳಿಯ ಹೇಳುವದಕ್ಕೆ ಈ ಸಮಯವನ್ನೇ ಏಕೆ ಸಾಧಿಸಬಾರದು? ಕೇವಲ ಏನಕೇನ ಪ್ರಕಾರವಾಗಿ ಪ್ರಸಂಗವನ್ನು ದಾಟುವಂಥ ಉಪದೇಶವನ್ನು ಅವನು ಏಕೆ ಮಾಡಬೇಕು?

ಅರ್ಜುನನಿಗೆ ಬೋಧಮಾಡುವಾಗ ಶ್ರೀಕೃಷ್ಣನಿಗೆ ಒಂದು ತೊಂದರೆಯು ತೋರಿತು. ತಾನು ತಿಳಿಸಿಕೊಡಬೇಕಾಗಿದ್ದ ನೂತನ ವಿಚಾರಗಳನ್ನು ಅರ್ಜುನನಿಗೆ ಹೇಳುವಾಗ ರೂಢಾರ್ಥದಿಂದ ಕೂಡಿದ ಹಳೆಯ ಪಾರಿಭಾಷಿಕ ಶಬ್ದಗಳು ತನ್ನ ಹೊಸ ಭಾವವನ್ನು ಸೂಚಿಸುವದಕ್ಕೆ ಉಪಯುಕ್ತವಾಗಿರಲಿಲ್ಲ. ಅರ್ಜುನನಂತೂ ಈ ಶಬ್ದಗಳ ಪೂರ್ವ ಸಂಸ್ಕಾರದಲ್ಲಿ ಚೆನ್ನಾಗಿ ಮುಳುಗಿದವನಾಗಿದ್ದನು. ಇದಕ್ಕಾಗಿ ತಾನು ತಿಳಿಸಿ ಹೇಳಬೇಕೆಂದಿದ್ದ ಸಂಪೂರ್ಣ ಜ್ಞಾನವನ್ನು ಅವನಿಗೆ ಸರಲವಾದ ನಾಲ್ಕು ಮಾತುಗಳಲ್ಲಿ ಹೇಳಿ ಮುಗಿಸುವದು ಶಕ್ಯವಾಗಿರಲಿಲ್ಲ. ಅರ್ಜುನನ ಮನಸ್ಸನ್ನು ಮುಸುಕಿದ್ದ ಹಳೆಯ ಕಲ್ಪನೆಗಳ ಕಿಲುಬನ್ನು ತೆಗೆದುಹಾಕಿ ಶುದ್ಧಮಾಡುವದು ಅವಶ್ಯವಾಗಿತ್ತು. ತಾನು ಉಪದೇಶ ಮಾಡುವಾಗ ಹಳೆಯ ಶಬ್ದಗಳನ್ನು ಬಳಿಸಬೇಕಾಗುವದು ಅಪರಿಹಾರ್ಯವು. ಆದರೂ ಆ ಶಬ್ದಗಳ ಹಳೆಯ

ಅರ್ಥವನ್ನೇ ಸಾಕಷ್ಟು ಉದಾರವೂ ಪ್ರಶಸ್ತವೂ ಆಗುವಂತೆ ಬದಲಿಸುವದು ಅಗತ್ಯವಾಗಿತ್ತು. ಕೃಷ್ಣಾರ್ಜುನರಿಬ್ಬರೂ ಒಂದೇ ಧರ್ಮದ ಅನುಯಾಯಿ ಗಳು. ಅವರ ಮಾತೃಭಾಷೆಯಾದರೂ ಒಂದೇ. ಅವರಿಬ್ಬರೂ ಆ ಕಾಲದ ಪ್ರೌಢ ವಿದ್ಯಾವಂತರಾಗಿದ್ದರು. ಇಬ್ಬರೂ ವೇದಾಂತ ವಿಷಯದಲ್ಲಿ ಪಾರಂಗತರಾಗಿದ್ದರು. ಇದೆಲ್ಲ ನಿಜವಾದರೂ ವೇದಾಂತದೊಳಗಿನ ಸಾಧಾ ರಣ ಪಾರಿಭಾಷಿಕ ಶಬ್ದಗಳನ್ನನುಲಕ್ಷಿಸಿ ಗೀತೆಯಲ್ಲಿ ಮಾಡಿದ ಅರ್ಥ ಸಂಶೋಧನೆಯನ್ನೂ ಮತ್ತು ಏರ್ಪಡಿಸಿದ ಅವುಗಳ ವ್ಯಾಪಕವಾದ ಹೊಸ ಅರ್ಥ ಮರ್ಯಾದೆಯನ್ನೂ ನೋಡಿದರೆ ಅದು ಒಂದು ವೇದಾಂತದ ಪಾರಿ ಭಾಷಿಕ ಶಬ್ದಗಳ ನಿಘಂಟುವೆಂದೇ ತೋರುವದು. ಇದರಿಂದ ನಾವು ಊಹಿಸುವದೇನೆಂದರೆ ಪಾರಿಭಾಷಿಕ ಶಬ್ದಗಳ ಹೊಸ ಭಾವದ ದಿಶೆಯನ್ನೂ ಅಭಿಪ್ರಾಯವನ್ನೂ ಅರ್ಜುನನಿಗೆ ವಿಶದಪಡಿಸುವದಕ್ಕೆ ವಿಶೇಷವಾಗಿ ಮೊದ ಲಿನ ಆರು ಅಧ್ಯಾಯಗಳಲ್ಲಿಯೂ ಅಲ್ಪಾಂಶದಿಂದ ಇತರ ಅಧ್ಯಾಯಗಳ ಲ್ಲಿಯೂ ಶ್ರೀಕೃಷ್ಣನು ಅವುಗಳನ್ನು ಚರ್ಚಿಸಿರುವನು.

ಶ್ರೀಕೃಷ್ಣನು ಹೇಳಿದ ಮಾತುಗಳಿಗೆಲ್ಲ ಆತನ ಸಂಪೂರ್ಣ ಜ್ಞಾನ ಭಾಂಡಾರವೇ ಆಧಾರವಾಗಿತ್ತೆಂಬದನ್ನು ಲಕ್ಷ್ಯದಲ್ಲಿಡಬೇಕು. ಆತನ ಹೇಳಿಕೆಯಲ್ಲಿ ಎಲ್ಲೆಲ್ಲಿಯೂ ಗಂಭೀರವೂ ಸೂಕ್ಷ್ಮವೂ ಗಹನವೂ ಆದ ತತ್ವ ಜ್ಞಾನವು ಹೊರಸೂಸುವದು ಆಶ್ಚರ್ಯವಲ್ಲ. ಆದರೆ ಅದೆಲ್ಲವನ್ನೂ ಸಂಪೂರ್ಣವಾಗಿಯೂ ತತ್ವಸಮರ್ಪಕವಾಗಿಯೂ ತಿಳಿಯುವದು ಈಗಾ ಗಲೇ ಅರ್ಜುನನಿಗೆ ಶಕ್ಯವಾಗಿರಲಿಲ್ಲ. ಶ್ರೀಕೃಷ್ಣನು ಗೂಢವಾದ ವ್ಯಾಪಕ ಅರ್ಥದಲ್ಲಿ ನುಡಿದ ಶಬ್ದಗಳನ್ನು ಮೇಲೆ ಮೇಲೆ ಅರೆಕೊರೆಯಾಗಿ ಅವನು ಗ್ರಹಿಸುತ್ತಲಿದ್ದನು. ಈ ಅರ್ಥವಾದರೂ ಅವನ ಪೂರ್ವಗ್ರಹದೂಷಿತವಾದ ಮನಸ್ಸಿನ ಮೇಲೆ ಅಸ್ಪಷ್ಟವಾಗಿಯೇ ಮೂಡುತಲಿತ್ತು. ಅರ್ಜುನನು ಈ ಅಧ್ಯಾಯದ ಆರಂಭದಲ್ಲಿ ಕೇಳಿದ ಪ್ರಶ್ನೆಯನ್ನು ಈ ಸಂಗತಿಗಳನ್ನೆಲ್ಲ ಗಮ ನಿಸಿ ಪರಿಶೀಲಿಸುವದೇ ಯೋಗ್ಯವೆಂದು ನಮಗೆ ತೋರುವದು.

ಅರ್ಜುನ ಉವಾಚ—

**ಜ್ಯಾಯಸೀ ಚೇತ್ಕರ್ಮಣಸ್ತೇ ಮತಾಬುದ್ಧಿರ್ಜನಾರ್ದನ।**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥ ೧ ॥**

**ವ್ಯಾಮಿಶ್ರೇಣೈವ ವಾಕ್ಯೇನ ಬುದ್ಧಿಂ ಮೋಹಯಸೀವಮೇ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಂ ॥ ೨ ॥**

ಕರ್ಮಕ್ಕಿಂತಲೂ ಬುದ್ಧಿಯೇ ಶ್ರೇಷ್ಠವೆಂದು ಶ್ರೀಕೃಷ್ಣನು ತನ್ನ ಅಭಿಪ್ರಾಯವನ್ನು ಹೇಳಿದ್ದನು (೨. ೪೯). ಹೀಗಿರುವಾಗ ಯುದ್ಧದಂಥ ಘೋರ ಕರ್ಮಕ್ಕೆ ಅರ್ಜುನನನ್ನು ಅವನು ಏಕೆ ನೇಮಿಸಬೇಕು? ವಿರೋಧ ಯುಕ್ತವಾದ ಮಾತುಗಳನ್ನಾಡಿ ಬುದ್ಧಿಭೇದವನ್ನುಂಟುಮಾಡದೆ, ಯಾವ ಮಾರ್ಗವನ್ನು ಅನುಸರಿಸುವದರಿಂದ ಅರ್ಜುನನಿಗೆ ಶ್ರೇಯಸ್ಸು ತಪ್ಪದೆ ಸಾಧಿಸುವದೋ ಆ ಒಂದೇ ಮಾರ್ಗವನ್ನು ಶ್ರೀಕೃಷ್ಣನು ಅವನಿಗೆ ಏಕೆ ಹೇಳಿಬಿಡಬಾರದು?

ಯುದ್ಧಮಾಡಬೇಕೋ ಮಾಡಬಾರದೋ ಎಂಬೆರಡರಲ್ಲಿ ಒಂದೇ ನಿರ್ಣಯವು ಅರ್ಜುನನಿಗೆ ಬೇಕಾಗಿತ್ತು; ಮತ್ತು ಅದನ್ನೇ ಅವನು ಶ್ರೀ ಕೃಷ್ಣನಿಂದ ಪಡೆಯಲಿಚ್ಛಿಸಿದ್ದನು. ಆದರೆ ಅರ್ಜುನನಿಗುಂಟಾದ ಆಪತ್ತಿನ ಈ ಸ್ವರೂಪವನ್ನು ಶ್ರೀಕೃಷ್ಣನು ಅನುಲಕ್ಷಿಸಿರಲಿಲ್ಲ. ಬುದ್ಧಿಯೋಗವೆಂಬ ಪರಮ ಶ್ರೇಷ್ಠವಾದ ಜ್ಞಾನವನ್ನು ಸಂಪೂರ್ಣವಾಗಿ ಅರ್ಜುನನಿಗೆ ಬೋಧಿ ಸುವ ಸಂಕಲ್ಪದಿಂದ ತನ್ನ ಉಪದೇಶವನ್ನು ಅವನು ಆರಂಭಿಸಿದ್ದನು. ಒಂದೇ ಉತ್ತರವನ್ನು ಹೇಳೆಂದು ಅರ್ಜುನನು ಮಾಡುವ ಆಗ್ರಹಕ್ಕೆ ಶ್ರೀಕೃಷ್ಣನು ಕಿವಿಗೊಡುವದೇ ಇಲ್ಲ.

ಶ್ರೀಭಗವಾನುವಾಚ—

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ ॥ ೩ ॥**

ಅರ್ಜುನನು ಮೇಲಿನ ಶ್ಲೋಕದಲ್ಲಿ ಕೇಳಿದ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರವೇ ಇಲ್ಲ. ಆದರಲ್ಲಿ ಎರಡು ನಿಷ್ಠೆಗಳ ಉಲ್ಲೇಖವಿರುವದು ನಿಜ. ಈ ನಿಷ್ಠೆಗಳನ್ನು ಜ್ಞಾನಯೋಗ ಕರ್ಮಯೋಗವೆಂದು ಹೇಳಿದೆ ಅರ್ಥ

ಸಾದೃಶ್ಯವನ್ನು ಊಹಿಸಿ ಆಗ ಪ್ರಚಾರದಲ್ಲಿದ್ದ ಪ್ರವೃತ್ತಿ ನಿವೃತ್ತಿ ಅಥವಾ ಕರ್ಮ ಮತ್ತು ಸನ್ಯಾಸ ಮಾರ್ಗಗಳೇ ಇಲ್ಲಿ ಉದ್ದಿಷ್ಟವಿರುವವೆಂದು ಪ್ರತಿಪಾದಿಸುವದುಂಟು. ಇದು ಸರಿಯಲ್ಲ. ಕರ್ಮವನ್ನು ಬಿಡುವದು ಶಕ್ಯವಲ್ಲ. ಶಕ್ಯವೆಂದು ಬಗೆದು ಬಿಟ್ಟುದೇ ಆದರೆ ಅಪಾರ ಹಾನಿಕರವು ಎಂದು ಘಂಟಾಘೋಷವಾಗಿ ಹೇಳುವ ಗೀತೆಯಲ್ಲಿ ಸನ್ಯಾಸಮಾರ್ಗಕ್ಕೆ ಒಪ್ಪಿಗೆಯೇ ಅಲ್ಲದೆ ಕರ್ಮಯೋಗಕ್ಕೆ ಸಮಾನವಾದ ಯೋಗ್ಯತೆಯೂ ಹೇಗೆ ದೊರೆಯಬಹುದೆಂಬ ಆಕ್ಷೇಪವು ಒಂದು. ಇದೂ ಅಲ್ಲದೆ ಆಗಿನ ಪ್ರವೃತ್ತಿಯೆಂಬ ಕರ್ಮಮಾರ್ಗಕ್ಕೂ ಈ ನಮ್ಮ ಕಾಲದಲ್ಲಿ ಕರ್ಮಯೋಗವೆಂಬ ಶಬ್ದಸಮುಚ್ಚಯದಿಂದ ಬೋಧವಾಗುವ ಕಲ್ಪನೆಗಳಿಗೂ ಬಹಳ ವ್ಯತ್ಯಾಸವಿರುವದು. ಈಗಿನ ಕಲ್ಪನೆಗಳನ್ನೇ ಆಗ ಚರ್ಚಿಸಿರುವರೆಂದು ಹೇಳುವದು ಯುಕ್ತವಲ್ಲ. ಗೀತೆಯಲ್ಲಿ ಕರ್ಮಯೋಗವು ಹೇಳಿರುವದೇನೋ ನಿಜ. ಆದರೆ ಆ ಕರ್ಮಯೋಗವು ಆಧುನಿಕ ಕಲ್ಪನೆಗಳ ಸ್ವರೂಪದ್ದು ಅಲ್ಲವೆಂಬ ವಿಷಯವನ್ನು ನಾವು ಹಿಂದೆ (೨. ೪೮ ವಿವರಣೆ) ವಿಶದಮಾಡಿರುವೆವು.

ಇನ್ನು ಇಲ್ಲಿ ಹೇಳಿರುವ ಎರಡು ನಿಷ್ಠೆಗಳು ಯಾವವೆಂಬದನ್ನು ವಿಚಾರಿಸುವ. ಈ ಎರಡು ನಿಷ್ಠೆಗಳನ್ನೂ ಶ್ರೀಕೃಷ್ಣನು ಗೀತೆಯಲ್ಲಿ ಈ ಮೊದಲೇ ಹೇಳಿರುವೆನೆಂದು ನುಡಿಯುವನು. ಈ ವರೆಗೆ ಗೀತೆಯಲ್ಲಿ ಹೇಳಿದ ನಿಷ್ಠೆಗಳಿಗೆ ಸಾಂಖ್ಯವೆಂದೂ ಬುದ್ಧಿಯೋಗವೆಂದೂ ಶ್ರೀಕೃಷ್ಣನು ಹೆಸರು ಕೊಟ್ಟಿರುವನು. ಈ ನಿಷ್ಠೆಗಳನ್ನು ಕುರಿತು ಈ ವರೆಗೆ ಸವಿಸ್ತಾರವಾಗಿ ನಮ್ಮ ವಿಚಾರಗಳನ್ನು ನಾವು ಹೇಳಿರುವೆವು. ಸಾಂಖ್ಯನಿಷ್ಠೆಯೆಂದರೆ ಪುರುಷೋತ್ತಮನನ್ನು ಅಥವಾ ಭಗವದ್ಭಕ್ತಿಯನ್ನು (೧೦-೧೪) ಒಪ್ಪಿಕೊಳ್ಳದ ಆದರೆ ಜ್ಞಾನಜಿಜ್ಞಾಸೆಯುಳ್ಳ ನಿಷ್ಠೆ ಎಂದೂ ಬುದ್ಧಿ **ಯೋಗವೆಂದರೆ ಭಗವದ್‌ವ್ಯಕ್ತಿಯಲ್ಲಿ—ಪುರುಷೋತ್ತಮ ಶ್ರೀಕೃಷ್ಣನಲ್ಲಿ—ಆಸಕ್ತಿಭಾವವನ್ನಿಟ್ಟು ನಡೆಯುವ ನಿಷ್ಠೆಯೆಂದೂ ಉದ್ದಿಷ್ಟವಿದೆ.** ಸಾಂಖ್ಯನಿಷ್ಠೆಯಲ್ಲಿ ಕರ್ಮಮಾಡಬೇಕೆಂಬ ಆಗ್ರಹವಿಲ್ಲ. ಆದರೂ ಬಿಡಬೇಕೆಂಬ ನಿಷ್ಕರ್ಷೆಯೂ ಇರುವದಿಲ್ಲ. ಸಾಂಖ್ಯವು ಕರ್ಮವನ್ನು ವಿಶೇಷವೆಂದು ಗಮನಿಸದೆ ಬುದ್ಧಿಯ ಪ್ರಜ್ಞಾವಾದವನ್ನೇ-ಜ್ಞಾನಯೋಗವನ್ನೇ-

ಅನುಸರಿಸುವದು. ಆದರೆ ಬುದ್ಧಿಯೋಗದಲ್ಲಿ ಕರ್ಮವು ಅನಿವಾರ್ಯವು. ಈ ಎರಡು ನಿಷ್ಠೆಗಳನ್ನು ಅವುಗಳ ಪ್ರಮುಖ ಲಕ್ಷಣಗಳನ್ನನುಲಕ್ಷಿಸಿ ಕ್ರಮವಾಗಿ ಜ್ಞಾನಯೋಗ ಕರ್ಮಯೋಗಗಳೆಂದು ಸಾರ್ಥಕವಾಗಿ ಇಲ್ಲಿ ಸಂಬೋಧಿಸಿದೆ. ಕರ್ಮಯೋಗದ ಅಥವಾ ಸನ್ಯಾಸಯೋಗದ ಉಲ್ಲೇಖವು ಈ ವರೆಗೆ ಗೀತೆಯಲ್ಲಿ ಬಂದಿರುವದಿಲ್ಲ. ಹಾಗೆಯೇ ಪ್ರವೃತ್ತಿ ನಿವೃತ್ತಿ ಮಾರ್ಗಗಳ ಉಲ್ಲೇಖವೂ ಬಂದಿರುವದಿಲ್ಲ. ಇನ್ನುಮುಂದೆ ಹೇಳಲ್ಪಡುವ ಕರ್ಮಯೋಗವು ಗೀತೆಯಲ್ಲಿ ಮುಖ್ಯವಾಗಿ ಪ್ರತಿಪಾದಿಸಲ್ಪಟ್ಟ ಬುದ್ಧಿಯೋಗವನ್ನೇ ಅನುಸರಿಸಬೇಕೆಂಬದನ್ನು ಇಲ್ಲಿ 'ಯೋಗಿನಾಂ' ಅಂದರೆ 'ಬುದ್ಧಿಯೋಗಿಗಳಿಗೆ'ಯೆಂಬ ಶಬ್ದದಿಂದ ಸೂಚಿಸಿದೆ. ಇನ್ನಾವ ಕರ್ಮಯೋಗವಾಗಲಿ ಅದು ಎಷ್ಟು ಪ್ರಶಸ್ತವಾದುದಾಗಲಿ ಬೆಲೆಯುಳ್ಳದುದಾಗಿರಲಿ ಅದು ಗೀತೆಗೆ ಸಂಪೂರ್ಣ ಸಂಮತವಾಗಲಾರದು. ಬುದ್ಧಿಯೋಗಶಾಸ್ತ್ರದಲ್ಲಿ ಕರ್ಮಯೋಗವೆಂದರೇನೆಂಬ ವಿಷಯವನ್ನು ಮುಂದಿನ ಅಧ್ಯಾಯಗಳಲ್ಲಿ ವಿಸ್ತಾರವಾಗಿಯೂ ಸಮರ್ಪಕವಾಗಿಯೂ ಶ್ರೀಕೃಷ್ಣನು ಹೇಳಿರುವನು.

ಅರ್ಜುನನು ಕೇಳಿದ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರವಿಲ್ಲ. ತಾನು ಈ ಮೊದಲು ಮಾಡಿದ ವಿವೇಚನೆಯ ಸಾರಾಂಶವನ್ನು ಹೇಳಿ ಶ್ರೀಕೃಷ್ಣನು ಮುಂದಿನ ನಿರೂಪಣೆಯನ್ನು ಆರಂಭಿಸುವನು. ವಿಷಯವನ್ನು ಸ್ಪಷ್ಟ ಮಾಡುವದರಲ್ಲಿ ಶ್ರೀಕೃಷ್ಣನಿಗಿದ್ದ ಹೊಸ ದೃಷ್ಟಿಯನ್ನೂ ತೊಂದರೆಗಳನ್ನೂ ನೋಡಿದರೆ (೩-೧) ಇಷ್ಟರಲ್ಲಿಯೇ ಅರ್ಜುನನು ಅದರ ಸಂಪೂರ್ಣ ಸ್ವರೂಪವನ್ನು ತಿಳಿದುಕೊಳ್ಳುವದೂ ಸಮಂಜಸವಾದ ಶಂಕೆಗಳನ್ನು ಕೇಳುವದೂ ಶಕ್ಯವಲ್ಲ. ಮುಂದೆ ಸಾಗುವ ನಿರೂಪಣೆಯನ್ನು ಅವನು ಸಮಾಧಾನದಿಂದ ಅವಧರಿಸಬೇಕು.

**ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ　　॥ ೪ ॥**

ತನ್ನ ಶ್ರೇಯವನ್ನು ಸಾಧಿಸಬೇಕೆಂಬುದೇ ಅರ್ಜುನನ ಉದ್ದೇಶವು.

ಅದು ನೈಷ್ಕರ್ಮ್ಯದಿಂದ ಸಾಧಿಸುವದು ನಿಜ. ಆದರೆ ಅರ್ಜುನನು ಈ ನೈಷ್ಕರ್ಮ್ಯವನ್ನು ಯಾವ ಬಗೆಯಿಂದ ಪಡೆಯಬೇಕು? **ಕರ್ಮ ಮಾಡುವದನ್ನು ಬಿಟ್ಟಮಾತ್ರಕ್ಕೆ ನೈಷ್ಕರ್ಮ್ಯವು ಯಾರಿಗೂ ಸಾಧಿಸಲಾರದು.** ಹಾಗೆಯೆ ಸಂನ್ಯಾಸ ಮಾಡಿದರೂ ತನಗೆ ಬೇಕಾಗಿದ್ದ ಸಿದ್ಧಿಯು ಅರ್ಜುನನಿಗೆ ದೊರೆಯಲಾರದು. ಕರ್ಮವನ್ನು ಬಿಡುವುದೆಂದರೆ ನಿಶ್ಶೇಷವಾಗಿ ಬಿಡುವದೆಂದೇ ಅರ್ಥ. ಸಂನ್ಯಾಸವೆಂದರೆ ಶರೀರ ರಕ್ಷಣಾರ್ಥವಾಗಿರುವ ಕರ್ಮಗಳನ್ನುಳಿದು ಮಿಕ್ಕ ಎಲ್ಲವುಗಳನ್ನೂ ವರ್ಜ್ಯಮಾಡುವದೆಂದರ್ಥ.

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ೫ ॥**

ಕರ್ಮವನ್ನು ನಿಶ್ಶೇಷವಾಗಿ ಬಿಡುವದು ಶಕ್ಯವಲ್ಲ. ಒಂದು ಕ್ಷಣವಾದರೂ ಕರ್ಮ ಮಾಡದೆ ಇರುವದು ಯಾರಿಗೂ ಸಾಧ್ಯವಲ್ಲ. ಪ್ರಕೃತಿಯ ಗುಣಗಳಿಗೆ ವಶರಾಗಿ ಎಲ್ಲರೂ ಕರ್ಮಮಾಡುತ್ತಲಿರುವರು.

**ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥ ೬ ॥**

ಹೀಗೆ ಸ್ವಭಾವದಿಂದ ಮನುಷ್ಯನು ಕರ್ಮವಶನಾಗಿರುವಾಗ ಯಾವನಾದರೂ ಕರ್ಮೇಂದ್ರಿಯಗಳನ್ನು ಮಾತ್ರ ಬಿಗಿಹಿಡಿದು ಮನಸ್ಸಿನಲ್ಲಿ ಅವುಗಳ ವಿಷಯಗಳನ್ನು ಸ್ಮರಿಸುತ್ತಿದ್ದರೆ ಅವನನ್ನು ಸಂಯಮಶೀಲನೆಂದು ಹೇಳಲಾಗದು. ಅವನು ಮಾಡುವದು ಮಿಥ್ಯಾಚಾರವೆಂದೇ ಹೇಳಬೇಕು.

**ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ ೭ ॥**

ಮನಸ್ಸಿನ ನಿಯಮನದಿಂದಲೇ ಇಂದ್ರಿಯಗಳ ಸಂಯಮನವನ್ನು ಆರಂಭಿಸಬೇಕು. ಮನಸ್ಸಿನ ನಿಯಮನವು ಸಾಧಿಸಿದರೆ ಇಂದ್ರಿಯಗಳ

ಸಂಯಮವು ತಾನಾಗಿಯೇ ಸಾಧಿಸುವದು. **ಈ ರೀತಿಯಾಗಿ ಮನಸ್ಸು ಇಂದ್ರಿಯಗಳೂ ವಶವಾದ ಬಳಿಕ ನಿರಾಸಕ್ತನಾಗಿ ಕರ್ಮೇಂದ್ರಿಯ ಗಳಿಂದ ಕರ್ಮಗಳನ್ನು ಮಾಡುತ್ತಲಿರುವದೇ ಕರ್ಮಯೋಗವೆನಿಸು ವದು.** ಇಂಥ ಕರ್ಮಯೋಗವು ಮತ್ತಾವ ಕರ್ಮಯೋಗಕ್ಕಿಂತಲೂ ಶ್ರೇಷ್ಠವೇ ಸರಿ. ಗೀತೆಯಲ್ಲಿ ಹೇಳಿರುವ ಕರ್ಮಯೋಗಾಚರಣೆಯ ಪದ್ಧತಿಯು ಇದೇ.

**ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ।**
**ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥ ೮ ॥**

ಕರ್ಮಗಳನ್ನು ಬಿಟ್ಟುಬಿಡುವ ಯತ್ನವನ್ನು ಅರ್ಜುನನು ಮಾಡ ಕೂಡದು. ಕರ್ಮಗಳನ್ನು ಬಿಡುವದಕ್ಕಿಂತಲೂ ಮಾಡುವದೇ ಎಂದಿಗೂ ಒಳ್ಳೆಯದು. ಇದೂ ಅಲ್ಲದೆ ನಿಯತ ಕರ್ಮಗಳನ್ನು (ಯಜ್ಞ ದಾನ ತಪ ಗಳನ್ನು) ಅವನು ಮಾಡಿಯೇ ತೀರಬೇಕು. ಕರ್ಮಗಳನ್ನು ನಿಃಶ್ಶೇಷವಾಗಿ ಬಿಟ್ಟರೆ ಶರೀರಯಾತ್ರೆಯೂ ಅಶಕ್ಯವಾದೀತು.

**ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ।**
**ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥ ೯ ॥**

ಮೇಲಿನ ಶ್ಲೋಕದಲ್ಲಿ ಕರ್ಮವನ್ನು ಮಾಡಬೇಕೋ ಅಥವಾ ಬಿಡಬೇಕೋ ಎಂಬ ವಿಷಯದಲ್ಲಿ ಶ್ರೀಕೃಷ್ಣನು ತನ್ನ ನಿರ್ಣಯವನ್ನು ಹೇಳಿರುವನು. ಅದಕ್ಕೆ ಹೇಳಿದ ಕಾರಣಗಳು ಬುದ್ಧಿಯೋಗಶಾಸ್ತ್ರಕ್ಕೂ ವ್ಯವಹಾರಕ್ಕೂ ಸಂಬಂಧಪಟ್ಟಿವೆ. ಕೆಲವು ವೇದಾಂತ ಪಂಥಗಳು ವ್ಯವ ಹಾರವನ್ನು ಹೀಯಾಳಿಸುವವು. ಆದರೆ ಬುದ್ಧಿಯೋಗವು ಹಾಗೆ ಮಾಡುವ ದಿಲ್ಲ. ಬುದ್ಧಿಯೋಗವು ಎಷ್ಟು ವೇದಾಂತವಿಷಯವಾಗಿರುವದೋ ಅಷ್ಟೇ ಅದು ವ್ಯವಹಾರ ವಿಷಯವೂ ಆಗಿರುವದು. ಆದುದರಿಂದಲೇ ಆ ಶಾಸ್ತ್ರ ನಿರೂಪಣವನ್ನು ಉಪಕ್ರಮಿಸುವಾಗ ಅದರ ವ್ಯವಹಾರಿಕ ಲಕ್ಷಣವು ಪ್ರಕಾಗ್ರಬುದ್ಧಿಯೆಂದು ಮೊಟ್ಟಮೊದಲು ಹೇಳಲ್ಪಟ್ಟಿತು. ಇದನ್ನು ಮುಖ್ಯ ವಾಗಿ ಲಕ್ಷ್ಯದಲ್ಲಿಡಬೇಕು. ಇರಲಿ.

ನಿಯತಕರ್ಮದಲ್ಲಿ ಮೂರು ಪ್ರಕಾರಗಳುಂಟು. ಅವುಗಳಲ್ಲಿ ಯಜ್ಞಾರ್ಥವಾಗಿ ಮಾಡಿದ ಕರ್ಮಗಳಿಂದ ಬಂಧನವು ಉಂಟಾಗದು. ಮತ್ತುಳಿದ ದಾನ ತಪಗಳೆಂಬ ಎರಡು ಪ್ರಕಾರದ ಕರ್ಮಗಳಿಂದಲೂ ಹಾಗೆಯೇ ನಿಯತ ಬಾಹ್ಯವಾದ ಕರ್ಮಗಳಿಂದಲೂ ಇಷ್ಟಾನಿಷ್ಟ ಬಂಧನ ಗಳು ಸಂಭವಿಸುವವು. ಆದಕಾರಣ ಅರ್ಜುನನು ಕೇವಲ ಯಜ್ಞಾರ್ಥಕ್ಕಾಗಿಯೇ ಕರ್ಮ ಮಾಡಬೇಕು. **ಯಜ್ಞಾರ್ಥವೆಂದರೆ ಕೇವಲ್ ಪುರುಷೋತ್ತಮಾರ್ಪಣ ಬುದ್ಧಿಯಿಂದ ಮಾಡಿದುದು** (೩-೩೦ ವಿವರಣೆ). ಅದೇ ಹೆಸರಿನಿಂದ ಹೇಳಲ್ಪಡುವ ಮತ್ತಾವ ಕರ್ಮವೂ ಅಲ್ಲ. ಆದರೆ ಇಂಥ ಯಜ್ಞಾರ್ಥಕರ್ಮವನ್ನಾದರೂ ಅವನು ಮುಕ್ತಸಂಗನಾಗಿ ಮಾಡಬೇಕು. ಮುಕ್ತಸಂಗನಾಗದೆ ಅಂದರೆ ಕರ್ತೃತ್ವದಲ್ಲಿ ಅಥವಾ ಫಲದಲ್ಲಿ ಆಸಕ್ತಿಯನ್ನಿಟ್ಟುಕೊಂಡು ಯಜ್ಞಕರ್ಮಗಳನ್ನು ಮಾಡಬಹುದಾಗಿದೆ ಆದರೆ ಹಾಗೆ ಅವುಗಳನ್ನು ಮಾಡುವದರಿಂದ ಬಂಧನವು ಪರಿಣಮಿಸುವದು.

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷವೋಽಸ್ತ್ವಿಷ್ಟಕಾಮಧುಕ್ ॥ ೧೦ ॥**

ಮುಕ್ತಸಂಗನಾಗದೆ, ಯಜ್ಞವನ್ನು ಮಾಡಬಹುದಾದರೂ ಅದು ಕನಿಷ್ಠವು. ಈ ಯಜ್ಞತತ್ತ್ವವು ಬ್ರಹ್ಮನಿಂದ ಪ್ರಚುರವಾಯಿತು. ಹಿಂದೆ ಪ್ರಜೆಗಳನ್ನುಂಟುಮಾಡುವಾಗ ಪ್ರಜಾಪತಿಯು ಅಂದರೆ ಬ್ರಹ್ಮನು ತನ್ನಿಂದ ಉತ್ಪನ್ನವಾದ ಪ್ರಜೆಗಳಿಗೆ ಈ ತತ್ತ್ವದ ಸಂದೇಶವನ್ನು ಈ ಪ್ರಕಾರ ಹೇಳಿದನು. "ಈ ಯಜ್ಞತತ್ತ್ವದಿಂದಲೇ ನಿಮ್ಮ ಉತ್ಕರ್ಷವಾಗುವದು. ಇದು ನಿಮ್ಮ ಇಚ್ಛೆಗಳನ್ನು ತೃಪ್ತಿಪಡಿಸುವ ಕಾಮಧೇನುವಾಗಿರಲಿ."

**ದೇವಾನ್ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ ೧೧ ॥**

ಈ ಯಜ್ಞಭಾವದಿಂದ ದೇವತೆಗಳನ್ನು ನೀವು ಪ್ರಜೆಗಳು ತೃಪ್ತಿಪಡಿಸಿರಿ. ಹೀಗೆ ತೃಪ್ತರಾದ ದೇವತೆಗಳು ನಿಮ್ಮನ್ನು ಸಂಭಾವಿಸಲಿ. ಈ ಪ್ರಕಾರ ಪರಸ್ಪರರನ್ನು ಸಂಭಾವಿಸುತ್ತ ನೀವೆಲ್ಲರೂ ಪರಸ್ಪರ ನಿಮ್ಮ ಪರಮಶ್ರೇಯವನ್ನು ಪಡೆಯಿರಿ.

**ಇಷ್ಟಾನ್ಭೋಗಾನ್ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ**
**॥ ೧೨ ॥**

ಪ್ರಜೆಗಳು ಮಾಡಿದ ಯಜ್ಞದಿಂದ ತಮ್ಮ ಇಷ್ಟಭೋಗಗಳನ್ನು ಪಡೆದ ದೇವತೆಗಳು ಪುನಃ ಆ ಪ್ರಜೆಗಳ ಇಷ್ಟಗಳನ್ನು ಸಲಿಸುವರು. ಆ ದೇವತೆಗಳಿಗೆ ಯಜ್ಞಭಾವವನ್ನು ತಿರುಗಿ ಅರ್ಪಿಸದೆ ಅವರು ಕೊಟ್ಟ ಭೋಗಗಳನ್ನು ಭೋಗಿಸುವವರು ಕಳ್ಳರೆಂದು ತಿಳಿಯಬೇಕು.

**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।**
**ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥೧೩॥**

ಮನುಷ್ಯನ ಮಹತ್ತಮವಾದ ಇಷ್ಟಭೋಗಗಳು ಮೊದಲುಗೊಂಡು ಅವನಿಗೆ ಅಗತ್ಯವೆನಿಸುವ ಕ್ಷುಲ್ಲಕ ಆಕಾಂಕ್ಷೆಗಳವರೆಗೆ ಎಲ್ಲವೂ ಈ ಯಜ್ಞತತ್ವವನ್ನು ಅನ್ವಯಿಸುವದು. ಕೇವಲ ಅನ್ನಗ್ರಹಣವನ್ನೇ ನೋಡುವ. ಪ್ರಾಣಿಗಳಿಗೆ ದೊರೆಯುವ ಅನ್ನವು ದೇವತೆಗಳಿಂದಲೇ ದೊರೆಯುವದೆಂಬ ಕಲ್ಪನೆಯು ಎಲ್ಲ ಧರ್ಮಗಳಿಗೂ ಸಾಮಾನ್ಯವಾಗಿರುವದು. ಈ ದೇವತೆಗಳು ಯಾರೇ ಆಗಿರಲಿ, ಅವರು ತಮ್ಮಿಂದ ಪೋಷಿತರಾದ ಜೀವಗಳಿಂದ ಯಜ್ಞಭಾವವನ್ನು—ಕನಿಷ್ಠ ಪಕ್ಷಕ್ಕೆ ಕೃತಜ್ಞತೆಯನ್ನಾದರೂ ಅಪೇಕ್ಷಿಸುವರೆಂಬ ಭಾವನೆಯುಂಟು. ಇಂಧ ಯಜ್ಞಭಾವವನ್ನಾಗಲಿ ಕೃತಜ್ಞತೆಯನ್ನಾಗಲಿ ಅರ್ಪಿಸಿ ಯಾವನು ಅನ್ನವನ್ನು ಸೇವಿಸುವನೋ ಅವನು ಎಲ್ಲ ಪಾಪಗಳಿಂದಲೂ ಮುಕ್ತನಾಗುವನು. ಆದರೆ ಸಾಧನೆಗಳೆಲ್ಲವೂ ತನ್ನ ಸ್ವಾಧೀನವಿರುವವೆಂಬ ಅಹಂಕಾರದಿಂದ ತನಗಾಗಿಯೇ ಯಾವನು ಅನ್ನವನ್ನು ಬೇಯಿಸಿಕೊಳ್ಳುವನೋ ಅವನು ನಿಜವಾಗಿ ಪಾಪವನ್ನೇ ಭಕ್ಷಿಸುವನು.

**ಅನ್ನಾದ್ಭವನ್ತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥ ೧೪ ॥**

ಅನ್ನದಿಂದಲೇ ಭೂತಗಳು ಉತ್ಪನ್ನವಾಗುವವು. ಪರ್ಜನ್ಯದಿಂದ ಅನ್ನವೂ ಯಜ್ಞದಿಂದ ಪರ್ಜನ್ಯವೂ ಕರ್ಮದಿಂದ ಯಜ್ಞವೂ ಸಂಭವಿಸುವವು.

**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ ।**
**ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ ॥ ೧೫ ॥**

ಬ್ರಹ್ಮನಿಂದ ಕರ್ಮವೂ ಅಕ್ಷರನಿಂದ ಬ್ರಹ್ಮನೂ ಉತ್ಪನ್ನವಾಗುವವು. ಆದುದರಿಂದ ಸರ್ವವ್ಯಾಪಿಯಾದ ಬ್ರಹ್ಮನು ನಿತ್ಯವೂ (ಅಕ್ಷರನಿಗಾಗಿ) ಯಜ್ಞಮಾಡುವದರಲ್ಲಿ ಸ್ಥಿತನಾಗಿರುವನು ಎಂದರೆ ತೊಡಗಿರುವನು.

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**
**ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸಜೀವತಿ ॥೧೬॥**

ಬ್ರಹ್ಮದೇವನು ಈ ರೀತಿಯಾಗಿ ಆರಂಭಿಸಿದ ಯಜ್ಞಚಕ್ರದ ಗತಿಯನ್ನು ಯಾವನು ಇಹದಲ್ಲಿ ಅನುಸರಿಸುವದಿಲ್ಲವೋ ಆ ಪಾಪಜೀವಿಯೂ ಇಂದ್ರಿಯ ಲುಬ್ಧನೂ ಆದ ಮನುಷ್ಯನ ಜೀವಿತವು ವ್ಯರ್ಥವೇ ಸರಿ.

ಮುಕ್ತಸಂಗ ಸ್ಥಿತಿಯಲ್ಲಿ ಯಜ್ಞವನ್ನು ಪುರುಷೋತ್ತಮನಿಗಾಗಿ ಮಾಡಬೇಕು. ಇದು ಉತ್ತಮವು (೩–೯,೧೯,೩೦) **ಇಲ್ಲವೆ ಫಲಾಕಾಂಕ್ಷಿಯಾಗಿ ಸಂಗವನ್ನು ಬಿಡದೆ ಮೇಲೆ ಹೇಳಿದಂತೆ** (೩–೧೦–೧೫) **ಯಜ್ಞಚಕ್ರವನ್ನನುಸರಿಸಲು ಯಜ್ಞವನ್ನು ಮಾಡಬೇಕು.** ಈ ಕನಿಷ್ಠ ತರದ ಯಜ್ಞವು ಗೀತೆಯಲ್ಲಿ ಹೇಳಿದ ನಿಯತ ಕರ್ಮಗಳಲ್ಲಿ ದಾನವೆಂಬ ತತ್ವಕ್ಕೆ ಸೇರಿರುವದು. ಈ ದಾನತತ್ವವು ಬ್ರಹ್ಮನಿಂದ ನಿರ್ಮಿತವಾದ ಈ ಸೃಷ್ಟಿಯಲ್ಲಿ ಮನುಷ್ಯ ಸ್ವಭಾವಕ್ಕೆ ಕೇವಲ ಕನಿಷ್ಠ ಧರ್ಮವಾಗಿದೆ. ಇದನ್ನು ಪಾಲಿಸುವದು ಅಷ್ಟು ಶ್ರೇಷ್ಠವಲ್ಲ. ಆದನ್ನು ಪಾಲಿಸದಿರುವದು ಮಾತ್ರ ಬಹಳ ಹಾನಿಕರವಾದುದರಿಂದ ಅಂಥ ಮನುಷ್ಯನ ಜೀವಿತವು ವ್ಯರ್ಥವು.

**ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥೧೭॥**

ಯಜ್ಞ ಚಕ್ರದ ಇರುಕಿನಲ್ಲಿ ಸಿಲುಕಿ ಯಾವನು ನಡೆಯಲಿಚ್ಛಿಸು ವನೋ, ಅವನು ಕರ್ಮಗಳನ್ನು ಚೆನ್ನಾಗಿ ಪರಿಶೋಧಿಸಬೇಕು; ಕೊಡುವ ಕೊಳ್ಳುವ ನಿಯಮಗಳನ್ನು ಸೂಕ್ಷ್ಮವಾಗಿ ಅನುಸರಿಸಬೇಕು. ಆದರೆ ಯಾವನು ಆತ್ಮನಲ್ಲಿಯೇ ಅಂದರೆ ಪುರುಷೋತ್ತಮನಲ್ಲಿಯೇ ರಮಿಸು ವನೋ. ಹೀಗೆ ರಮಿಸುವದರಿಂದ ಯಾವನ ಆತ್ಮ ಸ್ವಭಾವವು ತೃಪ್ತವಾಗಿ ರುವದೋ, ಇಷ್ಟೇ ಅಲ್ಲ, ಯಾವನ ಇಂದ್ರಿಯ ಸ್ವಭಾವವಾದರೂ ಇದೇ ಕಾರಣಕ್ಕಾಗಿ ಸಂತುಷ್ಟಿಯನ್ನು ಪಡೆದಿರುವನೋ ಅಂಥವನಿಗೆ ಯೋಗ ಕ್ಷೇಮವನ್ನಾಗಲಿ ಯಜ್ಞ ಚಕ್ರವನ್ನಾಗಲಿ ಕರ್ತವ್ಯನಿಷ್ಠೆಯಿಂದ ಅನುಸರಿಸುವದು ಅಷ್ಟು ಆಗತ್ಯವಲ್ಲ- ಹೀಗೆ ಆತ್ಮರತನಾಗುವದು "ಸ್ವಭಾವ" (೫-೧೪) ಧರ್ಮದಿಂದಲೇ—ನಿಸರ್ಗ ನಿಯಮದಿಂದಲೇ— ಯಜ್ಞ ಚಕ್ರಾನುಸರಣಕ್ಕಿಂತಲೂ ಶ್ರೇಷ್ಠವು.

**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ।**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥೧೮॥**

ಇಂಥವನಿಗೆ ಯೋಗ ಕ್ಷೇಮದ ಚಿಂತೆಯಿರುವದಿಲ್ಲ. ಅಲ್ಲದೆ ಕರ್ಮ ವನ್ನು ಮಾಡಿಯೂ ಅಥವಾ ಮಾಡದೆಯೂ ಮತ್ತಾವ ಇಚ್ಛೆಯನ್ನೂ ಸಾಧಿಸಬೇಕಾಗಿರುವದಿಲ್ಲ. ಯಜ್ಞಚಕ್ರಾರೂಢನಾದವನು ತನ್ನ ಐಹಿಕ ಯೋಗ ಕ್ಷೇಮಕ್ಕಾಗಿ ಇಲ್ಲವೆ ಪಾರಮಾರ್ಥಿಕ ಉದ್ದೇಶಕ್ಕಾಗಿ ಯಜ್ಞವನ್ನು ಆಚರಿಸುವನು. ಆದರೆ ಇಂಥ ಆಕಾಂಕ್ಷೆಗಳು ಮೇಲಿನ ಶ್ಲೋಕದಲ್ಲಿ ಹೇಳಿದ ಆತ್ಮರತನಿಗೆ ಇರುವದಿಲ್ಲ. ಇಷ್ಟೇ ಅಲ್ಲ, ಈ ಜಗತ್ತಿ ನೊಳಗಿನ ಯಾವ ಭೂತಗಳಿಂದಲೂ ಅವನು ಯಾವ ಪ್ರಯೋಜನನನ್ನೂ ಬಯಸುವದಿಲ್ಲ. ಅವನು ಆತ್ಮರತನಾಗಿರುವನು. ಎಂದರೆ ತನ್ನ ಆಸಕ್ತಿ ಸರ್ವಸ್ವವನ್ನು ಪುರುಷೋತ್ತಮನಿಗೆ ಅರ್ಪಿಸಿ ಬಿಟ್ಟಿರುವನು.

**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ।**
**ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥೧೯॥**

ಅವನು ಮಾಡುವದೇ ಯೋಗ್ಯವು, ಶ್ರೇಯಸ್ಕರವು. ಆದುದರಿಂದ ಅರ್ಜುನನಾದರೂ ನಿರಾಸಕ್ತನಾಗಿ **ಮುಕ್ತಸಂಗನಾಗಿ ಯಜ್ಞಾರ್ಥ ನಿಯತಕರ್ಮಗಳನ್ನು (ಯಜ್ಞದಾನ ತಪಗಳನ್ನು) ಆಚರಿಸಬೇಕು.** ಹೀಗೆ ಆಸಕ್ತಿಯನ್ನು ಬಿಟ್ಟು ಕರ್ಮವನ್ನು ಮಾಡುವದರಿಂದ ಪರಮ ಸಿದ್ಧಿಯನ್ನು ಪಡೆಯಬಹುದು. ಮೇಲೆ ಒಂಬತ್ತನೆಯ ಶ್ಲೋಕದಲ್ಲಿ ಮುಕ್ತಸಂಗನಾಗಿ ಯಜ್ಞಾರ್ಥ ಕರ್ಮಮಾಡೆಂದು ಹೇಳಿದೆಯಷ್ಟೇ? ಹಾಗೆ ಮಾಡಬೇಕಾದುದಕ್ಕೆ ಕಾರಣಗಳನ್ನು ಈ ವರೆಗೆ ವಿವರಿಸಿ " ತಸ್ಮಾತ್ " ಎಂಬ ಪದದಿಂದ ಮುಂಚೆ ಹೇಳಿದ ನಿರ್ಣಯವನ್ನು ಇಲ್ಲಿ ಸಮರ್ಥಿಸಿದೆ.

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥ ೨೦ ॥**

ಶ್ರೇಯವನ್ನು ಸಾಧಿಸುವದಕ್ಕೆ ಕರ್ಮವನ್ನು ಬಿಡುವದು ಅವಶ್ಯವಲ್ಲ; ಕರ್ಮವನ್ನು ಎಂದಿಗೂ ಬಿಡಲಾಗದು; ಆತ್ಮನಲ್ಲಿ–ಪುರುಷೋತ್ತಮನಲ್ಲಿ–ರತನಾಗಬೇಕು; ಅಥವಾ ಕರ್ತವ್ಯ ನಿಷ್ಠೆಗಾಗಿ ಯಜ್ಞ ಚಕ್ರವನ್ನು ಅನುಸರಿಸಬೇಕು, ಎಂಬ ಆಧ್ಯಾತ್ಮಿಕ ಕಾರಣಗಳನ್ನು ಹೇಳಿ ಈ ತತ್ವಗಳನ್ನು ಪ್ರಸ್ಥಾಪಿಸಿದ್ದಾಯಿತು. ಅರ್ಜುನನಿಗೆ ಈ ಆಧ್ಯಾತ್ಮಿಕ ಕಾರಣಗಳಲ್ಲಿ ವಿಶ್ವಾಸವನ್ನು ಹೆಚ್ಚಿಸುವದಕ್ಕಾಗಿ ತನ್ನ ಉಪದೇಶದ ಮೇರೆಗೆ ನಡೆದ ಮಹಾಪುರುಷರ ದೃಷ್ಟಾಂತಗಳನ್ನು ಶ್ರೀ ಕೃಷ್ಣನು ಹೇಳುವನು ಮತ್ತು ಕರ್ಮವನ್ನು ಬಿಡಬಾರದೆಂಬುದಕ್ಕೆ ಅವನಿಗೆ ಸಮಾಧಾನವಾಗುವಂತೆ ಲೌಕಿಕ ಕಾರಣಗಳನ್ನಾದರೂ ತೋರಿಸಿ ಕೊಡುವನು.

ಜನಕಾದಿ ಮಹಾತ್ಮರು ಕರ್ಮಗಳನ್ನು ಮಾಡಿಯೇ ಮುಕ್ತಿಯನ್ನು ಪಡೆದರು. ಕರ್ಮವು ಮುಕ್ತಿಗೆ ಅಡ್ಡ ಬರುವದೆಂಬ ಅರ್ಜುನನ ಕಲ್ಪನೆಯು ಸರಿಯಲ್ಲ. ಲೋಕಸಂಗ್ರಹ ದೃಷ್ಟಿಯಿಂದ ನೋಡಿದರೂ ಅರ್ಜುನನು ಕರ್ಮಮಾಡುವದೇ ಉಚಿತವಾಗಿದೆ. ಈ ಎರಡು ಕಾರಣಗಳನ್ನು ಆನುಷಂಗಿಕವಾಗಿ ಆಧ್ಯಾತ್ಮಿಕ ಕಾರಣಗಳ ಜೊತೆಗೆ ಹೇಳಿದರೂ ಮುಂಚೆ ಹೇಳಿದ ಆಧ್ಯಾತ್ಮಿಕ ಕಾರಣಗಳಿಗೆ ಕೊಟ್ಟಷ್ಟೇ ಮಹತ್ವವನ್ನು ಇವು

ಗಳಿಗೆ ಕೊಡುವದು ಸರಿಯಲ್ಲ. ಅರ್ಜುನನ ಆಗಿನ ಸ್ಥಿತಿಯಲ್ಲಿ ಅವನಿಗೆ ಮನಗಾಣಿಸುವದಕ್ಕೆ ಈ ಲೌಕಿಕ ಕಾರಣಗಳೇ ಹೆಚ್ಚು ಕಾರ್ಯಕಾರಿ ಯಾಗಬಹುದೆಂಬುದು ನಿಜವು. ಅದಕ್ಕಾಗಿಯೇ ಆ ಕಾರಣಗಳು ಗೌಣ ವಾದರೂ ಇಲ್ಲಿ ಹೇಳಲ್ಪಟ್ಟಿರುವವು.

**ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋಜನಃ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ॥ ॥೨೧॥**

ಸಮಾಜದೊಳಗೆ ಶ್ರೇಷ್ಠರಾದವರ ಆಚರಣೆಯನ್ನು ಇತರರು ಅನು ಕರಿಸುವರು. ಅವರು ಪ್ರಮಾಣವೆಂದು ಒಪ್ಪಿಕೊಂಡುದನ್ನೇ ಉಳಿದವ ರಾದರೂ ಅವಲಂಬಿಸುವರು. ಇದೇ ಲೋಕಸಂಗ್ರಹ ತತ್ವದ ಸ್ವರೂಪವು.

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥೨೨॥**

ಶ್ರೇಷ್ಠರಾದವರು ಈ ಲೋಕಸಂಗ್ರಹ ತತ್ವವನ್ನು ಲಕ್ಷಿಸಬೇಕು. ಸ್ವತಃ ಶ್ರೀ ಕೃಷ್ಣನಾದರೂ ಅದನ್ನು ದುರ್ಲಕ್ಷ್ಯಮಾಡದೆ ಬಹು ದಕ್ಷತೆ ಯಿಂದ ಆಚರಿಸುವನು. ಈ ಮೂರು ಲೋಕಗಳಲ್ಲಿ ಶ್ರೀ ಕೃಷ್ಣನು ಮಾಡಿಯೇ ತೀರಬೇಕೆಂಬ ಕರ್ತವ್ಯವು ಯಾವುದಿರುವದು? ಯಾವುದೂ ಇಲ್ಲ. ಅವನಿಗೆ ಅಪ್ರಾಪ್ತವಾಗಿರದ ಯಾವ ವಸ್ತುವನ್ನು ಅವನು ಪಡೆಯ ಬೇಕಾಗಿದೆ? ಯಾವುದೂ ಇಲ್ಲ. ಹೀಗಿದ್ದರೂ ಶ್ರೀ ಕೃಷ್ಣನು ತಾನು ಕರ್ಮವನ್ನು ಬಿಡದೆ ಆಚರಿಸುವನು.

**ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾ: ಪಾರ್ಥ ಸರ್ವಶಃ ॥೨೩॥**

ಅವನು ಆಲಸ್ಯವನ್ನು ಬಿಟ್ಟು ನಿರಂತರವೂ ಕರ್ಮವನ್ನಾಚರಿಸದಿದ್ದರೆ ಅವನ ವರ್ತನೆಯನ್ನೇ ಉಳಿದವರೆಲ್ಲರೂ ಅನುಕರಿಸುವರು.

ಈ ಎರಡು ಶ್ಲೋಕಗಳಲ್ಲಿ ಕೇವಲ ಕರ್ಮ ಮಾಡುವದು ಅಥವಾ ಮಾಡದಿರುವುದು ಮಾತ್ರವೇ ಉದ್ದಿಷ್ಟವಾಗಿದೆ.

**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮಚೇದಹಂ।**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥ ೨೪॥**

ಶ್ರೀಕೃಷ್ಣ ಭಗವಂತನು ಕರ್ಮವನ್ನು ಮಾಡದೆ ಬಿಟ್ಟರೆ ಈ ಜಗತ್ತೆಲ್ಲವೂ ನಾಶವಾಗಿ ಹೋಗುವದು. ಸಂಕರವನ್ನುಂಟು ಮಾಡಿದ ಆರೋಪಕ್ಕೆ ಆವನು ಒಳಗಾಗುವನು. ಪ್ರಜೆಗಳನ್ನೆಲ್ಲ ಅವನೇ ಸಂಹರಿಸದಂತಾಗುವದು.

ಒದಗಿಬಂದ ಯುದ್ಧ ಕರ್ಮವನ್ನು ಕೈಕೊಳ್ಳುವದರಿಂದ ಅರ್ಜುನನು ತನ್ನ ವಿಷಾದವನ್ನು ಹೇಳುವಾಗ ಯಾವ ವಿಪತ್ಪರಂಪರೆಯುಂಟಾಗುವದೆಂದು ವಿವರಿಸಿದ್ದನೋ ತಾನು ಕರ್ಮ ಮಾಡದೆ ಬಿಡುವದರಿಂದ ಅದೇ ಸಂಭವಿಸುವದೆಂದು ಶ್ರೀಕೃಷ್ಣನು ಹೇಳುವದನ್ನು ಕೇಳಿ ಅರ್ಜುನನಿಗೆ ಏನೆನಿಸಿರಬಹುದು ?

ಈ ಶ್ಲೋಕವು ಮತ್ತೊಂದು ಕಾರಣಕ್ಕಾಗಿ ಮಹತ್ವದ್ದಾಗಿದೆ. ಪುರುಷೋತ್ತಮನನ್ನು ಗೀತೆಯಲ್ಲಿ ಅಕ್ಷರನೆಂದು ಹೇಳಿದೆ. ಅದಕ್ಕೆ ಕಾರಣವೇನೆಂಬದನ್ನು ಈ ಶ್ಲೋಕದಲ್ಲಿ ಕಾಣಬಹುದು. ಅಕ್ಷರವೆಂದರೆ ಅವಿನಾಶಿಯೆಂದೂ ಕ್ಷರ ವೆಂದರೆ ವಿನಾಶಿಯೆಂದೂ ಅರ್ಥವು ರೂಢಿಯಲ್ಲಿರುವದು. ಆದರೂ ಈ ಶಬ್ದಗಳನ್ನು ಗೀತೆಯಲ್ಲಿ ಬುದ್ಧಿಯೋಗ ಶಾಸ್ತ್ರಕ್ಕನುರೂಪವಾದ ಬೇರೆ ಪಾರಿಭಾಷಿಕ-ಅರ್ಥದಲ್ಲಿಯೂ ಉಪಯೋಗಿಸಿರುವರು. ಅದು ಹೇಗೆಂದರೆ ಸೃಷ್ಟಿಯಲ್ಲುಂಟಾದ ಒಂದೊಂದು ಆತ್ಮವ್ಯಕ್ತಿಗೂ— ಪುರುಷೋತ್ತಮನಿಗೆ, ಕೂಟಸ್ಥಬ್ರಹ್ಮನಿಗೆ ಹಾಗೆಯೇ ಜೀವಭೂತನಿಗೆ— (ಸ್ವ) ಭಾವವು ನಿಯತವಾಗಿದೆ. ತನ್ನ ಸೃಷ್ಟಿಯೊಂದಿಗೆ ಯೋಗಭಾವವನ್ನು ಧರಿಸುವದೇ ಪುರುಷೋತ್ತಮನ ನಿಯತ ಭಾವವು. ಹಾಗೆಯೇ ಬ್ರಹ್ಮ ಹಾಗೂ ಜೀವ ಭೂತರ ಭಾವಗಳನ್ನು ಗೀತೆಯಲ್ಲಿ ಅಧ್ಯಾತ್ಮವೆಂದು ಹೇಳಿರುವದು (೮-೩) ಈ ಅಧ್ಯಾತ್ಮ ಭಾವವೇ ಅವರಿಗೆ

ನಿಯುತವಾದುದು. ಪುರುಷೋತ್ತಮನ ಮೇಲಿನ ಆಸಕ್ತಿಯೇ ಇದರ ಸ್ವರೂಪವು. ಇತರ ವೇದಾಂತದಲ್ಲಿ ಅಧ್ಯಾತ್ಮವೆಂದು ಹೇಳಿರುವ ಆತ್ಮ ಸಂಬಂಧದ ಒಣ ಭಾವವು ಇಲ್ಲಿ ಉದ್ದಿಷ್ಟವಾಗಿಲ್ಲ. ಸಾಂಖ್ಯನಿರೂಪಣೆಯಲ್ಲಿ ಆತ್ಮದ ಅಮರತ್ವವನ್ನು ಕುರಿತು ಹೇಳಿದ ಪಾಂಡಿತ್ಯವಾದರೂ (೨-೧೧-೨೦) ಉದ್ದಿಷ್ಟವಾಗಿರುವದಿಲ್ಲ. ಗೀತೆಯಲ್ಲಿ ಹೇಳಿದ ಅಧ್ಯಾತ್ಮವು ಬಹು ಗುಹ್ಯ ವಾದುದು (೧೧-೧). ಅದರ ಅರ್ಥವನ್ನು ಸೂಕ್ಷ್ಮವಾಗಿ ಶೋಧಿಸಿದರೆ ನಾವು ಹೇಳುವದು ಯಥಾರ್ಥವೆಂದು ಕಾಣಿಸದಿರದು. ಪುರುಷೋತ್ತಮನ ನಲ್ಲಿ ಬ್ರಹ್ಮನಿಡುವ ಆಸಕ್ತಿಭಾವವು ಎಂದಿಗೂ ಚಲಿಸದಾದುದರಿಂದ ಅದನ್ನು ಗೀತೆಯಲ್ಲಿ ಅಕ್ಷರವೆಂದು ಎಣಿಸುವರು. **ಆದರೆ ಜೀವ ಭೂತರು ಅಧ್ಯಾತ್ಮ (ಸ್ವ) ಭಾವದಲ್ಲಿ ಕ್ಷರರೆಂದು ಹೇಳಲ್ಪಡುವರು.** ತಮ್ಮ ನಿಯುತ ಅಧ್ಯಾತ್ಮಭಾವವನ್ನು— ಪುರುಷೋತ್ತಮನ ಮೇಲಿನ ಆಸಕ್ತಿಯನ್ನು— ಬಹುಸುಲಭವಾಗಿ ಕಳೆದುಕೊಳ್ಳುವರಾದುದರಿಂದಲೇ ಇವರು ಕ್ಷರರು. **ಈ ಶ್ಲೋಕದಲ್ಲಿ ಶ್ರೀ ಕೃಷ್ಣನು ಸೃಷ್ಟಿಯ ಹಾಗೂ ಅದರೊಳಗಿನ ಪ್ರಜೆಗಳ ವಿಷಯದಲ್ಲಿ ತನ್ನ ನಿಶ್ಚಲವೂ ನಿರಂತರವೂ ಆದ ಕರ್ತವ್ಯ ಜಾಗ್ರತೆಯನ್ನು ಹೇಳುವನು. ಅಕ್ಷರನೆಂಬ ಅವನ ಹೆಸರಿನ ಗುಟ್ಟಾದರೂ ಇದೇ ಆಗಿದೆ.**

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ।**
**ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕ-**
**ಸಂಗ್ರಹಂ ॥೨೫॥**

ಅವಿದ್ವಾಂಸನಾದವನು ಎಂದರೆ ಗೀತೆಯ ಬುದ್ಧಿಯೋಗವನ್ನು ಅರಿಯದವನು ಕರ್ಮದಲ್ಲಿ ಆಸಕ್ತಿಯನ್ನಿಟ್ಟು ನಡೆಯುವಂತೆ ವಿದ್ವಾಂಸನಾದವನು ಎಂದರೆ ಬುದ್ಧಿಯೋಗ ಶಾಸ್ತ್ರವನ್ನರಿತವನು ಆಸಕ್ತಿಯನ್ನು ಬಿಟ್ಟು ಲೋಕ ಸಂಗ್ರಹ ದೃಷ್ಟಿಯಿಂದ ಕರ್ಮವನ್ನು ಮಾಡುವನು.

ಈ ಶ್ಲೋಕದ ಆಧಾರದಿಂದ ತನ್ನ ಪಾಂಡಿತ್ಯದ ವಿಷಯದಲ್ಲಿ ವಿಶ್ವಾಸವುಳ್ಳವನು ಲೋಕಸಂಗ್ರಹ ಮಾಡುವದಕ್ಕಾಗಿ ಬದ್ಧಕಂಕಣನಾಗಿ ಜಗತ್ತಿನ ಮೇಲೆಲ್ಲ ಉಪಕಾರ ಮಾಡುವ ದಾಳಿಯನ್ನಾರಂಭಿಸಕೂಡದು.

ವಿಚಾರ ಪೂರ್ವಕವಾಗಿ ತಿಳಿದುಕೊಂಡರೆ ಈ ಶ್ಲೋಕದ ಅರ್ಥವು ಹಾಗಾಗುವದಿಲ್ಲ. ಈ ಶ್ಲೋಕದಲ್ಲಿ ಅನಾಸಕ್ತಿ ಹಾಗೂ ಲೋಕಸಂಗ್ರಹವೆಂಬ ಶಬ್ದಗಳು ಪರಸ್ಪರ ವಿರುದ್ಧವಾಗಿರುವದನ್ನು ಮೊದಲು ಗಮನಿಸಬೇಕು. ಮನಸ್ಸಿನಲ್ಲಿ ಇಚ್ಛೆಯನ್ನು ಹಿಡಿದರೆ ಸಂಕಲ್ಪದೋಷವುಂಟಾಗುವದು. ಆದುದರಿಂದ ಇಂಥ ಕರ್ತೃವನ್ನು ಗೀತೆಯು ಪಂಡಿತನೆಂದು ಒಪ್ಪುವದಿಲ್ಲ (೩-೪-೨೪). ಗೀತೆಯಲ್ಲಿ ಅನಾಸಕ್ತಿಯೆಂದರೆ ಆಸಕ್ತಿಯ ಅಭಾವವಲ್ಲ ಪುರುಷೋತ್ತಮನ ಮೇಲಿನ ಆಸಕ್ತಿಯೆಂದರ್ಥ (೭-೧). ಈ ಪರಮ ಆಸಕ್ತಿಯಲ್ಲಿ ಮತ್ತಾವ ಧ್ಯೇಯವೇ ಆಗಲಿ, ಅದು ಎಷ್ಟೇ ಉಚ್ಚವಾಗಿರಲಿ, ಒಳಸೇರಲಿಕ್ಕೆ ನೋಡಿದರೆ ಗೀತೆಯು ವ್ಯಭಿಚಾರದ ಆರೋಪಣೆಯನ್ನು ಹೇಳುವದು. ಆದುದರಿಂದ ಒಂದೆಡೆ ಪುರುಷೋತ್ತಮನಲ್ಲಿಯೇ ಆಸಕ್ತನಾಗೆಂದು ಹೇಳಿ ಪುನಃ ಲೋಕಸಂಗ್ರಹದ ಹಿಂದೆ ಓಡೆಂದು ಹೇಳುವದು ಗೀತೆಯ ಉದ್ದೇಶವಾಗಿರಲಾರದು.

ಇದೇ ನಿಜವಾದರೆ ಲೋಕಸಂಗ್ರಹದ ಉಲ್ಲೇಖವು ಇಲ್ಲಿ ಬಂದುದಕ್ಕೆ ಕಾರಣವೇನು ? **ಕರ್ಮವಾಡುವದನ್ನು ಬಿಡದೆ ಅದನ್ನು ಮಾಡುತ್ತಲಿದ್ದರೆ ಪಂಡಿತನ ಮೇಲಿನ ಲೋಕಸಂಗ್ರಹದ ಹೊಣೆಗಾರಿಕೆಯು ಮುಗಿದು ಹೋಗುವದು.** ಇದೇ ಈ ಉಲ್ಲೇಖದ ಅರ್ಥವು. ಪಂಡಿತನಾದವನು ತಾನು ಸ್ವತಃ ಕರ್ಮವನ್ನು ಮಾಡುತ್ತಲಿರುವನು. ಈ ಕಾರಣದಿಂದ ಜನಸಾಮಾನ್ಯರಿಗೆ ಕರ್ಮಮಾಡುವದನ್ನು ಬಿಟ್ಟು ಬಿಡುವ (ಭ್ರ)ಮೆಯು ಸಂಭವಿಸುವದಿಲ್ಲ. ಇಷ್ಟಾದರೆ ಆ ಪಂಡಿತನು ಲೋಕಸಂಗ್ರಹ ತತ್ವವನ್ನು ಅನುಸರಿಸಿದನೆಂದು ಗೀತೆಯು ಒಪ್ಪುವದು. ಅನಾಸಕ್ತನಾಗಿ ಕರ್ಮಗಳನ್ನು ಬಿಡದೆ ಮಾಡಿ, ಲೋಕಸಂಗ್ರಹ ಮಾಡುವದನ್ನು ತಪ್ಪಿದನೆಂಬ ಆರೋಪಕ್ಕೆ ಗುರಿಯಾಗದಿರುವದೇ ಈ ಶ್ಲೋಕದ ಅಭಿಪ್ರಾಯವು. ಬುದ್ಧಿಯೋಗ ಶಾಸ್ತ್ರಕ್ಕೆ ಇದು ವಿಸಂಗತವಾಗಿಯೂ ಇಲ್ಲ. ಲೋಕಸಂಗ್ರಹವನ್ನು ಬಿಟ್ಟರೆ ಜ್ಞಾನಿಯಾದವನಿಗೆ—ಪಂಡಿತನಿಗೆ— ಕರ್ಮಮಾಡಲಿಕ್ಕೆ ಹೇತುವೇ ಉಳಿಯುವದಿಲ್ಲವೆಂದು ಭಯಪಡುವ ಕಾರಣವಿಲ್ಲ. ಕರ್ಮವನ್ನು ಬಿಟ್ಟು ಬಿಡುವದು ಯಾರಿಗೂ ಶಕ್ಯವಲ್ಲ. ಹಾಗೆ ಬಿಡಲು ಯತ್ನಿಸಿದರೆ ಎಂಥ ವಿದ್ವಾಂಸರಾದರೂ ವಿಕರ್ಮಮಾಡಿದ ಹಾಗಾಗುವದೇ ಹೊರತು ಅಕರ್ಮ

ಸಾಧಿಸಿದ ಹಾಗಾಗುವದಿಲ್ಲ. ಏಕೆಂದರೆ ಮನುಷ್ಯನು ನಿಯತ ಕರ್ಮಗಳನ್ನು ಮಾಡಿ ತೀರಲೇಬೇಕು (೩-೮, ೧೮-೭). ಅವನ ಸ್ವಭಾವ ಧರ್ಮಕ್ಕೆ ಅದು ಅಪರಿಹಾರ್ಯವು. ನಿಯತಕರ್ಮಗಳನ್ನು ಮಾಡದೆ ಬಿಡುವದರಿಂದ ಮನಸ್ಸಿನ ಹಾಗೂ ಬುದ್ಧಿಯ ಶುದ್ಧತೆಯು ಉಳಿಯುವದಿಲ್ಲ (೧೮-೫). ಮತ್ತು ಹಾಗೆ ಬಿಡುವ ಪಂಡಿತನು ಎಷ್ಟು ಘನತೆಯನ್ನು ಹೊಂದಿದವನಾದರೂ ಕರ್ಮವನ್ನು ಬಿಡಲು ಮಾಡಿದ ಪ್ರಯತ್ನದಿಂದ ಅವನ ಅಧಃಪತನವಾಗುವದು ಖಂಡಿತವು (೫-೧೧).

ಆದುದರಿಂದ ಪಂಡಿತನಾದವನು ಅಜ್ಞಾನಿಯಾದವನ ಹಾಗೆಯೇ ಕರ್ಮವನ್ನು ಮಾಡುತ್ತಲಿರಬೇಕು. ಕರ್ಮಮಾಡುವದರೊಳಗಿನ ಅಕ್ಕರೆಯನ್ನೂ ದೃಢನಿಶ್ಚಯವನ್ನೂ ಏಕಾಗ್ರತೆಯನ್ನೂ ಅವಿದ್ವಾಂಸನ ಹಾಗೆಯೇ ವಿದ್ವಾಂಸನೆನಿಸುವವನಾದರೂ ಬಿಡಬಾರದು. ಕರ್ಮಮಾಡುವದರಲ್ಲಿ ಈ ಗುಣಗಳನ್ನು ಅಜ್ಞಾನಿಯ ಹಾಗೆಯೇ ಜ್ಞಾನಿಯಾದರೂ ಸಾಧಿಸಲೇಬೇಕು. ಆದರೆ ಫಲಾಸಕ್ತಿಯ ವಿಷಯದಲ್ಲಿ ಮಾತ್ರ ಅಜ್ಞಾನಿಯನ್ನು ಹೋಲದೆ ಪ್ರತ್ಯಕ್ಷ ಶ್ರೀ ಕೃಷ್ಣ ಪುರುಷೋತ್ತಮನನ್ನು ಅನುಸರಿಸಿ ಅನಾಸಕ್ತನಾಗಬೇಕು.

**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಂ।**
**ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ಯುಕ್ತಃ ಸಮಾಚರನ್ ॥೨೬॥**

ಕರ್ಮಸಂಗವು ಅಕಸ್ಮಾತ್ತಾಗಿ ಬಿಟ್ಟು ಹೋಗುವದಿಲ್ಲ. ಕರ್ಮಸಂಗಪೀಡಿತರಾದವರು ತಾವಿರುವ ಸ್ಥಿತಿಯೊಳಗಿಂದ ಉತ್ಕ್ರಮಣ ಹೊಂದುತ್ತಿರುವರೆಂಬುದನ್ನು ಗಮನಿಸಬೇಕು. ಮನುಷ್ಯನಲ್ಲಿ ಸುಧಾರಿಸಬೇಕಾದುದು ಜ್ಞಾನವಲ್ಲ (Knowledge); ಅವನ ವೃತ್ತಿಯು. ವೃತ್ತಿಯಲ್ಲಿ ಪರಿಣಮಿಸದ ಜ್ಞಾನವು ತಳೆದವನಿಗೆ ಒಂದು ಭಾರವಾಗುವದಲ್ಲದೆ ಹಲವು ಪ್ರಸಂಗಗಳಲ್ಲಿ ಅನುರೂಪಕಾರಿಯೂ ಆಗಬಹುದು. ಆದುದರಿಂದ ಅರಿಯಲಿಚ್ಛಿಸುವವನ ಯೋಗ್ಯತೆಯನ್ನು ಮೀರಿದ ಜ್ಞಾನವನ್ನು ಮನುಷ್ಯನ ಬುದ್ಧಿಗೆ ಬಾಹ್ಯತಃ ಬೋಧಿಸುವದರಿಂದ ಆ ಮನುಷ್ಯನು ಸುಧಾರಿಸುವದಿಲ್ಲ. ಅವನ ಅಜ್ಞಾನದ ಇಕ್ಕಟ್ಟಿನಲ್ಲಿ ಸಿಲುಕಿ ಒದ್ದಾಡುವ ಆ ಜ್ಞಾನದ ವಿಪರೀತ ಪ್ರಕಾ

ರಗಳೇ ಅವನಲ್ಲಿ ಕಾಣಿಸಿಕೊಳ್ಳುವವು. ಧರ್ಮ, ಆರಾಧನೆ, ಆಚಾರ, ಶುಚಿತ್ವ, ಇಂದ್ರಿಯನಿಗ್ರಹ ಇವುಗಳನ್ನು ಸರ್ವ ಸಾಧಾರಣವಾಗಿ ಬೋಧಿಸುವದು ಯೋಗ್ಯವೆಂದು ಯಾರು ಒಪ್ಪಲಾರರು ? ಆದರೆ ಧರ್ಮವು ಪರಧರ್ಮದ ದ್ವೇಷದಲ್ಲಿಯೂ ಆರಾಧನೆಯು ಮೂರ್ತಿಪೂಜೆಯ ದ್ವೇಷದಲ್ಲಿಯೂ ಆಚಾರವು ಅನ್ಯ ಆಚಾರಗಳ ಅಸಹಿಷ್ಣುತೆಯಲ್ಲಿಯೂ ಶುಚಿತ್ವವು ಮಡಿ ಮೈಲಿಗೆಗಳ ಕಲ್ಪನೆಯಲ್ಲಿಯೂ ಇಂದ್ರಿಯ ನಿಗ್ರಹವು ನಿರ್ದಯದೇಹ ದಂಡನೆಯಲ್ಲಿಯೂ ಪರಿಣಮಿಸುವದು, ಆ ಉದಾತ್ತ ತತ್ವಗಳು ಅಜ್ಞರ ಅಜ್ಞಾನದಲ್ಲಿ ಸಿಲುಕಿ ಸಹಿಸುವ ವಿಡಂಬನೆಗಳಲ್ಲವೇ ? ಧರ್ಮವನ್ನು ಸಾಧಿಸುವದಕ್ಕಿಂತ ಮೊದಲು ದೋಷವನ್ನು ನೀಗಿಕೊಳ್ಳಬೇಕೆಂಬ ತತ್ವವನ್ನೇ ಇಂಥ ಅಜ್ಞಾನಿಗಳಿಗೆ ಬೋಧಿಸುವದು ಯುಕ್ತವಲ್ಲವೇ ? ಆದುದರಿಂದ ಅಜ್ಞರಾದವರಿಗಾಗಲಿ ಗಹನ ತತ್ವಗಳು ನಿಲುಕದವರಿಗಾಗಲಿ ಅವುಗಳನ್ನು ಬಲವಂತವಾಗಿ ಉಣಿಸಬಾರದು. ಕರ್ಮಮಾಡುವದನ್ನು ಬಿಟ್ಟುಕೊಟ್ಟು ಮುಕ್ತಿಯನ್ನು ಸಂಪಾದಿಸುವೆವೆಂದು ಹೇಳುವ ಪಂಡಿತರ ಆಚರಣೆಯು ಮೇಲೆ ಹೇಳಿದ ಅಕ್ರಮವನ್ನೇ ಕೂಡಿರುವದು. ಅವರ ಇಂಥ ಆಚರಣೆಯಿಂದ ಕರ್ಮಸಂಗಿಗಳಾದವರ ಬುದ್ಧಿ ಭೇದಮಾತ್ರವಾಗುವದಲ್ಲದೆ ಬೇರೆ ಪ್ರಯೋಜನವಾಗುವದಿಲ್ಲ. **ಇಂಥ ಬುದ್ಧಿ ಭೇದವನ್ನು ತಪ್ಪಿಸುವದಕ್ಕೆ-ಈ ಹೊಣೆಯು ಲೋಕಸಂಗ್ರಹತತ್ವದ ಮೂಲಕ ತನ್ನದೆಂದು ತಿಳಿದು-ವಿದ್ವಾಂಸನಾದವನು ಯುಕ್ತನಾಗಿ ಅಂದರೆ ಬುದ್ಧಿಯೋಗ ಯುಕ್ತನಾಗಿ ತಾನು ಕರ್ಮವನ್ನು ಆಚರಿಸಬೇಕು.** ಇಷ್ಟೇ ಅಲ್ಲ ಕರ್ಮಮಾಡುವದರಿಂದಲೇ ಮನುಷ್ಯನು ತನ್ನ ಹಿತವನ್ನು ಸಾಧಿಸುವನು— ಬಿಡುವದರಿಂದಲ್ಲ—ಎಂಬ ವಿಶ್ವಾಸವನ್ನು ಅವರಲ್ಲಿ ಬೆಳಿಸಬೇಕು.

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥೨೭॥**

ಮನುಷ್ಯನಿಂದ ಸಂಭವಿಸುವ ಕರ್ಮಗಳೆಲ್ಲವೂ ಪ್ರಕೃತಿಯು ತನ್ನ ಗುಣಗಳ ಮೂಲಕ ಅವುಗಳನ್ನು ಮಾಡಿಸುವದರಿಂದಲೇ ಸಂಭವಿಸುವವು. ಇಂದ್ರಿಯ ಸ್ವಭಾವ ಮತ್ತು ಬಾಹ್ಯ ಸೃಷ್ಟಿಯೊಳಗಿನ ವಿಷಯಗಳು ಇವು

ಗಳ ನಡುವೆ ರಾಗದ್ವೇಷಾದಿ ಸಂಬಂಧಗಳು ನಿಶ್ಚಿತವಾಗಿರುವವು (೩-೩೪). ಆ ಪ್ರಕೃತಿಯ ಆಟದಲ್ಲಿ ತಾನು ಮನಸು ಹಾಕುವದರಿಂದ ಸಾಕ್ಷೀಭೂತನಾದ ಜೀವಾತ್ಮನಿಗೆ ಅವುಗಳ ವಿಷಯದ ಇಷ್ಟಾನಿಷ್ಟತೆಯು ಬಂಧನವು ಉಂಟಾಗುವದು. ಮುಂದಕ್ಕೆ ಈ ಮೂಲಕವೇ ಪುನರ್ಜನ್ಮಗಳಾದರೂ ಪ್ರಾಪ್ತವಾಗುವವು (೧೩-೨೨). ಪ್ರಕೃತಿಯ ಆಟದಲ್ಲಿ ಅವನ ಮನಸ್ಸು ಸಿಲುಕುವದಕ್ಕೆ ಅವನ ಅಹಂಕಾರ ಸ್ವಭಾವವೇ ಕಾರಣವಾಗುವದು. ಅಹಂಕಾರ ಸ್ವಭಾವದಿಂದುಂಟಾಗುವ ಈ ಪರಿಣಾಮವು ಯೋಗ್ಯವಾದುದಲ್ಲ; ವಿಪರೀತವಾದುದು. ಈ ವಿಪರೀತ ಪರಿಣಾಮವನ್ನು ತಪ್ಪಿಸುವದಕ್ಕೆ ಅಹಂಕಾರದಲ್ಲಿ ತ್ಯಾಗ ಬುದ್ಧಿಯನ್ನು ಬೆಳೆಯಿಸಬೇಕು. ಈ ತ್ಯಾಗ ಬುದ್ಧಿಯು ಇಲ್ಲದಾಗ ಅಹಂಕಾರದ ದುಷ್ಪರಿಣಾಮದಿಂದ ಗ್ರಸ್ತನಾದ ಜೀವನು ತನ್ನಲ್ಲಿ ನಡೆಯುವ ಕರ್ಮಗಳನ್ನೆಲ್ಲ ತಾನೇ ಮಾಡುವೆನೆಂದು ಭಾವಿಸುವನು. ಆದರೆ ಆ ತಿಳುವಳಿಕೆಯು ವಾಸ್ತವವಾದುದಲ್ಲ.

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥೨೮॥**

ಕರ್ಮವೆಂದರೇನು, ಅದು ಅಹಂಕಾರಕ್ಕೆ ಹೇಗೆ ಸಂಬಂಧಪಟ್ಟಿರುವದು, ಈ ವಿಷಯಗಳನ್ನೇ ಅಲ್ಲದೆ ನಿಜವಾದ ತತ್ತ್ವವನ್ನು ಸಂಪೂರ್ಣವಾಗಿ ಅರಿತವನು ಗುಣಕರ್ಮಗಳ ಪರಸ್ಪರ ಸಂಬಂಧವನ್ನು ಚೆನ್ನಾಗಿ ಗ್ರಹಿಸಿರುವನು. ಕರ್ಮವೆಂದರೆ ಗುಣಗಳು ತಮ್ಮ ತಮ್ಮೊಳಗೆ ನಡೆಸಿದ ಮೇಲಾಟವೆಂಬುದನ್ನು ಗಮನಿಸಿ (೧೪-೧೦-೨೩) ಅವುಗಳಲ್ಲಿ ತಾನು ಮನಸುಹಾಕದೆ ಹಾಗೂ ಸಿಲುಕದೆ ಇವನು ಇರುವನು.

**ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ ॥೨೯॥**

ಪ್ರಕೃತಿಯ ಗುಣಗಳಿಂದ ಮೋಹಿತರಾದವರು ಗುಣಕರ್ಮಗಳ ಬಲೆಯಲ್ಲಿ ಸಿಲುಕುವದು ನಿಜ. ಹೀಗಾಗುವದು ಎಷ್ಟು ಮಾತ್ರವೂ ಹಿತವಲ್ಲ ಆದರೂ ಜ್ಞಾನಿಯಾದವನು ಕರ್ಮಗಳನ್ನು ತ್ಯಾಜ್ಯವೆಂದು ಬಿಟ್ಟು ಇಂಥವರ ಬುದ್ಧಿ ಭೇದವಾಗುವಂತೆ ತಾನು ನಡೆಯಕೂಡದು. ಹಾಗೆ ಮಾಡು

ವದರಿಂದ ಮಂದ ಬುದ್ಧಿಯುಳ್ಳವರಿಗೆ ಉಪಯೋಗವಾಗುವದಿಲ್ಲ. ಇಷ್ಟೇ ಅಲ್ಲ, ಅಪಕಾರವೂ ಆಗಬಹುದು. ಈ ವಿಷಯದ ವಿವರಣೆಯು ಹಿಂದೆಯೇ ಬಂದು ಹೋಗಿರುವದು (೩-೨೬).

**ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ ೩೦ ॥**

ಹಾಗಾದರೆ ಜ್ಞಾನಿಯಾದವನು ಲೋಕಸಂಗ್ರಹಕ್ಕಾಗಿಯೇ ಎಂದರೆ ಅಜ್ಞಾನಿಗಳ ಅನುಕೂಲಕ್ಕಾಗಿಯೇ ಕರ್ಮಮಾಡಿತೀರಬೇಕೇನು ? ನಿರಂತರ ವಾಗಿಯೂ ಕರ್ಮಮಾಡುತ್ತಲಿರುವದಕ್ಕೆ ಇಂಥ ದೂರಾನ್ವಯದ ಧ್ಯೇಯವು ಹೇಗೆ ಸಾಕಾಗುವದು ? ಸ್ವಾರ್ಥತ್ಯಾಗ ಮಾಡುವ ಹೊಣೆಯನ್ನು ಹೊರುವದರಲ್ಲಿ ಜ್ಞಾನಿಯಾದವನು ಪರರ ಅನುಕೂಲವನ್ನು ಸಾಧಿಸಬೇಕಾದರೂ ತನ್ನ ಸ್ವಂತ ಶ್ರೇಯವು ಎಷ್ಟು ಮತ್ತು ಹೇಗೆ ಸಾಧಿಸುವದೆಂಬದನ್ನು ಅವನು ತಿಳಿಯ ಬೇಡವೋ ?

ಈ ಪ್ರಶ್ನೆಗಳಿಗೆಲ್ಲ ಭಗವಂತನು ಈ ಶ್ಲೋಕದಲ್ಲಿ ಸಮಾಧಾನವನ್ನು ಹೇಳಿರುವನು. ಜ್ಞಾನಿಯಾದವನು ಮಾಡುವ ಕರ್ಮವನ್ನು ಕುರಿತು ಶ್ರೀಕೃಷ್ಣನು ಮೊದಲು ವಿಚಾರ ಮಾಡುವನು. ಜಗತ್ತಿನಲ್ಲಿ ಅವ್ಯಾಹತ ವಾಗಿ ಎಲ್ಲೆಲ್ಲಿಯೂ ನಡೆದ ಕರ್ಮದಿಂದಲೇ ಸೃಷ್ಟಿಯೆಂಬ ದೃಶ್ಯವು ಕಣ್ಣಿಗೆ ಬೀಳುವದು. ಸೃಷ್ಟಿಯೆಂದರೆ ಕರ್ಮದ ಮೂರ್ತ ಪ್ರವಾಹವೆಂದೇ ಹೇಳ ಬಹುದು. ಕರ್ಮವೇ ಸೃಷ್ಟಿಗೆ ಜೀವನವಾಗಿದೆ. ಪುರುಷೋತ್ತಮನಂಥ ಸರ್ವ ಶಕ್ತಿವಂತನಿಗಾದರೂ ಕರ್ಮವನ್ನವಲಂಬಿಸದೆ ಸೃಷ್ಟಿಯನ್ನುಂಟು ಮಾಡುವದು ಸಾಧ್ಯವಾಗಲಿಲ್ಲ. ಆದುದರಿಂದ ಕರ್ಮವು ಈ ಸೃಷ್ಟಿಯಲ್ಲಿ ಅನಿವಾರ್ಯವೆಂದೇ ಹೇಳಬೇಕು. ಇಂಥ ಕರ್ಮತತ್ವದ ವಿಧಾನವನ್ನು ಪುರುಷೋತ್ತಮನು ತನ್ನ ನಿರಂಕುಶವಾದ ಸ್ವೇಚ್ಛೆಗೆ—ಮಾಯೆಗೆ—ಅಂಕಿತ ವಾಗಿರುವಂತೆ ಯೋಜಿಸಿರುವನು (೭-೧೪). ಆದುದರಿಂದ ಕರ್ಮತತ್ವವು ಇಷ್ಟು ಬಲವತ್ತರವಾದರೂ ಅದು ಅವನಿಗೆ ಅಂಕಿತವಾಗಿರುವದು. ಈ ವಿಧಾನವು ಯಾವುದೆಂದರೆ ಕರ್ಮವನ್ನು ಪುರುಷೋತ್ತಮನಿಗಾಗಿಯೇ

ಮಾಡಿದ್ದಾದರೆ ಅದು ಬಂಧನ ರಹಿತವಾಗುವದು (೩-೯ ವಿವರಣೆ, ೧೧-೫೫, ೧೨-೧೦); ಹಾಗಿರದಿದ್ದರೆ ಬಂಧಸಕಾರಕವಾಗುವದು (೫-೧೨).

ಪುರುಷೋತ್ತಮನಿಗಾಗಿ ಕರ್ಮಮಾಡುವದೆಂದರೇನೆಂಬುದನ್ನು ಇನ್ನು ವಿಚಾರಿಸುವ. ಆತನು ಸೃಷ್ಟಿಯಲ್ಲಿ ಎಲ್ಲೆಲ್ಲಿಯೂ ನಮ್ಮ ಕಣ್ಣಿಗೆ ಬೀಳುವದಿಲ್ಲ. ಅಥವಾ ಅನ್ಯ ಪ್ರಕಾರದಿಂದ ನಮ್ಮ ಅನುಭವಕ್ಕೂ ಗೋಚರನಾಗುವದಿಲ್ಲ. ಆದರೂ ಎಂಥ ಅಲ್ಪ ವ್ಯವಹಾರದಲ್ಲಿಯೂ ತನ್ನ ಸಂಕಲ್ಪದಿಂದ ಅಥವಾ ಇಚ್ಛಾಶಕ್ತಿಯಿಂದ ಅವನು ಇದ್ದೇ ಇರುವನು. ಆತನಿಗೆ ಸಂಮತವಿಲ್ಲದ ಯಾವ ಸಂಗತಿಯೂ ಸಂಭವಿಸುವದು ಅಶಕ್ಯವು. ಮನುಷ್ಯನ ಮನಸ್ಸಿಗೆ ಅನುಕೂಲವಾಗಿ ಕರ್ಮವು ಫಲಿಸಿದಾಗಲೂ ಅಥವಾ ಕಾರ್ಯಭಾಗವು ಕೆಟ್ಟು ಹೋದಾಗಲೂ ಅದರಲ್ಲಿ ಪುರುಷೋತ್ತಮನ ಇಚ್ಛೆಯು—ಮಾಯೆಯು—ಪ್ರಬಲವಾಗಿರುವದು. ಈ ಪರಿಣಾಮಗಳಿಗೆ ಕರ್ಮಮಾಡುವವನ ಕೌಶಲ್ಯಾಕೌಶಲ್ಯಗಳು ಮಾತ್ರವೇ ಕಾರಣವಾಗಿರುವದಿಲ್ಲ, ಎಂದು ಗೀತೆಯು ಹೇಳುವದು. ಗೀತೆಯಲ್ಲಿ ಪುರುಷೋತ್ತಮನು ಔದಾಸೀನ್ಯವನ್ನು ತಾಳಿರುವನೆಂದು ಹೇಳಿರುವದು. ಜೀವರಿಗೆ ಕರ್ಮ ಮಾಡುವ ಅಧಿಕಾರವನ್ನು ಕೊಟ್ಟಿರುವದೆಂದೂ ಹೇಳಿರುವದು. ಪುರುಷೋತ್ತಮನ ಈ ಔದಾಸೀನ್ಯವಾಗಲಿ ಜೀವರ ಕರ್ಮಾಧಿಕಾರವಾಗಲಿ ಸೃಷ್ಟಿ ಜೀವನದ ಸತ್ವಸಂರಕ್ಷಣೆಯ ದೃಷ್ಟಿಯಿಂದ ಮರ್ಯಾದಿತವಾಗಿವೆ. ಈ ಮರ್ಯಾದೆಯನ್ನು ಅವು ಮೀರದ ಹಾಗೆ ಪುರುಷೋತ್ತಮನು ಕಾದುಕೊಳ್ಳುವನೆಂಬ ವಿಶ್ವಾಸವನ್ನು ಅವನಲ್ಲಿ ಇಟ್ಟರೆ ಅದು ಮನುಷ್ಯನ ಬುದ್ಧಿಯನ್ನು ವಿಶುದ್ಧವಾಗಿ ಮಾಡುವದು. ತಾನು ಮಾಡುವ ಕರ್ಮಗಳಲ್ಲೆಲ್ಲ ಪುರುಷೋತ್ತಮನ ಇಚ್ಛೆಯೇ ಪ್ರಬಲವಾಗಿರುವದೆಂಬ ಸದ್ಭಾವದಿಂದ ಕರ್ಮಮಾಡುವದೇ ಪುರುಷೋತ್ತಮನಿಗಾಗಿ ಕರ್ಮಮಾಡುವದು, ಕರ್ಮಗಳನ್ನು ಅವನಿಗೆ ಅರ್ಪಿಸುವದಕ್ಕೆ ಇನ್ನಾವ ಮಾರ್ಗವೂ ಇಲ್ಲ. ಹೀಗೆ ಅವನಿಗೆ ಅರ್ಪಿತವಾಗದ ಕರ್ಮಗಳು ಅವು ಪಾರಲೌಕಿಕವಾದರೂ ಬಂಧನ ಕಾರಕವಾಗುವವು. ಅದಕ್ಕಾಗಿಯೇ ಈ ಶ್ಲೋಕದಲ್ಲಿ ಹೇಳಿದ ಪೂರ್ಣ ಜ್ಞಾನಿಯು ತನ್ನ ಕರ್ಮಗಳನ್ನೆಲ್ಲವನ್ನೂ ನಿಃಶೇಷವಾಗಿ ಪುರುಷೋತ್ತಮನಿಗೆ ಅರ್ಪಿಸಿ ಬಿಡುವನು.

ಇಂಥ ಮನಃಸ್ಥಿತಿಯುಂಟಾಗಬೇಕಾದರೆ ಬುದ್ಧಿಯು ಆತ್ಮಸ್ವಭಾವಾಭಿ ಮುಖವಾಗಬೇಕು— ಏಕಾಗ್ರವಾಗಬೇಕು. ಹೀಗೆ ಏಕಾಗ್ರವಾದ ಬುದ್ಧಿಗೆ ' ಚೇತಸ್ ' ಎಂಬ ಹೆಸರು. ಈ ಏಕಾಗ್ರ ಬುದ್ಧಿಗೆ ಕಾರಣ ವಾಗುವ ಪುರುಷೋತ್ತಮನ ವಿಷಯದ ಭಾವಕ್ಕೆ ಅಧ್ಯಾತ್ಮಭಾವವೆಂದು ಹೆಸರು. ಈ ಅಧ್ಯಾತ್ಮ ಭಾವವೇ ಬ್ರಹ್ಮನ ಸ್ವಭಾವವಾಗಿದೆ (೮-೧). ಏಕೆಂದರೆ ಅವನು ನಿರಂತರದಲ್ಲೂ ಪುರುಷೋತ್ತಮನ ಕಾರ್ಯದಲ್ಲಿಯೇ ನಿಮಗ್ನನಾಗಿರುವನು. ಬ್ರಹ್ಮಾಂತರ್ಗತನಾದ ಜೀವನ ಸ್ವಭಾವವಾದರೂ ಆಧ್ಯಾತ್ಮಿಕವಾದುದೆಂಬುದನ್ನು ಈ ಅರ್ಥದಲ್ಲಿಯೇ ಗ್ರಹಿಸಬೇಕು. ಹೀಗೆ ಅಧ್ಯಾತ್ಮವೆಂಬ ಶಬ್ದಕ್ಕೆ ಗೀತೆಯಲ್ಲಿ ಗಹನವೂ ಗೂಢವೂ ಆದ ಅರ್ಥ ವುಂಟು (೧೧-೧). ಇದನ್ನು ಗ್ರಹಿಸಬೇಕು.

"ಅಧ್ಯಾತ್ಮ ಚೇತಸಾ" ಅಂದರೆ ಏಕಾಗ್ರವಾದ ಬುದ್ಧಿಯು— ಚೇತಸ್ಸು—ಈ ಪ್ರಕಾರ ಅಧ್ಯಾತ್ಮ ಸ್ವಭಾವದಲ್ಲಿ ಸಿರತರವಾದರೆ, ಆ ಮನು ಷ್ಯನು ತತ್ಕಾಲವೇ ನಿಃಸ್ಪೃಹನಾಗುವನು. ಯೋಗಕ್ಷೇಮದ ಆಕಾಂಕ್ಷೆ ಯಾಗಲಿ ಕರ್ತೃತ್ವ ಬುದ್ಧಿಯ ಅಹಂಕಾರವಾಗಲಿ ಅವನನ್ನು ಸೋಂಕಲಾ ರವು. ಈ ಪ್ರಕಾರವಾಗಿ ಮಾಡಿದ ಯಾವ ಕರ್ಮವೇ ಆಗಲಿ ಅದರಿಂದ ಅವನಿಗೆ ಎಳ್ಳಷ್ಟಾದರೂ ಭಯವಿರುವದಿಲ್ಲ.

ಹೀಗೆ ಅಧ್ಯಾತ್ಮ ಚಿತ್ತನಾಗಿ ತನ್ನ ಕರ್ಮಗಳನ್ನೆಲ್ಲ ಶ್ರೀಕೃಷ್ಣನಿಗೆ ಅರ್ಜುನನು ಭಾವಸರ್ವಸ್ವದಿಂದ ಅರ್ಪಿಸಬೇಕು. ಅವನಿಗಾಗಿ ಯಜ್ಞ ಮಾಡುವದೆಂದರೆ ಇದೇ. ಸ್ವಂತದ ಸಂಕಲ್ಪವನ್ನೂ ಕರ್ತೃತ್ವ ಬುದ್ಧಿ ಯನ್ನೂ ಬಿಟ್ಟು ಮನಸ್ಸಿನ ಉದ್ವೇಗವನ್ನು ತ್ಯಜಿಸಿ ಅವನು ಯುದ್ಧಕ್ಕೆ ನಿಲ್ಲಬೇಕು.

**ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ।**
**ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥ ೩೧ ॥**

ಶ್ರೀಕೃಷ್ಣನೇ ಪುರುಷೋತ್ತಮನು. ಈ ವರೆಗೆ ವಿವರಿಸಿದ ಮೂಲ ಭೂತ ತತ್ವಗಳೆಲ್ಲವೂ ಅವನಿಂದಲೇ ನಿರ್ಮಿತವಾದವುಗಳಾದುದರಿಂದ ಅವನಿಗೆ

ಸಿಗೆ ಪೂರ್ಣ ಪರಿಚಿತವಾದುವು. ಆ ತತ್ವಗಳನ್ನೆಲ್ಲ ಸಾಧಿಸುವದು ಉತ್ತಮುವೇ ಸರಿ. ಆದರೆ ಅವುಗಳನ್ನು ಪೂರ್ಣವಾಗಿ ಸಾಧಿಸುವದು ಸಾಧ್ಯ ವಾಗದಿದ್ದರೆ ಅವುಗಳಲ್ಲಿ ವಿಶ್ವಾಸವಿಟ್ಟು, ದೋಷದೃಷ್ಟಿಯನ್ನು ಬಿಟ್ಟು, ಯಥಾಮತಿ ಯಥಾಶಕ್ತಿ ಅವುಗಳನ್ನು ಆಚರಿಸುವ ಸಾತ್ವಿಕವೂ ಶುದ್ಧವೂ ಆದ ಪ್ರಯತ್ನದಿಂದಾದರೂ ಕರ್ಮಬಂಧವು ಅಳಿದು ಹೋಗುವದು. ಇದು ಅನುಗ್ರಹವಲ್ಲ, ಕರ್ಮತತ್ವದ ಗತಿಯು.

**ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಂ।**
**ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾನ ಚೇತಸಃ ॥೩೨॥**

ಆದರೆ ಶ್ರೀಕೃಷ್ಣನು ಉಪದೇಶಿಸಿದ ತತ್ವಗಳನ್ನು ಯಾರು ಹೀಯಾಳಿ ಸುವರೋ ಮತ್ತು ಯಾರು ಅವುಗಳನ್ನು ಅನುಸರಿಸುವದಿಲ್ಲವೋ ಅವರು ಜ್ಞಾನವನ್ನೆಲ್ಲ ಕಳೆದುಕೊಳ್ಳುವರು. ಅವರಿಗೆ ಚೇತಸ್ಸು — ಏಕಾಗ್ರ ಬುದ್ಧಿಯು—ಲಭಿಸದೆ ಕೊನೆಗೆ ಅವರು ನಾಶಹೊಂದುವರು. ತನ್ನ ಉಪದೇಶವನ್ನು ಅನಾದರಿಸಿದುದಕ್ಕಾಗಿ ಶ್ರೀಕೃಷ್ಣನು ಹೀಗೆ ದರ್ಪದಿಂದ ಶಾಪಿಸುತ್ತಿರುವನೆಂದು ತಿಳಿಯಬಾರದು. ಮನುಷ್ಯನಿಗೆ ಮುಕ್ತಿಯನ್ನು ಪಡೆಯುವದಕ್ಕೆ ಒಂದೇ ಒಂದು ಮಾರ್ಗವುಂಟು. ಗೀತೆಯಲ್ಲಿ ಉಪ ದೇಶಿಸಿರುವದೇ ಆ ಮಾರ್ಗವು. ಆ ಉಪದೇಶವನ್ನು ಲಕ್ಷಿಸದೆ ನಡೆಯುವ ವರು ಕಾಲಾಂತರದಲ್ಲಿ ಅಜ್ಞಾನದಿಂದ ಸಂಭವಿಸುವ ನಾಶವನ್ನು ಹೊಂದು ವರು. ಈ ಶ್ಲೋಕದಲ್ಲಿ ಹೀಗೆ ತತ್ವಬೋಧವನ್ನು ಹೇಳಿದೆ

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥೩೩॥**

ಜ್ಞಾನಿಯಾದವನು ಶ್ರೀಕೃಷ್ಣನ ಉಪದೇಶವನ್ನು ಕ್ಷಣಮಾತ್ರದಲ್ಲಿ ಸ್ವೀಕರಿಸುವನು. ಅವನ ಬುದ್ಧಿವಂತಿಕೆಯಾಗಲಿ ದೂರದೃಷ್ಟಿಯಾಗಲಿ ಇದಕ್ಕೆ ಕಾರಣವಾಗುವದಿಲ್ಲ. ಇದು ಅವನ ಪ್ರಕೃತಿಯ ಪರಿಣಾಮವೆಂದೇ ತಿಳಿಯಬೇಕು. ಅಜ್ಞಾನಿಯಾದವನು ಈ ಉಪದೇಶವನ್ನು ಅನಾದರಿಸುವ ದಕ್ಕಾದರೂ ಅವನ ಪ್ರಕೃತಿಯೇ ಕಾರಣವಾಗುವದು. ಶ್ರೀಕೃಷ್ಣನಲ್ಲಿ

ವಿಶ್ವಾಸವಿರುವದಕ್ಕೆ ಅಥವಾ ಇಲ್ಲದಿರುವದಕ್ಕೆ ಜ್ಞಾನ ಅಜ್ಞಾನಗಳು ಕಾರಣವಲ್ಲ. **ಮನುಷ್ಯನ ಪ್ರಕೃತಿಯಲ್ಲಿ ಕ್ರಮೇಣ ಹುಟ್ಟಿ ಬೆಳೆದ ವೃತ್ತಿಯ ಬಲವೇ ಇದಕ್ಕೆ ಕಾರಣವಾಗಿದೆ.** ಪ್ರಕೃತಿಯು ವೃತ್ತಿಯಲ್ಲಿ ದೈವೀಸಂಪತ್ತು ಬೆಳೆದಾಗ ಅವಿಶ್ವಾಸ ಅಶ್ರದ್ಧೆ ಇಂದ್ರಿಯಾರಾಮಾದಿಗಳು ಸಂಭವಿಸಲಾರವು. ಹಾಗೆಯೇ ವೃತ್ತಿಯಲ್ಲಿ ಆಸುರ ಸಂಪತ್ತಿಯು ಬೆಳೆದಾಗ ಸೂರ್ಯಪ್ರಕಾಶದಂಥ ನಿರ್ಮಲ ಜ್ಞಾನವು ಕಣ್ಣೆದುರಿಗೆ ಇದ್ದರೂ ಅದನ್ನ ನುಸರಿಸುವದು ಅಶಕ್ಯವಾಗುವದು. ಜ್ಞಾನವಾಗಲಿ ಅಜ್ಞಾನವಾಗಲಿ ಬುದ್ಧಿಯೋಗ ಶಾಸ್ತ್ರದಲ್ಲಿ ಮನುಷ್ಯನ ಬುದ್ಧಿಯನ್ನವಲಂಬಿಸಿರುವದಿಲ್ಲ ವೆಂದು ತಿಳಿಯಬೇಕು. ಪ್ರಕೃತಿಯ ಸಂಪತ್ತನ್ನೇ ಅವಲಂಬಿಸುವವು. ಜ್ಞಾನಿಗಳೇ ಆಗಲಿ ಅಜ್ಞಾನಿಗಳೇ ಆಗಲಿ-ಜೀವರೆಲ್ಲರೂ-ತಮ್ಮ ತಮ್ಮ ಪ್ರಕೃತಿಗನುರೂಪವಾಗಿಯೇ ವರ್ತಿಸುವರು. ಈ ಪ್ರಕೃತಿಯನ್ನು ಬುದ್ಧಿ ವಾದದಿಂದ ತಡೆದು ಅಕಸ್ಮಾತ್ತಾಗಿ ಅದನ್ನು ನಿಗ್ರಹಿಸಹೋದರೆ ಪ್ರಯತ್ನವು ವ್ಯರ್ಥವಾಗುವದು.

**ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ।**
**ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ ॥ ೩೪ ॥**

ಪ್ರಕೃತಿಯಲ್ಲಿ ಅಜ್ಞಾನವು ಬೆಳೆಯಲಿಕ್ಕೆ ಸ್ವಭಾವ ನಿಯತವಾದ ಇಂದ್ರಿಯಗಳ ಮತ್ತು ವಿಷಯಗಳ ವ್ಯವಹಾರವೇ ಕಾರಣವು. ಈ ವ್ಯವಹಾರ ವನ್ನು ಬಿಟ್ಟುಬಿಡುವದು ಯಾರಿಗೂ ಸಾಧ್ಯವಲ್ಲ. ಇಂದ್ರಿಯಗಳ ಹಾಗೂ ವಿಷಯಗಳ ಪರಸ್ಪರ ಇಷ್ಟಾನಿಷ್ಟತೆಯೂ ಪ್ರೀತಿ ದ್ವೇಷಗಳೂ ನಿಸರ್ಗ ದಿಂದಲೇ ನಿಯಮಿತವಾಗಿವೆ. ಅವುಗಳ ಸಹವಾಸದಲ್ಲಿ ಈಶ್ವರ ಸಂಕಲ್ಪ ದಿಂದ ವಾಸಮಾಡುವ ಜೀವ ಪುರುಷನಿಗೆ ಈ ಇಷ್ಟಾನಿಷ್ಟಗಳ ಸಹಚರ್ಯಾದಿ ಗಳನ್ನು ಅನುಭವಿಸಲೇಬೇಕಾಗುವದು. ಈ ಅನುಭವಗಳನ್ನು ಪಡೆಯು ತ್ತಿರುವಾಗಲೇ ಧ್ಯಾನ, ಸಂಗ, ಕಾಮ ಮೊದಲಾದ ಪರಂಪರೆಯಿಂದ ಇಂದ್ರಿಯಗಳ ಸೆಳವಿಗೆ ಅವನು ಈಡಾಗುವನು. ಅರ್ಜುನನು ಈ ವಿಪರೀತ ಪರಿಣಾಮವನ್ನು ಜಾಗರೂಕತೆಯಿಂದ ತಡೆಯಬೇಕು. ಇಂದ್ರಿಯ ಸುಖ ಕ್ಕಾಗಲಿ ಆರಾಮಕ್ಕಾಗಲಿ ಅವನು ಮನಸೋಲಬಾರದು. ಈ ಇಂದ್ರಿಯಗಳು

ಕ್ರೂರರಾದ ಹಾದಿಗಳ್ಳರನ್ನು ಹೋಲುವವು. ಮುಕ್ತಿಧ್ಯೇಯವನ್ನೇ ಗುರಿಯಾಗಿಟ್ಟುಕೊಂಡು ಮನುಷ್ಯನು ಮಾಡುವ ಪ್ರವಾಸದಲ್ಲಿ ಅವನ ಜ್ಞಾನವೆಂಬ ಆಧಾರವನ್ನು ಈ ಇಂದ್ರಿಯಗಳು ಅಪಹರಿಸುವವು.

**ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ೩೫ ॥**

ಕಾರ್ಯವು ಸಫಲವಾಗಬೇಕೆಂದು ಆಚರಿಸಿದ ಪರಧರ್ಮಕ್ಕಿಂತಲೂ ನಿಷ್ಫಲವಾಗಿ ತೋರುವ ಸ್ವಧರ್ಮವೇ ಶ್ರೇಯಸ್ಕರವು. ಸ್ವಧರ್ಮವನ್ನಾಚರಿಸುವಾಗ ಮರಣವು ಒಂದಿರೂ ಶ್ರೇಯಸ್ಕರವು. ಪರಧರ್ಮಾವಲಂಬನೆಯಿಂದ ಎಂದಿಗೂ ಭಯವೇ !

ಈ ಶ್ಲೋಕದಲ್ಲಿ ಬಂದ ಸ್ವಧರ್ಮ ಮತ್ತು ಪರಧರ್ಮವೆಂಬ ಶಬ್ದಗಳಿಗೆ ಅರ್ಥವೇನೆಂಬುದನ್ನು ತಿಳಿಯಬೇಕು. ಆ (ಕೃಷ್ಣಾರ್ಜುನರ) ಕಾಲದಲ್ಲಿ ಯಾವ ಸಂಗತಿಯನ್ನೇ ಆಗಲಿ ಧರ್ಮವೆಂಬ ಅಳತೆಗೋಲಿನಿಂದಲೇ ಅಳೆಯುತ್ತಿದ್ದರು. **ಧರ್ಮವೆಂದರೆ ವ್ಯಕ್ತಿಯನ್ನು ಆತ್ಮಶ್ರೇಯದೆಡೆಗೆ ತಪ್ಪದೆ ಒಯ್ಯುವ ನಿಶ್ಚಿತವಾದ ಆಚಾರ ಅಥವಾ ವಿಚಾರವೆಂಬ ಭಾವನೆಯು ಇದ್ದಿತು.** ಅಂಥ ಭಾವನೆಯು ಈಗಿನ ಕಾಲದಲ್ಲಿ ಪ್ರಚಾರದಲ್ಲಿಲ್ಲ. ಈಗ ಧರ್ಮವೆಂದರೆ ಧರ್ಮಪಂಥವೆಂದೇ ಬೋಧವಾಗುವದು. ಈ ಶ್ಲೋಕದಲ್ಲಿ ಧರ್ಮಶಬ್ದದ ಪ್ರಾಚೀನ ಅರ್ಥವೇ ಉದ್ದಿಷ್ಟವಿದೆ.

ಗೀತೆಯು ಉಪದೇಶಿಸಲ್ಪಟ್ಟ ಕಾಲದಲ್ಲಿ ಭಾರತೀಯ ಸಮಾಜದೊಳಗೆ ಚಾತುರ್ವರ್ಣ್ಯ ವ್ಯವಸ್ಥೆಯು ನೆಲೆಗೊಂಡಿತ್ತು. ಈ ವ್ಯವಸ್ಥೆಯನುಸಾರವಾಗಿ ಆ ಸಮಾಜದೊಳಗಿನ ಒಂದೊಂದು ವ್ಯಕ್ತಿಯೂ ಯಾವುದಾದರೊಂದು ವರ್ಣಕ್ಕೆ ಸೇರಿರುವದು. ಹೀಗೆ ನಾಲ್ಕು ವರ್ಣಗಳಿರುವವು. ಒಂದೊಂದು ವರ್ಣಕ್ಕೆ ನೇಮಿಸಿದ ಬೇರೆ ಬೇರೆ ನಾಲ್ಕು ತರದ ಕರ್ಮಗಳಿರುವವು. ತನ್ನ ವರ್ಣವಿಹಿತವಾದ ಕರ್ಮವನ್ನು ಬಿಡುವ ಸ್ವಾತಂತ್ರ್ಯವು, ಯಾವ ವ್ಯಕ್ತಿಗೂ ಇರುವದಿಲ್ಲ. ಹೀಗೆ ನಾಲ್ಕು ವರ್ಣಗಳಿಗೂ ನೇಮಿಸಿರುವ ಕರ್ಮಗಳ ವಿಶೇಷ ಮಹತ್ವವೇನೆಂದರೆ ಈ ವರ್ಣಗಳು ಬೇರೆಬೇರೆಯಾಗಿದ್ದರೂ ಸಮಾಜದ ಸುಖಸಮಾಧಾನಗಳಷ್ಟೇ ಅಲ್ಲದೆ ಅದರ ಸ್ವಾಸ್ಥ್ಯವು

ಕೂಡ ಇವೆಲ್ಲವುಗಳ ಸಮುಚ್ಚಯವನ್ನು ಅವಲಂಬಿಸಿರುವದು. ಹೀಗೆ ವ್ಯಕ್ತಿಗಳಿಗಾಗಿ ನೇಮಿಸಿದ ಕರ್ಮಗಳ ಬುಡದಲ್ಲಿ ಸಮಾಜಸ್ವಾಸ್ಥ್ಯಕ್ಕೆ ಮಾತ್ರವಲ್ಲದೆ ವ್ಯಕ್ತಿಜೀವಿತಕ್ಕೆ ಸಹ ತಳಹದಿಯಾಗಿರುವ ತತ್ವಜ್ಞಾನದ ಬೀಜವಾದರೂ ಇರುವದೆಂಬ ಭಾವನೆಯು ಆ ಕಾಲದಲ್ಲಿ ಇದ್ದಿತು. ಆದುದ ರಿಂದಲೇ ವರ್ಣವಿಹಿತ ಕರ್ಮವೆಂಬುದೇ ಧರ್ಮವೆಂದು ಜನರು ತಿಳಿ ಯುತ್ತಿದ್ದರು. ಈ ವರ್ಣವ್ಯವಸ್ಥೆಯ ಅನುರೋಧವಾಗಿ ವ್ಯಕ್ತಿಯ ಮೇಲೆ ಬಿದ್ದ ಹೊಣೆಯನ್ನು ಅವನ ಸ್ವಧರ್ಮವೆಂದು ಬಗೆಯುತ್ತಿ ದ್ದರು. ಇಂಥ ಸ್ವಧರ್ಮವನ್ನು ಲಕ್ಷಿಸಿ ಇಲ್ಲಿ ಹೇಳುತ್ತಿರುವರೆಂಬುದು ಸ್ಪಷ್ಟವಾಗಿದೆ.

ಗೀತೆಯೊಳಗೆ ಹಲವೆಡೆಯಲ್ಲಿ ವರ್ಣವ್ಯವಸ್ಥೆಯನ್ನು ಕುರಿತು ಶ್ರೀಕೃಷ್ಣನು ಮಾಡಿದ ವಿವೇಚನೆಯನ್ನು ನೋಡಿದರೆ ಆ ಕಾಲದಲ್ಲಿ ರೂಢ ವಾಗಿದ್ದ ವರ್ಣವ್ಯವಸ್ಥೆಯ ಕಲ್ಪನೆಯು ಅವನಿಗೆ ಬಹುಮಟ್ಟಿಗೆ ಸಮ್ಮತ ವಾಗಿತ್ತೆಂದು ತೋರುವದು. ಗೀತೆಯಲ್ಲಿ ಹೇಳಿದ ತತ್ವಜ್ಞಾನವು ಈ ವರ್ಣಸಂಬಧವಾದ ಸಮಾಜರಚನೆಗೆ ಪೋಷಕವಾಗಿಯೇ ಇರುವದು. ಚಾತುರ್ವರ್ಣ್ಯವನ್ನು ಶ್ರೀಕೃಷ್ಣನೇ ಉಂಟುಮಾಡಿದನು. ಒಂದೊಂದು ವರ್ಣದ ಕರ್ಮಗಳನ್ನು ವಿಭಾಗಿಸಿದವನಾದರೂ ಅವನೇ. ವ್ಯಕ್ತಿಯಲ್ಲಿ ಸಂಗ್ರಹಿತವಾಗಿ ಬೆಳೆಯುವ ಗುಣವಿಶೇಷಗಳ ಪ್ರಕಾರಗಳು ಗೀತೆಯಲ್ಲಿ ಹೇಳಲ್ಪಟ್ಟಿರುವವು. ಅವಾದರೂ ಈ ವರ್ಣವ್ಯವಸ್ಥೆಯ ಕಲ್ಪನೆಗೆ ಪೋಷಕ ವಾಗಿಯೇ ಇವೆ (೧೮-೪೧-೪೪).

ಅರ್ಜುನ ಉವಾಚ—

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥ ೩೬ ॥**

ಸ್ವಧರ್ಮವನ್ನಾಚರಿಸುವದು ಯಾರಿಗೆ ಮನಃಪೂರ್ವಕವಾಗಿ ಬೇಡವೋ ಅವರ ಮಾತು ಹಾಗಿರಲಿ. ಆದರೆ ಅದನ್ನು ಯಾರು ಬಿಡಲಿಚ್ಛಿಸು ವದಿಲ್ಲವೋ ಅವರಾದರೂ ಪಾಪಾಚರಣೆಯ ಕಡೆಗೆ ಏಕೆ ಎಳೆಯಲ್ಪಡುವರು?

ಶ್ರೀಭಗವಾನುವಾಚ—

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಂ ॥೩೭॥**

ಪ್ರಶ್ನೆಯು ಯೋಗ್ಯವಾಗಿದೆ. ಸ್ವಧರ್ಮವನ್ನು ಬಿಡುವದು ಮನಃ ಪೂರ್ವಕವಾಗಿರಲಿ ಮನಸ್ಸಿನ ವಿರುದ್ಧವಾಗಿರಲಿ ಅದಕ್ಕೆ ಕಾರಣವೇನೋ ಒಂದೇ. ರಜೋಗುಣದಿಂದ ಉದ್ಭವಿಸುವ ಕಾಮುಕ್ರೋಧಾದಿಗಳೇ ಆ ಕಾರಣವು. ಇವು ಮಹಾಪಾಪಿಗಳು, ಸರ್ವಭಕ್ಷಕಗಳೆಂದು ತಿಳಿಯಬೇಕು. ಈ ಜಗತ್ತಿನಲ್ಲಿ ಇವೇ ಅರ್ಜುನನಿಗೆ ನಿಜವಾದ ವೈರಿಗಳು.

**ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ।**
**ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದ-**
**ಮಾವೃತಂ ॥೩೮॥**

ಹೊಗೆಯಿಂದ ಅಗ್ನಿಯೂ ಧೂಳಿನಿಂದ ಕನ್ನಡಿಯೂ ಪರೆಯಿಂದ ಗರ್ಭವೂ ಮುಚ್ಚಿರುವ ಹಾಗೆ ಪ್ರಪಂಚವೆಲ್ಲ ಈ ಕಾಮುಕ್ರೋಧಾದಿಗಳಿಂದ ಗ್ರಸ್ತವಾಗಿರುವದು.

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ।**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥೩೯॥**

ಈ ಶ್ಲೋಕದಲ್ಲಿ ಸ್ವೇಚ್ಛೆಯಿಂದ ಸ್ವಧರ್ಮವನ್ನು ಬಿಡುವವನ ವಿಷಯವಾಗಿ ಹೇಳಿದೆ ಇನ್ನು ತನ್ನ ಇಚ್ಛೆಯು ಇಲ್ಲದಿದ್ದರೂ ಬಲಾತ್ಕರಿಸಿದ ಮೂಲಕ ಸ್ವಧರ್ಮನ್ನು ಬಿಡುವ ವ್ಯಾಮೋಹವು ಯಾವ ಜ್ಞಾನಿಗಳಿಗಾಗುವದೋ ಅವರನ್ನು ಕುರಿತು ವಿವರಣೆಯಿದೆ. ಮನುಷ್ಯನಲ್ಲಿ ಜ್ಞಾನವಾಗಲಿ ಅಜ್ಞಾನವಾಗಲಿ ಅವನ (ಅಹಂಕಾರ) ಸ್ವಭಾವವನ್ನು ಆಶ್ರಯಿಸಿಕೊಂಡಿರುವದು. ಆ ಸ್ವಭಾವದಲ್ಲಿ ನಡೆಯುವ ಜ್ಞಾನ ಮತ್ತೂ ಕಾಮಗಳ ಹೋರಾಟದಲ್ಲಿ ಕಾಮವು ಪ್ರಬಲವಾದರೆ ಅದು ಜ್ಞಾನವನ್ನು ಮುಸುಕಿ ಬಿಡುವದು. ಕಾಮವು ಜ್ಞಾನಕ್ಕೆ ನಿರಂತರ ವೈರಿಯು. ಎಂದಿಗೂ ಶಮನವಾಗದ ಅಗ್ನಿಯೇ ಅದು. ಎಂದರೆ ಎಷ್ಟು ಜ್ಞಾನವನ್ನು ಆಹುತಿಗೊಂಡರೂ ಇದು ತಣಿಯುವದಿಲ್ಲ.

**ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥ ೪೦ ॥**

ಇಂದ್ರಿಯಗಳು ಮನಸ್ಸು ಬುದ್ಧಿ ಇವೇ ಕಾಮಕ್ಕೆ ಅಧಿಷ್ಠಾನಗಳು ಎಂದರೆ ವಾಸಮಾಡುವ ಸ್ಥಳಗಳು. ಮನುಷ್ಯನಲ್ಲಿ ಜ್ಞಾನವಾದರೂ ಇವನ್ನೇ ಆಶ್ರಯಿಸುವದು (೧೩–೭–೬೦). ಕಾಮವು ಜ್ಞಾನವನ್ನು ಜಯಿಸಿ ಮನುಷ್ಯನನ್ನು ಮೋಹಕ್ಕೀಡುಮಾಡುವದು.

**ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ॥**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥ ೪೧ ॥**

ಕಾಮವು ಮನಸ್ಸು ಬುದ್ಧಿ ಇಂದ್ರಿಯ ಇವುಗಳಲ್ಲಿ ವಾಸವಾಗಿರುವದಾದರೂ ಇಂದ್ರಿಯಗಳೇ ಅದಕ್ಕೆ ತವರುಮನೆಯೆಂದು ಹೇಳಬೇಕು. ತನ್ನ ಪ್ರಭಾವದಿಂದ ಕಾಮವು ಕ್ರಮೇಣ ಮನಸ್ಸು ಬುದ್ಧಿಗಳನ್ನಾದರೂ ವಶಮಾಡಿಕೊಳ್ಳುವದು. ಆದುದರಿಂದ ಇಂದ್ರಿಯಗಳಲ್ಲಿ ಈ ಕಾಮವು ಕವಲೊಡೆಯುವ ಮೊದಲೇ ಅದನ್ನು ತರಿದು ಬಿಡಬೇಕು. ಇಂದ್ರಿಯಗಳಲ್ಲಿ ಇದು ಅಂಕುರಿಸಿದ ಹಾಗೆ ಮಾಡುವದಂತೂ ಇದಕ್ಕಿಂತಲೂ ಒಳ್ಳೆಯದು. ಈ ಕಾಮವನ್ನು ನಿರ್ಮೂಲ ಮಾಡುವದಕ್ಕಾಗಿ ಅರ್ಜುನನು ಮೊದಲು ಇಂದ್ರಿಯಗಳ ನಿಯಮನ ಮಾಡಬೇಕು. ಈ ಕಾಮವೆಂಬದು ಮಹಾಪಾಪಿ ಅದನ್ನು ಕೊಂದು ಬಿಡುವದೇ ಯೋಗ್ಯವು. ಅದರಿಂದ ಜ್ಞಾನವೇ ಅಲ್ಲ, ವಿಜ್ಞಾನವಾದರೂ ನಾಶಹೊಂದುವದು. ಈ ವಿಜ್ಞಾನದ ನಾಶವು ಜ್ಞಾನದ ನಾಶಕ್ಕಿಂತಲೂ ಬಹಳ ಭಯಂಕರವಾಗಿದೆ.

**ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ ೪೨ ॥**

ಇಂದ್ರಿಯಗಳು ವಿಷಯಗಳಿಗಿಂತಲೂ ಶ್ರೇಷ್ಠವಾಗಿವೆ. ಮನಸ್ಸು ಇಂದ್ರಿಯಗಳಿಗಿಂತಲೂ ಶ್ರೇಷ್ಠವಾದುದು. ಬುದ್ಧಿಯು ಮನಸ್ಸಿಗಿಂತಲೂ ಶ್ರೇಷ್ಠವು. ಆದರೆ ಈ ಬುದ್ಧಿಗಿಂತಲೂ ಶ್ರೇಷ್ಠವಾದುದು ಆತ್ಮವು.

ಇಂದ್ರಿಯ-ಮನೋ-ಬುದ್ಧ್ಯಾದಿಗಳು ಜ್ಞಾನಕ್ಕೆ ಅಧಿಷ್ಠಾನವಾಗಿರುವಂತೆಯೇ **ಈ ಆತ್ಮವು ವಿಜ್ಞಾನಕ್ಕಧಿಷ್ಠಾನವಾಗಿರುವದು.** ಕಾಮದ

ಮೂಲಕ ವಿಜ್ಞಾನವು ನಾಶಹೊಂದುವದೆಂದು ಮೇಲೆ ಹೇಳಿದೆಯಷ್ಟೇ. ಆ ವಿಜ್ಞಾನವು ಆತ್ಮಸ್ವಭಾವದಲ್ಲಿರುವದು. ಜ್ಞಾನವು ನಾಶವಾಗಿ ಒಂದು ವೇಳೆ ವಿಜ್ಞಾನವು ಉಳಿದರೆ ಜ್ಞಾನವನ್ನು ಅಲ್ಪ ಪ್ರಯಾಸದಿಂದ ಪಡೆಯ ಬಹುದು. ಆದರೆ ವಿಜ್ಞಾನವೇ ನಾಶವಾಗಿ ಹೋದರೆ ಸರ್ವನಾಶವಾಯಿ ತೆಂದೇ ತಿಳಿಯಬೇಕು.

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ ॥೪೩॥**

ಹೀಗೆ ಬುದ್ಧಿಯ ಆಚೆಗಿರುವ ಆತ್ಮವನ್ನು ಬುದ್ಧಿಯಿಂದ ಗ್ರಹಿಸಿ. (ತನ್ನ) ಆತ್ಮದಿಂದಲೇ (ಪರಮ) ಆತ್ಮನಲ್ಲಿ ಸ್ಥಿತನಾಗಿ (೨-೬೧), ಈ ದುಃಸಾಧ್ಯವಾದ ಕಾಮರೂಪ ಶತ್ರುವನ್ನು ಅರ್ಜುನನು ಕೊಂದು ಹಾಕಬೇಕು.

ಬುದ್ಧಿಯ ಆಚೆಗಿರುವ ಆತ್ಮಸ್ವಭಾವವನ್ನೂ ಆತ್ಮ ಸ್ವಭಾವಕ್ಕಿರುವ ವಿಜ್ಞಾನದೃಷ್ಟಿಯನ್ನೂ ಕುರಿತು ಗೀತೆಯಲ್ಲಿ ಎಲ್ಲ ಕಡೆಯಲ್ಲಿಯೂ ಬೋಧಿಸಿದೆ (೭-೨ ವಿವರಣೆ) ಪುರುಷೋತ್ತಮನನ್ನು ಗುರುತಿಸುವದೇ ವಿಜ್ಞಾನದ ಮುಖ್ಯ ಲಕ್ಷಣವು.

ಆತ್ಮನೆಂಬ ಒಂದೇ ಶಬ್ದದಿಂದ ಪುರುಷೋತ್ತಮನನ್ನೂ ಜೀವಾತ್ಮನನ್ನೂ ನಿರ್ದೇಶಿಸುವ ಗೀತೆಯ ಪರಿಪಾಠವನ್ನು ಕುರಿತು ನಾವು ಮುಂದೆ (೫-೭) ವಿವೇಚಿಸಿರುವೆವು. ಪುರುಷೋತ್ತಮಪರ (ಮತ್ಪರಃ) ವಾಗದೆ— ಅವನಲ್ಲಿ (ಮತ್‌ಸ್ಥಿತಃ)ನಿಲ್ಲದೆ ಇಂದ್ರಿಯಗಳನ್ನು ಜಯಿಸಲಾಗದೆಂಬ ತತ್ವವು ಗೀತೆಯಲ್ಲಿ ವಿಶೇಷವಾಗಿ ಹೇಳಲ್ಪಟ್ಟಿದೆ.

ವಿಜ್ಞಾನವನ್ನು ಸಾಧಿಸಿ ಮನುಷ್ಯನು ತನ್ನ ಆತ್ಮ ಸ್ವಭಾವವನ್ನು ಪುರುಷೋತ್ತಮನಿಗೆ ಅರ್ಪಿಸುವ ಹದವನ್ನು ಇಲ್ಲಿ ಶ್ರೀಕೃಷ್ಣನು ದೂರಾನ್ವಯದಿಂದ ಸೂಚಿಸಿರುವನು.

**ಮೂರನೆಯ ಅಧ್ಯಾಯವು ಸಮಾಪ್ತವು.**

*

ಓಂ.

# ನಾಲ್ಕನೆಯ ಅಧ್ಯಾಯವು.

**ಅವತರಣಿಕೆ—**

ಬುದ್ಧಿಯೋಗಕ್ಕೆ ಸಂಬಂಧಿಸಿದ ಅನೇಕ ಸಂಗತಿಗಳನ್ನು ಅರ್ಜುನನಿಗೆ ಇನ್ನೂ ಹೇಳಬೇಕಾಗಿದೆ. ಎರಡನೆಯ ಅಧ್ಯಾಯದಿಂದ ಆರಂಭಿಸಿ ತನ್ನ ಬುದ್ಧಿಯೋಗ ಶಾಸ್ತ್ರವನ್ನು ಶ್ರೀಕೃಷ್ಣನು ಅರ್ಜುನನಿಗೆ ಸ್ಥೂಲವಾಗಿಯೂ ಸಂಕ್ಷೇಪವಾಗಿಯೂ ಬೋಧಿಸುವ ಪ್ರಯತ್ನವನ್ನು ಮಾಡುತ್ತಲಿರುವನು. ಎರಡನೆಯ ಅಧ್ಯಾಯದ ಕೊನೆಗೆ ಈ ಪ್ರಯತ್ನವು ಸಾಧಿಸಲಿಲ್ಲವೆಂಬದು ಮೂರನೆಯ ಅಧ್ಯಾಯದ ಆರಂಭದಲ್ಲಿ ಅರ್ಜುನನು ಕೇಳಿದ ಪ್ರಶ್ನೆಯಿಂದ ಶ್ರೀಕೃಷ್ಣನಿಗೆ ತಿಳಿಯಬಂದಿತು. ಆದರೂ ತಾನು ಮನಸಿನಲ್ಲೆಣಿಸಿದ ಹಾಗೆ ವಿಷಯದ ನಿರೂಪಣೆಯನ್ನು ಶ್ರೀಕೃಷ್ಣನು ಮುಂದೆ ಸಾಗಿಸುತ್ತಲೇ ಇರುವನು. ಮೂರನೆಯ ಅಧ್ಯಾಯದಲ್ಲಿ ಕರ್ಮಗಳನ್ನು ಏಕೆ ಮಾಡಬೇಕು, ಹೇಗೆ ಮಾಡಬೇಕು ಈ ಪ್ರಶ್ನೆಗಳ ವಿಷಯದಲ್ಲಿ ಅರ್ಜುನನ ದೃಷ್ಟಿಯು ಹೇಗಿರಬೇಕು ಎಂಬದನ್ನು ಕುರಿತು ಮುಖ್ಯವಾಗಿ ಹೇಳಿದೆ. ಇದೇ ವಿಷಯವಾಗಿ ಇನ್ನೂ ಹೇಳುವದು ಉಳಿದಿದೆ. ಆದರೂ ಮೂರನೆಯ ಅಧ್ಯಾಯದೊಳಗಿನ ವಿವರಣೆಯ ಪರಿಣಾಮವು ಅರ್ಜುನನ ಮನಸ್ಸಿನ ಮೇಲೆ ತಕ್ಕಮಟ್ಟಿಗೆ ಆಗಿರುವದು. ಶ್ರೀಕೃಷ್ಣನ ಮೇಲೆ ವಿರೋಧಾಭಾಸಯುಕ್ತವಾಗಿ ಮಾತನಾಡುವ ಆರೋಪವನ್ನು ಅರ್ಜುನನು ಮಾಡಿದ್ದನಷ್ಟೇ. ಅದು ಎಷ್ಟು ಅಪ್ರಾಸಂಗಿಕವಾಗಿಯೂ ಅಯೋಗ್ಯವಾಗಿಯೂ ಇತ್ತೆಂಬುದು ಈಗ ಅವನಿಗೆ ತಿಳಿಯಬಂದಿದೆ. ಶ್ರೀಕೃಷ್ಣನು ತನಗೇನಾದರೂ ಮಹತ್ವವಾದುದನ್ನೇ ಹೇಳಲೆಣಿಸಿರುವನು. ಎರಡರಲ್ಲಿ ಒಂದನ್ನು ಖಂಡಿತವಾಗಿ ಒಂದೇ ಮಾತಿನಲ್ಲಿ ಹೇಳಿಬಿಡಬೇಕೆಂದು ತಾನು ಕೇಳಿಕೊಂಡಂತೆ ಹೇಳುವದು ಶ್ರೀಕೃಷ್ಣನಿಗೆ ಶಕ್ಯವಾಗಿರಲಿಕ್ಕಿಲ್ಲವೆಂಬ ಮಾತು ಅವನಿಗೆ ಈಗ ಹೊಳೆಯಹತ್ತಿದೆ. ವಿವರಣೆಯು ಮುಂದುವರಿದಂತೆ

ಅದನ್ನು ಸಾವಧಾನದಿಂದ ಕೇಳಿ ತನಗೆ ಗ್ರಾಹ್ಯವಾದುದನ್ನು ಸ್ವೀಕರಿಸ ಲಿಕ್ಕೆ ಅರ್ಜುನನು ಈಗ ಸಿದ್ಧನಿರುವನು. ಮೂರನೆಯ ಅಧ್ಯಾಯದ ಕೊನೆ ಯಲ್ಲಿ ಅವನು ಕೇಳಿದ ಪ್ರಶ್ನೆಯು ಸಮಂಜಸವಾಗಿದ್ದು ನಾವು ಮೇಲೆ ವಿವರಿಸಿದ ಅವನ ಮನಃಸ್ಥಿತಿಯನ್ನು ತೋರಿಸುವದು.

ಶ್ರೀಕೃಷ್ಣನು ತಾನು ಎಣಿಸಿಕೊಂಡಂತೆ ತನ್ನ ವಿಷಯನಿರೂಪಣೆಯನ್ನು ಮುಂದೆ ಸಾಗಿಸುವನು. ತಾನು ಹೇಳುವದನ್ನು ಅರ್ಜುನನು ಚೆನ್ನಾಗಿ ಲಕ್ಷ್ಯವಿಟ್ಟು ಕೇಳುತ್ತಿರುವನೆಂಬುದನ್ನು ಅವನು ತಿಳಿದಿರುವನು. ಆದರೆ ವಿಷಯದ ಬಹಳ ಭಾಗವನ್ನು ತಾನು ಇನ್ನೂ ತಿಳಿಸಿಕೊಡಬೇಕಾಗಿದೆ; ಅದೆಲ್ಲ ಆಗುವವರೆಗೆ ಅರ್ಜುನನ ವಿಶ್ವಾಸವನ್ನು ಸಂಪೂರ್ಣವಾಗಿ ತಾನು ಪಡೆಯುವದು ಸಾಧ್ಯವಲ್ಲವೆಂಬದನ್ನಾದರೂ ಅವನು ಬಲ್ಲನು. ಕೇಳುವವ ನಿಗೆ ಹೇಳುವವನಲ್ಲಿ ವಿಶ್ವಾಸವಿಲ್ಲದಿದ್ದರೆ ಹೇಳುವವನು ನಿಜವನ್ನು ಹೇಳಿ ದರೂ ಕೇಳುವವನು ಸಂದೇಹಪಡುವನು. ಆದರೆ ಕೇಳುವವನ ವಿಶ್ವಾಸವು ದೃಢವಾಗುತ್ತ ಹೋದಂತೆ ಹೊಸವಿಚಾರಗಳನ್ನು ಹೇಳಿ ಸಮಾಧಾನ ಪಡಿಸುವದು ಸುಲಭವು. ಆದುಕಾರಣ ತನ್ನಲ್ಲಿದ್ದ ಅರ್ಜುನನ ವಿಶ್ವಾಸ ವನ್ನು ದೃಢಪಡಿಸಿ ಅದನ್ನು ಹೆಚ್ಚಿಸುವ ಉದ್ದೇಶದಿಂದ ಶ್ರೀಕೃಷ್ಣನು ನಿರೂ ಪಣೆಯನ್ನು ಮುಂದುವರಿಸುವನು.

ಶ್ರೀಕೃಷ್ಣನ ಉಪದೇಶದೊಳಗಿನ ಎರಡು ಸಂಗತಿಗಳು ಅರ್ಜುನನ ವಿಶ್ವಾಸವು ದೃಢವಾಗದಿರಲಿಕ್ಕೆ ಕಾರಣವಾಗಬಹುದು. ಅವನು ಹೇಳುವ ವಿಷಯವು ಮನುಷ್ಯನ ಅನುಭವಕ್ಕೆ ಅಪರಿಚಿತವಾದುದು; ಅವನ ಬುದ್ಧಿಗೆ ಹೊಸದು. ಎರಡನೆಯ ಸಂಗತಿಯೆಂದರೆ ಶ್ರೀಕೃಷ್ಣನು ತಾನೇ ಸೃಷ್ಟಿಗೆ ಉತ್ಪಾದಕನೆಂದೂ ಒಡೆಯನೆಂದೂ ರಕ್ಷಕನೆಂದೂ ಪ್ರೌಢಿಮೆಯಿಂದಲೂ ಆತ್ಮವಿಶ್ವಾಸದಿಂದಲೂ ಹೇಳಿಕೊಳ್ಳುವನು. ಶ್ರೀಕೃಷ್ಣಾರ್ಜುನರು ಚಿಕ್ಕಂದಿ ನಿಂದಲೂ ಸ್ನೇಹಿತರಾಗಿದ್ದರು. ಹೀಗಿದ್ದರೂ ಶ್ರೀಕೃಷ್ಣನಲ್ಲಿ ಏನಾದರೂ ವಿಶೇಷ ದೇವಾಂಶವಿರುವದೆಂಬ ಭಾವನೆಯು ಅರ್ಜುನನಲ್ಲಿ ಇದ್ದೇ ಇತ್ತು. ಆದರೆ ಹೀಗೆ ದೇವಾಂಶವನ್ನು ಕಲ್ಪಿಸುವದು ಬೇರೆ, ಮತ್ತು ತನ್ನ ಸಖನಾದ ಕೃಷ್ಣನೇ ಸೃಷ್ಟಿಯನ್ನೆಲ್ಲವನ್ನೂ ಉತ್ಪನ್ನ ಮಾಡಿದವನೆಂದೂ ಪುರುಷೋ ತ್ತಮನೆಂದೂ ಒಪ್ಪುವದು ಬೇರೆ. ಒಂದು ವೇಳೆ ಶ್ರೀಕೃಷ್ಣನಲ್ಲಿಯ

ಪ್ರೇಮಾತಿಶಯಕ್ಕಾಗಿ ಹೀಗೆ ಅವನು ಒಪ್ಪಿದರೂ ಈ ಬಗೆಯ ಅಂಧವಿಶ್ವಾಸವು ಎಷ್ಟು ಮಟ್ಟಿಗೆ ಸಾಕಾದೀತು? ಆದುದರಿಂದ ಅರ್ಜುನನ ಮನಸ್ಸು ಬುದ್ಧಿಗಳು ಶ್ರೀಕೃಷ್ಣನ ಅದ್ವಿತೀಯವಾದ ಅಧಿಕಾರವನ್ನು ಒಪ್ಪಿಕೊಳ್ಳುವಂತೆ ಮನಗಾಣಿಸುವದು ಅವಶ್ಯವಾಗಿದೆ

ಇಲ್ಲಿ ಕಂಡುಬರುವ ಇನ್ನೊಂದು ಸಂಗತಿಯೇನೆಂದರೆ ತಾನು ಮುಂದೆ ಬೋಧಿಸಬೇಕಾಗಿದ್ದ ವಿಷಯವನ್ನು ಕುರಿತು ಅರ್ಜುನನಿಂದ ಪ್ರಶ್ನೆಯನ್ನು ಹುಟ್ಟಿಸಿ ಅದಕ್ಕೆ ಉತ್ತರವಾಗಿ ಶ್ರೀಕೃಷ್ಣನು ಎಲ್ಲವನ್ನೂ ನಿರೂಪಿಸುವನು. ಅರ್ಜುನನಲ್ಲಿ ಜಿಜ್ಞಾಸೆಯನ್ನುಂಟುಮಾಡಿ ಅವನ ಲಕ್ಷ್ಯವನ್ನು ಚೆನ್ನಾಗಿ ಆಕರ್ಷಿಸಿ ತನ್ನ ಉಪದೇಶದ ಉದ್ದೇಶವನ್ನು ಸಫಲ ಮಾಡಿಕೊಳ್ಳಬೇಕೆಂಬುದೇ ಈ ಪದ್ಧತಿಯ ನಿರೂಪಣೆಗೆ ಕಾರಣವೆಂದು ತೋರುವದು. ಕರ್ಮಮಾಡುವ ಕೌಶಲವನ್ನು ಶ್ಲಾಘಿಸುವ ಶ್ರೀಕೃಷ್ಣನಂಥ ಉಪದೇಶಕನಿಗೆ ಈ ಬೋಧಿಸುವ ಚಾತುರ್ಯವು ಅನುರೂಪವಾಗಿಯೇ ಇದ್ದಿತು.

ಶ್ರೀಭಗವಾನುವಾಚ—

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಂ ।**
**ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥೧॥**

**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥೨॥**

ಈ ಅವ್ಯಯವಾದ ಬುದ್ಧಿಯೋಗಶಾಸ್ತ್ರವನ್ನು ನಾನು ಮೊದಲು ವಿವಸ್ವತನಿಗೆ ಹೇಳಿದೆನು. ವಿವಸ್ವತನು ಅದನ್ನು ಮನುವಿಗೆ ಉಪದೇಶಿಸಿದನು. ಅದನ್ನೇ ಮನುವು ಇಕ್ಷ್ವಾಕುವಿಗೆ ಬೋಧಿಸಿದನು. ಈ ಪರಂಪರೆಯಿಂದ ಈ ಶಾಸ್ತ್ರವು ರಾಜರ್ಷಿಗಳಿಗೆ ತಿಳಿಯಿತು.ಆದರೆ ಎಲೈ ಅರ್ಜುನನೇ, ಮಹಾಕಾಲಾವಧಿಯ ಅನಂತರದಲ್ಲಿ ಈ ಯೋಗಶಾಸ್ತ್ರವು ಮನುಷ್ಯಲೋಕದಲ್ಲಿ ನಷ್ಟವಾಯಿತು.

ಈ ಶ್ಲೋಕದಲ್ಲಿ "ಯೋಗೋ ನಷ್ಟಃ" ಎಂಬ ಶಬ್ದಗಳು ಬಹು ವಿಚಿತ್ರವಾಗಿ ತೋರುವವು- ಅರ್ಜುನನಂಥ ಮಹಾವೇದಾಂತಿಗಳು ಆಕಾಲ

ದಲ್ಲಿದ್ದರು. ಅವನ ಹಾಗೆಯೇ ಇನ್ನೂ ಎಷ್ಟೋ ಜನ ಭಗವದ್ಭಕ್ತಶಿರೋಮಣಿಗಳೂ ಜ್ಞಾನಿಗಳೂ ಇದ್ದರು ಕಲಿಯುಗದ ಆರಂಭವೇ ಇನ್ನೂ ಆಗಿರಲಿಲ್ಲ. ಭಾರತವರ್ಷೀಯ ಆರ್ಯಸಂಸ್ಕೃತಿಗೆ ಮೂಲಭೂತವಾಗಿರುವ ಮಹಾವೇದಾಂತವಾಙ್ಮಯವೂ ಪ್ರಚಲಿತವಾಗಿತ್ತು. ಹೀಗಿರುವಾಗ ದ್ವಾಪರಯುಗದಲ್ಲಿಯೇ ತನ್ನ ಯೋಗವು ನಷ್ಟವಾಯಿತೆಂದು ಹೇಳಬೇಕಾದರೆ ಇವೆಲ್ಲವುಗಳ ಗತಿಯೇನು ?

ಶ್ರೀಕೃಷ್ಣನ ಉದ್ದೇಶವೇನೆಂದರೆ ತಾನು ಗೀತೆಯಲ್ಲಿ ನಿರೂಪಿಸಿದ ಬುದ್ಧಿಯೋಗವು ಒಂದು ಸ್ವತಂತ್ರವಾದ ಸಂಪೂರ್ಣವಾದ ಮತ್ತು ಪರ್ಯಾಪ್ತವಾದ ಶಾಸ್ತ್ರವಾಗಿದ್ದು ಅದರ ವಿಷಯದ ಸಾದ್ಯಂತಜ್ಞಾನವು-ಅವನು ಅದನ್ನು ವಿವಸ್ವತನಿಗೆ ಪ್ರಕಟಮಾಡಿದಂತೆ-ಅದು ಲೋಕದಲ್ಲಿ ಎಲ್ಲಿಯೂ ಯಾರ ಸ್ವಾಧೀನದಲ್ಲಿಯೂ ಉಳಿದಿರಲಿಲ್ಲ. ಇಷ್ಟೇ ಅಲ್ಲ. ಅಂಥ ಒಂದು ಯೋಗ ಶಾಸ್ತ್ರವು ಒಂದು ಕಾಲದಲ್ಲಿ ಪ್ರಚುರವಾಗಿತ್ತೆಂಬ ಸ್ಮೃತಿಯೂ ನಷ್ಟವಾಗಿ ಹೋಗಿತ್ತು. ಇದರ ಸಹಜ ಪರಿಣಾಮವೇನಾಯಿತೆಂದರೆ, ಆ ಕಾಲದ ವೇದಾಂತದಲ್ಲಿ ಬುದ್ಧಿಯೋಗಶಾಸ್ತ್ರದ ದೃಷ್ಟಿಯಿಂದ ಅಪ್ರಶಸ್ತವೂ ಅನಪೇಕ್ಷಿತವೂ ಅಸಂಬದ್ಧವೂ ವಿಪರೀತವೂ ಆದ ಎಷ್ಟೋ ಪ್ರಮೇಯಗಳು ಶ್ರೀಕೃಷ್ಣನಿಗೆ ಕಂಡುಬಂದವು. ತನ್ನ ಸಂಪೂರ್ಣಜ್ಞಾನ ಶಿಖರದಿಂದ ನಿರೀಕ್ಷಿಸಿ ಆಕಾಲದ ವೇದಾಂತವು ಹೇಗೆ ಮತ್ತು ಎಷ್ಟು ಹಾದಿ ತಪ್ಪಿ ಹೋಗಿತ್ತೆಂಬದನ್ನು ಅವನು ತಿಳಿದಿದ್ದನು. ಆ ವೇದಾಂತದ ತಪ್ಪುಗಳನ್ನು ತೋರಿಸಿಕೊಟ್ಟು ಅದನ್ನು ಸುಧಾರಿಸುವ ಗೊಡವೆಗೆ ಹೋಗದೆ ಅರ್ಜುನನನ್ನು ನಿಮಿತ್ತಮಾಡಿ ಬುದ್ಧಿಯೋಗಶಾಸ್ತ್ರದ ಪುನರುಜ್ಜೀವನವನ್ನು ಮಾಡಲು ಶ್ರೀಕೃಷ್ಣನು ನಿರ್ಧರಿಸಿದ್ದನು. ಇದನ್ನು ನೋಡಿದರೆ ಆ ವೇದಾಂತವು ಸುಧಾರಿಸುವಂತೆ ಇರಲಿಲ್ಲವೆಂದೇ ತೋರುವದು (೨-೫೨). ಆಕಾಲದ ವೇದಾಂತದೊಳಗಿನ ದೋಷಗ್ರಸ್ತ ಪರಿಭಾಷೆಯನ್ನು ಉಪಯೋಗಿಸಿ ಬುದ್ಧಿಯೋಗಶಾಸ್ತ್ರವನ್ನು ನಿರೂಪಿಸುವಾಗ ಶ್ರೀಕೃಷ್ಣನಿಗುಂಟಾದ ತೊಂದರೆಗಳನ್ನೂ ಆತನು ಆ ತೊಂದರೆಗಳನ್ನು ಕುಶಲತೆಯಿಂದಲೂ ಸೌಲಭ್ಯದಿಂದಲೂ ಬದಿಗೊತ್ತಿ ತನ್ನ ಕಾರ್ಯವನ್ನು ಸಾಧಿಸಿದ ಪರಿಯನ್ನೂ ನಾವು ಯಥಾಶಕ್ತಿ ವಿವರಿಸಿರುವೆವು.

ಮೇಲೆ ಹೇಳಿದ ಸಂಗತಿಗಳ ತಾತ್ಪರ್ಯವೇನೆಂದರೆ, ಗೀತೆಯು ಆ ಕಾಲದ ವೇದಾಂತಕ್ಕೆ ವಿರೋಧ (Protestant) ಭಾವವನ್ನೇ ತಳೆದಿರುವದು ಮತ್ತು ಆದರ ಕಟಾಕ್ಷವು ಆ ಕಾಲದ ವೇದಾಂತ ಮತಗಳ ಮೇಲೆ ಇರುವದು. ಆದರ ಈ ವಿರೋಧಭಾವವು ವಾತ್ಸಲ್ಯಪ್ರೇರಿತವಾಗಿದ್ದರೂ ಗೀತೆಯೊಳಗಿನ ವಿಚಾರಗಳನ್ನೆಲ್ಲ ತತ್ಪೂರ್ವದ ವಾಙ್ಮಯದ ದೃಷ್ಟಿಯಿಂದಲೇ ನೋಡಿದರೆ ಅವುಗಳ ನಿಜವಾದ ಇಂಗಿತವು ನಮಗೆ ತಿಳಿಯಲಾರದು. ಗೀತಾಶಾಸ್ತ್ರವನ್ನು ಸ್ವತಂತ್ರವೆಂದೇ ಬಗೆದು ಆದರ ಅಧ್ಯಯನವನ್ನು ಮಾಡಬೇಕು.

ಈ ವಿಷಯದಲ್ಲಿ ನಾವು ಹಿಡಿದ ಆಗ್ರಹವನ್ನು ಇನ್ನೂ ಸ್ವಲ್ಪ ವಿಚಾರಿಸುವ. ವೇದಗಳಿಗೂ ಗೀತೆಗೂ ಹೊಂದುವದಿಲ್ಲೆಂಬದು ಗೀತೆಯಲ್ಲಿಯೇ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಉಪನಿಷದಾದಿ ಗ್ರಂಥಗಳು ಗಹನವಾಗಿಯೂ ಘನವಾಗಿಯೂ ಇರುವದು ನಿಜ. ಆದರೆ ಅವುಗಳಲ್ಲಿ ಪರಸ್ಪರ ವಿರೋಧವೂ ಅಸಂಬದ್ಧತೆಯೂ ತುಂಬಿವೆ. ಈ ದೋಷವನ್ನು ತೆಗೆದುಹಾಕುವದಕ್ಕಾಗಿ ಬಾದರಾಯಣಾಚಾರ್ಯರು ಮಾಡಿದ ಪ್ರಯತ್ನವಾದರೂ ನಿಷ್ಫಲವಾದಂತೆಯೇ ಇದೆ. ಅದನ್ನೇ ಆಧಾರವಾಗಿಟ್ಟುಕೊಂಡು ಈ ವರೆಗೆ ಹುಟ್ಟಿದ ಅನೇಕ ಮತಮತಾಂತರಗಳೇ ಈ ಮಾತಿಗೆ ಸಾಕ್ಷಿಯಾಗಿವೆ. ಮುಂದೆ ಅದ್ವೈತ ಮತವು ಹುಟ್ಟಿ ಸ್ಥಿರವಾಗಿ ನಿಲ್ಲುವವರೆಗೆ ವೇದಾಂತದಿಂದ ಮನುಷ್ಯನಿಗೆ ಶಾಂತಿಯೂ ತೃಪ್ತಿಯೂ ಆದ ಚಿಹ್ನಗಳು ಕಾಣಿಸುವದಿಲ್ಲ. ಅದ್ವೈತಮತವು ದೃಢಮೂಲವಾದ ಬಳಿಕ ಸ್ವಲ್ಪಮಟ್ಟಿಗೆ ಈ ತೃಪ್ತಿಯುಂಟಾದಂತೆ ತೋರುವದೇನೋ ನಿಜ. ಆದರೆ ಅದ್ವೈತವು ಹುಟ್ಟುವದಕ್ಕೆ ಮೊದಲೇ ಶ್ರೀಕೃಷ್ಣನು ಗೀತೋಪದೇಶವನ್ನು ಮಾಡಿ ಮುಗಿಸಿದ್ದನೆಂಬದನ್ನು ಮರೆಯಬಾರದು. ಗೀತೆಯನ್ನು ಅರ್ಜುನನಿಗೆ ಬೋಧಿಸುವಾಗ ಆ ಪೂರ್ವದ ವೇದಾಂತಶಾಸ್ತ್ರವೆಂಬ ದೀಪಗೃಹವನ್ನೇ ಶ್ರೀಕೃಷ್ಣನು ಅನುಲಕ್ಷಿಸಿದ್ದನೆಂಬದೂ ಹಾಗೆ ಮಾಡದೆ ಇದ್ದರೆ ವೇದಾಂತವೆಂಬ ವಿಶಾಲಮಹಾಸಾಗರದಲ್ಲಿ ಅವನು ಅಲೆದಾಡುತ್ತಲೇ ಇರಬೇಕಾಗುತ್ತಿತ್ತೆಂಬದೂ ನಮಗೆ ಅಸಂಭವನೀಯವಾಗಿ ತೋರುವದು. ಇದಕ್ಕೆ ಬದಲಾಗಿ ಗೀತೆಯನ್ನುಪದೇಶಿಸುವಾಗ ಶ್ರೀಕೃಷ್ಣನ ಲಕ್ಷ್ಯವು ತತ್ಪೂರ್ವದ ವೇದಾಂತವನ್ನು ಕಣ್ಣುಮರೆಮಾಡಿ ತನ್ನ ನೂತನ ಬುದ್ಧಿ

ಯೋಗಶಾಸ್ತ್ರವನ್ನು ನಿರೂಪಿಸುವದರಲ್ಲೇ ಮುಳುಗಿಹೋಗಿತ್ತು. ಪೂರ್ವ ವೇದಾಂತದ ಉಲ್ಲೇಖಗಳು ಕಂಡುಬರುವ ಕೆಲವೆಡೆಗಳಲ್ಲಿ ಅದಕ್ಕೂ ಬುದ್ಧಿ ಯೋಗಶಾಸ್ತ್ರಕ್ಕೂ ಇರುವ ಅನುಕೂಲತೆಯನ್ನಾಗಲಿ ಪ್ರತಿಕೂಲತೆಯ ನ್ನಾಗಲಿ ತೋರಿಸುವದಕ್ಕಾಗಿಯೇ ಅವು ಬಂದಿರುವವೆಂಬದನ್ನು ಗಮನಿಸಿ ದರೆ ಗೀತೆಯ ಬುದ್ಧಿಯೋಗಶಾಸ್ತ್ರವು ಸ್ವತಂತ್ರವಾದದ್ದೆಂಬ ನಮ್ಮ ಪ್ರತಿ ಪಾದನೆಯು ಯೋಗ್ಯವೆನಿಸದಿರದು.

ಈ ನಮ್ಮ ಪ್ರತಿಪಾದನೆಗೆ ಬರಬಹುದಾದ ಆಕ್ಷೇಪಗಳನ್ನು ಇನ್ನು ವಿಚಾರಿಸುವ. ವಾಕ್ಯಗಳಾಗಲಿ ಸಂಪೂರ್ಣ ಶ್ಲೋಕಗಳಾಗಲಿ ಪೂರ್ವ ಕಾಲದ ವೇದಾಂತ ಗ್ರಂಥಗಳೊಳಗಿಂದ ಗೀತೆಯಲ್ಲಿ ಉದ್ಧೃತವಾಗಿರುವದು ನಿಜ. ಇನ್ನೆಲ್ಲಿಯಾದರೂ ಬಂದಿದ್ದ ಉತ್ತಮವೂ ಸುಂದರವೂ ಆದ ಅಪರೂಪ ಪ್ರಯೋಗಗಳು ತನ್ನ ಪ್ರಸ್ತುತದ ಅಭಿಪ್ರಾಯಕ್ಕೆ ಅನುಕೂಲವಾಗು ವಂತಿದ್ದರೆ ಅವುಗಳನ್ನು ತೆಗೆದುಕೊಳ್ಳಬಾರದೆಂಬ ನಿರ್ಬಂಧವು ಗೀತೆಗೆ ಏಕಿರ ಬೇಕು? ಆ ಶಬ್ದಗಳನ್ನಾಗಲಿ ವಾಕ್ಯಗಳನ್ನಾಗಲಿ ಹಾಗೆ ಬಳಸಿಕೊಂಡ ಮಾತ್ರಕ್ಕೆ ಆ ಶಬ್ದಗಳ ಅಪ್ರಸ್ತುತವಾದ ಅಥವಾ ಅಪ್ರಯೋಜಕವಾದ ಬೇರೆಡೆಯ ಅರ್ಥವನ್ನೂ ಸ್ವೀಕರಿಸಲೇಬೇಕೆಂಬ ಆಗ್ರಹವೇಕೆ? ಈ ತರದ ಆಗ್ರಹದಿಂದಲೇ ಇತರ ಎಷ್ಟೋ ಶಾಸ್ತ್ರಗಳು ತಮ್ಮಲ್ಲಿಯ ಶಬ್ದಗಳು ಗೀತೆ ಯಲ್ಲಿ ಬಂದಿರುವದಕ್ಕಾಗಿ ಆ ಗ್ರಂಥದಲ್ಲಿ ಹೊಕ್ಕು ಹಾವಳಿ ಮಾಡುತ್ತ ಲಿರುವವು. ಇದು ಅನ್ಯಾಯವೆಂದು ನಮಗೆ ತೋರುವದು. ಇನ್ನೊಂದು ವಿಷಯವೇನೆಂದರೆ, ಗೀತೆಯಲ್ಲಿ ಬಹಳ ಸಾರೆ ಇತರ ಶಾಸ್ತ್ರಗಳೊಳಗಿನ ಶಬ್ದಗಳನ್ನು ಶ್ರೀಕೃಷ್ಣನು ತೆಗೆದುಕೊಂಡಿರುವದು, ಅವುಗಳ ಅರ್ಥದ ಅಪೂರ್ಣತೆಯನ್ನು ತೋರಿಸಿ ತನ್ನ ಮತದಂತೆ ಅವುಗಳ ಪೂರ್ಣ ಅರ್ಥ ವೇನಾಗುವದೆಂಬದನ್ನು ತೋರಿಸುವದಕ್ಕಾಗಿಯೇ. ಹೀಗಿರುವಾಗ, ಆ ಶಬ್ದಗಳು ಗೀತೆಯಲ್ಲಿ ಬಂದಿರುವವೆಂದು ಅನ್ಯಶಾಸ್ತ್ರಗಳ ಮತಗಳನ್ನೂ ಗೀತೆಯ ಮೇಲೆ ಹೊರಿಸುವದು ಸಮಂಜಸವಲ್ಲ.

ಪೂರ್ವದ ವೇದಾಂತಪಂಥಗಳೊಳಗೆ ಭಾಗವತಧರ್ಮವೊಂದೇ ಗೀತೆ ಯನ್ನು ಕೆಲವು ಮಟ್ಟಿಗೆ ಹೋಲುವದೆಂದು ಒಪ್ಪಬಹುದು. ಭಾಗವತ ಧರ್ಮದ ಪರಂಪರೆಯೂ ಬುದ್ಧಿಯೋಗದ ಪರಂಪರೆಯೂ ಬಹುಮಟ್ಟಿಗೆ

ಒಂದೇ ಆಗಿರುವವು. ಇದಲ್ಲದೆ ಭಾಗವತಧರ್ಮದೊಳಗಿನ ಅನೇಕ ಸಂಗತಿಗಳು ಗೀತೆಯ ಉಪದೇಶದಲ್ಲಿಯೂ ಪ್ರಧಾನವಾಗಿ ಕಂಡುಬರುವವು. ಈ ಹೋಲಿಕೆಗಾಗಿ ಭಗವದ್ಗೀತೆಯು ಭಾಗವತಧರ್ಮದ ಗ್ರಂಥವೆಂದು ಊಹಿಸುವದು ಸಯುಕ್ತಿಕವಾಗಲಾರದು. ಹಾಗೆ ಅದು ಭಾಗವತ ಧರ್ಮದ ಗ್ರಂಥವೆಂದು ಹೇಳುವದಕ್ಕೆ ಪ್ರತ್ಯಕ್ಷವಾದ ಆಧಾರವಿಲ್ಲ. ಗೀತೆಯು ಉಪದೇಶಿಸಲ್ಪಟ್ಟಾಗ ಭಾಗವತಧರ್ಮವು ಪ್ರಬಲವಾಗಿಯೇ ಇತ್ತು. ಪರಮಾತ್ಮನೇ ಶ್ರೀಕೃಷ್ಣಸ್ವರೂಪನಾಗಿ ಅವತಾರ ಮಾಡಿದ್ದನೆಂಬ ಕಲ್ಪನೆಗೆ ಆ ಕಾಲದಲ್ಲಿ ಈ ಭಾಗವತಧರ್ಮದ ಬೆಂಬಲವೇ ಮುಖ್ಯವಾಗಿತ್ತು. ಹೀಗಿದ್ದರೂ ತಾನು ಬೋಧಿಸಿದ ಬುದ್ಧಿಯೋಗಶಾಸ್ತ್ರವು ಅಸ್ತಿತ್ವದಲ್ಲಿಲ್ಲವೆಂದೇ ಶ್ರೀಕೃಷ್ಣನು ಹೇಳುತ್ತಿರುವದನ್ನು ನೋಡಿದರೆ ಭಾಗವತಧರ್ಮವೇ ಗೀತೆಯ ಮುಖ್ಯ ವಿಷಯವೆಂದು ಹೇಳಲಾಗುವದಿಲ್ಲ.

ಭಾಗವತಧರ್ಮದ ತತ್ವಗಳು ಬಹುಶಃ ಬುದ್ಧಿಯೋಗಶಾಸ್ತ್ರದ ಪ್ರಥಮಾವತಾರದ ಅವಶೇಷವಾಗಿದ್ದಿರಬೇಕು. ಅದಕ್ಕೂ ಬುದ್ಧಿಯೋಗಶಾಸ್ತ್ರಕ್ಕೂ ಇರುವ ಅನೇಕ ಸಾಮ್ಯಗಳಿಗೆ ಇನ್ನಾವ ಕಾರಣವನ್ನೂ ಹೇಳಲಿಕ್ಕೆ ಬರುವಂತಿಲ್ಲ. ಆದರೆ ವಿಸ್ಖಲಿತವಾದ ಅವಶೇಷದಂತಿರುವ ಭಾಗವತಧರ್ಮವನ್ನು ಬುದ್ಧಿಯೋಗಶಾಸ್ತ್ರವೆಂದು ಒಪ್ಪಿಕೊಳ್ಳುವದು ಎಂದಿಗೂ ಯೋಗ್ಯವಾಗಲಾರದು. ಶ್ರೀಕೃಷ್ಣನು ಇದನ್ನು ಒಪ್ಪಿಕೊಂಡಿಲ್ಲ. ಆದುದರಿಂದ ಗೀತೆಯ ಅರ್ಥವನ್ನು ಶೋಧಿಸುವಾಗ ತತ್ಪೂರ್ವದ ವೇದಾಂತವನ್ನು ಎಷ್ಟುಮಟ್ಟಿಗೆ ಅವಲಂಬಿಸಬಹುದೆಂಬ ವಿಷಯದಲ್ಲಿ ಜಾಗರೂಕತೆಯು ಬೇಕೆಂದು ನಮಗೆ ತೋರುವದು.

**ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಂ ॥ ೩ ॥**

ಆ ಪುರಾತನ ಬುದ್ಧಿಯೋಗವನ್ನೇ ಶ್ರೀಕೃಷ್ಣನು ಈಗ ಅರ್ಜುನನಿಗೆ ಹೇಳುತ್ತಿರುವನು. ಅರ್ಜುನನಿಗುಂಟಾದ ವಿಷಾದವು ಈ ಉಪದೇಶಕ್ಕೆ ನಿಜವಾದ ಕಾರಣವಲ್ಲ; ಅದು ನಿಮಿತ್ತಮಾತ್ರವು. ಅರ್ಜುನನು ಶ್ರೀಕೃಷ್ಣನ ಪರಮಭಕ್ತನೂ ಸಖನೂ ಆಗಿರುವನು. ಅವನಿಗೂ ಅವನ ಮುಖಾಂತರ

ವಾಗಿ ತನಗೆ ಅವನಷ್ಟೇ ಪ್ರಿಯವಾದ ಮನುಷ್ಯಕೋಟಿಗೂ ಬುದ್ಧಿಯೋಗ ಶಾಸ್ತ್ರವನ್ನು ವರವಾಗಿ ಕೊಡುವ ಸಂಕಲ್ಪವನ್ನು ಶ್ರೀಕೃಷ್ಣನು ಮಾಡಿರು ವನು. ಗೀತೆಯ ಉಪದೇಶಕ್ಕೆ ಇದೇ ನಿಜವಾದ ಕಾರಣವು.

ಅರ್ಜುನ ಉವಾಚ—

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥ ೪ ॥**

ವಿವಸ್ವತನು ಮೊದಲೇ ಆಗಿಹೋದನು. ಆ ಬಳಿಕ ಶ್ರೀಕೃಷ್ಣನ ಜನ್ಮವಾಯಿತು. ಹೀಗಿರುವಾಗ ಶ್ರೀಕೃಷ್ಣನು ವಿವಸ್ವತನಿಗೆ ಅವನ ಜೀವಮಾನದಲ್ಲಿಯೇ ಬುದ್ಧಿಯೋಗವನ್ನು ಉಪದೇಶಿಸಿದ್ದು ಸಂಭವನೀಯ ವೆಂದು ಅರ್ಜುನನು ಒಪ್ಪಬಹುದೇ ?

ಶ್ರೀಭಗವಾನುವಾಚ—

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥ ೫ ॥**

ಶ್ರೀಕೃಷ್ಣನ ಜನ್ಮದ ಬಗ್ಗೆ ಅರ್ಜುನನು ತಿಳಿಯಬಹುದಾದ ಸಂಗತಿ ಗಳೆಲ್ಲವೂ ಅವನಿಗೆ ತಿಳಿದಿರುವದಿಲ್ಲ. ಶ್ರೀಕೃಷ್ಣನಿಗೆ ಅನೇಕ ಜನ್ಮಗಳು ಆಗಿ ಹೋಗಿರುವವು. ಅರ್ಜುನನಿಗಾದರೂ ಎಷ್ಟೋ ಜನ್ಮಗಳಾಗಿವೆ. ತಮ್ಮೀ ರ್ವರ ಪೂರ್ವಜನ್ಮಗಳ ವಿಷಯದಲ್ಲಿ ಅರ್ಜುನನಿಗೆ ಯಾವ ಅರಿವೂ ಇಲ್ಲ. ಆದರೆ ಶ್ರೀಕೃಷ್ಣನು ಮಾತ್ರ ಅವೆಲ್ಲವುಗಳನ್ನು ಸಂಪೂರ್ಣವಾಗಿ ಬಲ್ಲನು.

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥ ೬ ॥**

ಶ್ರೀಕೃಷ್ಣಾರ್ಜುನರ ಪೂರ್ವಜನ್ಮಗಳ ಮಹತ್ವವು ಆ ಜನ್ಮಗಳ ವೃತ್ತಾಂತದಲ್ಲಿಲ್ಲ. ಅವುಗಳ ಬಗ್ಗೆ ಶ್ರೀಕೃಷ್ಣನಿಗಿರುವ ಜ್ಞಾನವು ಅರ್ಜುನ ನಿಗಿಲ್ಲ. ಇದು ಶ್ರೀಕೃಷ್ಣನ ಹೆಚ್ಚಿನ ಸ್ಮರಣಶಕ್ತಿಯ ಪರಿಣಾಮವಲ್ಲ ಶ್ರೀಕೃಷ್ಣಾರ್ಜುನರ ಪರಸ್ಪರ ಯೋಗ್ಯತೆಯಲ್ಲಿ ಮಹತ್ವದ ತಾರತಮ್ಯ ವುಂಟು.

ಶ್ರೀಕೃಷ್ಣನಿಗೆ ಸರ್ವಜ್ಞತ್ವವು ಸಹಜವಾಗಿದೆ. ಅರ್ಜುನನಿಗೆ ಈ ಯೋಗ್ಯತೆಯು ಸಲ್ಲದು. ಆದುದರಿಂದಲೇ ಅವನ ಜನ್ಮಗಳ ಅರಿವು ಅವನಿಗೆ ಶಕ್ಯವಲ್ಲ. ಯೋಗ್ಯತೆಯಲ್ಲಿರುವ ತಾರತಮ್ಯವಲ್ಲದೆ ಅವರಿಬ್ಬರ ಜನ್ಮಗಳ ವಿಷಯದಲ್ಲಿ ಇನ್ನೊಂದು ಮಹತ್ವದ ವ್ಯತ್ಯಾಸವುಂಟು. ಅದೇನೆಂದರೆ, **ಶ್ರೀಕೃಷ್ಣನು ಎಷ್ಟು ಜನ್ಮವನ್ನು ತಾಳಿದರೂ ಅವನು ಅಜನು—ಜನ್ಮ ರಹಿತನು.** ಅರ್ಜುನನ ವಿಷಯದಲ್ಲಿ ಹೀಗೆ ಹೇಳಲಾಗದು. ಯಾಕೆಂದರೆ ಶ್ರೀಕೃಷ್ಣನು ಅವ್ಯಯಾತ್ಮನು-ಎಲ್ಲ ಭೂತಗಳಿಗೆ ಈಶ್ವರನು; ಎಲ್ಲ ಪಾವಿತ್ರ್ಯಕ್ಕೂ ಜ್ಞಾನಕ್ಕೂ ಸುಖಕ್ಕೂ ಅವನು ನಿರಂತರವೂ ಸ್ವಾಮಿಯಾಗಿರುವನು. ಇವುಗಳಿಗೆ ಪ್ರತಿಯಾದ ಪಾಪವೂ ಅಜ್ಞಾನವೂ ದುಃಖವೂ ಅವನನ್ನು ಸಮೀಪಿಸಲಾರವು. **ಅವನ ಪೂರ್ವಜನ್ಮಗಳ ಕುರುಹಾಗಲಿ ಕುಂದುಕಲೆಗಳಾಗಲಿ ಅವನಲ್ಲಿ ನಿಂತಿರುವದಿಲ್ಲ. ಇದಕ್ಕಾಗಿ ಎಷ್ಟು ಜನ್ಮಗಳನ್ನು ತಾಳಿದರೂ ಅವನು ಜನ್ಮರಹಿತನೆನಿಸುವನು.** ಅವನ ಆತ್ಮಕ್ಕೆ ವ್ಯಯವಿಲ್ಲವೆಂಬ ಮಾತ್ರದಿಂದ ಅವನು ಅವ್ಯಯನೆಂದು ತಿಳಿಯಬಾರದು. ಅರ್ಜುನನ ಆತ್ಮಕ್ಕಾದರೂ ವ್ಯಯವೆಲ್ಲಿತ್ತು? ಶ್ರೀಕೃಷ್ಣನ ಯೋಗ್ಯತೆಯು ಸೃಷ್ಟಿಯಲ್ಲಿ ನಿರುಪಮವಾಗಿರುವದು. ಗೀತೆಯ ಮತದಂತೆ ಸೃಷ್ಟಿಯಲ್ಲಿ (ಸಂ)ಭೂತನಾಗಿರದ ವ್ಯಕ್ತಿಯು ಅವನೊಬ್ಬನೇ ಉಳಿದ ವ್ಯಕ್ತಿಗಳೆಲ್ಲ (Individualities) ಸಂಭೂತ ಅಥವಾ ಭೂತವಸ್ತುಗಳು. ಸೃಷ್ಟಿಯಲ್ಲಿರುವ ಎಲ್ಲ ಭೂತವಸ್ತುಗಳಿಗೂ ಇವನು ಈಶ್ವರನು, ಎಂದರೆ ಪ್ರಭುವು. ಈ ಭೂತವಸ್ತುಗಳಿಗೆಲ್ಲ ಒಡೆಯನಾದ ಅವ್ಯಯಾತ್ಮನಿಗೆ ತನ್ನ ಪ್ರಜೆಗಳಲ್ಲಿ ಅವರ ಸ್ವರೂಪವನ್ನು ತಾಳಿ ವರ್ತಿಸಬೇಕೆಂಬ ಲವಲವಿಕೆಯು (ಮಾಯೆಯು) ಆಗಾಗ ಉಂಟಾಗುವದು; ಮತ್ತು ಅವರಲ್ಲಿ ಅವನು ಹಾಗೆ ಪ್ರಕಟವಾಗುವನು. ಹೀಗೆ ಅವತರಿಸುವದರಲ್ಲಿ ವಿಶೇಷವೇನೆಂದರೆ, ಈ ಸೃಷ್ಟಿಯೊಳಗಿನ ಎಲ್ಲ ವಸ್ತುಗಳೂ ಇವನ ಪ್ರಕೃತಿಗೆ ಅಧೀನವಾಗಿ ನಿರ್ಮಾಣವಾಗುವವು. (೯-೮; ೮-೧೮-೧೯) **ಆದರೆ ಈತನು ಅವತರಿಸುವಾಗ ಮಾತ್ರ ಇದೇ ಅವನ ಪ್ರಕೃತಿಶಕ್ತಿಯು ಅವನಿಗೆ ದಾಸಿಯಾಗಿರುವಳು.** ಅವ್ಯಕ್ತ ಸ್ಥಿತಿಯಲ್ಲಿ ಎಷ್ಟು ಅಪರಿಮಿತವಾಗಿಯೂ ನಿರಂಕುಶವಾಗಿಯೂ ಆತನು ತನ್ನ ಪ್ರಕೃತಿಯ ಮೇಲೆ ಅಧಿಕಾರ ನಡೆಸು

ವನೋ ಶರೀರಸ್ಥವ್ಯಕ್ತಸ್ಥಿತಿಯುಲ್ಲಾದರೂ ಅಷ್ಟೇ ಸಿಃಸ್ಸೀಮಾಧಿಕಾರವನ್ನು ನಡೆಸುವನು (೧೮–೬೧; ೯-೧೧).

**ಇದಕ್ಕಾಗಿಯೇ ಇವನ ಜನ್ಮಕ್ಕೆ ಜನ್ಮವೆಂದು ಹೆಸರಿಡದೆ ಅವತಾರವೆಂದು ಹೇಳುವರು.** ಈತನು ಅವತರಿಸಲಿಕ್ಕೆ ಮತ್ತಾವ ನಿಮಿತ್ತವಾಗಲಿ ಕಾರಣವಾಗಲಿ ಬೇಕಾಗುವದಿಲ್ಲ. ಅವನ ಆತ್ಮಮಾಯೆಯೇ ಅಂದರೆ ನಿರ್ವ್ಯಾಜವೂ ಅನಿರುದ್ಧವೂ ಆದ ಅವನ ಇಚ್ಛೆಯೇ-ಮಾಯೆಯೇ-ಇದಕ್ಕೆ ಕಾರಣವಾಗುವದು. ಅವನು ಜನ್ಮವೆತ್ತಿಯೇ ಸಾಧಿಸಬೇಕೆಂಬ ಕಾರ್ಯವು ಇರುವ ಸಂಭವವಿಲ್ಲ. ಅವನು ಅವತಾರ ತಾಳುವದರಿಂದ ಮಹತ್ಕಾರ್ಯವು ನೆರವೇರಬಹುದು. ಸೃಷ್ಟಿ ಜೀವನದ ದೃಷ್ಟಿಯಿಂದ ಆ ಕಾರ್ಯವು ಅತ್ಯಂತ ಮಹತ್ವದ್ದಾಗಿರಬಹುದು; ಆದರೆ ಅಂಥ ಕಾರ್ಯವನ್ನಾದರೂ ಜನ್ಮವೆತ್ತದೆ ಸಾಧಿಸುವದು ಅವನಿಗೆ ಅಶಕ್ಯವಲ್ಲ; ಆದುದರಿಂದ ತಾನು ಸೃಜಿಸಿದ ಪ್ರಜೆಗಳಲ್ಲಿ ತನ್ನ ತೃಪ್ತಿಗಾಗಿ ಅವನು ಬಾರಿಬಾರಿಗೂ ಅವತಾರ ತಾಳುವನು. ಇದಕ್ಕೆ ಅವನ ಲೀಲೆಯೇ ಕಾರಣವು; ಕಾರ್ಯಪರವಶತೆಯಲ್ಲ.

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥ ೭ ॥**

ಸೃಷ್ಟಿಯಲ್ಲಿ ಉತ್ಪನ್ನವಾದ ಭೂತಗಳಿಗೆಲ್ಲ ಆತ್ಮ ವಿಷಯಕ ಹಾಗು ಇಂದ್ರಿಯವಿಷಯಕವೆಂಬ ಪರಸ್ಪರ ವಿರುದ್ಧವಾದ ಎರಡು ಸ್ವಭಾವಗಳುಂಟು. ಬುದ್ಧಿಪುರಃಸರವಾಗಿ ಇಂದ್ರಿಯ ಸ್ವಭಾವವನ್ನು ಅದರ ಯೋಗ್ಯ ಮರ್ಯಾದೆಯಲ್ಲಿಡುವದೂ ಆತ್ಮವಿಷಯಕ ಸ್ವಭಾವವನ್ನೇ ಪರಾಮರಿಸುವದೂ **ಮನುಷ್ಯನಿಗೆ ನಿಯತ ಧರ್ಮವಾಗಿದೆ.** ಇದಕ್ಕೆ ವಿಪರೀತವಾಗಿ ಆತ್ಮಸ್ವಭಾವವನ್ನು ಕಳೆದುಕೊಂಡು **ಇಂದ್ರಿಯ ವ್ಯವಹಾರದಲ್ಲಿಯೇ ಮುಳುಗಿ ಹೋಗುವದು ಅಧರ್ಮವು.** ಅಧರ್ಮವು ಮಿತಿಮೀರಿ, ಧರ್ಮಗ್ಲಾನಿಯುಂಟಾದಾಗ ಧರ್ಮವನ್ನು ಪುನಃ ಸಂಸ್ಥಾಪಿಸುವದಕ್ಕಾಗಿ **ಪುರುಷೋತ್ತಮ ಶ್ರೀಕೃಷ್ಣನು** ಜನ್ಮವೆತ್ತುವನು.

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥೮॥**

ಈ ಅವತಾರ ಕಾರ್ಯದ ರಹಸ್ಯವು ಧರ್ಮವನ್ನು ಉದ್ಧರಿಸಬೇಕೆಂಬ ಅವನ ವಿವಂಚನೆಗಿಂತಲೂ ಸಾಧು ಜನರನ್ನು ಸಂರಕ್ಷಿಸಬೇಕೆಂಬ ಅವನ ಆತುರತೆಯಲ್ಲಿಯೂ ದಕ್ಷತೆಯಲ್ಲಿಯೂ ಉಂಟು. ಸೃಷ್ಟಿಯನ್ನು ಭಾವನಾಮಯವಾದ ತಳಹದಿಯ ಮೇಲೆ ತಾನೇ ರಚಿಸಿರುವನಾದುದರಿಂದ ಧರ್ಮವು ಎಲ್ಲಿಯೂ ಭಾವನಾಪ್ರಧಾನವಾಗಿರುವದು. ಭಾವನಾರಹಿತವಾದ ಧರ್ಮಗಳ ರಕ್ಷಣೆಯು ಅವನಿಗೆ ಎಷ್ಟುಮಾತ್ರವೂ ಭಾರವಲ್ಲ (೧೮-೬೬).ಆ ಧರ್ಮಗಳು ಅವನ ಇಚ್ಛೆಯಿಲ್ಲದೆ ಮುಳುಗಿ ಹೋಗುವದು ಶಕ್ಯವಲ್ಲ.

ಧರ್ಮಕ್ಕುಂಟಾದ ಗ್ಲಾನಿಯು ಅವನು ಅವತರಿಸುವದಕ್ಕೆ ನಿಮಿತ್ತಮಾತ್ರವೇ ಸರಿ. ತನ್ನನ್ನು ಭಾವದಿಂದ ಸಂತುಷ್ಟನನ್ನಾಗಿ ಮಾಡಿದ ಸಜ್ಜನರ ಸಂರಕ್ಷಣೆಯೇ-ಅವರು ತನಗೆ ಸಲ್ಲಿಸಿದ ಭಾವಿಕ ತರ್ಪಣೆಯ ಋಣದಿಂದ ಮುಕ್ತನಾಗಬೇಕೆಂಬುದೇ–ಅವನು ಆಗಾಗ ಮಾಡುವ ಅವತಾರಕ್ಕೆ ನಿಜವಾದ ಕಾರಣವು.

ಪ್ರಬಲವಾಗಿ ಬೆಳೆದ ಅಧರ್ಮವನ್ನು–ದುಷ್ಟರನ್ನು–ನಾಶಗೊಳಿಸುವದೇ ಧರ್ಮದ ಸ್ಥಾಪನೆಯು. ಆ ಬಳಿಕ ಉಳಿದ ಸಾಧುಜನರಲ್ಲಿ ಧರ್ಮದ ಸ್ಥಾಪನೆಯನ್ನು ಮಾಡುವದೆಂದರೇನು ? ಅದು ಹೇಗೇ ಇರಲಿ, ತನ್ನ ಪ್ರಜೆಗಳೊಂದಿಗೆ ತನ್ನ ಸೃಷ್ಟಿಯಲ್ಲಿಯೇ ಅವರ ಸಂಸಾರವೆಂಬ ರಂಗಭೂಮಿಯ ಮೇಲೆ ಧರ್ಮವೆಂಬ ಪರದೆಯ ಮುಂದೆ ಈ ಪ್ರಭುವು–ಪುರುಷೋತ್ತಮ ಶ್ರೀಕೃಷ್ಣನು–ಸ್ವೇಚ್ಛೆಯಿಂದ ಯುಗಯುಗಾಂತರದಲ್ಲೂ ಜನ್ಮವೆತ್ತಿ ಅವತಾರ ಲೀಲೆಗಳನ್ನು ನಟಿಸುವದು ನಿಜವು.

**ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ವತಃ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥೯॥**

ಶ್ರೀಕೃಷ್ಣನು ತಾಳುವ ಜನ್ಮಗಳನ್ನೂ ಮಾಡುವ ಕರ್ಮಗಳನ್ನೂ ಕಂಡು ಆಶ್ಚರ್ಯಪಟ್ಟ ಮಾತ್ರಕ್ಕೆ ಆತನ ಈ ಕೃತ್ಯಗಳೊಳಗಿನ ಬುದ್ಧಿಯೋಗ ತತ್ವವನ್ನು ಅರ್ಜುನನು ತಿಳಿದಂತಾಗುವದಿಲ್ಲ. ಆತನ ಜನ್ಮ

ಕರ್ಮಗಳು ದಿವ್ಯವಾದುವೆಂಬುದನ್ನು ಮೊದಲು ಗ್ರಹಿಸಬೇಕು. **ದಿವ್ಯವೆಂದರೆ ಸೃಷ್ಟಿಯ ಅಧ್ಯಕ್ಷಪದಾರೂಢ ದೇವತೆಯ ಅನಿರುದ್ಧ ಇಚ್ಛೆ-ಮಾಯೆ-ಯಿಂದ ಪ್ರೇರಿತವಾದುದೆಂದರ್ಥ.** ಈತನ ಜನ್ಮಕರ್ಮಗಳನ್ನು ಹೀಗೆ ಭಾವಿಸುವದರಲ್ಲಿ ಮಹತ್ವದ ತತ್ವವು ಸನ್ನಿವಿಷ್ಟವಾಗಿರುವದು. ಈ ದಿವ್ಯತ್ವವು ಮನುಷ್ಯನಲ್ಲಿ ಪ್ರಕಟವಾದಾಗ ಅದು ದೈವೀಸಂಪತ್ತೆನಿಸುವದು. ಈ ದೈವೀ ಸಂಪತ್ತು ಮನುಷ್ಯನಲ್ಲಿ ಪೂರ್ಣ ನೆಲೆಗೊಂಡರೆ ಅವನ ಆಧ್ಯಾತ್ಮಿಕ ಯೋಗ್ಯತೆಯು ಬೆಳೆಯುವದು;ಅವನ ಆಚರಣೆಯು ನಿರ್ದೋಷವಾಗುವದು; ದೇಹಾಂತದಲ್ಲಿ ಅವನಿಗೆ ಪುನರ್ಜನ್ಮವು ಒದಗುವದಿಲ್ಲ; ಅವನು ಶ್ರೀಕೃಷ್ಣನನ್ನೇ ಸೇರುವನು.

**ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥ ೧೦ ॥**

ಮೇಲೆ ಹೇಳಿದಂತೆ, ಶ್ರೀಕೃಷ್ಣನ ಜನ್ಮಕರ್ಮಗಳ ತತ್ವವನ್ನು ಮೊದಲು ತಿಳಿಯಬೇಕು. ಆಮೇಲೆ ಆ ಜ್ಞಾನವನ್ನು ಮನುಷ್ಯನು ಸಂಪೂರ್ಣವಾಗಿ ತನ್ನ ಆಚರಣೆಯಲ್ಲಿ ತರಬೇಕು. ಹೀಗೆ ಮಾಡಿದವನು ಶ್ರೀಕೃಷ್ಣಪರನಾಗುವನು. ಅವನಿಗೆ ನಿರಂತರವೂ ಶ್ರೀಕೃಷ್ಣನ ಧ್ಯಾನವೇ ಲಭಿಸುವದು. ಅವನು ಎಂದಿಗೂ ಆತನನ್ನೇ ಆಶ್ರಯಿಸುವನು. ಈ ಮನಃಸ್ಥಿತಿಯಲ್ಲಿ **ಇಂಥವರು ಬಹಳ ಜ್ಞಾನತಪವನ್ನು ಆಚರಿಸುವರು** (೧೩-೭, ೧೦). ತಾವು ಮಾಡಿದ ಜ್ಞಾನತಪದಿಂದ ಪುನೀತರಾಗಿ ಶ್ರೀಕೃಷ್ಣನ ಭಾವವನ್ನೇ ಅವರು ಪಡೆಯುವರು. ಸೃಷ್ಟಿಯಲ್ಲಿ ಯಜ್ಞಭೋಕ್ತೃತ್ವವೂ ಪ್ರಭುತ್ವವೂ ಶ್ರೀಕೃಷ್ಣನ ನಿಯತಭಾವಗಳಾಗಿವೆ. ಇಂಥ ಅವನ ಭಾವವನ್ನೈದುವದೆಂದರೆ, ಶ್ರೀಕೃಷ್ಣನನ್ನೇ ಪರಮಪ್ರಭುವೆಂದು ಭಾವಿಸಿ, ಅವನ ಪ್ರೀತ್ಯರ್ಥವಾಗಿ ಸದಾ ಯಜ್ಞಭಾವವನ್ನು ತಾಳಿ ವರ್ತಿಸುವದು. ಹೀಗೆ ವರ್ತಿಸುವವರಲ್ಲಿ ಕಾಮ ಭಯ ಕ್ರೋಧಾದಿಗಳು ಹೇಗೆ ಸಂಭವಿಸುವವು? ಅವುಗಳಿಂದ ಅವರು ಮುಕ್ತರಾಗಿರುವರು.

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೧೧ ॥**

ಶ್ರೀಕೃಷ್ಣನು ಹೇಳಿದ ಜ್ಞಾನತಪಸ್ಸಿನ ಸ್ವರೂಪವೇನು? ಶ್ರೀಕೃಷ್ಣನ ಭಾವವನ್ನು ಪಡೆಯಲಿಕ್ಕೆ ಯಾವದೊಂದು ನಿಯಮಿತವಾದ ಆಚಾರಕ್ರಮ ವಿರಬಹುದೋ? ಅಂಥ ಕ್ರಮವು ಇದ್ದರೆ, ಮುಮುಕ್ಷುವಾದವನಿಗೆ ಮಾರ್ಗವನ್ನು ಹುಡುಕುವ ಪ್ರಯಾಸವು ಬೀಳದೆ, ಆ ಕ್ರಮವನ್ನೇ ಅನುಸರಿಸಿ ತನ್ನ ಉನ್ನತಿಯನ್ನು ಅವನು ಸಾಧಿಸಬಹುದಲ್ಲವೇ? ಶ್ರೀಕೃಷ್ಣನ ಭಾವವನ್ನು ಸೇರುವ ರಹಸ್ಯವು ಯಾವದೊಂದು ಆಚಾರಕ್ರಮ ದಲ್ಲಿಲ್ಲ. ಸಾಧಕನು ಶ್ರೀಕೃಷ್ಣನಲ್ಲಿಡುವ ಆಸಕ್ತಿಯಲ್ಲಿರುವದು. ಅವನಿ ಗಾಗಿಯೇ ಮನಸ್ಸಿನಲ್ಲಿ ಇಚ್ಛೆಯನ್ನು ಹಿಡಿದರೆ, ಆಕಾಂಕ್ಷೆಯನ್ನು ತಳೆದರೆ, ಅವನು ಭಕ್ತನು ಕೋರಿದ ಸ್ವರೂಪದಲ್ಲಿಯೇ ಅವನಿಗೆ ಪ್ರಕಟನಾಗುವನು (೭-೨೧). ಸೃಷ್ಟಿಯಲ್ಲಿ ಜನಿಸಿದ ಪ್ರತಿಯೊಂದು ಪ್ರಾಣಿಗೆ ಅವನೇ ಅಂತಿಮ ಗತಿಯಾಗಿರುವನು. ಆದುದರಿಂದ ಮನುಷ್ಯನು ಹೇಗೆ ವರ್ತಿಸುತ್ತಿದ್ದರೂ— ಶ್ರೀಕೃಷ್ಣನ ವಿಷಯದ ಹಾರೈಕೆಯು ಜಾಗ್ರತವಿದ್ದ ಬಳಿಕ—ಅವನು ಶ್ರೀಕೃಷ್ಣನನ್ನೇ ಸೇರುವನೆಂಬುದರಲ್ಲಿ ಸಂದೇಹವಿಲ್ಲ (೬-೩೧).

**ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥ ೧೨ ॥**

ಆದರೆ ಜಗತ್ತಿನಲ್ಲಿ ಜನರು ಎಷ್ಟೋ ದೇವತೆಗಳನ್ನು ಆರಾಧಿಸುವರು. ಶ್ರೀಕೃಷ್ಣನು ಸೃಷ್ಟಿಗೆ ಪ್ರಭುವಾದರೇನಾಯಿತು? ಜನರು ತಮ್ಮ ಇಚ್ಛಾ ಬಲದಿಂದ ಉಂಟುಮಾಡಿದ ದೇವತೆಗಳು ಅವರ ಉಪಾಸನೆಗಳನ್ನು ಸ್ವೀಕರಿಸುತ್ತಲಿರುವರು. ಇದಕ್ಕರ್ಥವೇನು? ಶ್ರೀಕೃಷ್ಣನು ಹೇಳಿದಂತೆ ಉಪಾಸನೆಯನ್ನು ಅವನಿಗಾಗಿಯೇ ಮಾಡುವದು ಯೋಗ್ಯವಾದ ಪಕ್ಷಕ್ಕೆ, ಉಪಾಸನೆಯ ಈ ಬಗೆಯ ದುರುಪಯೋಗವು—ಇದಕ್ಕೇ ಗೀತೆಯಲ್ಲಿ ವ್ಯಭಿಚಾರವೆಂದು ಹೆಸರಿಟ್ಟಿದೆ—ಏಕೆ ಸಂಭವಿಸುವದು?

ಈ ಇತರ ದೇವತೆಗಳು ಮನುಷ್ಯಲೋಕದಲ್ಲಿ ಮನುಷ್ಯರಿಂದಲೇ ನಿರ್ಮಿಸಲ್ಪಟ್ಟಿವೆ. ಮನುಷ್ಯನ ಭಕ್ತಿಭಾವನೆಯ ಪ್ರಭಾವದಿಂದುಂಟಾದ ಶ್ರೀಕೃಷ್ಣನ ಕನಿಷ್ಠ ತರದ ಸ್ವರೂಪಗಳೇ ಇವು. ಇವನ್ನು ಆರಾಧಿಸುವದ ರಿಂದ ಮನುಷ್ಯರು ಈ ಲೋಕದಲ್ಲಿ ತಮ್ಮ ಇಷ್ಟಾರ್ಥಗಳನ್ನು ಶೀಘ್ರದಲ್ಲಿ

ಪಡೆಯುವರು. ಈ ದೇವತೆಗಳಿಂದ ಫಲಪಡೆಯುವದಕ್ಕಾದರೂ ಅವುಗಳ ಉಪಾಸನೆಯನ್ನು ಮಾಡಲೇಬೇಕು. ಆ ಉಪಾಸನೆಯ ಫಲಗಳನ್ನು ಕೊಡುವವನು ಶ್ರೀಕೃಷ್ಣನೇ (೭-೨೨.) ಈ ಬಗೆಯ ಅನ್ಯದೇವತೋಪಾಸನೆಯಿಂದ ಮನುಷ್ಯರ ಆಕಾಂಕ್ಷೆಗಳು ಸಫಲವಾದರೂ ಆ ಸಿದ್ಧಿಯು ಕ್ಷಣಿಕವಾದುದು (೭-೨೩); ಮತ್ತು ಆ ಉಪಾಸನೆಯು ಗೀತಾವಿಶಿಷ್ಟವಿಧಾನಕ್ಕೆ ಸಮ್ಮತವಾದುದಲ್ಲ—"ಅವಿಧಿಪೂರ್ವಕವು" (೯-೨೩).

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಂ ॥ ೧೩ ॥**

ಇಲ್ಲಿಯ ವರೆಗೆ ಶ್ರೀಕೃಷ್ಣನು ತನ್ನ ಜನ್ಮವನ್ನು ಕುರಿತು ಹೇಳಿರುವನು. ಇನ್ನು ಅವನು ತನ್ನ ಕರ್ಮವನ್ನು ಕುರಿತು ನಿರೂಪಿಸುವನು. ತಾನು ಸೃಷ್ಟಿಯನ್ನುಂಟುಮಾಡಿರುವದನ್ನೂ ಅದನ್ನು ಯುಗಯುಗಾಂತರವಾಗಿ ಸಂರಕ್ಷಿಸುವದನ್ನೂ ಈ ಮೊದಲೇ ವರ್ಣಿಸಿರುವನು. ಜಗತ್ತಿನ ವ್ಯವಹಾರಜೀವನಕ್ಕೆ ಆಧಾರಭೂತವಾದ ತತ್ವಗಳನ್ನಾದರೂ ಶ್ರೀಕೃಷ್ಣನೇ ನಿಯಮಿಸಿರುವನು. ಉದಾಹರಣೆಗೆ, ಚಾತುರ್ವರ್ಣ್ಯದ ವ್ಯವಸ್ಥೆಯನ್ನು ನಿರ್ಮಿಸಿದವನು ಅವನೇ. ಆ ವರ್ಣಗಳು ಗುಣಕರ್ಮಗಳ ಅನುರೋಧದಿಂದ ವಿಭಾಗಿಸಲ್ಪಟ್ಟಿವೆ. ಈ ಚಾತುರ್ವರ್ಣ್ಯ ತತ್ವವು ಸಮಾಜಕ್ಕೆ ಎಷ್ಟು ಅವಶ್ಯವಾದುದೆಂಬದನ್ನು ಅರ್ಜುನನು ತಿಳಿದಿದ್ದನು. ಆದರೆ ಇವನ್ನು ರಚಿಸಿದವನು ಶ್ರೀಕೃಷ್ಣನೆಂಬದುದನ್ನು ತಿಳಿದ ಮಾತ್ರಕ್ಕೆ ಅವನ ಕರ್ತೃತ್ವದ ಮರ್ಮವನ್ನು ತಿಳಿದಂತಾಗುವದಿಲ್ಲ. ಚಾತುರ್ವರ್ಣ್ಯರಚನೆ, ಸೃಷ್ಟಿನಿರ್ಮಾಣ ಹಾಗು ಅವತಾರಧಾರಣ ಈ ಮೊದಲಾದ ಕರ್ಮಗಳನ್ನೆಲ್ಲ ಅವನು ಮಾಡಿದರೂ ತಾನು ಅಕರ್ತನಾಗಿಯೇ ಇರುವನು. ಕರ್ಮ ಮಾಡುವದರೊಳಗಿನ ಆತನ ಕೌಶಲವು ಇದರಲ್ಲುಂಟು. ಇದನ್ನರಿತವನೇ ಅವನ ಕರ್ತೃತ್ವದ ಮರ್ಮವನ್ನು ತಿಳಿದವನು.

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬದ್ಧ್ಯತೇ ॥ ೧೪ ॥**

ಕರ್ಮಗಳನ್ನು ಮಾಡಿಯೂ ಅವನು ಅಕರ್ತನೆನಿಸುವದು ಹೇಗೆ? ವಾಸ್ತವವಾಗಿ ಸ್ವಭಾವತಃ ಅವನು ಅಕರ್ತನು. ಆದುದರಿಂದ ಅವನು

ಕರ್ಮ ಮಾಡುವನೆಂದು ತೋರುವದು ಕೇವಲ ಆಭಾಸವೇ ಎಂದು ಇದಕ್ಕೆ ಸಮಾಧಾನ ಹೇಳುವದುಂಟು. ಅಥವಾ ಕರ್ಮವೇ ಅವಾಸ್ತವವಾದ ದೃಶ್ಯವು—ಮಾಯೆಯ ಒಂದು ಪ್ರಕಾರವು; ಅದು ಶ್ರೀಕೃಷ್ಣಪರಮಾತ್ಮನ ಸತ್ಯಸ್ವಭಾವಕ್ಕೆ ಅಂಟಲಾರದು; ಇದಕ್ಕಾಗಿಯೇ ಅವನು ಅಕರ್ತನು ಎಂದೂ ಹೇಳುವದುಂಟು. ಆದರೆ ಈ ಕಾರ್ಯಕಾರಣ ಸಂಬಧವು ಗೀತೆಗೆ ಸಮ್ಮತವಲ್ಲ. ಗೀತೆಯು ಹೇಳುವದೇನೆಂದರೆ, ಕರ್ಮದಲ್ಲಿ ಸ್ವಭಾವತಃ ಬಂಧನ ಕಾರಕವಾದುದು ಏನೂ ಇಲ್ಲ. ಕರ್ಮಗಳು ಬಂಧನಕಾರಕಗಳೆಂಬ ಮತವನ್ನು ಗೀತೆಯು ಒಪ್ಪುವದಿಲ್ಲ. ಕರ್ಮಗಳು ಶ್ರೀಕೃಷ್ಣನ ವಿಷಯದಲ್ಲಿ ಎಷ್ಟು ಬಂಧನರಹಿತವಾಗಿರುವವೋ ಅಷ್ಟೇ ಜೀವನವಿಷಯದಲ್ಲೂ ಬಂಧನ ರಹಿತವಾಗಿದೆ. ಬಂಧನವು ಉಂಟಾಗಲಿಕ್ಕೆ ಕರ್ಮವು ಕಾರಣವಲ್ಲ. ಮನುಷ್ಯ ಸ್ವಭಾವದೊಳಗಿನ ಇಚ್ಛಾ ದ್ವೇಷಗಳೇ ಇದಕ್ಕೆ ಕಾರಣವು (೭–೨೭). ಪುರುಷಸ್ವಭಾವದೊಳಗಿನ ಸುಖಾಭಿಲಾಷೆಯು ಇಚ್ಛಾದ್ವೇಷ ರೂಪದಲ್ಲಿ ಪ್ರಕಟವಾದೊಡನೆಯೇ ಬಂಧನವು ಸಂಭವಿಸುವದೆಂದು ತಿಳಿಯಬೇಕು. ಪುರುಷನು ನಿರ್ದ್ವಂದ್ವನಾಗಿ ತನ್ನ ಇಚ್ಛಾದ್ವೇಷಗಳನ್ನು ಬಿಟ್ಟರೆ, ಬಂಧನವು ಇಲ್ಲವಾಗುವದು. ಆದುದರಿಂದ ಬುದ್ಧಿಯೋಗ ಶಾಸ್ತ್ರಾನುಸಾರವಾಗಿ ಬಂಧನ ದೋಷವು ಆತ್ಮನಲ್ಲಿಲ್ಲ, ಗುಣದಲ್ಲಿಲ್ಲ ಕರ್ಮದಲ್ಲಿಲ್ಲ, ಅಥವಾ ಪುರುಷಸ್ವಭಾವದ ಆಸಕ್ತಿ ಲಕ್ಷಣದಲ್ಲೂ ಇಲ್ಲ. ಯಾಕೆಂದರೆ ಬಂಧನವನ್ನು ದಾಟಿದಾಗಲೂ ಅವನು ಪುರುಷೋತ್ತಮನ ವಿಷಯದ ಆಸಕ್ತಿಯಲ್ಲಿ ಮುಳುಗಿ ಹೋಗಿರುವನು (೭–೧). ಆದರೆ ಆದು ಆಸಕ್ತಿಯ ಅಪವ್ಯಯದಲ್ಲಿ ಅಥವಾ ಗೀತೆಯ ಭಾಷೆಯಲ್ಲಿ ಹೇಳಬೇಕಾದರೆ ಅದರ ವ್ಯಭಿಚಾರದಲ್ಲಿದೆ **ರಹಸ್ಯವಾದ ಈ ಮೂಲಭೂತ ತತ್ವವನ್ನು ಅನುಸರಿಸುವದರಿಂದಲೇ ಪುರುಷೋತ್ತಮನು ಕರ್ಮಮಾಡಿಯೂ ಅಕರ್ತನೆನಿಸುವನು. ತಾನು ಮಾಡುವ ಕರ್ಮದ ಫಲದಲ್ಲಿ ಅವನಿಗೆ ಇಷ್ಟಾನಿಷ್ಟವಿಲ್ಲ. ಅವನು ಆ ಬಗ್ಗೆ ಉದಾಸೀನನಾಗಿರುವನು.** ಜಗತ್ತಿನಲ್ಲಿ ಜೀವನಿಗೆ ಸ್ವಾತಂತ್ರ್ಯವಿದ್ದಂತೆ ತೋರುವದೆಲ್ಲ ಅವನ ಈ ಉದಾಸೀನತೆಗಾಗಿಯೇ. ಅವನಿಗೆ ಕರ್ಮದ್ದಾಗಲಿ, ಕರ್ಮಫಲದ್ದಾಗಲಿ ಸ್ಪೃಹೆಇಲ್ಲ. ಆದುದರಿಂದ ಅವನಿಗೆ ಕರ್ಮಬಂಧನವೂ ಇರುವದಿಲ್ಲ ಶ್ರೀಕೃಷ್ಣನು ಕರ್ಮ

ಬಂಧನದಿಂದ ವಿಮುಕ್ತನಾಗಿರುವದಕ್ಕೆ ಉಪಪತ್ತಿಯನ್ನು ಯಾವನು ಈ ಪ್ರಕಾರ ತಿಳಿದು ನಡೆಯುವನೋ ಅವನನ್ನು ಕರ್ಮಗಳು ಎಂದಿಗೂ ಬಾಧಿಸಲಾರವು.

**ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಂ ॥ ೧೫ ॥**

ಈ ಕ್ರಮವನ್ನರಿತು ಪೂರ್ವದ ಮುಮುಕ್ಷುಗಳು–ಜನಕಾದಿಗಳು–ಕರ್ಮವನ್ನು ಆಚರಿಸಿಯೂ ಬಂಧನದಿಂದ ಮುಕ್ತರಾಗಿದ್ದರು. ಅವರಂತೆಯೇ ಅರ್ಜುನನೂ ಕರ್ಮವನ್ನು ಮಾಡಬೇಕು ಮತ್ತು ಮುಕ್ತನಾಗಬೇಕು.

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ।**
**ತತ್ತೇ ಕರ್ಮಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್॥೧೬॥**

ಕರ್ಮವೆಂದರೇನು? ಅಕರ್ಮವೆಂದರೇನು? ಎಂಬವಿಷಯದಲ್ಲಿ ಒಳ್ಳೇ ಜ್ಞಾನಿಗಳಾದರೂ ಮೋಹಿತರಾಗುವರು. ಈ ಶಬ್ದಗಳಸಾಧಾರಣ ಅರ್ಥವು ಶಿಥಿಲವಾಗಿಯೂ ಅನಿಶ್ಚಿತವಾಗಿಯೂ ಇರುವದು. ಇವುಗಳ ನಿಶ್ಚಿತವೂ ಖಂಡಿತವೂ ಆದ ಅರ್ಥವನ್ನು ತಿಳಿಯಬೇಕು; ಅಂದರೆ ಅಶುಭದಿಂದ ಮುಕ್ತನಾಗಬಹುದು. ಈಶಬ್ದಗಳ ಅರ್ಥವನ್ನು ಶ್ರೀಕೃಷ್ಣನು ಇನ್ನು ಹೇಳುವನು.

**ಕರ್ಮಣೋಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥ ೧೭ ॥**

ಮೇಲ್ಕಾಣಿಸಿದ ಜ್ಞಾನಿಗಳು ಕರ್ಮದ ಗತಿಯನ್ನು ಎರಡು ವಿಧವಾಗಿ ಭಾವಿಸುವರು. ಇದು ಸರಿಯಲ್ಲವಾದುದರಿಂದಲೇ ಅವರು ಮೋಹಿತರಾಗುವರು. ಕರ್ಮವೆಂದರೇನು ? ವಿಕರ್ಮವೆಂದರೇನು ? ಅಕರ್ಮವೆಂದರೇನು ? ಎಂಬ ಕರ್ಮದ ತ್ರಿವಿಧಗತಿಯನ್ನು ಅರಿಯಬೇಕು. ಅದು ಗಹನವಾಗಿಯೂ ಸೂಕ್ಷ್ಮವಾಗಿಯೂ ಇರುವದು.

**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ಮನುಷ್ಯೇಷು ಸಯುಕ್ತಃ ಕೃತ್ಸ್ನ ಕರ್ಮಕೃತ್ ॥೧೮॥**

ಬಂಧನವನ್ನುಂಟುಮಾಡದ ಕರ್ಮವೇ ಇಲ್ಲವೆಂದು ಬಗೆದು ಕರ್ಮ ವೆಂದರೆ ಬಂಧನ ಸಹಿತಕರ್ಮವೆಂದು ಅರ್ಜುನನು ಅರ್ಥಮಾಡುವನು. ಶ್ರೀಕೃಷ್ಣನ ಮತದಂತೆ ಬಂಧನರಹಿತವಾದ ಕರ್ಮವೇ ನಿಜವಾಗಿ ಕರ್ಮವೆನಿಸುವದು. **ಕರ್ಮ ಬಂಧನವನ್ನು ಕಳೆದುಕೊಳ್ಳುವದಕ್ಕಾಗಿ ಸ್ವರೂಪತ: ಕರ್ಮವನ್ನು ಬಿಟ್ಟು ಬಿಡುವದಕ್ಕೆ ಅರ್ಜುನನು ಅಕರ್ಮ ವೆಂದು ಹೇಳುವನು.** ಆದರೆ ಇಂಥ ಅಕರ್ಮವು ಶ್ರೀಕೃಷ್ಣನ ಮತದಂತೆ ಶಕ್ಯವೇ ಇಲ್ಲ. ಅರ್ಜುನನು ಭಾವಿಸುವಂಥ ಅಕರ್ಮವನ್ನು ಯಾರಾದರೂ ಯತ್ನಿಸಿದರೆ ಅದರಿಂದ ಭಯಂಕರವಾದ ಬಂಧನವು ಸಂಭವಿಸುವದೆಂದು ಈ ಮೊದಲೇ ಅವನು ಬೋಧಿಸಿರುವನು. **ಬಂಧನಕಾರಕವಾದ ಎಲ್ಲ ಕರ್ಮಗಳನ್ನು-ಅದು ಕರ್ಮವಾಗಲಿ ಅಕರ್ಮವಾಗಲಿ- ಶ್ರೀಕೃಷ್ಣನು ವಿಕರ್ಮವೆಂದು ಹೇಳುವನು.**

ಸಾರಾಂಶವೇನೆಂದರೆ, ಕರ್ಮವೆನಿಸುವದು ಬಂಧನರಹಿತವಾಗಿರಲೇ ಬೇಕೆಂಬುದು ಶ್ರೀಕೃಷ್ಣನ ಅಭಿಪ್ರಾಯವು. ಯೋಗಯುಕ್ತ ಬುದ್ಧಿಯಿಂದ ಕರ್ತೃತ್ವದಲ್ಲಿಯೂ ಫಲದಲ್ಲಿಯೂ ಅಭಿಮಾನವನ್ನು ತಾಳದೆ ಮಾಡಿದ ಎಲ್ಲ ಕರ್ಮಗಳೂ ಬಂಧನರಹಿತವಾಗಿಯೇ ಇರುವವು. ಇಂಥ ಕರ್ಮ ಗಳನ್ನು ಸಾಧಿಸುವದೇ ಮನುಷ್ಯನ ಕರ್ತವ್ಯವು. ಬುದ್ಧಿಯೋಗಶಾಸ್ತ್ರದ ದೃಷ್ಟಿಯಿಂದ ಯಾವನು ಈ ರೀತಿಯಾಗಿ ಕರ್ಮ, ಅಕರ್ಮ, ವಿಕರ್ಮ ಇವನ್ನು ಗ್ರಹಿಸುವನೋ ಅವನೇ ನಿಜವಾದ ಬುದ್ಧಿಯೋಗಿಯು. ಅವನೇ ನಿಜವಾದ ಯೋಗಯುಕ್ತನು- ತನ್ನ ಕರ್ತವ್ಯಗಳನ್ನೆಲ್ಲ ನೆರವೇರಿಸಿ ಮುಕ್ತಿ ಯನ್ನು ಪಡೆಯುವವನು ಅವನೇ ಸರಿ.

**ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ।**
**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥೧೯॥**

ಹೀಗೆ ಬುದ್ಧಿಯೋಗ ಯುಕ್ತನಾಗಿ ಇಂದ್ರಿಯ ವ್ಯವಹಾರಗಳನ್ನು ಮಾಡಿ ಕರ್ಮಬಂಧನವನ್ನು ಜಯಿಸುವವನನ್ನು ಪಂಡಿತನೆಂದು ಹೇಳಬೇಕು ಇಂಥ ಪಂಡಿತನ ಉದ್ಯೋಗಗಳಲ್ಲಿ ಕಾಮಸಂಕಲ್ಪವು ಎಂದರೆ ಫಲಾ ಸಕ್ತಿಯು ಇರುವದಿಲ್ಲ. ಅವನ ಇಂದ್ರಿಯ ಮೂಲಕ ಕರ್ಮಗಳೆಲ್ಲ ಜ್ಞಾನ

ರೂಪದ ಅಗ್ನಿಯಲ್ಲಿ ಭಸ್ಮವಾಗಿ ಹೋಗಿರುವವು. ಈ ವಿಷಯವಾಗಿ ಹೆಚ್ಚಿನ ವಿವರಣೆಯು ಮುಂದೆ ಬರುವದು (೪-೩೭).

**ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ।**
**ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥ ೨೦ ॥**

ಇಂಥ ಪಂಡಿತನು ಕಾಮಸಂಕಲ್ಪವನ್ನು ಬಿಡುವನು; ಆದರೆ ಕರ್ಮ ಮಾಡುವದನ್ನು ಬಿಡುವದಿಲ್ಲ. ಹೀಗೆ, ತಾನು ಮಾಡುವ ಕರ್ಮಗಳ ಫಲ ವನ್ನು ಕುರಿತು ನಿಸ್ಪೃಹನಾಗಿ ಬುದ್ಧಿಯೋಗವನ್ನನುಸರಿಸಿ **ಅವನು ನಿರಂತ ರವೂ ಆತ್ಮತೃಪ್ತನಾಗಿರುವನು. ಪುರುಷೋತ್ತಮನನ್ನು ಅವ್ಯಾಹತ ವಾಗಿ ಆಶ್ರಯಿಸಿರುವನಾದುದರಿಂದ (೭-೧) ಅವನು ಮತ್ತಾವದನ್ನೂ ಬಯಸುವದಿಲ್ಲ.** ಈ ಸ್ಥಿತಿಯಲ್ಲಿ ಕೇವಲ ಮನಸ್ಸು, ಇಂದ್ರಿಯ ಬುದ್ಧಿ ಇವುಗಳಿಂದ ಅವನು ಕರ್ಮದಲ್ಲಿ ವರ್ತಿಸುತಲಿದ್ದರೂ (೫-೧೧) ಅವನು ಏನನ್ನೂ ಮಾಡುವದಿಲ್ಲ (೫-೮).

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ॥ ೨೧ ॥**

ನಿಷ್ಕಾಮನಾಗಿ ಬುದ್ಧಿ ಮನಸ್ಸುಗಳನ್ನು ಪುರುಷೋತ್ತಮನಿಗೆ ಅರ್ಪಿಸಿ (೧೨-೮) ಸ್ವಂತಕ್ಕಾಗಿ ತನ್ನ ಯಾವ ಕರ್ಮದ ಫಲವನ್ನೂ ಬಯ ಸದೆ ಕೇವಲ ಶರೀರದಿಂಡ ಯಾವನು ಕರ್ಮಮಾಡುತ್ತಲಿರುವನೋ ಅವನಿಗೆ ಕೇವಲ ಕರ್ಮಮಾಡಿದ್ದಕ್ಕಾಗಿ ಪಾಪವಾಗಲಿ ಬಾಧನವಾಗಲಿ ಸಂಭವಿಸದು.

**ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ।**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥ ೨೨ ॥**

ಕರ್ಮಬಾಧವಿಮುಕ್ತನಾದವನು ನಿತ್ಯತೃಪ್ತಿ ನಿರಾಶ್ರಯಗಳೆಂಬ ಗುಣಗಳನ್ನು ಆತ್ಮಶ್ರೇಯಕ್ಕಾಗಿಯೇ ಪಡೆಯುವನು. ಆತ್ಮಸ್ವಭಾವಕ್ಕೆ ಇವುಗಳಿಂದ ತೃಪ್ತಿಯುಂಟಾಗಬಹುದು. ಆದರೆ ಇಂದ್ರಿಯಸ್ವಭಾವದ ಗತಿಯೇನು? ಅದು ತೃಪ್ತಿಯನ್ನು ಪಡೆಯುವ ಬಗೆ ಹೇಗೆ? ಭೋಗ ವನ್ನು ಬಯಸದೆಯೇ ವಿಷಯಗಳಲ್ಲಿ ಅದು ವ್ಯವಹರಿಸಬೇಕೆಂಬದು

ಹೇಗೆ ಶಕ್ಯವು ? ಹಟದಿಂದ ಹೀಗೆ ಅವುಗಳನ್ನು ದಂಡಿಸಿದರೆ ಮನುಷ್ಯನ ಶಾಂತಿ ಸಮಾಧಾನಗಳಿಗೆ ಅಡ್ಡಿಯಾಗದೆ ಅವು ಬಿಡುವವೇ ?

ಇಂದ್ರಿಯಗಳು ತಮ್ಮ ತಮ್ಮ ವಿಷಯಗಳ ಸಂಯೋಗದಿಂದ-ಕರ್ತೃವು ನಿಸ್ಪೃಹನಾಗಲಿ ಆಗದಿರಲಿ-ಸಮಾಧಾನ ಪಡುವದರಲ್ಲಿ ಸಂದೇಹ ವಿಲ್ಲ. ಆದರೆ ಮನಸ್ಸು ಬುದ್ಧಿಗಳನ್ನು ವಶಮಾಡಿಕೊಂಡು ತಮ್ಮ ಹಾರೈಕೆ ಯನ್ನು ಪೂರಯಿಸಿಕೊಳ್ಳುವ ಹಟವನ್ನು ಮಾತ್ರ ಅವು ಹಿಡಿಯಬಾರದು ಮನುಷ್ಯನು ಕರ್ಮಗಳನ್ನು ಮಾಡಲೇಬೇಕಾಗಿರುವದರಿಂದ ಅವನು ಇಂದ್ರಿಯಗಳನ್ನು ಬಿಟ್ಟು ಅವುಗಳನ್ನು ಮಾಡುವದು ಶಕ್ಯವಿಲ್ಲ. ಇಂದ್ರಿಯ ಗಳು ಕರ್ಮಪ್ರವೃತ್ತವಾದಾಗ ಅವುಗಳಿಗೆ ವಿಷಯಗಳ ಸಾಹಚರ್ಯವು ತಪ್ಪುವದು ಹೇಗೆ? **ಆದರೆ ಆತ್ಮರತನಾಗಿ ಕರ್ಮಮಾಡುವ ಸ್ಥಿತಿ ಯಲ್ಲಿ ಇಂದ್ರಿಯಗಳಿಗೆ ಲಭಿಸುವ ವಿಷಯಗಳನ್ನು ಮನುಷ್ಯನು ಆರಿಸಿ ಗೊಂಡಿರುವದಿಲ್ಲ. ಅವು ಅವನಿಗೆ ಯದೃಚ್ಛೆಯಿಂದ—ತಾವಾಗಿಯೇ-ಪ್ರಾಪ್ತವಾಗುವವು.** ಯದೃಚ್ಛೆಯಿಂದ ಪ್ರಾಪ್ತವಾದ ವಿಷಯ ಪ್ರಪಂ ಚದಲ್ಲಿ ಸಂತುಷ್ಟನಾಗಿರುವದು, ದ್ವಂದ್ವಾತೀತನಾಗುವದು, ಮತ್ಸರವನ್ನು ಬಿಡುವದು, ಪುರುಷೋತ್ತಮನಿಗಾಗಿ ಮಾಡಿದ ಪ್ರಯತ್ನಗಳೆಲ್ಲವೂ ಸಫಲ ವಾಗಲಿ ವಿಫಲವಾಗಲಿ ಸಮಾನವೃತ್ತಿಯನ್ನು ಧರಿಸುವದು ಈ ಮೊದಲಾದ ಕರ್ಮಕರ್ತೃತ್ವ ಕೌಶಲದಿಂದ ಕರ್ಮಗಳನ್ನು ಮಾಡುವವನು ಅವುಗಳನ್ನು ಮಾಡಿದುದಕ್ಕಾಗಿ ಬಂಧನಕ್ಕೊಳಗಾಗುವದಿಲ್ಲ.

**ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥೨೩॥**

ಕರ್ತೃತ್ವದಲ್ಲಾಗಲಿ ಫಲದಲ್ಲಾಗಲಿ ಸಂಗವನ್ನು—ಆಸಕ್ತಿಯನ್ನು—ಇಡದೆ ಬಂಧನದಿಂದ ಮುಕ್ತನಾದವನೂ ಇಂದ್ರಿಯ ಮನಸ್ಸು ಬುದ್ಧ್ಯಾದಿಗಳಿಂದ ಜ್ಞಾನವನ್ನು ಆಚರಿಸುವವನೂ (೧೩-೭-೧೧) ಬುದ್ಧಿಯಲ್ಲಿ ಅಧ್ಯಾತ್ಮ ವೃತ್ತಿಯು ಜಾಗ್ರತವಾಗಿರುವಾಗ ಪುರುಷೋತ್ತಮನಿಗಾಗಿ ಮಾಡಿದ ಯಜ್ಞಾರ್ಥಕರ್ಮಗಳು ಬಂಧನವೆಂಬ ಅವಶೇಷವನ್ನಿಡದೆ ವಿಲಯಹೊಂದು ವವು. ಅಂದರೆ, ಅವನು ಮಾಡಿದ ಕರ್ಮಗಳೆಲ್ಲ ಶಾಂತಿ ಹಾಗು ಜ್ಞಾನ

ಗಳಾಗಿ ಪರಿಣಮಿಸುವದರಿಂದ ಆ ಕರ್ಮಗಳಿಂದೊದಗುವ ದುಷ್ಪರಿಣಾಮ ಗಳು ಅಲ್ಪವಾದರೂ ಹಿಂದೆ ಉಳಿಯುವದಿಲ್ಲ.

**ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾಹುತಂ।**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥೨೪॥**

ಮೇಲಿನ ವಿವರಣೆಯು ಮುಕ್ತಸಂಗಸ್ಥಿತಿಯಲ್ಲಿ ನಿಂತು ಪುರುಷೋತ್ತಮನಿಗಾಗಿ ಯಜ್ಞಮಾಡುವವನ ವಿಷಯವಾಗಿದೆ. ಇನ್ನು ಬ್ರಹ್ಮನೇ ತಮ್ಮ ಅಂತಿಮಧ್ಯೇಯವೆಂದು ತಿಳಿದು ನಡೆಯುವವರ ವಿಷಯವಾಗಿ ಶ್ರೀಕೃಷ್ಣನು ಹೇಳುವನು. ಏಕೆಂದರೆ, ಗೀತೆಯಲ್ಲಿ ಪುರುಷೋತ್ತಮ ನನ್ನು ಸೇರುವದೂ ಬ್ರಹ್ಮನನ್ನು ಸಾಧಿಸುವದೂ ಬೇರೆಬೇರೆಯೆಂದು ನಿಸ್ಸಂದಿಗ್ಧವಾಗಿ ಪ್ರತಿಪಾದಿಸಿದೆ. **ನಿಸ್ಸೀಮ ಬ್ರಹ್ಮನಿಷ್ಠರಾದರೂ ತಮ್ಮ ಆಕಾಂಕ್ಷೆಗಳನ್ನು ತಮಗಾಗಿಯೇ ಇಟ್ಟುಕೊಳ್ಳದೆ ಬ್ರಹ್ಮನಿಗೆ ಅರ್ಪಿಸುವರು.** ಅವರು ಮಾಡುವ **ಬ್ರಹ್ಮಯಜ್ಞದಲ್ಲಿ** ಅರ್ಪಣವಾಗಲಿ, ಹವಿಯಾಗಲಿ, ಅಗ್ನಿಯಾಗಲಿ, ಆಹುತಿಯಾಗಲಿ, ಕೊಡುವವನಾಗಲಿ ಇದೆಲ್ಲವೂ ಬ್ರಹ್ಮವೆಂದೇ ಭಾವಿಸುವರು. ಬ್ರಹ್ಮ ವಿಷಯದ ಉತ್ಕಟ ಉತ್ಕಂಠೆಯಿಂದ ಬ್ರಹ್ಮ ವಿಷಯಕ ಕರ್ಮಗಳಲ್ಲಿ ಏಕಾಗ್ರಚಿತ್ತವುಳ್ಳವರು ಬ್ರಹ್ಮನನ್ನು ನಿಃಸಂಶಯ ವಾಗಿ ಪಡೆಯುವರು.

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ।**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥ ೨೫॥**

ಗೀತೆಯಲ್ಲಿ ಬ್ರಹ್ಮನಿಗೆ ನೇಮಿಸಿಕೊಟ್ಟ ಸ್ಥಾನವನ್ನೂ ಅಧಿಕಾರ ವನ್ನೂ ಯೋಗ್ಯತೆಯನ್ನೂ ತಿಳಿದಿರುವದರಿಂದ ಬ್ರಹ್ಮನಿಷ್ಠರು ಅವನಿಗಾಗಿ ಅವನ ಆಧ್ಯಾತ್ಮ ಧರ್ಮವನ್ನರಿತು ಮಾಡಿದ ಯಜ್ಞವು ಉಚಿತವೇ ಸರಿ. ಇದೇ ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು.

ಆದರೆ ಬ್ರಹ್ಮವಾದಿಗಳಂತೆ ಬ್ರಹ್ಮವನ್ನೇ ಅಂತಿಮ ಸಾಧ್ಯವೆಂದು ಭಾವಿಸಿ ಆರಾಧಿಸುವದು ಅವಿಧಿಪೂರ್ವಕ ಮಾಡಲಾಗುವ ಉಪಾಸನೆಯ ಪ್ರಕಾರವೆನಿಸುವದು. ಯಜ್ಞಗಳಾವವೇ ಆಗಲಿ, ಅವೆಲ್ಲ ಪುರುಷೋತ್ತ

ಮುನಿಗೇ ಸೇರತಕ್ಕವು. ಆದರೆ ಈ ಯೋಗಿಗಳು ಬ್ರಹ್ಮವನ್ನೇ ಅಗ್ನಿಯೆಂದು ತಿಳಿದು ಅವನಿಗೇ ತಮ್ಮ ಯಜ್ಞಗಳನ್ನು ಆಹುತಿಯಾಗಿ ನೀಡುವರು.

ಇನ್ನು ಹಲವರು ಅನ್ಯ ದೇವತೆಗಳನ್ನು ಭಜಿಸುವರು. ಎಲ್ಲ ದೇವತೆಗಳಲ್ಲಿ ಬ್ರಹ್ಮನು ಶ್ರೇಷ್ಠನಾದುದರಿಂದ ಈ ಇತರ ದೇವತೆಗಳಿಗಾಗಿ ಮಾಡಿದ ಯಜ್ಞಗಳು 'ಯಜ್ಞ ಚಕ್ರ'ಕ್ಕೆ ಅನುಕೂಲವಾದವುಗಳು. ಅವುಗಳಿಂದ ಮನುಷ್ಯನ ಯೋಗಕ್ಷೇಮಗಳು ಅಲ್ಪಪ್ರಮಾಣದಿಂದ ಸಫಲವಾಗಬಹುದು. ( ೩-೧೧ )

**ಶ್ರೋತ್ರಾದೀನಿಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।**
**ಶಬ್ದಾದೀನ್ವಿಷಯಾನನ್ಯೇ ಇಂದ್ರಿಯಾಗ್ನಿಷು ಜುಹ್ವತಿ ॥ ೨೬ ॥**

ಇನ್ನು ದೇವತೆಗಳಿಗಾಗಿ ಮಾಡುವ ಉಪಾಸನೆಯ ವಿವಿಧ ಪ್ರಕಾರಗಳು ವರ್ಣಿಸಲ್ಪಡುವವು. ಸಂಯಮಾಗ್ನಿಯಲ್ಲಿ ಕೆಲವು ಯೋಗಿಗಳು ಇಂದ್ರಿಯಗಳನ್ನು ಹೋಮಮಾಡುವರು; ಅಂದರೆ, ಇಂದ್ರಿಯ ಮೂಲಕವಾಗಿ ದೊರೆಯಬಹುದಾದ ಸುಖವನ್ನು ತ್ಯಾಗ ಮಾಡುವರು. ಹೀಗೆ ಮಾಡಿದ ಯಜ್ಞವು ನಿಗ್ರಹ ಮೂಲಕವಾಗಿರುವದು. ಇನ್ನು ಕೆಲವರು ವಿಷಯಗಳನ್ನೇ ಇಂದ್ರಿಯಗಳಲ್ಲಿಹೋಮಮಾಡುವರು. ಇವರು ಇಷ್ಟ ದೇವತೆಗಳ ಪ್ರೀತ್ಯರ್ಥವಾಗಿ ಇಂದ್ರಿಯದಮನಮಾಡುವರೆಂಬರ್ಥ; ಅಂದರೆ, ವಿಷಯಗಳನ್ನು ಇಷ್ಟದೇವತಾಪ್ರೀತ್ಯರ್ಥವಾಗಿಯೇ ಬಳಿಸುವರು.

**ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥ ೨೭ ॥**

ಎಲ್ಲ ಇಂದ್ರಿಯ ಕರ್ಮಗಳನ್ನೂ ಪ್ರಾಣ ಮೂಲಕ ಕರ್ಮಗಳನ್ನೂ ಕೆಲವು ಯೋಗಿಗಳು ಮನಃಸಂಯಮನವೆಂಬ ಅಗ್ನಿಯಲ್ಲಿ ಅರ್ಪಿಸುವರು. ಇವರಲ್ಲಿ ಜ್ಞಾನೋದಯವಾಗಿರುವದೆಂದು ಹೇಳಬೇಕು. ಯಾಕೆಂದರೆ, ಮನಸ್ಸಿನಿಂದ ಇಂದ್ರಿಯಗಳನ್ನು ನಿಯಮಿಸುವದೇ ನಿಜವಾದ ಸಂಯಮವು (೩-೭).

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಶಂಸಿತವ್ರತಾಃ ॥ ೨೮ ॥**

ವಿಷಯಗಳು, ಇಂದ್ರಿಯಗಳು, ಮನಸ್ಸು ಪ್ರಾಣ ಇವೇ ಮೊದಲಾದವುಗಳ ಮೂಲಕ ಯಜ್ಞಮಾಡುವವರಲ್ಲದೆ ಬೇರೆ ಯಜ್ಞಗಳನ್ನು ಮಾಡುವವರೂ ಇರುವರು. ಕೆಲವರು ಪಾತಂಜಲಯೋಗವನ್ನಾಚರಿಸಿ ಯಜ್ಞಮಾಡುವರು. ಇನ್ನು ಕೆಲವರು ಸ್ವಾಧ್ಯಾಯವೆಂಬ ಜ್ಞಾನ ಯಜ್ಞವನ್ನೂ ಮಾಡುವರು. ಇವರೆಲ್ಲರೂ ಕಠಿಣವಾದ ವ್ರತಗಳನ್ನಾಚರಿಸಿ ಯಜ್ಞವನ್ನು ಮಾಡುವರು.

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥ ೨೯ ॥**

ಇನ್ನೂ ಕೆಲವರು ಪ್ರಾಣಾಯಾಮ ಪರಾಯಣರಾಗಿ ಪ್ರಾಣ ಮತ್ತು ಅಪಾನವಾಯುಗಳ ಗತಿಯನ್ನು ನಿರೋಧಿಸಿ ಪ್ರಾಣವನ್ನು ಅಪಾನದಲ್ಲಿಯೂ ಅಪಾನವನ್ನು ಪ್ರಾಣದಲ್ಲಿಯೂ ಯಜ್ಞಮಾಡುವರು.

**ಅಪರೇ ನಿಯತಾಹಾರಾಃ ಪ್ರಾಣಾನ್ಪ್ರಾಣೇಷು ಜುಹ್ವತಿ ।**
**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತ ಕಲ್ಮಷಾಃ ॥ ೩೦ ॥**

ಬೇರೆ ಕೆಲವರು ಆಹಾರವನ್ನು ನಿಯಮನಮಾಡಿ ಪ್ರಾಣಗಳನ್ನು ಪ್ರಾಣದಲ್ಲಿಯೇ ಯಜ್ಞಮಾಡುವರು.

ಅನ್ನದಿಂದಲೇ ಪ್ರಾಣಗಳು ಪೋಷಿಸಲ್ಪಡುವವು. ಇಲ್ಲಿ ಹೇಳಿದ ಯಜ್ಞವನ್ನು ಮಾಡುವವರು ಪ್ರಾಣವನ್ನು ವ್ಯಯಮಾಡಿ ಅನ್ನವನ್ನು ನಿರೋಧಿಸುವರು. ಹೀಗೆ ಮಾಡುವದರಿಂದ ಪೋಷಣೆಯು ಮರ್ಯಾದಿತವಾಗಬಹುದು. ಒಂದು ಕಡೆ ಪ್ರಾಣವನ್ನು ವ್ಯಯಮಾಡಿ, ಇನ್ನೊಂದು ಕಡೆಯಿಂದ ಪ್ರಾಣದ ಆಯವಾಗದಂತೆ ನಿರೋಧಮಾಡುವದರಿಂದ ಪ್ರಾಣವನ್ನು ಪ್ರಾಣದಲ್ಲಿಯೇ ಯಜ್ಞಮಾಡುವರೆಂದು ಇಲ್ಲಿ ಹೇಳಿದೆ. ಈ ಯೋಗಿಗಳೆಲ್ಲರೂ ತಮ್ಮ ತಮ್ಮ ಪರಿಯಿಂದ ಯಜ್ಞದ ಉಪಯೋಗವನ್ನು ತಿಳಿದಿರುವರು. ಮತ್ತು ಅವರು ಮಾಡಿದ ಯಜ್ಞದಿಂದ ಅವರ ಕಲ್ಮಷಗಳು ಯಥಾಯೋಗ್ಯವಾಗಿ ಅಳಿದು ಹೋಗುವವು.

**ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮಸನಾತನಂ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ**
**ಕುರುಸತ್ತಮ ॥ ೩೧ ॥**

ಇಂಥ ಯಜ್ಞಾಚರಣೆಯೊಳಗಿನ ತ್ಯಾಗಬುದ್ಧಿಯಿಂದುಂಟಾದ ನಿಷ್ಪಾಪಸುಖವನ್ನು ಅನುಭವಿಸುವವರು ಸನಾತನ ಬ್ರಹ್ಮನನ್ನು ಸೇರುವರು. ಯಾರು ಯಜ್ಞವನ್ನು ಮಾಡುವದೇ ಇಲ್ಲವೋ ಅಥವಾ ತಪವನ್ನಾಚರಿಸದೆ ಸುಖವನ್ನು ಮಾತ್ರ ಪಡೆಯುವರೋ ಅಂಥವರಿಗೆ ಇಹಲೋಕವೇ ಇಲ್ಲ. ಎಂದ ಮೇಲೆ ಪರಲೋಕವೆಲ್ಲಿಯದು? ಇಂಥ ಸಂಶಯಾತ್ಮರಿಗೆ (ನಿಜವಾದ) ಸುಖವು ಎಂದಿಗೂ ದೊರೆಯದು.

ಪ್ರಚಾರದಲ್ಲಿದ್ದ ಎಲ್ಲ ಸಾಮಾನ್ಯ ಯಜ್ಞಗಳನ್ನೂ ಇಲ್ಲಿ ಹೇಳಿ, ಅವುಗಳಲ್ಲಿರುವ ತ್ಯಾಗದಾನಗಳ ತಾರತಮ್ಯವನ್ನು ಬುದ್ಧಿಯೋಗಶಾಸ್ತ್ರದೃಷ್ಟಿಯಿಂದ ವಿವರಿಸಿದೆ.

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥ ೩೨ ॥**

ಬ್ರಹ್ಮನ ಮುಖದಲ್ಲಿ ಈ ಪ್ರಕಾರದ ಬಹುವಿಧಯಜ್ಞಗಳ ವಿಸ್ತಾರವಿರುವದು. ಮುಖವೇ ಎಲ್ಲರ ಪೋಷಣೆಗೆ ದ್ವಾರವು. ಬ್ರಹ್ಮನು ಈ ಪ್ರಕಾರ ಪ್ರಜೆಗಳ ಯಜ್ಞದಿಂದ ಪೋಷಿತನಾದುದರಿಂದ ಆತನ ಮುಖದಲ್ಲಿ ಯಜ್ಞಗಳು ನಡೆಯುವವೆಂದು ಹೇಳುವರು.

ಬ್ರಹ್ಮನಲ್ಲಿ ಸಂಭವಿಸುವ ಈ ಯಜ್ಞಗಳೆಲ್ಲ ಕರ್ಮದಿಂದಲೇ ಉತ್ಪನ್ನವಾಗುವದನ್ನು ಅರ್ಜುನನು ಮರೆಯಬಾರದು. ಸೃಷ್ಟಿಯಲ್ಲಿ ನಡೆಯುವ ಎಲ್ಲ ಯಜ್ಞಗಳೂ ಬ್ರಹ್ಮನಲ್ಲಿ ಅಡಕವಾಗಿರುವವು. ಅಂಥ ಬ್ರಹ್ಮನ ಜೀವಿತವೇ ಕರ್ಮದಿಂದ ತುಂಬಿರುವಾಗ ಕರ್ಮವನ್ನು ಬಿಡುವದಕ್ಕಾಗಿ ಮಾಡಿದ ಯೋಜನೆಯು ಯೋಗ್ಯವಲ್ಲ. ಬ್ರಹ್ಮನನ್ನು ಸಂಬಂಧಿಸಿದ ಈ ವಿಷಯಗಳನ್ನೂ ಶ್ರೀಕೃಷ್ಣಪುರುಷೋತ್ತಮನ ಕರ್ಮಕೌಶಲದ ಮರ್ಮವನ್ನೂ ಅರಿತರೆ ಅರ್ಜುನನು ಕರ್ಮಮಾಡಿಯೂ ಬಂಧನದಿಂದ ಮುಕ್ತನಾಗುವನು.

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾಜ್ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥ ೩೩ ॥**

ಯಜ್ಞಗಳಲ್ಲಿ ದ್ರವ್ಯಯಜ್ಞಕ್ಕಿಂತಲೂ ಜ್ಞಾನಯಜ್ಞವೇ ಅಂದರೆ ಭಾವಯಜ್ಞವೇ ಶ್ರೇಷ್ಠವು. ಯಜ್ಞಮಾಡಿದುದರಿಂದ ಸಾಧಿಸುವ ಯೋಗ

ಕ್ಷೇಮುಕ್ಕಿಂತಲೂ ಅದರಿಂದ ಪ್ರಾಪ್ತವಾಗುವ ಜ್ಞಾನವು ಕರ್ತೃವಿಗೆ ವಿಶೇಷ ಶ್ರೇಯಸ್ಕರವು. ಆದ ಕಾರಣ ಯಜ್ಞಮಾಡುವವನು ಈ ಜ್ಞಾನಸಂಪಾದನವನ್ನನುಲಕ್ಷಿಸಿ ಯಜ್ಞವನ್ನು ಆಚರಿಸಬೇಕು. ಕರ್ಮಗಳು ಜ್ಞಾನದಲ್ಲಿ ಸಮಾಪ್ತಿಹೊಂದುವವೆಂದು ಬೇರೆ ಕಡೆಯಲ್ಲಿ ಹೇಳಿರುವದಕ್ಕೆ ಇದೇ ಅರ್ಥವು. ಜ್ಞಾನವೆಂದರೆ ಈ ಶ್ಲೋಕದಲ್ಲಿ ಗೀತೆಯ ತತ್ವಜ್ಞಾನ ಅಥವಾ ಅಧ್ಯಾತ್ಮಜ್ಞಾನವೇ ಸರಿ (೧೩-೧೧). ಜ್ಞಾನಾಚರಣೆಯೂ ಕೂಡ (೧೩-೭-೧೦) ಅಭಿಪ್ರೇತವಾಗಿರಬಹುದು.

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ವದರ್ಶಿನಃ ॥೩೪॥**

ಬುದ್ಧಿಯೋಗ ಯುಕ್ತನಾಗಿ ಮಾಡಿದ ಕರ್ಮಗಳೆಲ್ಲವೂ ಯಾವ ಜ್ಞಾನದಲ್ಲಿ ಸಮಾಪ್ತಿಹೊಂದುವವೋ ಆ ಜ್ಞಾನವು ಯಾವದೆಂಬದನ್ನು ತನ್ನ ಕಲ್ಪನೆಯಿಂದಾಗಲಿ ಸಾಮಾನ್ಯ ವೇದಾಂತದಿಂದಾಗಲಿ ನಿಶ್ಚಯಿಸಬಾರದು. ಆ ಜ್ಞಾನವನ್ನು ಅರಿತವರಿಂದಲೇ ತಿಳಿದುಕೊಳ್ಳಬೇಕು. ಏಕೆಂದರೆ ಜ್ಞಾನವೆಂಬ ಹೆಸರು ಸಲ್ಲದ ಎಷ್ಟೋ ಸಂಗತಿಗಳು ಆ ಹೆಸರಿನಿಂದ ಜಗತ್ತಿನಲ್ಲಿ ಸುಳಿದಾಡುತ್ತಿರುವವು. ಸದ್ಯಕ್ಕೆ ಅರ್ಜುನನು ತಿಳಿದಿರುವದು ಇಂಥ ಜ್ಞಾನವಿಷಯಗಳೇ. ನಿಜವಾದ ತತ್ವಗಳನ್ನು ಅನುಭವದಿಂದ ಅರಿತಜ್ಞಾನಿಗಳು ನಿಜವಾದ ಜ್ಞಾನವನ್ನು ಅರ್ಜುನನಿಗೆ ಬೋಧಿಸಬಲ್ಲರು. ಅಂಥವರಿಂದ ಆ ಜ್ಞಾನವನ್ನು ಪಡೆಯಲಿಕ್ಕಾಗಿ ಅರ್ಜುನನು ಅವರನ್ನು ಪ್ರಸನ್ನಮಾಡಿಕೊಳ್ಳಬೇಕು. ಅದಕ್ಕಾಗಿ ಅವರ ಪ್ರೇಮವನ್ನೂ ಶುಶ್ರೂಷೆಯನ್ನೂ ಮಾಡಬೇಕು ಹಾಗು ಪ್ರಣಾಮಪೂರ್ವಕವಾಗಿ ನಮ್ರತೆಯಿಂದ ಅವರ ಪ್ರೀತಿಯನ್ನು ಸಂಪಾದಿಸಬೇಕು. ಇಷ್ಟಾದ ಬಳಿಕ ಅರ್ಜುನನು ಕೇಳಿದ ಪ್ರಶ್ನೆಯಿಂದ ಅವನ ಜಿಜ್ಞಾಸೆಯ ಮನವರಿಕೆಯಾಗಿ ಅವನಿಗೆ ಆ ಜ್ಞಾನವನ್ನು ಆ ತತ್ವದರ್ಶಿಗಳು ಬೋಧಿಸುವರು.

ಇಲ್ಲಿ ಸೂಚಿಸಿದ ಜ್ಞಾನಾರ್ಜನೆಯ ಮಾರ್ಗವು ಪ್ರಸ್ತುತಕಾಲದಲ್ಲಿ ವಿಲಕ್ಷಣವಾಗಿ ಕಾಣುವದು ಆಶ್ಚರ್ಯವಲ್ಲ. ಆದರೆ ಅದರಲ್ಲಿ ತತ್ವವಿರುವದೆಂದು ನಮಗೆ ತೋರುವದು. ಗೀತೆಯಲ್ಲಿ ಗುಹ್ಯವೆಂದು ಬೋಧಿಸಲ್ಪಡುವ ಜ್ಞಾನವು ಮನುಷ್ಯನಲ್ಲಿ ಎರಡು ಮಾರ್ಗವಾಗಿ ಬೆಳೆಯಬಹುದು; ತನ್ನ

ಪ್ರಯತ್ನದಿಂದಲೇ ಆತ್ಮೋನ್ನತಿಯಾಗಿ; ಅಥವಾ ತಿಳಿದವರಿಂದ ಅದನ್ನು ಪ್ರತ್ಯಕ್ಷವಾಗಿ ಸಂಪಾದಿಸಿ. ಈ ಎರಡರೊಳಗೆ ಆತ್ಮೋನ್ನತಿಯ ಮಾರ್ಗದ ಮರ್ಮವು ಉಪಾಸನೆಯಲ್ಲಿಯೂ ಪೂಜ್ಯಬುದ್ಧಿಯಲ್ಲಿಯೂ ಉಂಟು. ಯಾವ ಕಲೆಯಾಗಲಿ ಅಭ್ಯಾಸದಿಂದಲೇ ಸಾಧಿಸುವುದು. ಮೊದಲು ಮೊದಲು ಆಚರಿಸಬೇಕಾದ ಸಂಗತಿಗಳಲ್ಲಿ ಕೊನೆಗೆ ಸಾಧಿಸಬೇಕಾಗಿರುವ ಗುಣಗಳ ಅಥವಾ ಜ್ಞಾನದ ಬೀಜವಿರುವದು. **ಗೀತೆಯಲ್ಲಿ ನಿರೂಪಿಸಲ್ಪಡುತ್ತಿರುವ ಜ್ಞಾನದಿಂದ ಅಧ್ಯಾತ್ಮವನ್ನೂ ವಿಜ್ಞಾನವನ್ನೂ ಸಾಧಿಸಬೇಕಾಗಿರುವದು.** ವಿಜ್ಞಾನವನ್ನು ಸಾಧಿಸಿದಬಳಿಕ ಸಹ ಆತ್ಮಸಮರ್ಪಣಾಪೂರ್ವಕವಾಗಿ ಪುರುಷೋತ್ತಮನ ಆರಾಧನೆ ಉಪಾಸನೆಗಳೇ ಕರ್ತವ್ಯಗಳಾಗುವವು. ಆದುದರಿಂದ, ಉಪಾಸನೆಯೇ ಕೊನೆಯ ಮೆಟ್ಟಾದ ಈ ಶಾಸ್ತ್ರದಲ್ಲಿ ಅದರ ಅಭ್ಯಾಸವೇ ಆಗತ್ಯವೆಂದು ಹೇಳುವದು ಸ್ವಾಭಾವಿಕವಾಗಿದೆ. ಜ್ಞಾನವನ್ನು ಸಂಪಾದಿಸಬೇಕೆಂಬ ಜಿಜ್ಞಾಸೆಯು ಜಾಗೃತವಾದರೆ ಉಪದೇಶಕನ ವಿಷಯದಲ್ಲಿ ಪೂಜ್ಯಬುದ್ಧಿಯನ್ನಿಟ್ಟು ಶುಶ್ರೂಷೆಯನ್ನು ಮಾಡುವದರಿಂದ ಆತ್ಮೋನ್ನತಿಯಾಗಹತ್ತುವದು. ಬುದ್ಧಿಯೋಗ ಶಾಸ್ತ್ರದ ಪ್ರಥಮಾರಂಭದಲ್ಲಾದರೂ ಈ ಗುಣಗಳನ್ನೇ ಆಚರಿಸಬೇಕಾಗುವದು ನ್ಯಾಯವೇ ಸರಿ. ಅಭಿಮುಖನಾಗಿ ಕುಳಿತ ಅರ್ಜುನನಿಗೆ ಬುದ್ಧಿಯೋಗ ಶಾಸ್ತ್ರವನ್ನೂ ತದಂತರ್ಗತವಾದ ಗುಹ್ಯ ಜ್ಞಾನವಿಜ್ಞಾನವನ್ನೂ ಅಧಿಕಾರದಿಂದ ಬೋಧಿಸಲಿಕ್ಕೆ ಶ್ರೀಕೃಷ್ಣನು ಗುರುವಾಗಿ ದೊರೆತಿದ್ದನು. ಅವನ ಉಪದೇಶದಲ್ಲಿ ವಿಶ್ವಾಸವನ್ನಿಟ್ಟು ತನ್ನ ಆಚರಣೆಯಲ್ಲಿ ಅವನಿಂದರಿತ ಜ್ಞಾನದ ಅನುಭವವನ್ನು ಪಡೆದುಕೊಳ್ಳುವದು ಅರ್ಜುನನಿಗೆ ಉಚಿತವು. ಇದಕ್ಕಾಗಿ ಶ್ರೀಕೃಷ್ಣನನ್ನು ಪರಮಪೂಜ್ಯನೆಂದು ಭಾವಿಸಿ ಅವನಿಗೆ ನಮಸ್ಕಾರವನ್ನೂ ಶುಶ್ರೂಷೆಯನ್ನೂ ಮಾಡುವದು ಅರ್ಜುನನ ಕರ್ತವ್ಯವೇ ಸರಿ ( ೬-೩೪ ).

**ಯಜ್ಜ್ಞಾತ್ವಾ ನ ಪುನರ್ಮೋಹಮೇವಂಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥ ೩೫ ॥**

ತನಗೆ ತಿಳಿದ ಜ್ಞಾನವೇ ಜ್ಞಾನವೆಂದು ಒಬ್ಬೊಬ್ಬ ಗುರುವಿಗೂ ತೋರುವುದು ಸಹಜವು. ಆದರೆ ಶ್ರೀಕೃಷ್ಣನು ಹೇಳುವುದರಲ್ಲಿ ಬುದ್ಧಿಯೋಗ

ಶಾಸ್ತ್ರವೇ ಉದ್ದಿಷ್ಟವಾಗಿರುವದರಿಂದ ಗುರುವಾದವನು ಆ ಶಾಸ್ತ್ರವನ್ನೇ ಬೋಧಿಸುವನೆಂದು ನಿಶ್ಚಿತವಾಗಿ ತಿಳಿದುಕೊಳ್ಳಬೇಕು. ಅದು ಬುದ್ಧಿಯೋಗವಾಗದಿದ್ದರೆ ಆ ಜ್ಞಾನವನ್ನಾಗಲಿ ಆ ಗುರುವನ್ನಾಗಲಿ ಒಪ್ಪಿಕೊಳ್ಳಬಾರದು. ಶ್ರೀಕೃಷ್ಣನ ಬುದ್ಧಿಯೋಗಶಾಸ್ತ್ರದೊಳಗಿನ ಜ್ಞಾನದಿಂದ ಎಲ್ಲ ಸಂಶಯಗಳೂ ನಷ್ಟವಾಗಿ ಹೋಗುವವು (೨-೫೨). ಆಶ್ಚರ್ಯವು ಇಲ್ಲದಾಗುವದು(೨-೨೯). ಪೂರ್ವದಲ್ಲಿ ತಿಳಿದ ಜ್ಞಾನವೆಲ್ಲವೂ ಅಲ್ಪವಾಗಿ ಕಂಡುಬರುವದು; ಅಲ್ಲದೆ ತಿಳಿಯಬೇಕಾದುದು ಏನೂ ಉಳಿಯುವದಿಲ್ಲ. ಗುರುವಿನಿಂದ ಪಡೆದ ಜ್ಞಾನದಿಂದ ಶಿಷ್ಯನಲ್ಲಿ ಈ ಪ್ರಕಾರದ ಆತ್ಮವಿಶ್ವಾಸವು ಉಂಟಾಗಿರಬೇಕು. ಅವನ ಎಲ್ಲ ಸಂದೇಹಗಳೂ ನಿರಸನವಾಗಿರಬೇಕು. ಹಾಗಿರದಿದ್ದರೆ, ಆ ಗುರುವು ಹೇಳುವ ಜ್ಞಾನವು ಬುದ್ಧಿಯೋಗವಲ್ಲವೆಂದು ಕಂಡುಕೊಳ್ಳಬೇಕು. ನಿಜವಾದ ಜ್ಞಾನೋದಯವಾದರೆ ಎಲ್ಲ ಭೂತಗಳೂ ಒಬ್ಬ ಪರಮಾತ್ಮನಲ್ಲಿಯೇ ನಿವಿಷ್ಟವಾಗಿರುವದು ಪ್ರತ್ಯಯಕ್ಕೆ ಬರುವದು. ಅರ್ಜುನನೆದುರಿಗಿದ್ದ ಶ್ರೀಕೃಷ್ಣನೇ ಆ ಪರಮಾತ್ಮನಾದುದರಿಂದ ಅರ್ಜುನನ ಸಹಿತ ಸಕಲ ಭೂತಗಳೂ ಅವನಿಗೆ ಶ್ರೀಕೃಷ್ಣನಲ್ಲಿಯೇ ಕಾಣುವವು. ಶ್ರೀಕೃಷ್ಣನೇ ಪರಮಾತ್ಮನು, ಪುರುಷೋತ್ತಮನು ಎಂದು ಸಾರುವ ಜ್ಞಾನವು ಬುದ್ಧಿಯೋಗದಲ್ಲಲ್ಲದೆ ಮತ್ತೆಲ್ಲಿಯೂ ಇಲ್ಲ. ಆದುದರಿಂದ ಈ ಶ್ಲೋಕದಲ್ಲಿ ಜ್ಞಾನವೆಂದರೆ ಗೀತಾವಿಶಿಷ್ಟ ಬುದ್ಧಿಯೋಗವೇ ಸರಿ.

" ಆತ್ಮವು ಒಂದೇ ಎಂಬ ಸತ್ಯವನ್ನು ತಿಳಿಯಬೇಕು; ವೇದಾಂತದ ಗುಹ್ಯವೆಲ್ಲವೂ ಇದರಲ್ಲಿಯೇ ಅಡಕವಾಗಿದೆ; ಇದನ್ನು ತಿಳಿದರೆ ತಿಳಿಯಬೇಕಾದುದು ಮತ್ತಾವದೂ ಇಲ್ಲ; ಪಿಂಡದಲ್ಲಿರುವದೇ ಬ್ರಹ್ಮಾಂಡದಲ್ಲಿ ಎಂಬ ನ್ಯಾಯವನ್ನನುಸರಿಸಿ ಈ ಶ್ಲೋಕದಲ್ಲಿ ಏಕತ್ವವನ್ನು ಬೋಧಿಸಿರುವರು, " ಎಂಬದಾಗಿ ಪ್ರತಿಪಾದಿಸಲ್ಪಡುವದು. ಎಲ್ಲ ಭೂತಗಳೂ ಅರ್ಜುನನಿಗೆ ತನ್ನಲ್ಲಿಯೇ ಮೊದಲು ಕಂಡುಬಂದು ಆ ಬಳಿಕ ಶ್ರೀಕೃಷ್ಣನಲ್ಲಿಯೂ ಕಂಡುಬರುವವಾದುದರಿಂದ ಶ್ರೀಕೃಷ್ಣಾರ್ಜುನರಲ್ಲಿ ಯಾವ ಭೇದವೂ ಇಲ್ಲ; ಅವರಿಬ್ಬರೂ ಒಂದೇ ಎಂಬ ನಿಷ್ಕರ್ಷೆಯನ್ನು ಈ ಶ್ಲೋಕದಿಂದ ತೆಗೆಯುವರು; ಆದರೆ ಇದು ಸರಿಯಲ್ಲ.

ಮೊದಲನೆಯ ಕಾರಣವೇನೆಂದರೆ, ಜೀವರೂ ಪರಮಾತ್ಮನೂ ಒಂದೇ ಎಂದು ಗೀತೆಯಲ್ಲಿ ಒಪ್ಪಿಕೊಂಡಂತೆ ಕಾಣುವದಿಲ್ಲ. ಇದಕ್ಕೆ ಬದಲಾಗಿ ಅವರಿಬ್ಬರೂ ಬೇರೆಬೇರೆ ಆತ್ಮವ್ಯಕ್ತಿಗಳೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಪರಮಾತ್ಮನನ್ನು ಪುರುಷೋತ್ತಮನೆಂದು ಹೇಳಿರುವದು ಅವನ ಪ್ರಭುತ್ವ ಕ್ಕಾಗಿ. ಈ ಪ್ರಭುತ್ವವು ಅವ್ಯಯ (Absolute)ವು.ಆದುದರಿಂದ ಅವನೊಂದಿಗೆ ಅವನಿಗೆ ಸರಿಸಮಾನವಾಗಿ ನಡೆಯುವ ಇನ್ನೊಂದು ಆತ್ಮವ್ಯಕ್ತಿಯು ಇರು ವದು ಶಕ್ಯವಿಲ್ಲ. ಈ ಪುರುಷೋತ್ತಮನನ್ನುಳಿದು ಸೃಷ್ಟಿಯೊಳಗಿರುವ ಇತರ ಆತ್ಮವ್ಯಕ್ತಿಗಳೆಂದರೆ ಕೂಟಸ್ಥ ಬ್ರಹ್ಮನು ಮತ್ತು ಜೀವರು. ಈ ಬೇರೆಯಾದ ಆತ್ಮವ್ಯಕ್ತಿಗಳ ಆತ್ಮಸ್ವಭಾವವು ಇದ್ದಂತೆಯೇ ಇರುವದೆಂಬದರಲ್ಲಿ ಸಂದೇಹವಿಲ್ಲ; ಆದರೆ ಅದರ ಉತ್ಪತ್ತಿಯು ಪುರುಷೋತ್ತಮನಿಂದ. ಪುರು ಷೋತ್ತಮನು ಅಜನು; ಇವರು (ಸಂ)ಭೂತರು; ಪುರುಷೋತ್ತಮನನ್ನು ಸಂಭೂತನೆಂದು ಹೇಳಲಾಗದು. ಪರಮಾತ್ಮ ಜೀವಾತ್ಮರಲ್ಲಿರುವ ಮೊದ ಲನೆಯ ತಾತ್ವಿಕಭೇದವು ಇದೇ. ಹೀಗೆ ಸಂಭೂತರಾದುದರಿಂದ ಸ್ಥಿತಿಯ ಲ್ಲಿಯೂ ಅಧಿಕಾರದಲ್ಲಿಯೂ ಯೋಗ್ಯತೆಯಲ್ಲಿಯೂ ಇವರು ಪುರುಷೋತ್ತ ಮನಿಂದ ಪ್ರತ್ಯೇಕವಾಗುವರು. ಪುರುಷೋತ್ತಮನು ಸೃಷ್ಟಿಗೆ ಪ್ರಭುವು; ಆದರೆ ಇವರು ಅವನ ಪ್ರಜೆಗಳಾಗಿರುವರು. ಪುರುಷೋತ್ತಮನ ಅಧಿಕಾ ರವು ಸೃಷ್ಟಿಯ ಮೇಲೆಲ್ಲ ನಿರಂಕುಶವಾಗಿ ನಡೆಯುವದು; ಆದರೆ ಜೀವಭೂತ ನಾದ ಆತ್ಮವ್ಯಕ್ತಿಗೆ ತನ್ನ ಕಣ್ಣುಮುಂದಿನ ಕಾಲುಹಾದಿಯು ಕಾಣುವ ದಿಲ್ಲ. ಸೃಷ್ಟಿಯು ಉಂಟಾಗುವದರಿಂದ ಪುರುಷೋತ್ತಮನ ಮೂಲ ಸ್ಥಿತಿಯಲ್ಲಿ ಯಾವ ಪರಿವರ್ತನವೂ ಆಗುವದಿಲ್ಲ. ಆದರೆ ಈ ಇತರ ಆತ್ಮ ವ್ಯಕ್ತಿಗಳ ಮೂಲ ಸ್ಥಿತಿಯು ಬದಲಾಗಿ ಹೋಗುವದು. ಸೃಷ್ಟಿಯು ಸಾಮಾಸಿಕ ಸಂಘಟನೆ (Compound Unity) ಯಾಗಿದೆ. ಇದರ ಪೂರ್ಣ ತೆಗೆ ಪುರುಷೋತ್ತಮ ಮತ್ತು ಜೀವಭೂತರೆಂಬ ಪರಸ್ಪರಾವಲಂಬಿಗಳಾದ ಆತ್ಮವ್ಯಕ್ತಿಗಳ ದ್ವಂದ್ವೈಕ ಸಮುಚ್ಚಯವು (೧೦–೩೩) ಆವಶ್ಯಕವಾಗಿರು ವದು ನಿಜ. ಹೀಗೆ ಭಿನ್ನರಾಗಿ ಸೃಷ್ಟಿಕಾರ್ಯನಿರತರಾದರೂ ಅವರ ಸ್ವಭಾ ವವು ಆತ್ಮೀಯವಾಗಿಯೇ ಉಳಿಯುವದು. ಆದರೆ ಅವರ ಸ್ವರೂಪದಲ್ಲಿಯೂ ಸ್ಥಿತಿಯಲ್ಲಿಯೂ ಅಧಿಕಾರದಲ್ಲಿಯೂ ಯೋಗ್ಯತೆಯಲ್ಲಿಯೂ ಸಂಭವಿಸುವ

ಅಂತರವನ್ನು ಕಣ್ಣುಮರೆಮಾಡಿ ಗೀತೆಯಲ್ಲಿ ತತ್ವಬೋಧವನ್ನು ಉಪದೇಶಿಸಿ ಲ್ಲವೆಂಬದನ್ನು ಮರೆಯಬಾರದು.

ಎಲ್ಲ ಭೂತಗಳೂ ಅರ್ಜುನನಲ್ಲಿ ಕಾಣಿಸುವವೆಂದು ಈ ಶ್ಲೋಕದ ಅರ್ಥವಾಗುವದಿಲ್ಲ; ಆದರೆ ಅವೆಲ್ಲವುಗಳೂ ಪುರುಷೋತ್ತಮ ಶ್ರೀಕೃಷ್ಣನಲ್ಲಿ ಕಾಣಿಸುವವೆಂದಾಗುವದು. **ಪುರುಷೋತ್ತಮನೇ ವ್ಯಕ್ತಸ್ವರೂಪನಾದ ಶ್ರೀಕೃಷ್ಣನು ಎಂಬ ಯಾವ ಮಹತ್ವದ ಕಲ್ಪನೆಯು** ಗೀತೆಯಲ್ಲಿ ಅನುಸ್ಯೂತವಾಗಿದೆಯೋ ಆದನ್ನು ತೋರಿಸಿಕೊಡುವುದೇ ಈ ಶ್ಲೋಕದ ಸ್ಪಷ್ಟ ಉದ್ದೇಶವಾಗಿದೆ.

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥೩೬॥**

ಒಳ್ಳೆಯದಾಗಲಿ ಕೆಟ್ಟದಾಗಲಿ ಎಲ್ಲವೂ ಪುರುಷೋತ್ತಮ ಶ್ರೀಕೃಷ್ಣನ ಇಚ್ಛೆಯಿಂದಲೇ ಸಂಭವಿಸುವದೆಂಬ ಮೂಲಭೂತವಾದ ವಿಶ್ವಾಸವೇ ಜ್ಞಾನವೆಂದು ಹೇಳಲ್ಪಡುವದು. ವಸ್ತುಸ್ಥಿತಿಯು ಹೀಗಿರುವದು. ಸಂಭವಿಸುವ ಎಲ್ಲ ಸಂಗತಿಗಳ ಹೊಣೆಯನ್ನು ಪುರುಷೋತ್ತಮನು ತಾನೇ ಹೊರುವನು; ಅದನ್ನು ವ್ಯಕ್ತಿಯ ಮೇಲೆ ಹೊರಿಸುವದಿಲ್ಲ. ಆದರೆ ಅವನ ಹೊಣೆಯು ತೀರಬೇಕಾದರೆ ಆ ವ್ಯಕ್ತಿಯು ಬುದ್ಧಿಪುರಃಸರವಾಗಿಯೂ ಸರ್ವಸ್ವಿಯಾಗಿಯೂ ಪುರುಷೋತ್ತಮನಿಗೆ ಶರಣುಹೋಗಬೇಕೆಂಬ ಒಂದು ನಿರ್ಬಂಧವಿರುವದು. ಜ್ಞಾನವು (ಬುದ್ಧಿಯೋಗವು) ಪ್ರಾಪ್ತವಾದರೆ ಮನುಷ್ಯನಿಗೆ ಪುರುಷೋತ್ತಮನ ವಿಷಯದ ತನ್ನ ಕರ್ತವ್ಯವು ತಿಳಿಯುವದು. ಆದಕಾರಣ ಎಂಥ ಅಧಮನೇ ಆಗಲಿ ಅವನಿಗೆ ಜ್ಞಾನವು (ಬುದ್ಧಿಯೋಗವು) ಉಂಟಾದರೆ ಅವನು ಪಾಪದಿಂದ ವಿಮುಕ್ತನಾಗದೆ ಇರನು. ಹೀಗಾದ ಬಳಿಕ ಅವನು ಮಾಡುವ ಕರ್ಮಗಳು ಅವನನ್ನು ಬಾಧಿಸಲಾರವು. ಆದುದರಿಂದ ಜ್ಞಾನವು ಅಂದರೆ ಬುದ್ಧಿಯೋಗವು ಪಾಪವೆಂಬ ಮಹಾಸಮುದ್ರವನ್ನು ದಾಟಿಹೋಗಲಿಕ್ಕೆ ಅನುವಾಗುವ ನಾವೆಯಂತಿರುವದು.

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥೩೭॥**

ಪ್ರತಿಯೊಂದು ಕರ್ಮದಲ್ಲಿ ದೋಷವು ಸಹಜವಾಗಿರುವದೆಂದು ಅನುಭವಕ್ಕೆ ಬರುವದುಂಟು (೧೮-೪೮). ಇದಕ್ಕೆ ಆ ಕರ್ಮಗಳು ಜ್ಞಾನರಹಿತವಾಗಿರುವದೇ ಕಾರಣವು. ಬುದ್ಧಿಯೋಗಾಂತರ್ಗತ ಜ್ಞಾನವು ಒಮ್ಮೆ ಪ್ರಾಪ್ತವಾಯಿತೆಂದರೆ ಕರ್ಮಗಳು ಹೇಗೆ ನಿರ್ದೋಷವಾಗಿರುವವೆಂಬ ವಿಷಯವನ್ನು ಮೇಲಿನ ಶ್ಲೋಕದಲ್ಲಿ ಹೇಳಿದೆ. ಅಗ್ನಿಯಂಥ ಪವಿತ್ರ ವಸ್ತುವನ್ನುಂಟುಮಾಡಿ ಉರುವಲು ತಾನು ನಷ್ಟವಾಗಿ ಹೋಗುವಂತೆ ಪವಿತ್ರವಾದ ಜ್ಞಾನವನ್ನು ಹುಟ್ಟಿಸಿ ಕರ್ಮಗಳು ನಂದಿಹೋಗುವವು. ಆದುದರಿಂದ ಜ್ಞಾನರೂಪದ ಅಗ್ನಿಯಲ್ಲಿ ಕರ್ಮವು ಸುಟ್ಟು ಭಸ್ಮವಾಗುವದೆಂದು ಇಲ್ಲಿ ಹೇಳಿದೆ.

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥ ೩೮ ॥**

ಪವಿತ್ರತೆಯಲ್ಲಿ ಜ್ಞಾನಕ್ಕೆ ಸಮಾನವಾದ ಇನ್ನೊಂದು ವಸ್ತುವಿಲ್ಲ. ಪವಿತ್ರವಾದ ಇತರ ವಸ್ತುಗಳು ಅಪವಿತ್ರವಾದ ವಸ್ತುಗಳ ಸಾನ್ನಿಧ್ಯದಿಂದ ಮಲಿನವಾಗಬಹುದು—ಜ್ಞಾನವು ಮಾತ್ರ ಹಾಗಾಗುವದಿಲ್ಲ. ಅದರ ಸ್ಪರ್ಶದಿಂದ ದೋಷಗಳು ಅಳಿದು ಹೋಗುವವು. ಅಪವಿತ್ರದಲ್ಲಿ ಅಪವಿತ್ರವಾದ ಕರ್ಮವನ್ನು ಕೂಡ ಈ ಜ್ಞಾನವು ಶುದ್ಧವಾಗಿ ಮಾಡುವದು. ಅರ್ಜುನನು ಮಾಡಬೇಕಾಗಿರುವ ಯುದ್ಧವನ್ನೇ ಕುರಿತು ವಿಚಾರಿಸುವ. ಈ ಜ್ಞಾನವನ್ನು ಆಶ್ರಯಿಸಿ ಅದನ್ನು ಮಾಡಿದರೆ ಅರ್ಜುನನಿಗೆ ಪಾಪವು ತಗಲುವ ಭಯವೇ ಇಲ್ಲ. ಇಂಥ ಜ್ಞಾನವು ಯೋಗವನ್ನು ಸಾಧಿಸುವವನಿಗೆ ಸಕಾಲದಲ್ಲಿ ಸಂಪೂರ್ಣವಾಗಿ ಪ್ರಾಪ್ತವಾಗುವದು.

ಸಾಮಾನ್ಯವಾಗಿ ಜ್ಞಾನದಿಂದ ಯೋಗವು ಪ್ರಾಪ್ತವಾಗುವದೇ ಸಹಜವು. ಆದರೆ ಈ ಶ್ಲೋಕದಲ್ಲಿ ಯೋಗದಿಂದಲೇ ಜ್ಞಾನವು ಪ್ರಾಪ್ತವಾಗುವದೆಂದು ಯಾಕೆ ಹೇಳಿದೆ? ವಸ್ತುವಿನ ಜ್ಞಾನವೇ ಇಲ್ಲದಾಗ ಅದರೊಂದಿಗೆ ಸಂಯೋಗವನ್ನು ಸಾಧಿಸುವ ಬಗೆ ಹೇಗೆ? ಬುದ್ಧಿಯೋಗ ಶಾಸ್ತ್ರಾನುಸಾರವಾಗಿ ಯೋಗದಿಂದಲೇ ಜ್ಞಾನವು ಹುಟ್ಟುವದು. ನಿಜ ಯೋಗವೆಂದರೆ ಪುರುಷೋತ್ತಮನ ಕಡೆಗೆ ಜೀವಭೂತನಲ್ಲಿ ಸಹಜವಾಗಿರುವ ಒಲ

ನೆಂದರ್ಥ. ಈ ಒಲವು ಜಾಗ್ರತವಾಗಿ ಅಥವಾ ಸುಪ್ತವಾಗಿ ಎಲ್ಲರಲ್ಲಿಯೂ ಸ್ವಸರ್ಗತಃ ಇದ್ದೇ ಇರುವದು. ಪುರುಷೋತ್ತಮನು ಎಲ್ಲಪ್ರಾಣಿಗಳಲ್ಲಿಯೂ ಇರಿಸಿದ ತನ್ನ ಯೋಗಭಾವಕ್ಕೆ ಜೀವಭೂತನೊಳಗಿನ ಈ ಯೋಗಭಾವವು ಪ್ರತಿಬಿಂಬ(Reflection)ವೆಂದು ಹೇಳಬಹುದು. ಪ್ರಾಣಿಗಳೊಳಗಿನ ಈ ಯೋಗಭಾವಕ್ಕೆ ಅಧ್ಯಾತ್ಮವೆಂಬ ಹೆಸರನ್ನು ಗೀತೆಯಲ್ಲಿ ಕೊಟ್ಟಿರುವದು. ಪ್ರಜೆಗಳನ್ನು ಪುರುಷೋತ್ತಮನೊಡನೆ ಜೋಡಿಸುವ ಈ ಅಧ್ಯಾತ್ಮಭಾವವು ಅತ್ಯಂತಿಕವಾಗಿ ಎಂದಿಗೂ ನಾಶಹೊಂದುವದಿಲ್ಲ. ಅವನ ಮೇಲಿನ ಅಂಧ ವಿಶ್ವಾಸದ ಅನೇಕ ಪ್ರಕಾರಗಳು ಮೊದಲುಗೊಂಡು ಸಂಪೂರ್ಣ ವಿಜ್ಞಾನಾವಸ್ಥೆಯವರೆಗೂ ಹೆಚ್ಚುಕಡಿಮೆ ಪ್ರಮಾಣದಲ್ಲಿ ಈ ಅಧ್ಯಾತ್ಮ ಭಾವವು ಪ್ರಕಟವಾಗುವದು. ಈ ಅಧ್ಯಾತ್ಮ ಸ್ವಭಾವಕ್ಕೆ ಯತ್ಕಿಂಚಿತ್ತಾದರೂ ಅವಸರ ದೊರೆತರೆ ಅಂಧ ಭಾವಹೀನ ಪ್ರಾಣಿಯಲ್ಲಾಗಲಿ ಅದು ಪುರುಷೋತ್ತಮನ ವಿಷಯದ ಜಾಗ್ರುತೆಯನ್ನುಬೆಳೆಸುವದಕ್ಕೆ ನೆರವಾಗುವದು (೩-೩೧).

**ಇದಕ್ಕಾಗಿಯೇ ಈ ಯೋಗವು- ಈ ಶ್ರದ್ಧೆಯು ಜ್ಞಾನವೃದ್ಧಿಗೆ ಬೀಜದಂತಿರುವದೆಂದು ಗೀತೆಯಲ್ಲಿ ಖಂಡಿತವಾಗಿ ಪ್ರತಿಪಾದಿಸಲ್ಪಟ್ಟಿದೆ.**

**ಶ್ರದ್ಧಾವಾಂಲ್ಲಭತೇ ಜ್ಞಾನಂ ಮತ್ಪರಃ ಸಂಯತೇಂದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥ ೩೯ ॥**

ಪುರುಷೋತ್ತಮನ ವಿಷಯದ ಶ್ರದ್ಧೆಯು ಯಾವನಲ್ಲಿರುವದೋ ಅವನಿಗೆ ಕಾಲೋಚಿತದಲ್ಲಿ ಸಂಪೂರ್ಣ ಜ್ಞಾನವು ಉಂಟಾಗುವದು. **ಅಧ್ಯಾತ್ಮ ಭಾವಕ್ಕೆ ಶ್ರದ್ಧೆಯೇ ಮೊದಲ ಮೆಟ್ಟಿಲೆಂದು ತಿಳಿಯಬೇಕು.** ಶ್ರದ್ಧೆಯಿಂದ ಜ್ಞಾನವು ಹೇಗೆ ಹುಟ್ಟುವದೆಂಬ ವಿಷಯವನ್ನು ಮೇಲೆ ಚರ್ಚಿಸಿದ್ದಾಯಿತು. ಜ್ಞಾನವನ್ನು ಪಡೆಯಲಿಕ್ಕೆ ಶ್ರದ್ಧೆಯು ಅವಶ್ಯವು, **ಶ್ರದ್ಧೆಯು ಇಲ್ಲದಿದ್ದರೆ ಕನಿಷ್ಠ ಪಕ್ಷಕ್ಕೆ ಇಂದ್ರಿಯ ನಿಗ್ರಹವಾದರೂ ಅವಶ್ಯವು. ಇಂದ್ರಿಯ ನಿಗ್ರಹಿಯಾದವನಲ್ಲಿ ಶ್ರದ್ಧೆಗೆ ಕ್ಷಿಪ್ರದಲ್ಲಿಯೇ ಅವಸರ ದೊರೆತು ಜ್ಞಾನೋದಯವಾಗುವದು.** ಇದಕ್ಕೆ ಕಾರಣವೇನೆಂದರೆ ಇವನಲ್ಲಿ ಶ್ರದ್ಧೆಯಾಗಲಿ ಜ್ಞಾನವಾಗಲಿ ನಷ್ಟವಾಗಲಿಕ್ಕೆ ಇಂದ್ರಿಯಗಳೇ ಮೊದಲು ಕಾರಣವಾಗಿದ್ದವು (೩-೪೧). ಆತ್ಮಸ್ವಭಾವದ

ಮೇಲಿರುವ ಇಂದ್ರಿಯ ಜನ್ಯ ಅಜ್ಞಾನದ ಭಾರವು ಬದಿಗಾದೊಡನೆಯೆ ಶ್ರದ್ಧೆಯು ತಲೆದೋರುವದು. ಜ್ಞಾನವನ್ನು ಪಡೆಯಬೇಕೆಂದು ಹವಣಿಸುವವನಲ್ಲಿ ಹೀಗೆ ಶ್ರದ್ಧೆಯಾಗಲಿ ಇಂದ್ರಿಯ ನಿಗ್ರಹವಾಗಲಿ ಇರಲೇ ಬೇಕು. ಇವೆರಡೂ ಇಲ್ಲದವನು ಪಾಪದ ಕುಣಿಯಲ್ಲಿ ಜಾರುತ್ತ ನಡೆದನೆಂದು ತಿಳಿಯಬೇಕು. ಇವೆರಡರಲ್ಲಿ ಯಾವುದೊಂದಿದ್ದರೂ ಅವನು ಪ್ರಗತಿಪರನಾಗಿ ಮುಂದೆ ಜ್ಞಾನದ ಉತ್ತುಂಗ ಶಿಖರವನ್ನು ಮುಟ್ಟುವನು. ಜ್ಞಾನವು ಅವನಲ್ಲಿ ಬೆಳೆಯುತ್ತ ಹೋದಂತೆ ಶಾಂತಿಯು ಹೆಚ್ಚುವದು. **ಕರ್ಮಗಳೆಲ್ಲ ಜ್ಞಾನದಲ್ಲಿ ಪರಿಣಮಿಸುವಂತೆ ಜ್ಞಾನವು ಶಾಂತಿಯಲ್ಲಿ ಪರಿಣಮಿಸುವದು.** ಆದುದರಿಂದ ಬುದ್ಧಿಯೋಗದ ಅಭ್ಯಾಸವನ್ನು ಮಾಡುವ ಜಿಜ್ಞಾಸಿಯು ತನ್ನಲ್ಲಿ ಬೆಳೆಯುವ ಜ್ಞಾನದಿಂದ ತನ್ನ ಕರ್ಮದ ಸಾಫಲ್ಯವನ್ನೂ ಅಥವಾ ಶಾಂತಿಯಿಂದ ತಾನು ಪಡೆದ ಜ್ಞಾನದ ಸಾಫಲ್ಯವನ್ನೂ ಕಂಡುಕೊಳ್ಳಬಹುದು.

ಮೇಲಿನ ಶ್ಲೋಕಗಳಲ್ಲಿ ಬಂದ ಜ್ಞಾನದ ಪ್ರಶಂಸೆಯನ್ನು ಆಧಾರವಾಗಿಟ್ಟುಕೊಂಡು ಜ್ಞಾನವನ್ನು ಆಕಾಶಕ್ಕೇತ್ತುವ ಪ್ರಯತ್ನವನ್ನು ಕೆಲವರು ಮಾಡುವದುಂಟು. ಇಂಥ ಜ್ಞಾನವಾದಿಗಳು ಹೇಳುವದೇನೆಂದರೆ. ಜೀವನಿಗೆ ಹೇಗೋ ಪ್ರಕೃತಿಯ ಬಂಧನವು ಸಂಭವಿಸಿರುವದು ನಿಜ. ಈ ಬಂಧನವು ಹೇಗೆ ಅಥವಾ ಏಕೆ ಸಂಭವಿಸಿತೆಂಬ ವಿಷಯ ತಮಗೇನೂ ತಿಳಿದಿರುವದಿಲ್ಲ; ಮತ್ತು ತಿಳಿಯುವದು ಶಕ್ಯವೂ ಅಲ್ಲ. ಅದು ಹೇಗೆಯೋ ಇರಲಿ, ಈ ಬಂಧನದ ಸ್ವರೂಪವು ಅಜ್ಞಾನವೇ ಎಂಬುದರಲ್ಲಿ ಸಂದೇಹವಿಲ್ಲ. ಮತ್ತು ಈ ಅಜ್ಞಾನವು ಜ್ಞಾನದಿಂದಲೇ ನಷ್ಟವಾಗಬೇಕು. ಅಜ್ಞಾನವು ನಷ್ಟವಾದೊಡನೆಯೆ ಪ್ರಕೃತಿಯ ಬಂಧನವು ಬಿದ್ದುಹೋಗುವದು. ಪ್ರಕೃತಿಯು ಬಿದ್ದುಕೂಡಲೆ ಜೀವನಿಗೆ ಮುಕ್ತಸ್ಥಿತಿಯು ಅಥವಾ ಪೂರ್ಣಾವಸ್ಥೆಯು ಅಥವಾ ಸ್ವಾತಂತ್ರ್ಯವು ಬರುವದು ಖಂಡಿತವು. ಈ ಸ್ಥಿತಿಯೇ ಜೀವನಿಗೆ ಕೊನೆಯ ಸಾಧ್ಯವಾಗಿದೆ; ಮತ್ತು ಇದೇ ಅವನ ಆತ್ಮದ ಮೂಲ ಸ್ಥಿತಿಯಾಗಿರಬೇಕು. ಇದೆಲ್ಲವನ್ನೂ ಕೈಗೂಡಿಸಿಕೊಡುವದು ಜ್ಞಾನವಷ್ಟೇ. ಅದಕ್ಕಾಗಿ ಜ್ಞಾನವೇ ಮನುಷ್ಯನಿಗೆ ಅಂತಿಮ ಸಾಧ್ಯವೆಂದು ಹೇಳಬೇಕು. ಇದರ ಹೊರತು ಬೇರೆ ಸಾಧ್ಯವು ಮನುಷ್ಯನಿಗೆ ಇಲ್ಲ. ಸೃಷ್ಟಿಯೊಳಗಿನ

ನಾಮರೂಪಗಳ ವಿಷಯದ ಜೀವನ ಕಲ್ಪನೆಗಳು ಅಜ್ಞಾನಮೂಲಕವಾಗಿವೆ. ಜ್ಞಾನವಾದೊಡನೆಯೆ ನಾಮರೂಪಗಳನ್ನು ದಾಟಿ ಅವನು ಶುದ್ಧ ಆತ್ಮಸ್ಥಿತಿಯನ್ನು ಪಡೆಯುವನೆಂದು ತಿಳಿಯಬೇಕು. ಜ್ಞಾನವು ನಮ್ಮ ಪ್ರಯತ್ನಗಳಿಗೇ ಅಲ್ಲದೆ ಜೀವಿತಕ್ಕಾದರೂ ಈ ದೃಷ್ಟಿಯಿಂದ ಧ್ಯೇಯವಾಗಬೇಕು. ಏಪಂಜ, ಜ್ಞಾನವೇ ಜ್ಞೇಯರೂಪನಾದ ಪರಮೇಶ್ವರನೆಂದು ನಂಬತಕ್ಕದ್ದು.

ಮೇಲೆ ವಿವರಿಸಿದ ವಿಚಾರಸರಣಿಗೆ ಗೀತೆಯಲ್ಲಿ ಆಧಾರವಿದ್ದಂತೆ ನನಗೆ ತೋರುವದಿಲ್ಲ. ಮೊದಲನೆಯ ಮಾತೇನೆಂದರೆ, ಪ್ರಕೃತಿಯು ಹೇಗೋ ಎಲ್ಲಿಂದಲೋ ಬಂದು ಜೀವನಿಗೆ ಅಂಟಿಕೊಂಡಿತೆಂದೂ ಅದು ಅವನಿಗೆ ತಗಲಿದ ಒಂದು ಅಂಟುರೋಗವೆಂದೂ ಗೀತೆಯು ಅಭಿಪ್ರಾಯಪಡುವದಿಲ್ಲ. **ಪರಮೇಶ್ವರನಿಂದ ಜೀವನು ಸದುಪಯೋಗಕ್ಕಾಗಿ ಪಡೆದ ವರವೆಂದು ಗೀತೆಯು ಪ್ರಕೃತಿಯನ್ನು ಭಾವಿಸುವದು. ಪ್ರಕೃತಿಯು ಪುರುಷನಷ್ಟೇ ಪಾಪರಹಿತವಾದುದು.** ಸೃಷ್ಟಿ ಸಂಸಾರದಲ್ಲಿ ಪುರುಷನಿಗೆ ಸ್ವಾರಸ್ಯವನ್ನುಂಟುಮಾಡುವದಕ್ಕೆ ಅವನೊಂದಿಗೆ ಪ್ರಕೃತಿಯನ್ನು ಪರಮೇಶ್ವರನೇ ನಿರ್ಮಿಸಿರುವನೆಂದು ಗೀತೆಯು ಉದ್ದೇಶಪಡುವದು. ಆದರೆ ಪ್ರಕೃತಿಪುರುಷರು ಕೂಡಿ ಸೃಷ್ಟಿಯಲ್ಲಿ ಮಾಡಬೇಕಾದ ಸಂಸಾರವು ಪುರುಷೋತ್ತಮನ ಯಜ್ಞ ಭೋಕ್ತೃತ್ವಕ್ಕೆ ಸಾಧನವಾಗಬೇಕು. ಪುರುಷೋತ್ತಮನ ಈ ಉದ್ದೇಶವು ಸಫಲವಾಗಬೇಕಾದುದಕ್ಕೆ ಪುರುಷನೇ ಹೊಣೆಗಾರನಾಗುವನಲ್ಲದೆ ಪ್ರಕೃತಿಯಲ್ಲ. ಪುರುಷನಾದವನು ಈ ತನ್ನ ಹೊಣೆಯನ್ನು ಯೋಗ್ಯವಾಗಿ ನೆರವೇರಿಸಿ ಪ್ರಕೃತಿಯೊಂದಿಗೆ ಸಂಸಾರದಲ್ಲಿ ಎಷ್ಟು ರಮಿಸಿದರೂ ಭಯವಿಲ್ಲ. ಆದರೆ ಇವನು ಪುರುಷೋತ್ತಮನ ವಿಷಯದ ತನ್ನ ಹೊಣೆಗಾರಿಕೆಯನ್ನು ಮರೆತು, ತನ್ನ ಸಂಸಾರದಲ್ಲಿ ತೊಡಗಿದರೆ ಆ ಕ್ಷಣವೇ ಪಾಪವು ಸಂಭವಿಸುವದು. ಅವನಿಗೆ ಅಧೀನಳೂ ಅಜ್ಞಾನಧಾರಿಯೂ ಆದ ಪ್ರಕೃತಿಯನ್ನು ಈ ಪಾಪಕ್ಕಾಗಿ ದೂಷಿಸುವದರಲ್ಲಿ ಅರ್ಥವಿಲ್ಲ. **ಪ್ರಕೃತಿಯೂ ಪುರುಷನೂ ಕೂಡಿ ಮಾಡುವ ಸಂಸಾರದ ಪರ್ಯವಸಾನವು ಜ್ಞಾನದಲ್ಲಾಗಲಿ ಅಜ್ಞಾನದಲ್ಲಾಗಲಿ, ಅದರ ಹೊಣೆಯು ಪುರುಷನ**

**ಮೇಲೆಯೇ ಇರುವದು;** ಪ್ರಕೃತಿಯ ಮೇಲೆ ಇರುವದಿಲ್ಲೆಂದು ಗೀತೆಯ ಅಭಿಪ್ರಾಯವು.

ಎರಡನೆಯ ಮಾತೇನೆಂದರೆ ಜ್ಞಾನವೆಂದರೆ ಗೀತೆಯಲ್ಲಿ ಕೇವಲ ತಿಳಿಯುವದು ಅಥವಾ ಅಜ್ಞಾನವಿಲ್ಲದಿರುವದೆಂದು ಅರ್ಥವಲ್ಲ. **ಜೀವಾತ್ಮನಿಗೆ ನಿಯತವಾದ ಯೋಗಯುಕ್ತಸ್ಥಿತಿಯನ್ನೂ ಆ ಸ್ಥಿತಿಯಲ್ಲಿದ್ದುಕೊಂಡು ಅವನು ಆಚರಿಸುವ ಪ್ರಕೃತಿಯ ಸಂಸಾರವನ್ನೂ ಸಹ ಗೀತೆಯಲ್ಲಿ ಜ್ಞಾನವೆಂದೇ ಹೇಳಿದೆ** (೧೩-೭, ೧೦). ಆದುದರಿಂದ ಇಂಥ ಜ್ಞಾನವೇ ಅಂತಿಮಸಾಧ್ಯವೆಂದು ಹೇಳಲಾಗದು. **ಇದು ಸಾಧ್ಯಕ್ಕೆ ಸಾಧನವು.** ಪುರುಷೋತ್ತಮನ ಸ್ಮೃತಿಯನ್ನು ಕಳೆದುಕೊಂಡ ಜೀವನಿಗೆ ಪಾಪದ ಹಾಗು ಅಜ್ಞಾನದ ಮಹಾಸಾಗರವನ್ನು ದಾಟಲಿಕ್ಕೆ ಇದು ನಾವೆಯು. ಪುರುಷೋತ್ತಮನ ವಿಷಯದಲ್ಲಿ ಜಾಗರೂಕನಾದ ಜೀವನನ್ನು-ಈ ಜಾಗರೂಕತೆಯನ್ನೇ ಜ್ಞಾನವೆಂದು ಹೇಳುವದು-ಈ ಜ್ಞಾನವು ಕರ್ಮಬಂಧನದಿಂದ ಬಿಡಿಸುವದು. ಜ್ಞಾನವೆಂಬುದು ಮಹಾಪವಿತ್ರವು; ಏಕೆಂದರೆ ಅದರಿಂದ ಪುನೀತವಾಗದ ಪತಿತತತ್ವವೇ ಇಲ್ಲ. ಜ್ಞಾನವುಂಟಾಗುವದರಿಂದ ಸಂಶಯವು ಅಥವಾ ವ್ಯಾಮೋಹವು ಉಳಿಯದೆ ಅಳಿದುಹೋಗುವದು; ಮತ್ತು ಶಾಂತಿಯು ಸಾಧಿಸುವದು. ಮನುಷ್ಯನ ಆತ್ಮೋನ್ನತಿಗೂ ಮುಕ್ತಿಗೂ ಜ್ಞಾನಕ್ಕಿಂತಲೂ ಈ ಶಾಂತಿಯೇ ಹೆಚ್ಚು ಕಾರ್ಯಕಾರಿಯಾಗುವದೆಂದು ಗೀತೆಯಲ್ಲಿ ಹೇಳಿರುವದು.

**ಅಜ್ಞಶ್ಚಾಶ್ರದ್ಧಧಾನಶ್ಚ ಸಂಶಯಾತ್ಮಾ ವಿನಶ್ಯತಿ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ**
**ಸಂಶಯಾತ್ಮನಃ ॥ ೪೦ ॥**

ಯಾವನಲ್ಲಿ ಜ್ಞಾನವಿಲ್ಲವೋ ಹಾಗು ಶ್ರದ್ಧೆಯಿಲ್ಲವೋ ಅಂಥ ಸಂದೇಹಮಗ್ನನು ನಾಶಹೊಂದುವನು. ಆವನಿಗೆ ಇಹಲೋಕವಿಲ್ಲ; ಪರಲೋಕವೂ ಇಲ್ಲ. ಇಂಥ ಸಂಶಯಾತ್ಮನಿಗೆ ಎಲ್ಲಿಯೂ ಸುಖವು ದೊರೆಯುವದಿಲ್ಲ.

**ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಂ।**
**ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥ ೪೧ ॥**

ಆತ್ಮವಂತನು ಅಂದರೆ ಬುದ್ಧಿಯೋಗಯುಕ್ತನು ಅಥವಾ ಪುರುಷೋತ್ತಮನಲ್ಲಿ ಆಸಕ್ತಿಯುಳ್ಳವನು (೨-೪೫) ನಿಸ್ಸಂಗನಾಗಿ ಕರ್ಮಗಳನ್ನು ಮಾಡಿ ಅವುಗಳ ಫಲಗಳ ವಿಷಯದಲ್ಲಿ ನಿಸ್ಪೃಹನಾಗಿ ಆ ಕರ್ಮಗಳನ್ನೆಲ್ಲ ಪುರುಷೋತ್ತಮನಿಗೆ ಅರ್ಪಿಸಿಬಿಡುವವನು. ಈ ಸ್ಥಿತಿಗೆ ಈ ಶ್ಲೋಕದಲ್ಲಿ "ಯೋಗಸಂನ್ಯಸ್ತಕರ್ಮಾಣಂ" ಅಂದರೆ ಅಧ್ಯಾತ್ಮಚಿತ್ತದಿಂದ ಯೋಗಯುಕ್ತನಾಗಿ ಮಾಡಿದ ಕರ್ಮಸಂನ್ಯಾಸನೆಂದು ಪರಿಭಾಷೆಯು ಉಪಯೋಗಿಸಲ್ಪಟ್ಟಿದೆ. ಇಂಥ ಕರ್ಮಸಂನ್ಯಾಸ ಸ್ಥಿತಿಯು ಸಾಧಿಸಬೇಕಾದರೆ ಸಂದೇಹರಹಿತವಾದ ಜ್ಞಾನವು ಪ್ರಾಪ್ತವಾಗಿರಬೇಕು. ಹೀಗೆ ಕರ್ಮವೂ ಸಂನ್ಯಾಸವೂ ಜ್ಞಾನವೂ ಯಾವನಿಗೆ ಸಂಪೂರ್ಣವಾಗಿಯೂ ಸಮರ್ಪಕವಾಗಿಯೂ ಸಾಧಿಸಿರುವವದೋ ಅಂಥ ಆತ್ಮವಂತನು ಕರ್ತವ್ಯವೆಂದು ಮಾಡಬೇಕಾದ ಕರ್ಮಗಳು ಎಷ್ಟು ಭಯಂಕರವಾಗಿದ್ದರೂ ಅವು ಅವನನ್ನು ಬಂಧನಕ್ಕೊಳಪಡಿಸಲಾರವು. "ಯೋಗಸಂನ್ಯಸ್ತ ಕರ್ಮಾಣಂ" ಎಂಬ ಶಬ್ದಗಳ ಪಾರಿಭಾಷಿಕ ಅರ್ಥವು ಅರ್ಜುನನಿಗೆ ಹೊಳೆಯಲಿಲ್ಲವಾದುದರಿಂದ ಶ್ರೀಕೃಷ್ಣನು ಕರ್ಮತ್ಯಾಗವನ್ನೇ ಹೇಳುತ್ತಿರುವನೆಂದು ಅವನು ಭಾವಿಸುವನು.

**ತಸ್ಮಾದಜ್ಞಾನಸಂಭೂತಂ ಹೃತ್‌ಸ್ಥಂ ಜ್ಞಾನಾಸಿನಾತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥ ೪೨ ॥**

ಯುದ್ಧಮಾಡುವ ಬಗೆಗೆ ತನ್ನ ಹೃದಯದಲ್ಲಿ ಹುಟ್ಟಿದ ಸಂದೇಹವನ್ನು ಜ್ಞಾನವೆಂಬ ಕತ್ತಿಯಿಂದ ಕಡಿದುಹಾಕಿ ಅರ್ಜುನನು (ಬುದ್ಧಿ) ಯೋಗದಲ್ಲಿ ಸ್ಥಿತನಾಗಬೇಕು. ಮತ್ತು ಯುದ್ಧಕ್ಕೆ ಎದ್ದು ನಿಲ್ಲಬೇಕು.

ತನಗುಂಟಾದ ವಿಷಾದಕ್ಕೆ ಕಾರುಣ್ಯೋದ್ರೇಕವೇ ಕಾರಣವೆಂದು ಅರ್ಜುನನು ತಿಳಿದಿದ್ದನು. ಸಂಜಯನಿಗಾದರೂ ಹಾಗೆಯೇ ತೋರಿತು. ಆದರೆ ಅದಕ್ಕೆ ಅಜ್ಞಾನವೇ ನಿಜವಾದ ಕಾರಣವೆಂದು ಶ್ರೀಕೃಷ್ಣನು ಮೊದಲಿನಿಂದ ಅರಿತಿದ್ದನು. ಅದರ ಪರಿಹಾರವಾಗಬೇಕೆಂದು ಅವನು ಬುದ್ಧಿಯೋಗವನ್ನು ಬೋಧಿಸತೊಡಗಿದನು. ಈ ಬುದ್ಧಿಯೋಗವನ್ನಾಶ್ರಯಿಸಿ ಅರ್ಜುನನು ಯುದ್ಧದಂಥ ಘೋರಕರ್ಮವನ್ನು ಮಾಡಿಯೂ ಕರ್ಮ, ಧರ್ಮ, ಶ್ರೇಯ ಮೊದಲಾದ ಎಲ್ಲ ಸಂಗತಿಗಳನ್ನು ಸಾಧಿಸಬಹುದು. ಆದುದರಿಂದ ಅರ್ಜುನನು ಯೋಗಯುಕ್ತನಾಗಿ ಯುದ್ಧಕ್ಕೆ ಎದ್ದು ನಿಲ್ಲಬೇಕು.

**ನಾಲ್ಕನೆಯ ಅಧ್ಯಾಯವು ಸಮಾಪ್ತವು.**

ಓಂ

# ಐದನೆಯ ಅಧ್ಯಾಯವು



ಅವತರಣಿಕೆ—

ಈ ಅಧ್ಯಾಯದ ಆರಂಭದಲ್ಲಿ ಅರ್ಜುನನು ಕೇಳಿದ ಪ್ರಶ್ನೆಯು ಅವನು ಮೂರನೆಯ ಅಧ್ಯಾಯದ ಆರಂಭದಲ್ಲಿ ಕೇಳಿದ ಪ್ರಶ್ನೆಯಂತೆಯೇ ಇದೆ. ಕರ್ಮಸಂನ್ಯಾಸ ಮತ್ತು ಕರ್ಮಯೋಗ ಇವೆರಡರಲ್ಲಿ ಹೆಚ್ಚು ಶ್ರೇಯಸ್ಕರವಾವುದೆಂಬದನ್ನು ಶ್ರೀಕೃಷ್ಣನು ಏಕೆ ಹೇಳಿಬಿಡಬಾರದು? ಹೀಗೆ ಆ ಪ್ರಶ್ನೆಗಳಲ್ಲಿ ಸಾಮ್ಯವಿದ್ದರೂ ಅರ್ಜುನನ ಈಗಿನ ಮನೋಭೂಮಿಕೆಯು ಮೂರನೆಯ ಅಧ್ಯಾಯದ ಪ್ರಾರಂಭಕ್ಕೆ ಕಂಡುಬರುವ ಮನೋಭೂಮಿಕೆಯಂತಿಲ್ಲವೆಂಬುದನ್ನು ತಿಳಿಯಬೇಕು. ಮೂರನೆಯ ಅಧ್ಯಾಯದ ಆರಂಭದಲ್ಲಿ ಕರ್ಮ ಮಾಡುವದನ್ನು ಬಿಡಬೇಕೋ ಇಲ್ಲವೋ ಎಂಬದರ ನಿರ್ಣಯವು ಬೇಕಾಗಿತ್ತು. ಮೂರನೆಯ ನಾಲ್ಕನೆಯ ಅಧ್ಯಾಯಗಳಲ್ಲಿ ಮಾಡಿದ ವಿವೇಚನೆಯಿಂದ ಅರ್ಜುನನ ಮನಸ್ಸಿನ ಮೇಲೆ ಯಾವ ಪರಿಣಾಮವೂ ಆಗಲಿಲ್ಲವೆಂದು ತಿಳಿಯಬಾರದು. ಆ ಅಧ್ಯಾಯಗಳಲ್ಲಿ ಕರ್ಮವನ್ನು ಕುರಿತು ಮಾಡಿದ ಬೋಧನೆಯನ್ನು ಅವನು ಒಪ್ಪಿದಂತೆಯೇ ಕಂಡುಬರುವದು. ಕರ್ಮಮಾಡುವದೇ ಶ್ರೇಯಸ್ಕರವು; ಮತ್ತು ಅದೇ ತನಗೆ ಕರ್ತವ್ಯವಾಗಿದೆ ಎಂಬುದನ್ನು ಅವನು ಈಗ ಮನಗಂಡಿರುವನು. ಕರ್ಮವನ್ನು ಮಾಡಬೇಕೋ ಬಿಡಬೇಕೊ ಎಂಬದನ್ನು ಮಾತ್ರ ಹೇಳಬೇಕಾಗಿದ್ದ ಪಕ್ಷಕ್ಕೆ ಮತ್ತು ಯುದ್ಧವನ್ನು ನಿರಾಕರಿಸಿದ ಅರ್ಜುನನಿಂದ

ಅದನ್ನು ಮಾಡಿಸುವುದೇ ತನ್ನ ಉದ್ದೇಶವಾಗಿದ್ದ ಪಕ್ಷಕ್ಕೆ ಗೀತಾ ಬೋಧವನ್ನು ಶ್ರೀಕೃಷ್ಣನು ಇಲ್ಲಿಯೇ ಮುಗಿಸಿ ಬಿಡಬಹುದಾಗಿತ್ತು. ಆದರೆ ಕೃಷ್ಣನು ಹಾಗೆ ಉದ್ದೇಶಪಟ್ಟಿರಲಿಲ್ಲ. ಅವನು ಭುದ್ಧಿಯೋಗದ ಬಹುಭಾಗವನ್ನು ಇನ್ನೂ ಹೇಳಬೇಕಾಗಿತ್ತು. ಕರ್ಮವನ್ನು ಮಾಡ ಬೇಕೋ ಅಥವಾ ಬಿಡಬೇಕೋ ಎಂಬ ಸಂಶಯವು ಅರ್ಜುನನಿಗೆ ಈಗ ಇರ ಲಿಲ್ಲ. ಕರ್ಮಮಾಡುವದೇ ತನ್ನ ಕರ್ತವ್ಯವೆಂದು ಅವನು ತಿಳಿದಿರುವನು. ಆದರೆ ಕರ್ಮಮಾಡುತ್ತ ಸಂನ್ಯಾಸವನ್ನು ಸಾಧಿಸಬೇಕೆಂದು ಹಿಂದೆ (೩-೩೦) ಹೇಳಿದ ವಿಷಯವು ಅವನಿಗೆ ಇನ್ನೂ ತಿಳಿದಿರಲಿಲ್ಲ. ಕರ್ಮ ವನ್ನು ಕುರಿತು ಹೇಳಬೇಕಾಗಿದ್ದುದೆಲ್ಲ ತೀರುತ್ತ ಬಂದಿತ್ತು. ಇನ್ನು ಮುಂದೆ ಹೇಳಬೇಕಾದುದನ್ನು ಕುರಿತು ಅರ್ಜುನನ ಮನಸ್ಸಿನಲ್ಲಿ ಬೇಕೆಂದು ಸಂಶಯವನ್ನುಂಟು ಮಾಡಿ ಅವನಲ್ಲಿ ಆ ವಿಷಯದ ಜಿಜ್ಞಾಸೆಯನ್ನು ಹುಟ್ಟಿಸುವದು ಶ್ರೀಕೃಷ್ಣನಿಗೆ ಬೇಕಾಗಿತ್ತು. ಆದುದರಿಂದ ಸಂನ್ಯಾಸ ವೆಂಬ ಶಬ್ದವನ್ನು ಕರ್ಮಶಬ್ದಕ್ಕೆ ಜೋಡಿಸಿ ಅರ್ಜುನನಿಗೆ ವಿಸಂಗತವಾಗಿ ತೋರುವಂತೆ ಅವನು ತಿರುಗಿ (೪-೪೧) ಉಚ್ಚರಿಸಿದನು. ಶ್ರೀಕೃಷ್ಣನು ಕರ್ಮಶಬ್ದಕ್ಕೆ ತಾನು ಮಾಡುವ ಅರ್ಥವನ್ನು ಅರ್ಜುನನಿಗೆ ತಿಳಿಸಿದಂತೆ ಸಂನ್ಯಾಸ ಶಬ್ದದ ಅರ್ಥವನ್ನು ಇನ್ನೂ ತಿಳಿಸಿರಲಿಲ್ಲ. ಸಂನ್ಯಾಸ ಶಬ್ದದೊಳ ಗಿನ ತನ್ನ ಭಾವವನ್ನು ವಿಪುಲವಾಗಿ ವರ್ಣಿಸಿದ್ದೇನೋ ನಿಜ. ಮತ್ಪರ ನಾಗು, ಆತ್ಮರತನಾಗು, ಆತ್ಮವಂತನಾಗು, ಅಧ್ಯಾತ್ಮ ಚಿತ್ತದಿಂದ ಫಲವನ್ನೂ ಸಂಗವನ್ನೂ ನನಗೆ (ಶ್ರೀಕೃಷ್ಣನಿಗೆ) ಅರ್ಪಿಸಿ ಕರ್ಮಮಾಡು-ಹೀಗೆ ವಿಧವಿಧವಾಗಿ ವಿವೇಚಿಸಿದ್ದನು. ಆದರೆ, ಈ ಪರ್ಯಾಯಗಳೆಲ್ಲ ಸಂನ್ಯಾಸವೆಂಬ ಒಂದೇ ಶಬ್ದದಲ್ಲಿ ಅಡಕವಾಗಿರುವವೆಂಬದನ್ನು ಅರ್ಜು ನನು ಗ್ರಹಿಸಿರಲಿಲ್ಲ. ಕರ್ಮ ಸಂನ್ಯಾಸವೆಂದರೆ ಅವುಗಳನ್ನು ಸ್ವರೂಪತಃ ಬಿಟ್ಟುಬಿಡುವದೆಂದೇ ಅವನ ಭಾವನೆ. ಕರ್ಮಯೋಗವನ್ನು ಇಷ್ಟು ಸುಂದರವಾಗಿಯೂ ಸುರಸವಾಗಿಯೂ ವರ್ಣಿಸಿ ಕೂಡಲೆ ಕರ್ಮಸಂನ್ಯಾಸ ಮಾಡೆಂದು ಶ್ರೀಕೃಷ್ಣನು ಹೇಳುವನಲ್ಲ (೪-೪೧)! ಮತ್ತೆ ಈ ವಿರೋ ಧಾಭಾಸವೇಕೆ? ಎಂಬ ವಿಕಲ್ಪವು ಅವನಲ್ಲಿ ಹುಟ್ಟಿತು. ಇದಕ್ಕಾಗಿಯೇ ಅವನು ಈ ಅಧ್ಯಾಯದ ಆರಂಭದಲ್ಲಿರುವ ಪ್ರಶ್ನೆಯನ್ನು ಕೇಳಿರುವನು.

ಅರ್ಜುನ ಉವಾಚ—

ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।
ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಂ ॥ ೧ ॥

ಕರ್ಮಯೋಗವನ್ನು ಈ ವರೆಗೆ ಎತ್ತಿಹಿಡಿದು ಈಗ ಮತ್ತೆ ಕರ್ಮಸಂನ್ಯಾಸವನ್ನು ಶ್ರೀಕೃಷ್ಣನು ಏಕೆ ಹೊಗಳುವನು? ಇವೆರಡರಲ್ಲಿ ಹೆಚ್ಚು ಶ್ರೇಯಸ್ಕರವಾದದ್ದು ಯಾವುದೆಂಬುದನ್ನು ಅವನು ಖಂಡಿತವಾಗಿ ಹೇಳಬೇಕು.

ಶ್ರೀ ಭಗವಾನುವಾಚ—

ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।
ತಯೋಸ್ತು ಕರ್ಮಸಂನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ ॥ ೨ ॥

ಶ್ರೀಕೃಷ್ಣನ ಅಭಿಪ್ರಾಯದ ಮೇರೆಗೆ ಕರ್ಮವನ್ನು ಸ್ವರೂಪತಃ ಬಿಟ್ಟುಬಿಡುವದು ಶಕ್ಯವೇ ಅಲ್ಲ. ಇದಕ್ಕಾಗಿಯೇ ಅವನು ಸನ್ಯಾಸವೆಂಬ ಶಬ್ದವನ್ನು ಉಪಯೋಗಿಸಿರಲಿಲ್ಲ. ಶ್ರೀಕೃಷ್ಣನು ಇಲ್ಲಿ ಉಲ್ಲೇಖಿಸಿದ ಸಂನ್ಯಾಸವು ಕರ್ತವ್ಯದೃಷ್ಟಿಯಿಂದ ಕರ್ಮಯೋಗಕ್ಕಿಂತಲೂ ಅಲ್ಪಮಟ್ಟಿಗೆ ಹೀನವೆನಿಸಿದರೂ ಫಲದ ದೃಷ್ಟಿಯಿಂದ ಅದು ಕರ್ಮಯೋಗಕ್ಕೆ ಸರಿಸಮಾನವಾಗಿರುವದು. ಶ್ರೀಕೃಷ್ಣನು ಮನಸ್ಸಿನಲ್ಲಿ ಎಣಿಸಿರುವ ಕರ್ಮಯೋಗವಾಗಲಿ ಸಂನ್ಯಾಸವಾಗಲಿ ಆಚರಿಸುವವನಿಗೆ ಸಮಾನವಾಗಿಯೇ ಶ್ರೇಯವನ್ನು ಸಾಧಿಸಿಕೊಡುವವು. ಸಂನ್ಯಾಸವೆಂದರೆ ಕರ್ಮಬಿಡುವುದೆಂಬ ಅರ್ಜುನನು ಮಾಡುವ ಅರ್ಥವನ್ನೇ ಶ್ರೀಕೃಷ್ಣನು ಒಪ್ಪಿಕೊಳ್ಳಬಹುದು. ಆದರೆ ಹಾಗೆ ಕರ್ಮ ಬಿಟ್ಟದ್ದರಿಂದ ಬಿಡುವವನಿಗೆ ತನ್ನ ಶ್ರೇಯಸ್ಸು ಕೈಗೂಡಬೇಕು. ( ಬುದ್ಧಿ ) ಯೋಗವನ್ನು ಸಾಧಿಸಲು ಯತ್ನಿಸುವವನು ಇಂಥ ಸ್ಥಿತಿಯಲ್ಲಿ ಕೆಲವುಕಾಲ ವರ್ತಿಸುವದು ಸಂಭವನೀಯವಾಗಿದೆ. ಮತ್ತು ಹಾಗಾದಾಗ ಬುದ್ಧಿಯೋಗದಲ್ಲಿ ಅವನಿಗಿರುವ ವಿಶೇಷ ಪ್ರೀತಿಗಾಗಿ ಅವನು ಕರ್ಮವನ್ನು ಲಕ್ಷ್ಯಮಾಡದಿದ್ದರೂ ಅವನ ಶ್ರೇಯವು ತಪ್ಪದೆ ಸಾಧಿಸುವದು. ಕರ್ಮವನ್ನು ಹೀಗೆ ಉಪೇಕ್ಷಿಸುವದು ಇಂಥವನಿಗೆ ಬಾಧಕವಾಗು

ವದಿಲ್ಲ. ಈ ಮರ್ಯಾದೆಯ ಹೊರಗೆ ಅರ್ಜುನನು ಮಾಡುವ ಸಂನ್ಯಾಸ ಶಬ್ದದ ಅರ್ಥವನ್ನು-ಕರ್ಮದ ಸ್ವರೂಪತಃ ತ್ಯಾಗವನ್ನು- ಶ್ರೀಕೃಷ್ಣನು ಒಪ್ಪಲಾರನು. ಅರ್ಜುನನ ಮನಸ್ಸಿನಲ್ಲಿರುವ ಸಂನ್ಯಾಸ ವಿಷಯಕ ಕಲ್ಪನೆಯನ್ನು ಅಂದರೆ ಕರ್ಮವನ್ನು ಬಿಟ್ಟುಬಿಡುವ ಭಾವನೆಯನ್ನು ಶ್ರೀಕೃಷ್ಣನ ಕರ್ಮಯೋಗಕ್ಕೆ ಹೊಂದಿಸುವದು ಎಂದಿಗೂ ಸರಿಯಲ್ಲ. ಆ ಅರ್ಥವನ್ನು ಅರ್ಜುನನು ಬಿಟ್ಟುಬಿಡಬೇಕು.

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ**
**ಬಂಧಾತ್ಪ್ರಮುಚ್ಯತೇ ॥೩॥**

ತನ್ನ ಅಭಿಪ್ರಾಯದ ಮೇರೆಗೆ ಸಂನ್ಯಾಸಿಯು ಯಾವನು, ಅವನ ಆಚರಣೆಯು ಹೇಗಿರುವದೆಂಬದನ್ನು ಶ್ರೀಕೃಷ್ಣನು ಹೇಳುತ್ತಾನೆ. ನಿಜವಾದ ಸಂನ್ಯಾಸಿಗೆ ಇಚ್ಛಾದ್ವೇಷಗಳು ಇರುವದಿಲ್ಲ. ಇವುಗಳನ್ನು ಸಂಪೂರ್ಣವಾಗಿ ಬಿಟ್ಟವನನ್ನು ನಿತ್ಯ ಸಂನ್ಯಾಸಿಯೆಂದೇ ಹೇಳಬೇಕು. ಇವುಗಳನ್ನು ಬಿಟ್ಟ ಸಂನ್ಯಾಸಿಯು ಒಂದು ವೇಳೆ ಕರ್ಮಮಾಡುತ್ತಿರಬಹುದು ಅಥವಾ ಮಾಡದೆಯೂ ಇರಬಹುದು. ಆದರೆ, ಇಂಥವನು ಕರ್ಮ ಬಿಟ್ಟಾಗ ಹೇಗೆ ಸಂನ್ಯಾಸಿಯೆನಿಸುವನೋ ಹಾಗೆಯೇ ಕರ್ಮ ಮಾಡುವಾಗಲೂ ಸಂನ್ಯಾಸಿಯನಿಸುವನು. ಇಚ್ಛಾದ್ವೇಷಗಳನ್ನು ಬಿಟ್ಟು ಯಾವನು ನಿರ್ದ್ವಂದ್ವನಾದನೋ ಅವನು ಕರ್ಮ ಮಾಡಲಿ ಬಿಡಲಿ, ಖಂಡಿತವಾಗಿ ಸಂನ್ಯಾಸಿಯಹುದೆಂದು ಅರ್ಜುನನು ತಿಳಿಯಬೇಕು. ಕರ್ಮವನ್ನು ಮಾಡಿದರೂ ಬಂಧನವಿಲ್ಲ; ಬಿಟ್ಟರೂ ಬಂಧನವಿಲ್ಲ. ಇಚ್ಛಾದ್ವೇಷ ರಹಿತವಾದ ಸಂನ್ಯಾಸಕ್ಕೆ ಶ್ರೀಕೃಷ್ಣನು ಸಂನ್ಯಾಸವೆಂದು ಹೇಳಲೊಪ್ಪುವನು. ಇಂಥ ಸಂನ್ಯಾಸವು ಫಲದ ದೃಷ್ಟಿಯಿಂದ ಕರ್ಮಯೋಗಕ್ಕೆ ಸರಿಸಮಾನವಾಗಿದೆ.

**ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಂ ॥೪॥**

ಇಚ್ಛಾದ್ವೇಷಗಳನ್ನು ಬಿಡುವದಕ್ಕೆ ಸಂನ್ಯಾಸವೆಂಬ ಹೆಸರು ಉಚಿತವು. ಇಂಥ ಸನ್ಯಾಸವನ್ನು ಯಾರು ಹೇಗೆ ಸಾಧಿಸಿದರೂ ಒಳ್ಳೆಯದು.

(ಬುದ್ಧಿ)ಯೋಗವನ್ನಾಶ್ರಯಿಸಿ ಈ ನಿರ್ದ್ವಂದ್ವ ಸ್ಥಿತಿಯನ್ನು-ಸನ್ನ್ಯಾಸವನ್ನು- ಹೇಗೆ ಸಾಧಿಸಬಹುದೋ ಹಾಗೆಯೇ ಗೀತಾಸಾಂಖ್ಯವನ್ನು ಅನುಸರಿಸಿಯಾದರೂ ಸಾಧಿಸಬಹುದು. ಬಂಧನವನ್ನು ಹೋಗಲಾಡಿಸುವದು ಈ ನಿರ್ದ್ವಂದ್ವಸ್ಥಿತಿಯೇ ಆದುದರಿಂದ ಸಂನ್ಯಾಸವನ್ನು ಯೋಗದಿಂದ ಸಾಧಿಸಲಿ ಸಾಂಖ್ಯದಿಂದ ಸಾಧಿಸಲಿ, ಅದು ಕೊನೆಗೆ ಮುಕ್ತಿಯನ್ನು ಕೈಗೂಡಿಸುವದು. ಈ ಕಾರಣ, ಸಾಂಖ್ಯವೂ ಕರ್ಮಯೋಗವೂ ಬೇರೆಬೇರೆಯೆಂದು ಭಾವಿಸುವವರು ಅಜ್ಞರು, ಪಂಡಿತರಲ್ಲ. ಇವುಗಳಲ್ಲಿ ಯಾವದೊಂದು ಮಾರ್ಗವನ್ನು ಹಿಡಿದರೂ ಕೊನೆಯಸಾಧ್ಯವು ತಪ್ಪದೆ ಸಾಧಿಸುವದು; ಮತ್ತು ಈ ಸಾಧ್ಯವು ಎರಡೂ ಮಾರ್ಗಗಳಿಗೆ ಸಾಮಾನ್ಯವಾಗಿರುವದು.

**ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥ ೫ ॥**

ಮುಕ್ತಿಯೇ ಜೀವನಕ್ಕೆ ಧ್ಯೇಯವಾಗಿದೆ. ಮುಕ್ತಿಯು ಬುದ್ಧಿಯೋಗವಿಲ್ಲದೆ ಸಾಧಿಸದು. ಈ ಬುದ್ಧಿಯೋಗದಲ್ಲಿ ಪರಿಣಮಿಸುವ ಸಾಂಖ್ಯವು ಶ್ರೀಕೃಷ್ಣನಿಗೆ ಸಮ್ಮತವಾಗಿರುವದು. ಏಕೆಂದರೆ, ಅದು ಬುದ್ಧಿಯೋಗಕ್ಕೆ ಮೊದಲನೆಯ ಮೆಟ್ಟು. ಹೀಗೆ ಮನುಷ್ಯನು ಇಚ್ಛಾದ್ವೇಷರಹಿತ ಸಂನ್ಯಾಸವನ್ನು ಸಾಂಖ್ಯಸ್ಥಿತಿಯಲ್ಲಿ ಆಚರಿಸಿದರೂ ಬುದ್ಧಿಯೋಗವೇ ಫಲಿತವಾಗಿ ಕೊನೆಗೆ ಮುಕ್ತಿಯು ಖಂಡಿತವಾಗಿ ದೊರೆಯುವದು. ಯಾವ ಸಾಂಖ್ಯವು ಹೀಗೆ ಪರಿಣಮಿಸುವದಿಲ್ಲವೋ ಅದನ್ನು ಗೀತೆಯು ಆಸುರವೆಂದು ಹೇಳುವದು. ಇಲ್ಲಿ ವಿವರಿಸಲ್ಪಡುತ್ತಿರುವ ದೈವೀ ಸಾಂಖ್ಯವು ಕರ್ಮಯೋಗಕ್ಕೆ ಸಮಾನವೇ ಸರಿ. ಏಕೆಂದರೆ, ಅದು ಬುದ್ಧಿಯೋಗಮಾರ್ಗವಾಗಿ ಮುಕ್ತಿಯನ್ನು ಸಾಧಿಸದಿರದು. ಆದ ದರಿಂದ, ಸಾಂಖ್ಯ ಮತ್ತು ಕರ್ಮಯೋಗಗಳು ಒಂದೇ ಎಂದು ತಿಳಿಯಬೇಕು. ಇದನ್ನರಿತವನೇ ನಿಜವಾದ ಜ್ಞಾನಿಯು.

**ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥ ೬ ॥**

ಕೇವಲ ಸಾಂಖ್ಯದಿಂದ ಸಾಧಿಸಿದ ನಿರ್ದ್ವಂದ್ವ ಸ್ಥಿತಿಯು ಸ್ಥಿರವಾಗಿ

ನಿಲ್ಲಲಾರದು. ಹಾಗೆ ಅದನ್ನು ನಿಲ್ಲಿಸುವದಕ್ಕಾಗಿ ಪ್ರಯಾಸಪಟ್ಟರೆ ದುಃಖವು ಮಾತ್ರ ಉಂಟಾಗುವದು. ಏಕೆಂದರೆ, ಸಾಂಖ್ಯದಲ್ಲಿ ಯೋಗವು-ಪುರುಷೋತ್ತಮನ ವಿಷಯದ ಆಸಕ್ತಿಭಾವವು ಅಥವಾ ಪ್ರೇಮವು-ಇರುವದಿಲ್ಲ. ಅದೇ ನಿರ್ದ್ವಂದ್ವನಾಗಬೇಕೆಂದು ಯತ್ನಿಸುವ ಮುನಿಯು (ಬುದ್ಧಿ) ಯೋಗಯುಕ್ತನಾದರೆ-ಪುರುಷೋತ್ತಮನಲ್ಲಿ ಆಸಕ್ತನಾದರೆ (೨-೬೧)-ಅಲ್ಪಾವಧಿಯಲ್ಲಿ ಅದು ಸಫಲವಾಗುವದು. **ಹೀಗೆ ಯೋಗಯುಕ್ತನಾಗಿ ಕರ್ಮ ಮಾಡುವದೇ ಗೀತೆಯಲ್ಲಿ ಕರ್ಮಯೋಗವೆನಿಸುವದು.**

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥ ೭ ॥**

ಇನ್ನು, ಬುದ್ಧಿಯೋಗಯುಕ್ತನಾಗುವದರಿಂದ ನಿರ್ದ್ವಂದ್ವ ಸ್ಥಿತಿಯು ಹೇಗೆ ಸಾಧಿಸುವದೆಂಬದನ್ನು ಶ್ರೀಕೃಷ್ಣನು ಹೇಳುವನು. ಮುನಿಯು ಯೋಗಯುಕ್ತನಾದರೆ ಅವನ ಬುದ್ಧಿಯು ಸಾತ್ತ್ವಿಕವೂ ಶುದ್ಧವೂ ಆಗುವದು. ಅವನ ಮನಸ್ಸಿನ ರಾಜಸವೃತ್ತಿಯು ಹಿಂಗುವದು, ಮತ್ತು ಅವನ ಇಂದ್ರಿಯಗಳ ತಾಮಸವು ಕುಗ್ಗಿ ಅವು ಆವನಿಗೆ ವಶವಾಗುವವು. ಇಷ್ಟೆಲ್ಲ ಸಾಧಿಸುವದಕ್ಕೆ ಹೆಚ್ಚಿನ ಪ್ರಯಾಸದಿಂದ ಅವನು ಹೆಣಗಬೇಕಾಗುವದಿಲ್ಲ. ಎಲ್ಲ ಭೂತಗಳಲ್ಲಿಯೂ ಏಕತ್ವದಿಂದ ವಾಸಮಾಡುವ ಪುರುಷೋತ್ತಮನ ಸಾಕ್ಷಾತ್ಕಾರವು ಅವನಿಗೆ ಆಗುವದು; ಮತ್ತು ಹೀಗಾದಾಗ ಅವನು ಹೇಗೆ ವರ್ತಿಸಿದರೂ ಅದರಿಂದ ಅವನಿಗೆ ಲೇಪವು-ಬಂಧನವು-ಉಂಟಾಗುವದಿಲ್ಲ.

**ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ಗಚ್ಛನ್ಸ್ವಪನ್-**
**ಶ್ವಸನ್ ॥ ೮ ॥**

**ಪ್ರಲಪನ್ವಿಸೃಜನ್ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥ ೯ ॥**

ತತ್ತ್ವವನ್ನರಿತ ಯುಕ್ತಾತ್ಮನು ತನ್ನಲ್ಲಿ ಎಲ್ಲ ಕರ್ಮಗಳು ಸಂಭವಿಸುತ್ತಿದ್ದರೂ ತಾನೇ ಅವುಗಳನ್ನು ಮಾಡುವೆನೆಂಬ ಕರ್ತೃತ್ವಬುದ್ಧಿಯನ್ನಿಟ್ಟು

ಕೊಳ್ಳುವದಿಲ್ಲ. ಅಲ್ಲದೆ ತಾನು ಯಾವುದನ್ನೂ ಮಾಡುವದಿಲ್ಲವೆಂಬ ಭಾವನೆಯನ್ನೇ ಅವನು ತಾಳುವನು. ಯೋಗಯುಕ್ತನಾದವನಿಗೆ ಅವನು ಮಾಡುವ ಕರ್ಮಗಳಿಂದ ಬಂಧನವು ಉಂಟಾಗುವದಿಲ್ಲವೆಂದು ಮೇಲೆ ಹೇಳಿದುದಕ್ಕೆ ಇದೇ ಕಾರಣವಾಗಿದೆ. ನೋಡುವಾಗ, ಕೇಳುವಾಗ, ಮುಟ್ಟುವಾಗ, ಮೂಸುವಾಗ, ತಿನ್ನುವಾಗ, ಹೋಗುವಾಗ, ಮಲಗಿದಾಗ ಉಸಿರಾಡಿಸುವಾಗ, ಮಾತಾಡುವಾಗ, ವಿಸರ್ಜನೆಮಾಡುವಾಗ, ಗ್ರಹಣ ಮಾಡುವಾಗ, ಕಣ್ಣಿವೆಗಳನ್ನು ಮುಚ್ಚಿ ತೆರೆಯುವಾಗ ಇಂದ್ರಿಯಗಳು ತಮ್ಮ ವಿಷಯಗಳಲ್ಲಿ ವರ್ತಿಸುತ್ತಲಿರುವವೆಂದು ಭಾವಿಸುವನಲ್ಲದೆ ಇವು ಗಳನ್ನು ತಾನು ಮಾಡುವನೆಂದು ಅವನು ಬಗೆಯುವದಿಲ್ಲ.

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥ ೧೦ ॥**

**ಈ ಪ್ರಕಾರ ಕರ್ತೃತ್ವದ ಅಹಂಕಾರವನ್ನು ಬಿಡುವದೇ ಸಂಗ ಬಿಡುವದು.** ಸಂಗವನ್ನು ಬಿಟ್ಟು ಮಾಡಿದ ಕರ್ಮಗಳು ಸೃಷ್ಟಿಯಲ್ಲಿ ಎಲ್ಲೆಲ್ಲಿಯೂ ಬ್ರಹ್ಮನಿಂದ ಪ್ರಚುರವಾದ ಯಜ್ಞಾರ್ಥ ಕರ್ಮ ಸಮುಚ್ಚಯದಲ್ಲಿ ಸ್ವಭಾವತಃ ಸಮಾವಿಷ್ಟವಾಗಿ ಹೋಗುವವು. ಇದಕ್ಕಾಗಿಯೇ ಸಂಗವನ್ನು ಬಿಟ್ಟು ಕರ್ಮಮಾಡುವವನು ತನ್ನ ಕರ್ಮಗಳನ್ನೆಲ್ಲ ಬ್ರಹ್ಮಾರ್ಪಣ ಮಾಡುವನೆಂದು ತಿಳಿಯಬೇಕು. ಹೀಗೆ ವರ್ತಿಸುವಾಗ ಪಾಪವು ಸಂಭವಿಸುವದು ಎಂದಿಗೂ ಶಕ್ಯವಿಲ್ಲ. ಎಂಥ ಪವಿತ್ರ ಕರ್ಮವಾದರೂ ಸರ್ವಥಾ ದೋಷರಹಿತವಾಗಿ ಇರುವದಿಲ್ಲ ಪ್ರವಾಹ ಪತಿತ ಕರ್ಮದಲ್ಲಿ ದೋಷವು ಕಂಡರೂ–ಪಾಪದ ಸಾನ್ನಿಧ್ಯವು ತೋರಿದರೂ–ಕಮಲಪತ್ರಗಳಿಗೆ ಹೇಗೆ ನೀರಿನ ಸಂಪರ್ಕವು ಬಾಧಕವಾಗುವದಿಲ್ಲವೋ ಹಾಗೆಯೇ ಆ ದೋಷವಾಗಲಿ ಪಾಪವಾಗಲಿ ಕರ್ತೃವಿಗೆ ಬಾಧಕವಾಗುವದಿಲ್ಲ.

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥೧೧॥**

ಸೃಷ್ಟಿಯೊಳಗಿನ ಕರ್ಮಗಳೆಲ್ಲ ಬ್ರಹ್ಮನಲ್ಲಿ ಅಡಕವಾಗುವವು; ತಾವು

ಮಾಡುವ ಕರ್ಮಗಳಾದರೂ ಹಾಗೆಯೇ ಅವನಿಗೆ ಸೇರತಕ್ಕುವು ಎಂಬು ದನ್ನೂ ತಿಳಿದು, ಸಂಗವನ್ನು ಬಿಟ್ಟು, ಅವುಗಳನ್ನು ಬ್ರಹ್ಮನಿಗೆ ಅರ್ಪಿಸು ವವರು ಬಂಧನದಿಂದ ಮುಕ್ತರಾಗಿರುವರು. ಆದರೆ ಹೀಗೆ ಸಂಗವನ್ನು ಬಿಟ್ಟು ಕರ್ಮವನ್ನು ಮಾಡುವದಕ್ಕಿಂತಲೂ ಬ್ರಹ್ಮನನ್ನು ತಿಳಿದ ಯೋಗಿಯು ಕರ್ಮಮಾಡುವದನ್ನೇ ಏಕೆ ಬಿಡಬಾರದು? ಬ್ರಹ್ಮನನ್ನು ತಿಳಿದ ಬಳಿಕ ಕರ್ಮಮಾಡುವ ಅವಶ್ಯವೇನು? ನಿಯತಕರ್ಮಗಳು ಯಾವನಿಗೂ ಬಿಟ್ಟ ದ್ದಲ್ಲ. ಅಂಥ ಕರ್ಮಗಳನ್ನು ಶರೀರಬುದ್ಧಿಮನಸ್ಸುಗಳಿಂದ ಜನ್ಮಾಂತದ ವರೆಗೆ ಮಾಡಿ ತೀರಲೇಬೇಕು. ಹಾಗೆ ಮಾಡುವದನ್ನು ಬಿಟ್ಟರೆ, ಆತ್ಮ ಶುದ್ಧಿಯು-ಬುದ್ಧಿಯು-ಅಳಿದುಹೋಗುವದು. ಇದಕ್ಕಾಗಿ ಕರ್ಮಗಳನ್ನು ಸಂಗವರ್ಜಿತರಾಗಿ ಮಾಡಿ ಅವುಗಳನ್ನು ಯೋಗಿಗಳು ಬ್ರಹ್ಮನಿಗೆ ಅರ್ಪಿಸು ವರು.

**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್ ।**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥ ೧೨ ॥**

ಸಂಗವನ್ನು ಬಿಟ್ಟು ಅಂದರೆ ನಾನು ಏನನ್ನೂ ಮಾಡುವದಿಲ್ಲೆಂಬ ಭಾವದಿಂದ ಕರ್ಮವನ್ನು ಮಾಡುವದೇ ಉತ್ತಮವು. ಆದರೆ, ತಮಗೆ ಕೊಟ್ಟಿರುವ ಕರ್ಮಮಾಡುವ ಅಧಿಕಾರವನ್ನು ವಹಿಸಿ ಸಂಗವನ್ನು ಬಿಡ ದೆಯೂ ಯೋಗಿಗಳು ಕರ್ಮವನ್ನು ಮಾಡುವದುಂಟು. ಇಂಥವರು ಕರ್ಮ ವನ್ನು ಮಾಡುವವರಾದುದರಿಂದ ಕರ್ಮ ಬಿಡುವದರಿಂದುಂಟಾಗುವ ಪತ ನದ ಭಯವು ಇವರಿಗೆ ಇರುವದಿಲ್ಲ. ಆದರೆ, ಇವರು ತಾವು ಮಾಡುವ ಕರ್ಮಗಳ ಫಲವನ್ನು ಸಕಾಲದಲ್ಲಿ ಬಿಟ್ಟುಬಿಡುವರು. ಇದರಿಂದ ಇವರಿಗೆ ಶಾಶ್ವತವಾದ ಶಾಂತಿಯು ದೊರೆಯುವದು. ಶಾಂತಿಯೇ ಮುಕ್ತಿಗೆ ಸಾಧನವಾದುದರಿಂದ ಇವರಂತೆ ಫಲವನ್ನು ಬಿಡುವದಾದರೂ ಶ್ರೇಯ ಸ್ಕರವೇ ಸರಿ.

ಬುದ್ಧಿಯೋಗಯುಕ್ತನಾಗದಿರುವವನು ಸಂಗ ಮತ್ತು ಫಲಗಳಲ್ಲಿ ಯಾವುದನ್ನೂ ಬಿಡದೆ ಕಾಮವಶನಾಗಿ ಅವುಗಳಲ್ಲಿ ಆಸಕ್ತಿಯನ್ನಿಟ್ಟು ಬಂಧ ನಕ್ಕೊಳಪಡುವನು.

**ಸರ್ವ ಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥೧೩॥**

ಅಯುಕ್ತನಲ್ಲಿ ಮನಸ್ಸು ಇಂದ್ರಿಯಗಳಿಗೆ ಅಧೀನವಾಗಿರುವದು. ಆದರೆ (ಬುದ್ಧಿಯೋಗ) ಯುಕ್ತನಾದವನಲ್ಲಿ ಇಂದ್ರಿಯಗಳು ಮನಸ್ಸಿನ ಸ್ವಾಧೀನದಲ್ಲಿರುವವು; ಅಲ್ಲದೆ, ಬುದ್ಧಿಯೋಗದ ಪ್ರಭಾವದಿಂದ ಯುಕ್ತನಾದವನ ಮನಸ್ಸಾದರೂ ಬಹು ನಿಸ್ಪೃಹವಾಗಿರುವದು. ತಾನು ಮಾಡುವ ಕರ್ಮಕ್ಕೆಲ್ಲ ಫಲವು ಉಂಟಾಗಬೇಕೆಂಬ ಲೋಭವು ಮನುಷ್ಯನ ಮನಸ್ಸಿನಲ್ಲಿ ಹುಟ್ಟುವದು. ಎಲ್ಲ ಕರ್ಮಗಳ ನಿರ್ವಾಹವನ್ನೂ ಪ್ರತ್ಯಕ್ಷವಾಗಿ ಮನಸ್ಸೇ ನೋಡಿಕೊಳ್ಳುವದು. ತನ್ನ ಪ್ರಯಾಸದ ಫಲವು ತನಗೇ ದೊರೆಯದೆ ಹೋಗುವದರಿಂದ ಕರ್ಮ ಫಲವನ್ನು ಬಿಟ್ಟುಬಿಡುವಾಗ ಮನಸ್ಸಿಗೆ ಅಪಾರ ದುಃಖವಾಗುವದು ಸಹಜವು. ಆದುದರಿಂದ ಮನಸ್ಸಿನ ನಿಸ್ಪೃಹತೆಯಿಂದ ಯಾವನೊಬ್ಬನ ಸಂನ್ಯಾಸವೃತ್ತಿಯನ್ನು ನಿಶ್ಚಯವಾಗಿ ಪರೀಕ್ಷಿಸಬಹುದು. ಯಾವ ದೇಹಧಾರಿಯಾದ ಆತ್ಮನು ಈ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವನೋ ಅವನು ತನ್ನ ದೇಹಮೂಲಕವಾಗಿ ನಡೆಯುವ ಎಲ್ಲ ಕರ್ಮಗಳನ್ನು ತಾನು ಮಾಡುವದಿಲ್ಲವೆಂದೂ ಮಾಡಿಸುವದಿಲ್ಲವೆಂದೂ ಖಂಡಿತವಾಗಿ ತಿಳಿದು ತನ್ನ ನವದ್ವಾರಯುಕ್ತವಾದ ದೇಹರೂಪ ನಗರದಲ್ಲಿ ಸುಖದಿಂದ ವಾಸಮಾಡುವನು. ಹೀಗೆ ನಿಸ್ಪೃಹನಾದುದರಿಂದ ಅವನಿಗೆ ಬಾಧನವಿಲ್ಲದಾಗಿ ದುಃಖಕ್ಕೆ ಆಸ್ಪದವೇ ಉಳಿಯುವದಿಲ್ಲ. ಮತ್ತು ದುಃಖವಿಲ್ಲದಾದರೆ ಆತ್ಮಮೂಲಕ ಸುಖವು ಅಖಂಡವಾಗಿಯೂ ಶಾಶ್ವತವಾಗಿಯೂ ನಿಲ್ಲುವದು.

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ।**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥೧೪॥**

ದೇಹದಲ್ಲಿ ಇಬ್ಬರು ಪುರುಷರಿರುವರೆಂದು ಗೀತೆಯ ಸಿದ್ಧಾಂತವು-ಒಬ್ಬನು ಜೀವಪುರುಷನು, ಪುರುಷೋತ್ತಮನೇ ಎರಡನೆಯವನು. ದೇಹವು ಜೀವ ಪುರುಷನದೇ ಆಗಿದೆ. ಆ ನವದ್ವಾರಯುಕ್ತವಾದ ನಗರದಲ್ಲಿ ಅವನೇ ಆಳುವ ಅರಸನು. ಪುರುಷೋತ್ತಮನು ಅದರಲ್ಲಿದ್ದರೂ ಆ ದೇಹದ

ಮೇಲೆ ತನ್ನ ಹಕ್ಕು ಹೇಳುವದಿಲ್ಲ. ಅವನು ಅಲ್ಲಿ ಕೇವಲ ಸಾಕ್ಷಿಯಾಗಿರು
ವನು (೧೩-೨೨ ವಿವರಣೆ). ದೇಹಧಾರಿಯಾದ ಜೀವಪುರುಷನು ಯೋಗ
ಯುಕ್ತನಾದಾಗ ತನ್ನ ದೇಹದಲ್ಲಿ ನಡೆಯುವ ಕರ್ಮಗಳ ವಿಷಯದಲ್ಲಿ
ತಾನು ಉದಾಸೀನನಾಗಿರುವನೆಂದೂ ಕರ್ತೃತ್ವದ ಹೊಣೆಯನ್ನು ತಾನು
ಹೊರುವದಿಲ್ಲವೆಂದೂ ಮೇಲೆ ಹೇಳಿದೆ. ಆ ಕಾರಣ, ಈ ಭಾರವು ಅದೇ ಶರೀ
ರದಲ್ಲಿರುವ ಪುರುಷೋತ್ತಮನ ಮೇಲೆ ಸಹಜವಾಗಿಯೇ ಬೀಳಬೇಕೆಂದು
ಸಕೃದ್ದರ್ಶನದಲ್ಲಿ ತೋರುವದು. ಆದರೆ ಅದು ಹಾಗೂ ಬೀಳುವದಿಲ್ಲ
ವೆಂದು ಈ ಶ್ಲೋಕದಲ್ಲಿ ಹೇಳಿದೆ. ಈ ಸೃಷ್ಟಿಗೆ ಕರ್ತೃವೂ ಪ್ರಭುವೂ ಆದ
ಪುರುಷೋತ್ತಮನು ಜೀವ ಪುರುಷನ ದೇಹದಲ್ಲಿ ಪ್ರತ್ಯಕ್ಷವಾಗಿ ಇದ್ದರೂ
ಅಲ್ಲಿ ನಡೆಯುವ ಕರ್ಮವನ್ನು ನಿಯಮಿಸುವ ಅಥವಾ ನಡೆಸುವ ಹೊಣೆಯ
ನ್ನು ತಾನು ವಹಿಸುವದಿಲ್ಲ ಒಬ್ಬ ಜೀವಭೂತನ ಶರೀರದಲ್ಲಿಯೇ ಅಲ್ಲದೆ
,ಸೃಷ್ಟಿಯಲ್ಲೆಲ್ಲಿಯೂ ಕಂಡು ಬರುವ ಕರ್ತೃತ್ವಕ್ಕಾಗಲಿ ಕರ್ಮಗಳಿಗಾಗಲಿ
ಕರ್ಮದಿಂದ ಸಂಭವಿಸುವ ಫಲಕ್ಕಾಗಲಿ ತಾನು ಕಾರಣವಾಗುವ
ದಿಲ್ಲೆಂದು ಇಲ್ಲಿ ಶ್ರೀಕೃಷ್ಣನು ಹೇಳುವನು. ಹೀಗೆ ಜೀವಪುರುಷ ಪುರು
ಷೋತ್ತಮರಿಬ್ಬರೂ ತಾವು ಕಾರಣರಲ್ಲೆಂದ ಬಳಿಕ ಕರ್ತೃತ್ವ, ಕರ್ಮ, ಫಲ
ಇವಕ್ಕೆ ವ್ಯಷ್ಟಿಯಲ್ಲಾಗಲಿ ಸಮಷ್ಟಿಯಲ್ಲಾಗಲಿ ಪ್ರೇರಕ ಶಕ್ತಿಯು
ಯಾವದು? ಈ ಪ್ರಶ್ನೆಗೆ " ಸ್ವಭಾವಸ್ತು ಪ್ರವರ್ತತೇ " ಎಂಬದಾಗಿ ಇಲ್ಲಿ
ಉತ್ತರವು ಹೇಳಿದೆ.

ತನ್ನ ಒಂದು ಅಂಶಮಾತ್ರದಿಂದ ನಿರ್ಮಿಸಿ (೧೦-೪೨) ದಾಗಲೇ
ಅದರ ರಚನೆ, ಸ್ಥಿತಿ, ಲಯ ಮುಂತಾದ ವಿಷಯದ ಎಲ್ಲ ನಿಯಮಗಳನ್ನು
ನಿಶ್ಚಿತವಾಗಿ ಮಾಡಿ, ಅವುಗಳನ್ನೆಲ್ಲ ಆ ಅಂಶಕ್ಕೆ ಸ್ವಾಧೀನಪಡಿಸಿ, ಆ
ಅಂಶವೇ ಆ ನಿಯಮಗಳನ್ನು ನಡೆಯಿಸುವ ಹಾಗೆ ತಾನು ನಿಯಮಿಸಿ
ಬಿಟ್ಟನು–ಈ ಅಂಶವೇ ಬ್ರಹ್ಮವೆನಿಸುವದು. ಕರ್ಮಗಳ ಉತ್ಪತ್ತಿಗಾಗಲಿ
ಕರ್ತೃತ್ವಕ್ಕಾಗಲಿ ಕರ್ಮದಿಂದ ಪ್ರಾಪ್ತವಾಗುವ ಫಲಕ್ಕಾಗಲಿ ಸಂಪೂರ್ಣ
ವಾಗಿಯೂ ಸರ್ವಕಾಲದಲ್ಲಿಯೂ ಈ ಬ್ರಹ್ಮನೇ ಕಾರಣನಾಗಿರುವನು.
**ನೇಮಿಸಿಕೊಟ್ಟ ನಿಯಮಾನುಸಾರವಾಗಿ ನಿರಂತರವೂ ನಿರಲಸವಾ
ಗಿಯೂ ಸೃಷ್ಟಿಯೊಳಗಿನ ಕರ್ಮಚಕ್ರವನ್ನು ನಡೆಸುವದು ಈ ಬ್ರಹ್ಮನ**

**ಕರ್ತವ್ಯವಾಗಿದೆ.** ಹಾಕಿಕೊಟ್ಟ ನಿಯಮಗಳನ್ನು ಇವನು ಎಂದಿಗೂ ಉಲ್ಲಂಘಿಸುವದಿಲ್ಲವೆಂದೂ ನಿಶ್ಚಲನಾಗಿ ಅವುಗಳನ್ನು ಪರಿಪಾಲಿಸುವ ನೆಂದೂ ಅವನು ಈ ಪ್ರಕಾರ ನಡೆಯಿಸುವ ಕರ್ಮಚಕ್ರದ ಗತಿಯನ್ನೇ "ಸ್ವಭಾವದ ಪ್ರವೃತ್ತಿ" ಎಂದು ಇಲ್ಲಿ ಉಲ್ಲೇಖಿಸಿದೆ. ಯೋಗ ಯುಕ್ತನಾದ ಜೀವಭೂತನೂ ಅಧಿಯಜ್ಞನಾದ ಪುರುಷೋತ್ತಮನೂ ಉದಾಸೀನರಾಗಿ ಶರೀರದಲ್ಲಿರುವಾಗ ಅಲ್ಲಿ ಜರುಗುವ ಕರ್ತೃತ್ವವಾಗಲಿ ಕರ್ಮಗಳಾಗಲಿ ಫಲಸಂಯೋಗವಾಗಲಿ ಈ ಕೂಟಸ್ಥ ಬ್ರಹ್ಮನಿಂದಲೇ ನಡೆಯಿಸಲ್ಪಡುವವು. ಯುಕ್ತನಾದ ಜೀವಭೂತನು "ನೈವ ಕಿಂಚಿತ್ಕರೋ ಮ್ಯಹಂ" ಎಂದು ಹೇಳುವಾಗ ಅವನ ಶರೀರದಲ್ಲಿ ನಡೆಯುವ ಕರ್ಮಗಳ ನ್ನೆಲ್ಲ ಅವನು ಬ್ರಹ್ಮನಿಗೆ ಅರ್ಪಿಸಿಬಿಟ್ಟಿರುವನೆಂದು ಹೇಳಿದುದಾದರೂ (೫-೧೦) ಇದಕ್ಕಾಗಿಯೇ.

**ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ।**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ॥೧೫॥**

ಸೃಷ್ಟಿಯ ನಿತ್ಯದ ವ್ಯವಹಾರವನ್ನು ತನ್ನ ಪ್ರಕೃತಿಸ್ವರೂಪನಾದ ಬ್ರಹ್ಮನಿಗೆ ಒಪ್ಪಿಸಿಕೊಟ್ಟು ಆ ವಿಷಯದ ನಿಯಮಗಳನ್ನು ವಿಧಿಸಿ ತಾನು ಅದರಲ್ಲಿ ಕೈಹಾಕುವದಿಲ್ಲೆಂಬುದನ್ನು ಶ್ರೀಕೃಷ್ಣನು ಮೇಲೆ ಸೂಚಿಸಿರು ವನು. ಸರ್ವಸಾಧಾರಣವಾಗಿ ನಡೆಯುವ ಶಿಷ್ಟರ ಸಂರಕ್ಷಣೆಯಾಗಲಿ ದುಷ್ಟರ ದಂಡನೆಯಾಗಲಿ ಈ ಕಾರಣಕ್ಕಾಗಿ ಸ್ವಭಾವ ನಿಯಮಾನುಸಾರ ಬ್ರಹ್ಮನಿಂದಲೇ ಸ್ವತಂತ್ರವಾಗಿ ನಿರ್ವಹಿಸಲ್ಪಡುವದು. ಸರ್ವವ್ಯಾಪಿ ಪುರು ಷೋತ್ತಮನು ಜೀವಭೂತರ ದೇಹಗಳಲ್ಲಿ ಪ್ರತ್ಯಕ್ಷವಾಗಿ ವಾಸಿಸಿದರೂ ಅಲ್ಲಿ ಸಂಭವಿಸುವ ಪಾಪ ಪುಣ್ಯಗಳ ವಿಷಯದಲ್ಲಿ ಕೇವಲ ಉದಾಸೀನನಾಗಿರು ವನು. ಅವನು ಯಾರ ಪಾಪವನ್ನಾಗಲಿ ಪುಣ್ಯವನ್ನಾಗಲಿ ಸ್ವೀಕರಿಸುವದಿಲ್ಲ. ಹಾಗೆಯೇ ಪಾಪವಾವುದು, ಪುಣ್ಯವಾವುದು ಎಂಬದನ್ನು ನಿರ್ಣಯಿಸು ವದೂ ಇಲ್ಲ. **ಪ್ರಾಣಿಗಳ ಸ್ವಭಾವದಲ್ಲಿ ಜ್ಞಾನವನ್ನು ಅಜ್ಞಾನವು ಮುಸುಕಿರುವದು. ಆತ್ಮಸ್ವಭಾವವೇ ಅದರೊಳಗೆ ಜ್ಞಾನವು. ಇಂದ್ರಿಯ ಸ್ವಭಾವವೇ ಅಜ್ಞಾನವು.** ಬ್ರಹ್ಮನ ಅಕ್ಷರ (ಸ್ಖಲನ ಶೀಲವಲ್ಲದ)

ಸ್ವಭಾವದಿಂದ ಉದ್ಭವಿಸಿದ ಸೃಷ್ಟಿಯೊಳಗಿನ ಸರ್ವಜೀವಭೂತರೂ ಕ್ಷರ (ಸ್ಖಲನಶೀಲ) ಸ್ವಭಾವವುಳ್ಳವರಾಗುವದಕ್ಕೆ ಇದೇ ಕಾರಣವು. ಈ ಅಜ್ಞಾನ ವೆಂಬ ಆವರಣದ ಮೂಲಕ ಪ್ರಾಣಿಗಳು ಮೋಹಕ್ಕೊಳಗಾಗುವರು; ಮತ್ತು ಅವರಲ್ಲಿ ಪಾಪವು ಸಂಭವಿಸುವದು.

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಂ ॥ ೧೬ ॥**

ಮನುಷ್ಯಸ್ವಭಾವದಲ್ಲಿ ಜ್ಞಾನ ಅಜ್ಞಾನಗಳೆರಡೂ ಅಡಕವಾಗಿದ್ದು ಪ್ರಾಣಿಗಳು ಅಜ್ಞಾನವೆಂಬ ಬಲೆಯಲ್ಲಿ ಸಿಲುಕುವರೆಂದು ಮೇಲೆ ಹೇಳಿದೆ. ಆದರೆ ಅವರೊಳಗಿರುವ ಜ್ಞಾನವು ಇಷ್ಟು ಹತಬಲವಾಗುವ ಕಾರಣವಿಲ್ಲ. ಅಜ್ಞಾನಿಯು ಅಂದರೆ ಇಂದ್ರಿಯ ಸ್ವಭಾವಕ್ಕೆ ಮೋಹಿತನಾಗುವವನು ಹಾಗೆ ನಿರ್ಧರಿಸಿದರೆ, ಅಜ್ಞಾನವನ್ನು ನಿಮಿಷಮಾತ್ರದಲ್ಲಿ ಅವನು ಕಳೆದುಕೊಳ್ಳ ಬಹುದು. ಅದು ಹೇಗೆಂಬುದನ್ನು ಈ ಮೊದಲೇ ಹೇಳಿದೆ (೨-೬೧. ೪-೩೬-೩೯). ಪ್ರಯತ್ನದಿಂದ ಅಜ್ಞಾನವು ಒಮ್ಮೆ ನಷ್ಟವಾಗಿ ಜ್ಞಾನವು ತಲೆದೋರಿದರೆ ಆ ಪುರುಷನಿಗೆ ಜ್ಞಾನವೆಂದರೇನೆಂಬುದು ಸೂರ್ಯಪ್ರಕಾಶ ಕ್ಕಿಂತಲೂ ಸ್ವಚ್ಛವಾಗಿ ಕಾಣುವದು. ಎಂದರೆ ಇಂಥವನಿಗೆ ಜ್ಞಾನದ ತುದಿಮೊದಲು ಏನೆಂಬುದರ ಬಗೆಗೆ ಸಂಶಯವೇ ಉಳಿಯುವದಿಲ್ಲ.

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥ ೧೭ ॥**

ಹೀಗೆ ಜ್ಞಾನವನ್ನರಿತೊಡನೆ ಮನುಷ್ಯನ ಬುದ್ಧಿಯು ಅದರಲ್ಲಿಯೇ ಲೀನವಾಗುವದು. ಆತ್ಮವು ಅದರಲ್ಲಿಯೇ ಯುಕ್ತವಾಗುವದು. ಮನಸು ಅದರಲ್ಲಿಯೇ ರಮಿಸತೊಡಗುವನು. ಇಂದ್ರಿಯಗಳಾದರೂ ಅದನ್ನೇ ಅನುಸರಿಸುವವು. ಜೀವಪುರುಷನು ಈ ರೀತಿಯಾಗಿ ತನ್ನ ಸ್ವಭಾವಚತುಷ್ಟಯದಿಂದಲೂ ಜ್ಞಾನದಲ್ಲಿ ನೆಲೆಯಾಗಿ ನಿಂತನೆಂದರೆ ಅವನಲ್ಲಿ ಪಾಪಗಳೆಲ್ಲ ಅಳಿದು ಹೋಗುವವು. ಬಂಧನವು ಉಂಟಾಗದು. ಬಂಧನವು ತಪ್ಪಿದ ಮೇಲೆ ಪುನರ್ಜನ್ಮಗಳಿಲ್ಲದಾಗುವವು.

**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ।**
**ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥೧೮॥**

ಮೇಲೆ ಹೇಳಿದಂತೆ (ವಿ) ಜ್ಞಾನವು ಅನುಭವಕ್ಕೆ ಬಂದವನನ್ನೇ ಪಂಡಿತನೆನ್ನತಕ್ಕದ್ದು. ಇಂಥ ಪಂಡಿತನನ್ನು ತಿಳಿಯುವದು ಹೇಗೆಂದು ಅರ್ಜುನನು ಕೇಳಬಹುದು. ವಿಜ್ಞಾನ ಮೂಲಕವಾಗಿ ತನ್ನ ಆತ್ಮದಲ್ಲಿಯೂ ಬುದ್ಧಿಯಲ್ಲಿಯೂ ಮನಸ್ಸಿನಲ್ಲಿಯೂ ಇಂದ್ರಿಯ ಸ್ಥಿತಿಯಲ್ಲಿಯೂ ಆಗುವ ಪಲ್ಲಟವನ್ನು ಅವನೇ ಅನುಭವಿಸುವದು ನಿಜ. ಆದರೆ ಇಂಥ ಪಂಡಿತ ನನ್ನು ಹೆರವರು ಕಂಡುಹಿಡಿಯುವದು ಹೇಗೆ?

ಇಂಥ ಪಂಡಿತನು ವಿದ್ಯಾವಿನಯಸಂಪನ್ನನಾದ ಬ್ರಾಹ್ಮಣನನ್ನು, ಆಕಳನ್ನು, ಆನೆಯನ್ನು, ನಾಯಿಯನ್ನು, ಚಾಂಡಾಲನನ್ನು ಸಮದೃಷ್ಟಿ ಯಿಂದ ನೋಡುವನು. ಇದೇ ಅವನಲ್ಲಿ ಕಂಡುಬರುವ ಮುಖ್ಯ ಲಕ್ಷ ಣವು.

ಹೀಗೆ ಹೇಳುವದರ ಅರ್ಥವೇನಿರಬಹುದು? ಯಾವನೊಬ್ಬನು ಇವ ನ್ನೆಲ್ಲ ಸಮವಾಗಿ ಭಾವಿಸಿದರೆ ಲೌಕಿಕದಲ್ಲಿ ಅವನನ್ನು ಸಮಂಜಸನೆಂದು ಹೇಳಲಾದೀತೇ? ಹಾಗೆ ಭಾವಿಸುವದು ಶಕ್ಯವೂ ಸಮಂಜಸವೂ ಎಂದು ಭಾವಿಸುವ. ಆದರೆ ಹಾಗೆ ತಿಳಿಯುವದರ ಫಲವೇನು? ಆನೆಯನ್ನೂ ನಾಯಿಯನ್ನೂ ಸಮಾನವೆಂದೆಣಿಸಿದ್ದರಿಂದ ಅವುಗಳ ವಿಷಯದಲ್ಲಿ ಈ ಪಂಡಿ ತನ ಆಚರಣೆಗೂ ಸಾಮಾನ್ಯ ಮನುಷ್ಯನ ಆಚರಣೆಗೂ ವ್ಯತ್ಯಾಸವೇನಾಗ ಬಹುದು?

ಈ ಶ್ಲೋಕದ ಭಾವವನ್ನು ತಿಳಿದುಕೊಳ್ಳಲಿಕ್ಕೆ ಮೇಲಿನ ಪ್ರಶ್ನೆಗಳಿಗೆ ಸಮಾಧಾನ ಹೇಳುವದು ಅವಶ್ಯವೆಂದು ನಮಗೆ ತೋರುತ್ತದೆ. ಇಲ್ಲಿ ಉಲ್ಲೇಖಿಸಿರುವ ಸಮತ್ವವು ಆ ವಸ್ತುಗಳಲ್ಲಿಲ್ಲವೆಂದೂ ಅದು ಆ ಪಂಡಿತನ ದೃಷ್ಟಿಯಲ್ಲಿರುವದೆಂದೂ ಮೊದಲು ಗಮನಿಸಬೇಕು. ಎಂದರೆ ಈ ಶ್ಲೋಕದ ಅರ್ಥವನ್ನು ಸುಲಭವಾಗಿ ಗ್ರಹಿಸಬಹುದು. ವಸ್ತುಗಳಲ್ಲಿ ಇಲ್ಲದ ಸಮ ತ್ವವು ಈ ಪಂಡಿತನ ದೃಷ್ಟಿಯಲ್ಲಾದರೂ ಹೇಗೆ ಬರಬಹುದು? ಇದನ್ನು ಕುರಿತು ಇಲ್ಲಿ ಸ್ವಲ್ಪ ವಿಚಾರಮಾಡುವ.

ಮೇಲೆ ಹೇಳಿದ ವಸ್ತುಗಳೆಲ್ಲವೂ ಹೇಗಿರುವವೆಂದರೆ, ಅವುಗಳಲ್ಲಿ ಒಂದೊಂದನ್ನು ಉಚ್ಚರಿಸಿದ ಮಾತ್ರಕ್ಕೆ ಯಾವದೊಂದು ವಿಶೇಷ ಭಾವನೆಯು ಮನುಷ್ಯನ ಮನಸ್ಸಿನಲ್ಲಿ ಸಹಜವಾಗಿ ಬರುವದು. ವಿದ್ಯಾವಿನಯಸಂಪನ್ನನಾದ ಬ್ರಾಹ್ಮಣನ ವಿಷಯದಲ್ಲಿ ಪೂಜ್ಯಭಾವವು, ಆಕಳ ಬಗೆಗೆ ಕೃತಜ್ಞತೆಯು, ಆನೆಯ ಬಗೆಗೆ ಆಶ್ಚರ್ಯವು, ನಾಯಿಯ ಬಗೆಗೆ ತಿರಸ್ಕಾರವು ಚಾಂಡಾಲನ ಬಗೆಗೆ ಹೇಸಿಕೆಯು ಉದ್ಭವಿಸುವವು. ಸಾಮಾನ್ಯ ಮನುಷ್ಯನ ಮನಸ್ಸಿನಲ್ಲಿ ಈ ಭಾವಗಳು ಪ್ರಬಲವಾಗಿ ನೆಲೆಗೊಂಡಿರುವವು. ಸಮಾಜಗಳ ನಡೆನುಡಿಗಳಲ್ಲಿ ಅವು ದೃಢವಾಗಿರುವದೇ ಇದಕ್ಕೆ ದೃಷ್ಟಾಂತವು. ಈ ಭಾವನೆಗಳ ಪ್ರಾಬಲ್ಯವು ದೇಶಕಾಲಗಳ ಭೇದದಿಂದ ಸಹ ಬದಲಾಗುವದಿಲ್ಲವೆಂಬದನ್ನು ಲಕ್ಷ್ಯಕ್ಕೆ ತಂದರೆ ಮನುಷ್ಯನ ಮನಸ್ಸಿನ ಮೇಲೆ ಅವುಗಳ ಹಿಡಿತವು ಎಷ್ಟಿರುವದೆಂಬದನ್ನು ಅನುಮಾನಿಸಬಹುದು. ಇಂಥ ಭಾವನೆಗಳು ಪಂಡಿತನ ಮನಸ್ಸಿನ ಮೇಲೆ ತಮ್ಮ ಪ್ರಭಾವವನ್ನು ತೋರಿಸಲಾರವು. ಅವನ ದೃಷ್ಟಿಯು ನಿಚ್ಚಳವಾಗಿದ್ದು ಅವನ ಭಾವಗಳಾದರೂ ಸಮವಾಗಿಯೂ ಸ್ಥಿರವಾಗಿಯೂ ಇರುವವು. ಪಂಡಿತನು ಸಮದೃಷ್ಟಿಯನ್ನು ಸಾಧಿಸುವದಕ್ಕಾಗಿ ಬ್ರಾಹ್ಮಣನನ್ನು ತಿರಸ್ಕರಿಸುವದಿಲ್ಲ. ಇಲ್ಲವೆ ನಾಯಿಯನ್ನು ಪೂಜಿಸುವದಿಲ್ಲವೆಂಬದು ನಿಜವು. ಆದರೆ ಬ್ರಾಹ್ಮಣನ ವಿಷಯದ ಪೂಜ್ಯ ಭಾವವಾಗಲಿ ನಾಯಿಯ ವಿಷಯದ ತಿರಸ್ಕಾರವಾಗಲಿ ಯಥೋಚಿತ ಗೌರವ ಹಾಗು ದಯೆ ಎಂಬ ಸಮಚಿತ್ತ ಮೂಲಕ ಭಾವನೆಗಳನ್ನು ಮೀರಲಾರವು. ಈ ಶ್ಲೋಕದಲ್ಲಿ ಹೇಳಿರುವ ಆ ಪಂಡಿತನ ಮನಸಿನ ಸಮಾಧಾನವನ್ನೂ ಸಮತ್ವವನ್ನೂ ಹೇಗೆಯೇ ತಿಳಿಯಬೇಕೆಂದು ನಮಗೆ ತೋರುವದು.

**ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇಸ್ಥಿತಂ ಮನಃ ।**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥ ೧೯ ॥**

ಮೇಲೆ ಹೇಳಿದಂತೆ ಮನಸ್ಸನ್ನು ಸ್ಥಿರಪಡಿಸುವದು ತೋರುವಷ್ಟು ಸುಲಭವಲ್ಲ. ಬುದ್ಧಿಯೋಗವನ್ನು ಪಡೆಯದೆ ಈ ಸಮಸ್ಥಿತಿಯನ್ನು ಸಾಧಿಸುವದು ಶಕ್ಯವಲ್ಲೆಂದು ಗೀತೆಯು ನಿಷ್ಕರ್ಷೆಯಿಂದ ಹೇಳುವದು.

ಈ ಸಮತ್ವವೆಂದರೆ (ಬುದ್ಧಿ) ಯೋಗವೆಂದೇ ತಿಳಿಯಬೇಕು. ಇದೇ ಮಾತನ್ನು ಬೇರೆ ಕಡೆಯಲ್ಲಿಯೂ ಹೇಳಿದೆ. ಈ ಯೋಗವನ್ನು ಸಾಧಿಸಿದರೆ ಪುನರ್ಜನ್ಮವನ್ನು ತಪ್ಪಿಸುವದಕ್ಕಾಗಿ ಪರಲೋಕಕ್ಕೆ ಓಡಿಹೋಗುವದು ಮನುಷ್ಯನಿಗೆ ಅವಶ್ಯವಿಲ್ಲ. ಅವನು ಇಹದಲ್ಲಿಯೇ ಶರೀರಯಾತ್ರೆಯು ನಡೆದಿರುವಾಗಲೇ ಅದನ್ನು ಸಾಧಿಸಬಹುದು. ಇಂಥ ಸಶರೀರ ಸ್ಥಿತಿಯಲ್ಲಿ ಪಡೆದ ಮುಕ್ತಿಗೆ ಬ್ರಾಹ್ಮೀಸ್ಥಿತಿಯೆಂಬ ಹೆಸರು. ಏಕೆಂದರೆ, ಯಾವ ಬ್ರಹ್ಮನಲ್ಲಿ ಇಂಥ ಮನುಷ್ಯನು ಸ್ಥಿತನಾಗುವನೋ ಆ ಬ್ರಹ್ಮನ ಯೋಗ್ಯತೆಯೂ ಅಕ್ಷರತ್ವವೂ ಈ ಸಮತ್ವಗುಣವನ್ನೇ ಅವಲಂಬಿಸಿರುವವು. ಬ್ರಹ್ಮನು ಪುರುಷೋತ್ತಮನ ಪ್ರತ್ಯಕ್ಷ ಅಂಶನು. ಅದಕ್ಕಾಗಿ ಪುರುಷೋತ್ತಮನಂತೆಯೇ ಇವನಿಗಾದರೂ ಯಜ್ಞವನ್ನು ಉಪಭೋಗಿಸುವ ಜನ್ಮಸಿದ್ಧವಾದ ಹಕ್ಕೂ ಉಂಟು. ತನ್ನ ತಂದೆಯ ಸೃಷ್ಟಿಸಂಕಲ್ಪವು ಸಾಧ್ಯವಾಗಬೇಕೆಂದು ಈ ಬ್ರಹ್ಮನು ಸ್ವಯಂಸ್ಫೂರ್ತಿಯಿಂದಲೂ ಆನಂದದಿಂದಲೂ ತನ್ನ ಈ ಜನ್ಮಸಿದ್ಧವಾದ ಹಕ್ಕನ್ನು ತ್ಯಾಗಮಾಡಿ—ಬೇರೆ ಎಂದರೆ ಅವನಿಗಾಗಿ ಯಜ್ಞವನ್ನು ಮಾಡುವ ವ್ಯವಸಾಯವನ್ನು ಅಂಗೀಕರಿಸುವನು. ತನ್ನ ಜನ್ಮಸಿದ್ಧವಾದ ಹಕ್ಕನ್ನು ಬಿಟ್ಟುಕೊಟ್ಟುದರಿಂದ ಅವನಿಗೆ ದುಃಖವಾಗಲಿಲ್ಲ; ಅಥವಾ ಆಗುವದೂ ಇಲ್ಲ. ಇದಕ್ಕಾಗಿ ಆತನು ನಿತ್ಯವೂ ಸಮತ್ವದಲ್ಲಿ ಸ್ಥಿತನಾಗಿರುವನು. ಹೀಗೆ ನಿತ್ಯಸಮಾನನಾದುದರಿಂದ ನಿರ್ದೋಷನಾಗಿಯೂ ಇರುವನು. ಅವನ ನಿರ್ದೋಷತ್ವವು ಹೀಗೆ ಅವನ ಸಮತ್ವವನ್ನು ಅವಲಂಬಿಸಿರುವದು. ಆದುದರಿಂದ **ಯಾವನು ಈ ಸಂಸಾರದಲ್ಲಿ—ಪ್ರಪಂಚದಲ್ಲಿ, ಸೃಷ್ಟಿಯಲ್ಲಿ— ಬ್ರಹ್ಮನಂತೆಯೇ ಸಮನಾಗಿಯೂ ನಿರ್ದೋಷನಾಗಿಯೂ ವರ್ತಿಸುವನೋ ಅವನು ಆ ಬ್ರಹ್ಮನಲ್ಲಿ ಸ್ಥಿತನಾಗುವನೆಂಬುದರಲ್ಲಿ ಸಂದೇಹವಿಲ್ಲ.**

**ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಂ।**
**ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥ ೨೦ ॥**

ಮೇಲೆ ಹೇಳಿದ ಯೋಗಿಯ ಸಮತ್ವವು ಬ್ರಾಹ್ಮಣನ ಹಾಗು ನಾಯಿಯ ವಿಷಯವಾಗಿಲ್ಲ. ಆದರೆ ಅವನಿಗೆ ಪ್ರಿಯವೂ ಅಪ್ರಿಯವೂ

ಆದ ಭಾವನೆಗಳ ವಿಷಯವಾಗಿ ಇದೆ. ಪ್ರಿಯವು ಪ್ರಾಪ್ತವಾದರೆ ಯಾವನು ಹರ್ಷೋದ್ದೀಪಿತನಾಗುವದಿಲ್ಲವೋ ಅಥವಾ ಅಪ್ರಿಯವಾದುದು ಪ್ರಾಪ್ತವಾದರೆ ಯಾವನಿಗೆ ಉದ್ವೇಗವು ಉಂಟಾಗುವದಿಲ್ಲವೋ ಅಂಥ ಪೂರ್ಣಜ್ಞಾನಿಯೂ ಸ್ಥಿರಬುದ್ಧಿಯುಳ್ಳವನೂ ಬ್ರಹ್ಮನನ್ನು ತಿಳಿದು ಬ್ರಹ್ಮನನ್ನೇ ಅನುಸರಿಸಿ ನಡೆಯುವನೆಂದು ತಿಳಿಯಬೇಕು.

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ ಸುಖಂ ।**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ॥ ೨೧ ॥**

ತನ್ನ ಇಂದ್ರಿಯ ಸ್ವಭಾವದ ಆಸಕ್ತಿಯನ್ನು ಗಮನಿಸಿ ತನಗೆ ಪ್ರಿಯವಾವುದು ಅಪ್ರಿಯವಾವುದು ಎಂಬುದನ್ನು ಮನುಷ್ಯನು ನಿರ್ಧರಿಸುವನು. ಪ್ರಿಯವೆಂದು ಅವನು ಸ್ವೀಕರಿಸಿದ ಸಂಗತಿಯಿಂದ ಅವನಿಗೆ ಒಂದು ಬಗೆಯ ಸುಖವು ಪ್ರಾಪ್ತವಾಗುವದೇನೋ ನಿಜ. ಆದರೆ ಪ್ರಿಯವನ್ನೂ ಅಪ್ರಿಯವನ್ನೂ ಹೀಗೆ ಇಂದ್ರಿಯಸ್ವಭಾವವನ್ನನುಲಕ್ಷಿಸಿ ನಿರ್ಧರಿಸದೆ, ಅವುಗಳ ವಿಷಯದಲ್ಲಿ ಉದಾಸೀನನಾಗಿದ್ದರೆ, ಅವನಿಗೆ ಬೇರೆ ತರದ ಶ್ರೇಷ್ಠ ಸುಖವು ಅನುಭವಕ್ಕೆ ಬರುವದು. ಈ ಅನುಭವವು ಇಂದ್ರಿಯ ಸ್ವಭಾವದಲ್ಲಿ ಪ್ರಕಟವಾಗುವದಿಲ್ಲ. ಆದರೆ ಅವನ ಆತ್ಮಭಾವದಲ್ಲಿ ಅದು ಪ್ರಕಟವಾಗುವದು. ಇಂದ್ರಿಯ ವೃತ್ತಿಯಿಂದ ಪರಾಙ್ಮುಖನಾದ ಮಾತ್ರಕ್ಕೆ ಈ ಸುಖವು ಅನುಭವಕ್ಕೆ ಬರುವದಾದರೂ ಅದು ಅಷ್ಟರಿಂದಲೇ ನಿತ್ಯವಾಗಿಯೂ ದೃಢವಾಗಿಯೂ ನಿಲ್ಲಲಾರದು. ತನ್ನ ಸ್ವಭಾವದಲ್ಲಿ ನಿತ್ಯವಾಗಿಯೂ ಅಕ್ಷಯವಾಗಿಯೂ ಪಡೆಯಬೇಕಾಗಿರುವ ಸುಖವು ಇದೇ. ಅದನ್ನು ಸಾಧಿಸಲಿಕ್ಕೆ ಅವನ ಪ್ರಯತ್ನದ ಮರ್ಯಾದೆಯು ಕೇವಲ ಅನಾಸಕ್ತಿಗಿಂತಲೂ ಬಹಳ ಮುಂದುವರಿಯಬೇಕು. ಆತ್ಮದಲ್ಲಿಯೇ ಬ್ರಹ್ಮನ ಪ್ರತೀತಿಯನ್ನು ಹೊಂದಿ ಆ ಬ್ರಹ್ಮನು ಯಾವ ಯೋಗಯುಕ್ತ-ಅಧ್ಯಾತ್ಮ-ಸ್ಥಿತಿಯಲ್ಲಿ ನಿಂತು ಪುರುಷೋತ್ತಮನಿಗಾಗಿ ಯಜ್ಞವನ್ನು ಮಾಡುತ್ತಲಿರುವನೋ ಅದೇ ಯೋಗಯುಕ್ತ ಸ್ಥಿತಿಯನ್ನು ಪೂರ್ಣವಾಗಿ ಸಾಧಿಸಬೇಕು; ಮತ್ತು ಅವನಂತೆಯೇ ಪುರುಷೋತ್ತಮನಿಗಾಗಿ ಅವನಿಂದ ಮಾಡಲ್ಪಡುವ

ಯಜ್ಞದಲ್ಲಿ ನಿತ್ಯವೂ ಸ್ಥಿತನಾಗಬೇಕು. ಹೀಗಾದರೆ ಆತ್ಮಸ್ವಭಾವದಿಂದ ದೊರೆಯುವ ಈ ಸುಖವನ್ನು ಅಕ್ಷಯವಾಗಿ ಅನುಭವಿಸಬಹುದು.

**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥ ೨೨ ॥**

ಬಾಹ್ಯ ಸ್ಪರ್ಶದಿಂದುಂಟಾಗುವ ಸುಖವು ಸುಖವೇ ಅಲ್ಲ. ಅದು ದುಃಖಕ್ಕೆ ಮೂಲವಾಗಿರುವದು. ಆದಿ ಅಂತ್ಯಗಳುಳ್ಳ ಈ ಸುಖಗಳನ್ನು ಸಹಜವಾಗಿ ತಿಳಿಯಬಹುದು. ನಿಜವಾದ ಜ್ಞಾನಿಯು ಇವುಗಳನ್ನು ಬಯಸನು.

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರ ವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥ ೨೩ ॥**

ಶರೀರದಲ್ಲಿದ್ದು ಬಾಹ್ಯಸ್ಪರ್ಶವನ್ನು ಬಿಡುವದೆಂದರೆ ಸುಲಭವಲ್ಲ. ಕಾಮ-ಕ್ರೋಧಾದಿಗಳು ಬಹುಸೂಕ್ಷ್ಮಭೇದಿಗಳಾಗಿರುವವು. ಅತ್ಯಂತ ಪವಿತ್ರವಾದ ಧಾರ್ಮಿಕ ವ್ಯವಹಾರಗಳಲ್ಲಿಯೂ ಅವು ತಿಳಿಯದಂತೆ ಪ್ರವೇಶಿಸುವವು (೨-೪೨-೪೪). ಅಂಥಲ್ಲಿಯೂ ಇವನ್ನು ಆರಿಸಿ ತೆಗೆದು ಒಸೆದು ಬಿಡುವದು ಅವಶ್ಯವು. ಹೀಗೆ ಮಾಡುವಾಗ ತನ್ನ ಪಾಲಿಗೆ ಜಗತ್ತೇ ಮುಳುಗಿತೆಂದು ತನ್ನ ಇಂದ್ರಿಯಗಳೂ ಮನಸ್ಸೂ ಮೊರೆಯಿಟ್ಟು ದೂರು ಹೇಳದೆ ಇರುವದಿಲ್ಲ. ಆಗ ಆತ್ಮನಿಗೆ ಕ್ಷಣಹೊತ್ತಾದರೂ ಕಾಮಕ್ರೋಧಾದಿಗಳಿಂದ ಉದ್ಭವಿಸುವ ಉದ್ವೇಗವೂ ನಿರಾಶೆಯೂ ತೋರುವದು ಸಹಜವು. ಆದರೆ ಇವುಗಳನ್ನು ಸಹಿಸಬೇಕು. ಬುದ್ಧಿಯೋಗವು ಹೇಗೆ ಹೇಗೆ ಸಾಧ್ಯವಾಗುತ್ತ ಹೋಗುವದೋ ಹಾಗೆಲ್ಲ ಈ ವಿಷಮಭಾವನೆಗಳನ್ನು ಸಹಿಸುವದು ಸುಲಭವಾಗುವದು. ಬುದ್ಧಿಯೋಗವು ಒಮ್ಮೆ ಸಂಪೂರ್ಣವಾಗಿ ಸಾಧ್ಯವಾದರೆ ಮನುಷ್ಯನು ಈ ಭಾವನೆಗಳನ್ನು ಸಹಿಸಿ ಶಾಶ್ವತ ಸುಖಿಯಾಗುವನು.

**ಯೋಽಂತಃ ಸುಖೋಽಂತರಾರಾಮಸ್ತಥಾಂತರ್ಜ್ಯೋತಿರೇವ ಯಃ ।**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥ ೨೪ ॥**

ಬಾಹ್ಯ ಸ್ಪರ್ಶಗಳ ವಿಷಯದಲ್ಲಿ ಸಮಾನತ್ವವೂ ಕಾಮಕ್ರೋಧಾದಿ

ಗಳನ್ನು ಸಹಿಸುವಿಕೆಯೂ ನಿಜವಾದ ಯೋಗಿಯ ಬಾಹ್ಯಲಕ್ಷಣಗಳು. ಅಧ್ಯಾತ್ಮದೃಷ್ಟಿಯಿಂದ ಆವನ ಯೋಗ್ಯತೆಯು ಬಹಳ ಹೆಚ್ಚಿನದಾಗಿರುವದು. ಅವನ ಅಂತಸ್ಥ ಆತ್ಮಸ್ವಭಾವವು ಸುಖದಲ್ಲಿ ನಿರತವಾಗಿರುವದು. ಅವನ ಸಮಾಧಾನವಾದರೂ ಆತ್ಮ ಮೂಲಕವಾಗಿಯೇ ಇರುವದು. ಅವನಿಗುಂಟಾದ ಜ್ಞಾನವೂ ಆತ್ಮ ಮೂಲಕವಾದ ವಿಜ್ಞಾನವಲ್ಲದೆ ನಿಸ್ಸಾರವಾದ ಇತರ ಜ್ಞಾನವಲ್ಲ. ಇಂಥ ಯೋಗಿಯು ತನ್ನ ಆತ್ಮಸ್ವಭಾವದ ಸಂಪೂರ್ಣ ಪರಿಣತಿಯನ್ನು ಈ ಪ್ರಕಾರ ಸಾಧಿಸಿರುವನು, **ಇವನಿಗೆ ಬ್ರಹ್ಮಭೂತಸ್ಥಿತಿಯೂ ತದನಂತರದ ಬ್ರಹ್ಮನಿರ್ವಾಣವೂ ಪ್ರಾಪ್ತವಾಗುವವು.**

**ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾ: ॥ ೨೫ ॥**

ಯಾರ ಪಾಪಗಳು ನಿಃಶೇಷವಾಗಿ ಕಳೆದು ಹೋಗಿವೆಯೋ ಯಾರು ಈ ಸ್ಥಿತಿಯಲ್ಲಿ ತಮ್ಮ ಬುದ್ಧಿಮನಸ್ಸು ಇಂದ್ರಿಯಗಳನ್ನು ಪುರುಷೋತ್ತಮನನ್ನು ಸಾಧಿಸುವದರಲ್ಲಿ ತೊಡಗಿಸಿರುವರೋ, ಜ್ಞಾನೋದಯವಾದುದರಿಂದ ಯಾರ ಸಂಶಯಗಳೆಲ್ಲವೂ ನಷ್ಟವಾಗಿ ಹೋಗಿರುವವೋ ಮತ್ತು ಸರ್ವಭೂತ ಮಾತ್ರಗಳ ಹಿತವನ್ನು ಸಾಧಿಸುವದರಲ್ಲಿಯೇ ಯಾರು ನಿಮಗ್ನರಾಗಿರುವರೋ ಅಂಥ ಋಷಿಗಳಿಗೆ ಬ್ರಹ್ಮನಿರ್ವಾಣವು ದೊರೆಯುವದು.

**ಕಾಮಕ್ರೋಧವಿಯುಕ್ತಾನಾಂ ಯತೀನಾಮ್ ಯತಚೇತಸಾಮ್ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಂ ॥ ೨೬ ॥**

ಕಾಮಕ್ರೋಧಾದಿಗಳನ್ನು ಯಾರು ಬಿಟ್ಟಿರುವರೋ ಯಾರ ಚೇತಸ್ಸು ಅಂದರೆ ಆತ್ಮಪರಾಯಣವಾದ ಬುದ್ಧಿಯು ಪುರುಷೋತ್ತಮನ ಕಡೆಗೆ ತಿರುಗಿದೆಯೋ ಅಂಥ ಆತ್ಮಜ್ಞಾನಿಗಳಾದ ಯತಿಗಳಿಗೂ ಬ್ರಹ್ಮನಿರ್ವಾಣವು ಸಾನ್ನಿಧ್ಯದಲ್ಲಿಯೇ ಇರುವದು.

**ಸ್ಪರ್ಶಾನ್ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ ।**
**ಪ್ರಾಣಾಪಾನೌ ಸಮೌಕೃತ್ವಾ ನಾಸಾಭ್ಯಂತರಚಾರಿಣೌ ॥ ೨೭ ॥**

**ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ।**
**ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥೨೮॥**

ಇಂದ್ರಿಯಗಳ ಮತ್ತು ವಿಷಯಗಳ ಸಂಯೋಗದಿಂದ ಪ್ರಾಪ್ತವಾಗುವ ಅನುಭವಗಳಿಗೆ ತಮ್ಮ ಮನಸ್ಸಿನಲ್ಲಿ ಎಡೆಗೊಡದೆ, ಎರಡೂ ಹುಬ್ಬುಗಳ ನಡುವೆ ದೃಷ್ಟಿಯನ್ನು ಸ್ಥಿರಮಾಡಿ, ನಾಸಿಕದಲ್ಲಿ ಸುಳಿದಾಡುವ ಪ್ರಾಣಾಪಾನವಾಯುಗಳ ಗತಿಯನ್ನು ಸಮನಾಗಿ ಮಾಡಿ ಇಂದ್ರಿಯ ಮನಸ್ಸು ಬುದ್ಧಿಗಳನ್ನು ನಿರೋಧಿಸಿ, ಇಚ್ಛಾಭಯಕ್ರೋಧಾದಿಗಳಿಂದ ದೂರನೂ ಮೋಕ್ಷಪರಾಯಣನೂ ಆದ ಮುನಿಯು ಸದಾಮುಕ್ತನೆಂದೇ ತಿಳಿಯಬೇಕು.

**"ಯತ" ಎಂಬ ಶಬ್ದದ ಅರ್ಥವನ್ನು ಕೇವಲ ಸಂಯಮನ ಅಥವಾ ನಿರೋಧವೆಂದು ಮಾಡಬಾರದು. ಅದು ಗೀತೆಯಲ್ಲಿ ಪಾರಿಭಾಷಿಕವಾಗಿದೆ.** "ಶ್ರದ್ಧಾಭಕ್ತಿಗಳಿಂದ ಕೂಡಿ ಬುದ್ಧಿಯೋಗವನ್ನು ಸಾಧಿಸಲು ಬುದ್ಧಿಮನಸ್ಸು ಇಂದ್ರಿಯಗಳನ್ನು ಅರ್ಪಿಸಿದ" ಎಂಬುದೇ ಇದಕ್ಕೆ ಸರಿಯಾದ ಅರ್ಥವು. ಮೇಲೆ ಹೇಳಿದ ನಾಲ್ಕುತರದ ಮುಮುಕ್ಷುಗಳ ಪ್ರಯತ್ನದಲ್ಲಿ ಬುದ್ಧಿಯೋಗದ ಆಧ್ಯಾತ್ಮಮೂಲಕ ಜಾಗ್ರತಿಯು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಅಭಿಪ್ರೇತವಾಗಿರುವದು. ಹಾಗಿರುವದರಿಂದಲೇ ಇವರೆಲ್ಲರಿಗೂ ಅಂತಿಮಸಾಧ್ಯವು ಶಕ್ಯವಾಗುವದು.

ಈ ಪ್ರಕಾರ ಮುಕ್ತಿಗೆ ಯೋಗ್ಯರಾದ ಹಾಗು ಬ್ರಹ್ಮನಿರ್ವಾಣಕ್ಕಾಗಿ ಪ್ರಯತ್ನಪಡುವ ನಾಲ್ಕು ತರದ ಮುನಿಗಳನ್ನು ಕುರಿತು ಮೇಲೆ ಹೇಳಿದೆ. ಇವರ ಮಾರ್ಗಗಳು ಅಧ್ಯಾತ್ಮಯೋಗ, ಜ್ಞಾನಯೋಗ, ರಾಜಯೋಗ ಮತ್ತು ಪಾತಂಜಲಯೋಗ ಎಂಬ ನಾಲ್ಕು ವಿಧದ ಪಂಥಗಳಿಗೆ ಸೇರಿರುವವು. ಗೀತೆಯ ಪ್ರತಿಪಾದ್ಯವಿಷಯವೇನೋ ಅಧ್ಯಾತ್ಮಯೋಗವೇ ಸರಿ. ಆದರೂ ಅದನ್ನು ಅನುಸರಿಸುವ ಯೋಗಿಗಳ ಆಚರಣೆಯು ಏಕಪ್ರಕಾರದ್ದಿರಬೇಕೆಂಬದಾಗಿಯೂ ಒಂದೇ ಪಡಿಯಚ್ಚಿನದಾಗಿರಬೇಕೆಂಬದಾಗಿಯೂ ಗೀತೆಯ ಆಗ್ರಹವಿಲ್ಲ. **ಬುದ್ಧಿಯೋಗವೆಂದರೆ ಪುರುಷೋತ್ತಮ ಶ್ರೀಕೃಷ್ಣನಲ್ಲಿ ಮನಃಪೂರ್ವಕವಾಗಿಯೂ ಬುದ್ಧಿಪುರಃಸರವಾಗಿಯೂ ಆಸಕ್ತಿಯ**

ನ್ನಿಡುವದು. ಇದನ್ನು ಸಾಧಿಸುವದಕ್ಕಾಗಿ ಪ್ರಯತ್ನಪಡುವಾಗ ಮನುಷ್ಯನು ತನಗೆ ಇಷ್ಟವಾದ ಯಾವುದೇ ಮಾರ್ಗವನ್ನು ಅನುಸರಿಸುವ ಸ್ವಾತಂತ್ರ್ಯವನ್ನು ಗೀತೆಯು ಅವನಿಗೆ ಕೊಟ್ಟಿರುವದು. ಆದರೆ ಆಚರಣೆ ಯಲ್ಲಿ ಬುದ್ಧಿಯೋಗವನ್ನು ಅವ್ಯಭಿಚಾರವಾಗಿ ಕಾಯ್ದುಕೊಳ್ಳುವ ಹೊಣೆಯು ಅವನನ್ನು ಸೇರಿದೆ. ಹೀಗೆ ಪ್ರಯತ್ನ ಪಡುವವರಿಗೆ ಕೊನೆಗೆ ಮುಕ್ತಿಯು ತಪ್ಪದೆ ದೊರೆಯುವದು. ಇದಕ್ಕೆ ಅವರ ಬುದ್ಧಿಯೋಗವೇ ಕಾರಣನೆಂಬದನ್ನು ಮರೆಯಬಾರದು.

ಆತ್ಮದ ಪರಿಣತ ಸ್ಥಿತಿಯೇ ಎಂದೆಂದಿಗೂ ಮುಕ್ತಿಗೆ ಕಾರಣವಾಗು ವದು. ಈ ಆತ್ಮಪ್ರಗತಿಯು ಬುದ್ಧಿಯೋಗದಿಂದಲೇ ಸುಲಭಸಾಧ್ಯವೆಂದು ಗೀತೆಯು ಹೇಳುವದು. ಯೋಗ್ಯಪ್ರಮಾಣದಲ್ಲಿ ತಕ್ಕನುಟ್ಟಿಗೆ ಆತ್ಮಪ್ರಗತಿ ಯನ್ನು ಹೊಂದಿದೊಡನೆ ಮುಕ್ತಿಯು ಕೈಸೇರುವದು. ಇಂಥ ನಾಲ್ಕು ತರದ ಆತ್ಮವಂತರಿಗೆ ಮುಂದೆ ಎಂಟನೆಯ ಅಧ್ಯಾಯದಲ್ಲಿ ಅಗ್ನಿ, ಜ್ಯೋತಿ, ಅಹಸ್ಸು, ಶುಕ್ಲ ಎಂಬ ರೂಪಕಗಳನ್ನು ಕೊಟ್ಟಿದೆ. ಈ ವಿಷಯದ ಮುಂದಿನ ವಿವೇಚನೆಯನ್ನು ಅಲ್ಲಿ ಮಾಡುವದೇ ಯೋಗ್ಯವು.

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಂ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ**
**ಶಾಂತಿಮೃಚ್ಛತಿ ॥ ೨೯॥**

ಹಿಂದಿನ ಶ್ಲೋಕದಲ್ಲಿ ಬ್ರಹ್ಮನಿರ್ವಾಣವನ್ನು ಸೇರುವರೆಂದು ಹೇಳಿದ ನಾಲ್ಕು ವಿಧದ ಯೋಗಿಗಳ ನಿರ್ವಾಣ ಸ್ಥಿತಿಯ ವಿಷಯವಾಗಿ ಮುಂದೆ (೧೮-೫೬) ವಿಚಾರ ಮಾಡುವ. ಬ್ರಾಹ್ಮೀ ಸ್ಥಿತಿಯಲ್ಲಾಗಲಿ ತತ್ಪೂರ್ವದ ಅವರ ಪ್ರಯತ್ನಗಳಲ್ಲಾಗಲಿ ಎರಡು ಸಂಗತಿಗಳು ಮೂಡಿ ಕಾಣಿಸುವವು. ಯಥಾಶಕ್ತಿ ಯಥಾಮತಿಯಾಗಿ ಬುದ್ಧಿಯೋಗವನ್ನನುಸರಿಸಿ ಅವರು ತಮ್ಮ ಆತ್ಮ ಬುದ್ಧಿ ಮನಸ್ಸು ಮತ್ತು ಪ್ರಾಣಗಳನ್ನು ವಿನಿಯೋಗಿಸುವರು; ಹಾಗೂ ಪ್ರಾಪ್ತವಾದ ಫಲವನ್ನು ಪುರುಷೋತ್ತಮನಿಗೆ ಅರ್ಪಿಸಿಬಿಡುವರು. ಇದೇ ಅವರು ಆಚರಿಸುವ ಯಜ್ಞವು. ಹೀಗೆ ಯಜ್ಞವನ್ನಾಚರಿಸುವಾಗ ಮುಕ್ತಿಯನ್ನು ಕೈಗೂಡಿಸುವಷ್ಟು ಸ್ವಾರ್ಥ ವಿಷಯದಲ್ಲಿ ನಿಸ್ಪೃಹತೆಯೂ

ತ್ಯಾಗವೂ ಅವರಲ್ಲಿ ತೀವ್ರವಾಗಿರುವವು. ಇದೇ ಅವರು ಆಚರಿಸುವ ತಪವು. ಈ ರೀತಿಯಾಗಿ ಯಜ್ಞ ಹಾಗು ತಪವನ್ನು ಅವರು ಪರಮೇಶ್ವರನಿಗೆ ಅರ್ಪಿಸುವದರಿಂದ ಸಾರ್ಥಕವೇನು? ಇದರಿಂದ ಭಗವಂತನಿಗಾಗುವ ಉಪಯೋಗವೇನು? ಭಕ್ತರಿಂದ ಅರ್ಪಿಸಲ್ಪಡುವದೆಲ್ಲವನ್ನೂ ತಾನು ಸ್ವೀಕರಿಸುವನೆಂದೂ, ಇಷ್ಟೇ ಅಲ್ಲದೆ, ಎಲ್ಲೆಲ್ಲಿಯೂ ಸಂಭವಿಸುವ ಯಾವತ್ತು ಕರ್ಮಗಳೂ ತನಗೇ ಸಮರ್ಪಿತವಾಗಬೇಕೆಂದೂ ಆತನು ಕೇಳಿರುವದೇನೋ ನಿಜ. ಆದರೆ ಹೀಗಾಗಬೇಕಾದುದಕ್ಕೆ ಅಲ್ಲಿ ಕಾರಣವನ್ನಾಗಲಿ ಸಾರ್ಥಕ್ಯವನ್ನಾಗಲಿ ಹೇಳಿರುವದಿಲ್ಲ. ಅದು ಇಲ್ಲಿ ಹೇಳಿದೆ.

**ಶ್ರೀಕೃಷ್ಣನೇ ಪುರುಷೋತ್ತಮನಾಗಿರುವನು. ಯಜ್ಞತಪಸ್ಸುಗಳನ್ನು ಭೋಗಿಸುವ ಸಂಕಲ್ಪವನ್ನು ಮಾಡಿಯೇ ಅವನು ಸೃಷ್ಟಿಯನ್ನು ನಿರ್ಮಿಸಿದುದು. ಈತನೇ ಈ ಸೃಷ್ಟಿಗೆ ಮಹೇಶ್ವರನು. ಯಜ್ಞತಪಸ್ಸುಗಳನ್ನು ಭೋಗಿಸಬೇಕೆಂದು ಆತನು ಮಾಡಿದ ಸಂಕಲ್ಪದ ಸಂಪೂರ್ತಿಗಾಗಿ ಅವುಗಳನ್ನು ಸಲ್ಲಿಸುವದು ಸೃಷ್ಟಿಯೊಳಗಿನ ಎಲ್ಲ ಸಂಭೂತರಿಗೆ ಕರ್ತವ್ಯವಾಗಿದೆ.**

ಇದು ನಿಜವಾದರೂ, ಶ್ರೀಕೃಷ್ಣಪುರುಷೋತ್ತಮನು ಸಾಲವನ್ನು ತಿರುಗಿ ಪಡೆಯಲು ಬಲಾತ್ಕರಿಸುವ ರಾಕ್ಷಸನಲ್ಲ. ಆತನು ಈ ಕೊಡುವ ಕೊಂಬ ವ್ಯವಹಾರದಲ್ಲಿ ತನ್ನ ಪ್ರಜೆಗಳ ಐಹಿಕ ಹಾಗೂ ಪಾರಮಾರ್ಥಿಕ ಯೋಗಕ್ಷೇಮವನ್ನು ಪೂರ್ಣವಾಗಿ ಆಲೋಚಿಸಿ ಅನುಕೂಲಪಡಿಸಿರುವನು. ಆತನು ತನ್ನ ಪ್ರಜೆಗಳಿಗೆ ಸುಹೃದಯನಾದ ಸಖನಾಗಿರುವನು. ಎಲ್ಲರನ್ನು ಸಮದೃಷ್ಟಿಯಿಂದ ನೋಡುವನು. ಅವನಿಗೆ ಬೇಕಾದವರಾಗಲಿ ಬೇಡದವರಾಗಲಿ ಯಾರೂ ಇರುವದಿಲ್ಲ. ಅವನನ್ನು ಸಖನೆಂದು ತಿಳಿಯುವದರಿಂದಲೇ ಸೃಷ್ಟಿಯುಲ್ಲುಂಟಾದ ಸಕಲ ಭೂತಗಳಿಗೆ-ಅವನ ಹೆಸರಿನಿಂದ ಆಕ್ರೋಶಮಾಡುವವರಿಗೂ-ಕಲ್ಯಾಣವಾಗುವದು. ಆದ್ದರಿಂದ ದೈವೀಸಂಪತ್ತಿನಲ್ಲಿ ಹುಟ್ಟಿದ ಅರ್ಜುನನಂಥ ಅವನ ಸಖನು ಅವನನ್ನು ಹಾಗೆ ಒಗೆಯುವದರಿಂದ ಅಖಂಡ ಶಾಂತಿಯನ್ನು ಸಾಧಿಸುವನೆಂಬದರಲ್ಲಿ ಸಂದೇಹವೇನು?

**ಐದನೆಯ ಅಧ್ಯಾಯವು ಸಮಾಪ್ತವು.**

ಓಂ

# ಆರನೆಯ ಅಧ್ಯಾಯವು

**ಅವತರಣಿಕೆ—**

ಶ್ರೀಕೃಷ್ಣನು ಮೂರನೆಯ ಮತ್ತು ನಾಲ್ಕನೆಯ ಅಧ್ಯಾಯಗಳಲ್ಲಿ ಕರ್ಮವಿಷಯಕವಾದ ತನ್ನ ಮನೋಗತವನ್ನೆಲ್ಲ ಅರ್ಜುನನಿಗೆ ತಿಳಿಸಿ ಹೇಳಿರುವನು. ಈ ವಿಷಯದಿಂದಲೇ ಸಂನ್ಯಾಸದ ವಿಷಯವು ನಿಷ್ಪನ್ನ ವಾದ ಬಗೆಯನ್ನು ನಾವು ವಿವರಿಸಿರುವೆವು. ಐದನೆಯ ಅಧ್ಯಾಯದಲ್ಲಿ ಸಂನ್ಯಾಸವನ್ನು ಕುರಿತು ಹೇಳಬೇಕಾದುದೆಲ್ಲವೂ ಬಹುಮಟ್ಟಿಗೆ ಮುಗಿದು ಹೋಗಿದೆ. ಕರ್ಮವನ್ನು ಬಿಡುವದು ಖಂಡಿತವಾಗಿ ಸಂನ್ಯಾಸವಲ್ಲ. ಆದರೆ ಕರ್ಮಮಾಡುವದಾದರೂ ಸಂನ್ಯಾಸವಲ್ಲ. ಕರ್ಮವನ್ನು ಎಷ್ಟು, ಯಾವಾಗ, ಹೇಗೆ ಬಿಡಬೇಕೆಂಬದನ್ನರಿತವನೇ ಸಂನ್ಯಾಸಿಯು. ಸಂನ್ಯಾಸ ವೆಂಬ ಹೆಸರನ್ನು ಬಳಸುವದರಿಂದಲೂ ಶ್ರೀ ಕೃಷ್ಣನ ಬುದ್ಧಿಯೋಗ ಶಾಸ್ತ್ರವು ವಿಪರ್ಯಾಸ ಹೊಂದುವ ಸಂಭವವುಂಟು.ಆದಕ್ಕಾಗಿ ಸಂನ್ಯಾಸ ತತ್ವವನ್ನು ಪೂರ್ಣವಾಗಿ ತಿಳಿದುಕೊಂಡವನನ್ನು ಸಂನ್ಯಾಸಿಯೆಂದು ಸಂಬೋಧಿಸುವ ದಕ್ಕಿಂತಲೂ ಪಂಡಿತನೆಂದೇ ಶ್ರೀ ಕೃಷ್ಣನು ಕರೆಯುವನು. ಇಂಥ ಪಂಡಿತ ನನ್ನು ಕರ್ಮಮಾಡುವವನೆಂದು ಹೇಳಲಾಗದು; ಅಥವಾ ಕರ್ಮವನ್ನು ಬಿಡುವವನೆಂದೂ ಹೇಳಲಾಗದು. ಕರ್ಮಗಳನ್ನು ಯಾವಾಗ ಹೇಗೆ ಮಾಡ ಬೇಕೆಂಬದನ್ನು ಇವನು ಬಲ್ಲನು. ಅವನು ಈ ವಿಷಯಗಳನ್ನು ನಿಶ್ಚಯಿ ಸುವ ಕೌಶಲವನ್ನು ಅರ್ಜುನನಿಗೆ ಶ್ರೀಕೃಷ್ಣನು ಸಂಪೂರ್ಣವಾಗಿ ಹೇಳಿರು ವನು. ಅದೇನೆಂದರೆ, ಕರ್ಮವನ್ನು ಮಾಡುವದಾಗಲಿ ಬಿಡುವದಾಗಲಿ (ಬುದ್ಧಿಯೋಗ) ಸ್ಥಿತಿಯಲ್ಲಿದ್ದುಕೊಂಡು ಮಾಡಬೇಕು. ಮತ್ತು ಪಂಡಿತನು

ಹಾಗೆ ಮಾಡುವನು. **ಯೋಗಭಾವವು ಯಾವ ಸ್ಥಿತಿಯಲ್ಲಿ ರುಜುವಾಗಿರುವದೋ ಆ ಸ್ಥಿತಿಯೇ ಯುಕ್ತಸ್ಥಿತಿಯು (೮—೧೪).** ಮತ್ತು ಈ ಸ್ಥಿತಿಯನ್ನು ಪಡೆದ ಪಂಡಿತನೇ ಯೋಗಿಯು. ಈ ವಿಷಯವೆಲ್ಲ ಐದನೆಯ ಅಧ್ಯಾಯದಲ್ಲಿ ವಿಶದವಾಗಿದೆ. ಆದರೆ ಯೋಗವೆಂದರೇನು ? ಕರ್ಮಶಬ್ದದ ಅರ್ಥವನ್ನು ವಿಶದ ಮಾಡುವದಕ್ಕಾಗಿ ಹೇಗೆ ಸಂನ್ಯಾಸವನ್ನು ಕುರಿತು ಪೂರ್ಣವಾಗಿ ವಿವರಿಸಬೇಕಾಯಿತೋ ಹಾಗೆಯೇ ಸಂನ್ಯಾಸಶಬ್ದದ ಅರ್ಥವು ವಿಶದವಾಗಲಿಕ್ಕೆ ಯೋಗವೆಂದರೇನೆಂಬುದನ್ನು ಸರಿಯಾಗಿ ತಿಳಿಯಬೇಕು. ಸಂನ್ಯಾಸ ವಿಷಯವು ಈಗ ಮುಗಿಯುತ್ತ ಬಂದಿದೆ. ಆದುದರಿಂದ ಐದನೆಯ ಅಧ್ಯಾಯದ ಸಾರಾಂಶವನ್ನು ಹೇಳಿ, ಈ ಅಧ್ಯಾಯದಲ್ಲಿ "ಯೋಗ" ಶಬ್ದವನ್ನು ತಿಳಿಯ ಹೇಳಲಾರಂಭಿಸಿದೆ.

ಶ್ರೀ ಭಗವಾನುವಾಚ—

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸನ್ನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನಚಾಕ್ರಿಯಃ ॥ ೧ ॥**

ನಿಷಿದ್ಧ ಕರ್ಮಗಳನ್ನು ಬಿಟ್ಟ ಮಾತ್ರಕ್ಕೆ ಯಾವನನ್ನೂ **ಸನ್ನ್ಯಾಸಿಯೆಂದು ಹೇಳಲಾಗದು.** ಕರ್ಮಗಳನ್ನು ಸ್ವರೂಪತಃ ಆಮೂಲಾಗ್ರವಾಗಿ ಬಿಡುವದು ಶಕ್ಯವಲ್ಲ. ಇದಲ್ಲದೆ ಪ್ರತಿಯೊಬ್ಬನೂ ಮಾಡಲೇಬೇಕಾದ ಯಜ್ಞ ದಾನ ತಪ ಎಂಬ **ನಿಯತ** ಕರ್ಮಗಳು ಇದ್ದೇ ಇರುವವು ಈ ಕರ್ಮಗಳನ್ನಾದರೂ ಅನಾಸಕ್ತಿಯಿಂದ ಮಾಡಬೇಕು. **ಅನಾಸಕ್ತಿಯೆಂದರೆ ಕನಿಷ್ಠಪಕ್ಷಕ್ಕೆ ಫಲಾಸಕ್ತಿಯನ್ನಾದರೂ ಬಿಡುವದೆಂದರ್ಥ.** ಆದುದರಿಂದ ನಿಜವಾದ ಸನ್ನ್ಯಾಸಿಯು ನಿಯತ ಕರ್ಮಗಳನ್ನು ಬಿಡುವದಿಲ್ಲ; ಮತ್ತು ಫಲಾಸಕ್ತಿಯನ್ನು ಹಿಡಿಯುವದಿಲ್ಲ. ಹೀಗೆ ಮಾಡುವವನೇ **ಸಂನ್ಯಾಸಿಯೆಂದೂ ಯೋಗಿಯೆಂದೂ ತಿಳಿಯಬೇಕು.** ಸಂನ್ಯಾಸದ ನೆವದಿಂದ ಅಗ್ನಿಹೋತ್ರವನ್ನೂ ತಾನೇ ಆರಿಸಿ ತೆಗೆದ ಕರ್ಮಗಳನ್ನೂ ಬಿಟ್ಟುಬಿಟ್ಟು ತನ್ನನ್ನು ಸಂನ್ಯಾಸಿಯೆಂದು ಹೇಳಿಕೊಳ್ಳುವವನು ಎಂದಿಗೂ ಸಂನ್ಯಾಸಿಯಾಗಲಾರನು.

**ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ।**
**ನ ಹ್ಯಸನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ॥ ೨॥**

ಹೀಗೆ ತಿಳಿದರೆ ಕರ್ಮಯೋಗ ಹಾಗು ಸಂನ್ಯಾಸಗಳಲ್ಲಿ ವ್ಯತ್ಯಾಸವೇ ಉಳಿಯುವದಿಲ್ಲ. ಮತ್ತು ಸಂನ್ಯಾಸವೆಂಬುದೇ ಕರ್ಮಯೋಗವೆಂದು ಮನವರಿಕೆಯಾಗುವದು. ಕರ್ಮಯೋಗದಲ್ಲಿ ಸಹ ಕರ್ಮವನ್ನು ಮಾಡುವ ವಿಷಯವು ಮುಖ್ಯವಲ್ಲ. ಆದರೆ ಸಂಕಲ್ಪವನ್ನೂ ಆಸಕ್ತಿಯನ್ನೂ ಬಿಡಬೇಕೆಂಬುದೇ ಮಹತ್ವದ್ದಾಗಿದೆ. **ತನ್ನ ಕರ್ಮ ಯೋಗದ ಗೌರವವನ್ನು ಮುಕ್ತ ಕಂಠದಿಂದ ಶ್ಲಾಘಿಸಿ, ಸಂಕಲ್ಪವನ್ನಾಗಲಿ ಫಲಾಸಕ್ತಿಯನ್ನಾಗಲಿ ಬಿಡದಿರುವ ಕರ್ಮ ಯೋಗಿಯನ್ನು ಕರ್ಮ ಯೋಗಿಯೆಂದು ಅರ್ಜುನನು ಒಪ್ಪಲೇ ಕೂಡದು.**

**ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ॥ ೩॥**

ಸಂನ್ಯಾಸವೇ ಆಗಲಿ ಕರ್ಮ ಯೋಗವೇ ಆಗಲಿ ಎರಡರಲ್ಲಿಯೂ ಕರ್ಮವು ಅವಶ್ಯವಾಗಿ ಇದ್ದೇ ಇರುವದು. ಯೋಗಿಯಾಗಲಿಚ್ಛಿಸುವವನು ಬುದ್ಧಿಯೋಗಾಭಿಮುಖನಾಗಿ ಮೊದಲು ಹೆಜ್ಜೆಯನ್ನಿಡುವಾಗ ಅವನ ಸ್ಥಿತಿಯು ಸಾಂಖ್ಯ ಇಲ್ಲವೆ ಸಂನ್ಯಾಸವೆನಿಸಿಕೊಳ್ಳುವದೆಂದು ಶ್ರೀ ಕೃಷ್ಣನು ಹೇಳಿರುವನಷ್ಟೇ. ಈ ಸ್ಥಿತಿಯಿಂದ ಆರಂಭಿಸಿ ಬುದ್ಧಿಯೋಗವು ಸಂಪೂರ್ಣವಾಗಿ ಸಾಧಿಸುವವರೆಗೆ ದಕ್ಷತೆಯಿಂದಲೂ ಜಾಗ್ರತೆಯಿಂದಲೂ ಪರಿಕಿಸಿ ಮಾಡುವ ಕರ್ಮಗಳೇ ಅವನ ಯೋಗ ಸಾಧನೆಗೆ ಕಾರಣವಾಗುವವು. ಆದುದರಿಂದ ಈ ಸ್ಥಿತಿಯಲ್ಲಿ ಕರ್ಮಗಳನ್ನು ಬಿಟ್ಟುಬಿಡುವದು ಸಾಧ್ಯವಲ್ಲ. ಹಾಗೆಯೇ ಯೋಗಾರೂಢನಾದ ಬಳಿಕಾದರೂ ಕರ್ಮಗಳನ್ನು ಮಾಡಲೇ ಬೇಕಾಗುವದು. ಇಂಥ ಯೋಗಾರೂಢನು ಕರ್ಮದ ವಿಷಯದಲ್ಲಿ ಎಲ್ಲವನ್ನೂ ತಿಳಿದವನಾಗಿರುವನು (೪-೧೪,೧೯) ಕರ್ಮಗಳನ್ನು ಮಾಡಲೇ ಬೇಕು; ಅವುಗಳನ್ನು ಬಿಡುವದು ಶಕ್ಯವಲ್ಲ; ಕರ್ಮಮಾಡುವದೇ ಮನುಷ್ಯನ ಶಾಂತಿಗೆ ಆಧಾರವಾಗಿದೆ. ಶಾಂತಿಯಿಲ್ಲದಿದ್ದರೆ ಸುಖವಿಲ್ಲ; ಈ ಮೊದಲಾದ ಕರ್ಮ ವಿಷಯದ ಸತ್ಯ ಸಿದ್ಧಾಂತಗಳು ಅವನಿಗೆ ತಿಳಿದಿರುವವು. ತನ್ನ

ಶಾಂತಿಯನ್ನು-ಸುಖ ಸಾಧನೆಯನ್ನು-ಕಾದುಕೊಳ್ಳುವದಕ್ಕಾಗಿ ಪೂರ್ಣ ಯೋಗಾರೂಢನಾದವನಿಗಾದರೂ ಕರ್ಮವನ್ನು ಬಿಡುವದು ಸಾಧ್ಯವಲ್ಲ! ಮತ್ತು ಅವನು ಅದನ್ನು ಬಿಡುವದೂ ಇಲ್ಲ. ಆದುದರಿಂದ ಈ ಸ್ಥಿತಿಯಲ್ಲಿಯೂ ಅವನಲ್ಲಿ ಕಂಡು ಬರುವ ಕರ್ಮ ತತ್ಪರತೆಗೆ ಶಾಂತಿಯೇ ಕಾರಣವು.

**ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥ ೪ ॥**

ಹೀಗೆ ಯೋಗಾಭ್ಯಾಸಿಯೂ ಯೋಗಾರೂಢನೂ ಇವರಿಬ್ಬರೂ ಕರ್ಮ ಮಾಡುವವರೇ. ಆದರೆ ಯೋಗಾರೂಢನಾದವನನ್ನು ಗುರುತಿಸುವದು ಹೇಗೆ ? ಪೂರ್ಣ ಯೋಗಾರೂಢನಾದವನು ಇಂದ್ರಿಯಗಳಿಗೆ ಅವುಗಳ ವಿಷಯಗಳನ್ನು ಒದಗಿಸಿ ಕೊಡುವದಕ್ಕಾಗಿ ಕರ್ಮ ಮಾಡಲು ಪ್ರವೃತ್ತನಾಗುವದಿಲ್ಲ. ಆದರೆ ಇಂದ್ರಿಯ ವ್ಯವಹಾರಗಳೂ ಆತನಲ್ಲಿ ನಿಂತು ಹೋಗುವವೆಂದು ತಿಳಿಯ ಕೂಡದು. ಆಹಾರ ವಿಷಯದಲ್ಲಿ ಮನುಷ್ಯನಿಗೆ ಕರ್ಮವು ಬಿಟ್ಟದ್ದೇ ಅಲ್ಲ. ಹಾಗೆ ಬಿಟ್ಟದ್ದೇ ಆದರೆ ಶರೀರ ಯಾತ್ರೆಯು ಸಹ ಅಶಕ್ಯವಾದೀತೆಂದು ಶ್ರೀಕೃಷ್ಣನೇ ಹೇಳಿರುವನು. ಇದೂ ಅಲ್ಲದೆ ಇಂದ್ರಿಯಗಳ ಮತ್ತು ವಿಷಯಗಳ ಅನುಸಂಧಾನಗಳು ಸ್ವಭಾವತಃ ನಿಯತವಾಗಿವೆ. ಇವುಗಳನ್ನು ಈ ಯೋಗಾರೂಢನು ಎದುರಿಸುವದಿಲ್ಲ. ಆದುದರಿಂದ ಅವನಲ್ಲಿ ಇಂದ್ರಿಯಗಳ ಚಲನ ವಲನಗಳು ನಡೆಯುವವು. ಅವುಗಳ ಫಲವನ್ನು ಮಾತ್ರ ಅವನು ಅಪೇಕ್ಷಿಸುವದಿಲ್ಲ. ಹೀಗೆ ಫಲವನ್ನು ಹವಣಿಸದಿದ್ದರೂ ತನ್ನಲ್ಲಿ ನಡೆಯುವ ಇಂದ್ರಿಯ ವ್ಯವಹಾರಗಳನ್ನು ಅವನು ಬ್ರಹ್ಮನಲ್ಲಿ ಧರಿಸಿರುವನೆಂದೂ ಹಾಗೆ ಧರಿಸಿದುದರಿಂದ ಅವನಿಗೆ ಪಾಪವು ಲೇಶವಾದರೂ ತಗಲುವದಿಲ್ಲೆಂದೂ ಹೇಳಿದೆ (೫-೧೦). ಇಂದ್ರಿಯ ತೃಪ್ತಿಗಾಗಿ ಇರುವ **ಸ್ವಾರ್ಥ ಸಂಕಲ್ಪವನ್ನು ಹೀಗೆ ಸರ್ವತಃ ಬಿಟ್ಟವನೇ ಯೋಗಾರೂಢನು.**

**ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್**
**ಆತ್ಮೈವಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥ ೫ ॥**

ವಿಷಯಗಳನ್ನು ತ್ಯಾಗಮಾಡುವದೆಂದರೆ ಇಂದ್ರಿಯಗಳನ್ನು ದಂಡಿ

ಸುವದೆಂಬರ್ಥವಲ್ಲ. ಇಂದ್ರಿಯ ಸ್ವಭಾವವನ್ನು ಉಚ್ಛೇದಿಸಬೇಕೆಂದು ಗೀತೆಯಲ್ಲಿ ಎಲ್ಲಿಯೂ ಹೇಳಿಲ್ಲ. **ಯೋಗಿಯಾದವನು ತನ್ನ ಆತ್ಮ ಸ್ವಭಾವದಿಂದಲೇ ಇಂದ್ರಿಯ ಸ್ವಭಾವವನ್ನು ಉದ್ಧರಿಸಬೇಕೆಂದು ಹೇಳಿರುವದು.** ಇಂದ್ರಿಯ ಸ್ವಭಾವವನ್ನು ಕೊಲ್ಲಬಾರದು. ಇಂದ್ರಿಯ ಸ್ವಭಾವವು ಆತ್ಮ ಸ್ವಭಾವಕ್ಕೆ ಬಂಧುವಾಗಿದೆ; ಹಾಗೆಯೇ ಅದು ಶತ್ರು ವಾಗಿಯೂ ಪರಿಣಮಿಸುವದು.

**ಬಂಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥ ೬ ॥**

ತನ್ನ ಆತ್ಮ ಸ್ವಭಾವದಿಂದ ಇಂದ್ರಿಯ ಸ್ವಭಾವವನ್ನು ಜಯಿಸಿದವನಿಗೆ ಇಂದ್ರಿಯ ಸ್ವಭಾವವು ಬಂಧುವಾಗಿರುವದು. ಆತ್ಮನೇ–ವಿಜ್ಞಾನವನ್ನು ಕಳೆದುಕೊಂಡು ಪತಿತನಾದ–ಅನಾತ್ಮನೆನಿಸುವಾಗ ಇಂದ್ರಿಯ ಸ್ವಭಾವವು ಆವನಿಗೆ ಶತ್ರುವಾಗುವದು.

**ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥ ೭ ॥**

ಯಾವನು ತನ್ನ ಇಂದ್ರಿಯ ಸ್ವಭಾವವನ್ನು ಜಯಿಸಿರುವನೋ ಯಾವನ ಮನಸ್ಸು ಶಾಂತವಾಗಿರುವದೋ ಅವನ ಶ್ರೇಷ್ಠವಾದ ಆತ್ಮಸ್ವಭಾ ವವು ಶೀತೋಷ್ಣ, ಸುಖದುಃಖ, ಮಾನಾಪಮಾನ ಮೊದಲಾದವುಗಳಲ್ಲಿ ಸಮಾಧಾನವನ್ನು ಪಡೆದಿರುವದು.

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥ ೮ ॥**

ಇಷ್ಟೇ ಅಲ್ಲ; ಇಂಥವನ ಶ್ರೇಷ್ಠ ಆತ್ಮಸ್ವಭಾವವು ವಿಜ್ಞಾನದಿಂದ ತೃಪ್ತಿಯನ್ನು ಪಡೆದಿರುವದು. ಅವನ ಬುದ್ಧಿಯು ಜ್ಞಾನದಿಂದ ಪರಿಶುದ್ಧ ವಾಗಿರುವದು. ಇಂಥ ಜಿತೇಂದ್ರಿಯನು **ಕೂಟಸ್ಥಬ್ರಹ್ಮನಲ್ಲಿ ತನ್ನ ಸ್ಥಾನ ವನ್ನು ಸಾಧಿಸಿರುವನು** ಅಂದರೆ ಬ್ರಾಹ್ಮೀ ಸ್ಥಿತಿಯನ್ನು ಪಡೆದಿರುವನು. ಅವನಿಗೆ ಮಣ್ಣು ಕಲ್ಲು ಬಂಗಾರ ಇವೆಲ್ಲವೂ ಸಮಾನವಾಗಿರುವವು (೫–೧೮).

ಹೀಗೆ (ಬುದ್ಧಿ)ಯೋಗನನ್ನು ಪರಿಪೂರ್ಣವಾಗಿ ಸಾಧಿಸಿದವನನ್ನೇ ಯುಕ್ತ ನೆಂದು ಹೇಳುವದು. ಬುದ್ಧಿಯೋಗಯುಕ್ತನಾದ ಮನುಷ್ಯನ ಸ್ವಭಾವ ಚತುಷ್ಟಯದ ಮೇಲೆ ಅವನ ವಿಜ್ಞಾನದ ಪರಿಣಾಮವೇನಾಗುವದೆಂಬ ದನ್ನು ಈ ಶ್ಲೋಕದಲ್ಲಿ ಹೇಳಿದೆ.

**ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ ೯ ॥**

ಹೊನ್ನಿನಲ್ಲಿ ಪ್ರೀತಿ, ಮಣ್ಣಿನಲ್ಲಿ ನಿಕೃಷ್ಟಭಾವ ಇವುಗಳ ಪ್ರಾಬಲ್ಯವು ವ್ಯವಹಾರದಲ್ಲಿ ಪ್ರತಿನಿತ್ಯವೂ ಕಂಡು ಬರುವದು. ಹಾಗೆಯೇ ಆತ್ಮವ್ಯಕ್ತಿಗಳ ನಡುವೆ ಪರಸ್ಪರವಾಗಿ ಸಂಭವಿಸುವ ಪ್ರೇಮ ದ್ವೇಷವೆಂಬ ಭಾವನೆಗಳು ಪ್ರಬಲವಾಗಿರುವದನ್ನೂ ಕಾಣಬಹುದು. ಆದರೆ ಅಂಥಸ್ವಭಾವವಿಷಮ ತೆಯು ವಿಜ್ಞಾನಿಯಲ್ಲಿರುವದಿಲ್ಲ. ಸುಹೃದನಲ್ಲಿ, ಮಿತ್ರನಲ್ಲಿ, ವೈರಿಯಲ್ಲಿ, ಮಧ್ಯಸ್ಥನಲ್ಲಿ, ದ್ವೇಷ್ಯನಲ್ಲಿ, ಬಂಧುವಿನಲ್ಲಿ, ಸಾಧುವಿನಲ್ಲಿ, ಪಾಪಿಯಲ್ಲಿ ಸಾಧಾರಣ ಮನುಷ್ಯನು ಸಹಜವಾಗಿ ವ್ಯಕ್ತಮಾಡುವ ಪೂರ್ವಗ್ರಹಮೂ ಲಕವಾದ ತೀವ್ರಭಾವನೆಗಳಿಗೆ ಈ ವಿಜ್ಞಾನಿಯು ತನ್ನ ಮನಸ್ಸಿನಲ್ಲಿ ತಿಲ ಮಾತ್ರ ಎಡೆಗೊಡುವದಿಲ್ಲ. ಇವರೆಲ್ಲರ ವಿಷಯದಲ್ಲಿಯೂ ಅವನು ಸಮ ನಾಗಿ ಅಂದರೆ ವಿಕಾರರಹಿತನಾಗಿ ಇರುವನು. ಅವನಲ್ಲಿರುವ ಮೇಲ್ಮೆಯೇ ಇದು. ಯಾಕೆಂದರೆ, ಈ ಸಮಾನ ವೃತ್ತಿಯಿಂದ ಅವನು ಬಂಧನವನ್ನು ಕಳೆದುಕೊಳ್ಳುವನು.

**ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥ ೧೦ ॥**

ಈ ಸಮತ್ವವನ್ನು ಸಂಪಾದಿಸಲಿಕ್ಕೆ ಯೋಗಿಗಳು ಒಂದು ವಿಶಿಷ್ಟ ಮಾರ್ಗವನ್ನು ರೂಢವಾಗಿ ಮಾಡಿರುವರು. ಒಬ್ಬಂಟಿಗನಾಗಿ ಏಕಾಂತ ವಾದ ಸ್ಥಳದಲ್ಲಿದ್ದುಕೊಂಡು ತನ್ನ ಚಿತ್ತವನ್ನೂ ಮನಸ್ಸನ್ನೂ ಇಂದ್ರಿಯ ಗಳನ್ನೂ ಅಧ್ಯಾತ್ಮ ಪರವಾದ ಪ್ರಯತ್ನದಲ್ಲಿರಿಸಿ, ಯಾವುದರಲ್ಲಿಯೂ ಇಚ್ಛೆಯನ್ನಿಡದೆ ಮತ್ತು ಯಾವುದನ್ನೂ ಸ್ವೀಕಾರಮಾಡದೆ, ಇಂಥ ಯೋಗಿಯು ತನ್ನ ಯೋಗಾಭ್ಯಾಸ ಸಾಧನೆಯನ್ನು ಮಾಡುವನು.

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಂ ॥ ೧೧ ॥**

ಶುಚಿಯಾದ ಸ್ಥಳದಲ್ಲಿ ತನ್ನ ಆಸನವನ್ನು ಹಾಕುವನು. ಈ ಆಸನವು ಸ್ಥಿರವಾಗಿರುವದು. ಅದು ಅಷ್ಟು ಎತ್ತರವೂ ಇರುವದಿಲ್ಲ; ಅಷ್ಟು ಕಿರಿದಾಗಿಯೂ ಇರುವದಿಲ್ಲ ಕುಶದಿಂದ ಮಾಡಿದ ಆಸನದಮೇಲೆ ಕೃಷ್ಣಾಜಿನವನ್ನೂ ಒಂದು ವಸ್ತ್ರವನ್ನೂ ಹಾಸಿರುವದುಂಟು.

**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥ ೧೨ ॥**

ಇಂಥ ಆಸನದಮೇಲೆ ಕುಳಿತುಕೊಂಡು, ಮನಸ್ಸನ್ನು ಏಕಾಗ್ರ ಮಾಡಿ, ತನ್ನ ಚಿತ್ತವನ್ನೂ ಇಂದ್ರಿಯಗಳನ್ನೂ ಅಗಾಧವಾದ ಪ್ರಯತ್ನದಲ್ಲಿರಿಸಿ, ಬುದ್ಧಿಯು ಶುದ್ಧವಾಗುವದಕ್ಕಾಗಿ ಅವನು ಯೋಗಾಭ್ಯಾಸವನ್ನು ಮಾಡುವನು.

**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥ ೧೩ ॥**
**ಪ್ರಶಾಂತಾತ್ಮಾ ವಿಗತಭೀಃ ಬ್ರಹ್ಮಚಾರಿವ್ರತೇ ಸ್ಥಿತಃ ।**
**ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥ ೧೪ ॥**

ಕಾಯವನ್ನೂ ಶಿರಸ್ಸನ್ನೂ ಕುತ್ತಿಗೆಯನ್ನೂ ಅಚಲವಾಗಿ ಸಮರೇಷೆಯಲ್ಲಿರಿಸಿ, ಸ್ಥಿರಚಿತ್ತನಾಗಿ ತನ್ನ ನಾಸಿಕಾಗ್ರದಲ್ಲಿ ದೃಷ್ಟಿಯನ್ನು ನಿಲ್ಲಿಸಿ ದಿಕ್ಕುಗಳನ್ನು ಲಕ್ಷಿಸದೆ ಮನಸ್ಸನ್ನು ಪ್ರಶಾಂತವಾಗಿ ಮಾಡಿ, ಭೀತಿಯನ್ನು ಬಿಟ್ಟು ಬ್ರಹ್ಮಚರ್ಯ ವ್ರತದಲ್ಲಿ ನಿಂತು ಮನೋನಿಗ್ರಹದಿಂದ ಚಿತ್ತವನ್ನು ಶ್ರೀಕೃಷ್ಣನಲ್ಲಿಟ್ಟ ಯೋಗಿಗಳು ಶ್ರೀಕೃಷ್ಣಪರರಾಗಿ ಕುಳಿತುಕೊಳ್ಳುವರು.

**ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ ।**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ ೧೫ ॥**

ತಮ್ಮ ಮನಸ್ಸನ್ನು ಈ ಪ್ರಕಾರದ ಯೋಗಾಭ್ಯಾಸದಿಂದ ಸ್ವಾಧೀನ

ದಲ್ಲಿ ತಂದುಕೊಂಡ ಯೋಗಿಗಳು ನಿರಂತರವಾಗಿ ತಾವು ಮಾಡುವ **ನನ್ನ ಧ್ಯಾನದಿಂದ** ಭಂಗವಿಲ್ಲದ ಪರಮಶಾಂತಿಯನ್ನು ಪಡೆಯುವರು.

ಮೇಲಿನ ಶ್ಲೋಕಗಳಲ್ಲಿ ಪಾತಂಜಲ ಯೋಗದ ವರ್ಣನೆಯು ಬಂದಿದೆ. ಯೋಗವೆಂಬ ಹೆಸರನ್ನು ಮುಖ್ಯವಾಗಿ ಪಾತಂಜಲ ಯೋಗವನ್ನು ಸೂಚಿಸುವದಕ್ಕಾಗಿಯೇ ಹೇಳುವ ಪದ್ಧತಿಯುಂಟು. ಆ ಯೋಗದ ವರ್ಣನೆಯೇ ಇಲ್ಲಿ ಬಂದಿರುವದರಿಂದ ಪಾತಂಜಲ ಯೋಗವನ್ನು ಸುಲಕ್ಷಿಸಿಯೇ ಗೀತೆಯಲ್ಲೆಲ್ಲಿಯೂ ಯೋಗವೆಂಬ ಶಬ್ದವನ್ನು ಪ್ರಯೋಗಿಸಿರುವರೆಂದು ಅಧಿಕಾರದಿಂದ ಪ್ರತಿಪಾದಿಸಲ್ಪಟ್ಟಿರುವುದು. ಗೀತೆಗೆ ಹೀಗೆ ಅರ್ಥ ಹೇಳುವದು ನ್ಯಾಯವಲ್ಲವೆಂದು ತೋರಿಸುವದೂ ಪ್ರಸ್ತುತಕ್ಕೆ ಅನವಶ್ಯಕವಾಗಿದೆ. ಯಾಕೆಂದರೆ ಪಾತಂಜಲ ಯೋಗವು ಗೀತೆಯಲ್ಲಿ ಹೇಳಿದ ಪ್ರಧಾನ ವಿಷಯವಲ್ಲೆಂಬುದು ನಿಶ್ಚಿತವಾದಂತೆಯೇ ಇದೆ. ಇದಲ್ಲದೆ ಪ್ರಸ್ತುತದಲ್ಲಿ ನಮ್ಮ ಯತ್ನದಿಂದ ಗೀತಾಶಾಸ್ತ್ರದ ಸ್ವತಂತ್ರ ಸಮಾಧಾನಕಾರಕ ನಿಜ ಸ್ವರೂಪವು ಪ್ರಕಟವಾಗುತ್ತಿರುವಾಗ ಇಂಥ ನಿರರ್ಥಕ ಸಿದ್ಧಾಂತಗಳನ್ನು ಸಮಾಲೋಚಿಸುವ ಕಾರಣವಿಲ್ಲ.

ಬುದ್ಧಿಯೋಗ ಶಾಸ್ತ್ರದ ದೃಷ್ಟಿಯಿಂದ ಪ್ರಚಲಿತ ಪದ್ಧತಿಗಳಿಗೆ ಯಾವ ಯೋಗ್ಯತೆಯನ್ನೂ ಸ್ಥಾನವನ್ನೂ ಕೊಡಬಹುದೆಂಬುದು ಗೀತೆಯಲ್ಲಿ ಹೆಜ್ಜೆ ಹೆಜ್ಜೆಗೆ ತೋರಿಸಲ್ಪಟ್ಟಿದೆ. ಈ ರೂಢಿಯನ್ನನುಸರಿಸಿ ಪಾತಂಜಲ ಯೋಗವನ್ನು ಇಲ್ಲಿ ಉಲ್ಲೇಖಿಸಿದೆ. ಹೀಗೆ ಹೇಳಲಿಕ್ಕೆ ಈ ಶ್ಲೋಕದಲ್ಲಿ ಸಾಕಷ್ಟು ಆಧಾರವಿದೆ. ಬುದ್ಧಿಯೋಗದಲ್ಲಿ ಮನಸ್ಸು ಸ್ಥಿರವಾಗಬೇಕು; ಪಾತಂಜಲ ಯೋಗಸಾಧನೆಯಿಂದ ಅದನ್ನು ಹಾಗೆ ಶೀಘ್ರವಾಗಿ ಸ್ಥಿರಮಾಡಬಹುದು. ಬುದ್ಧಿಯೋಗವನ್ನನುಸಿರಿಸಲಿಚ್ಛಿಸುವವನಾದರೂ ಆ ಉದ್ದೇಶದಿಂದ ಪಾತಂಜಲ ಯೋಗವನ್ನು ಬಳಿಸಲೆಣಿಸಿದರೆ ಅವನು ಆ ಯೋಗವನ್ನು ತನ್ನ ಬುದ್ಧಿಯೋಗಕ್ಕನುವಾಗಿ ಹೇಗೆ ಸಾಧಿಸಬೇಕೆಂಬದನ್ನು ಹೇಳುವದು ಗೀತೆಯಲ್ಲಿ ಉಚಿತವೂ ಅವಶ್ಯವೂ ಆಗಿದೆ. ಆದುದರಿಂದ ಈ ವರ್ಣನೆಯಲ್ಲಿ ಬುದ್ಧಿಯೋಗದ ಅಭ್ಯಾಸವನ್ನೇ ಹೆಚ್ಚು ಆಗ್ರಹದಿಂದ ಪ್ರತಿಪಾದಿಸಿರುವರೆಂಬ ವಿಷಯವನ್ನು ದುರ್ಲಕ್ಷ್ಯ ಮಾಡಬಾರದು (೬-೧೪) ಮೂಲ ಪಾತಂಜಲ ಯೋಗದಲ್ಲಿಯೇ ಬುದ್ಧಿಯೋಗವನ್ನು

ಹೀಗೆ ಹೇಳಿರುವದು ಶಕ್ಯವಿಲ್ಲ. **ಆದುದರಿಂದ ಪಾತಂಜಲ ಯೋಗವೇ ಗೀತೆಯ ಪ್ರತಿಪಾದ್ಯ ವಿಷಯವಾಗಲಾರದು.** ಪಾತಂಜಲ ಯೋಗಕ್ಕೆ ಇಲ್ಲಿ ಹೇಳಿದ ಫಲಶ್ರುತಿಯನ್ನವಲೋಕಿಸಿದರೂ ಹೀಗೆಯೇ ಕಂಡುಬರುವದು. ಆ ಯೋಗದಿಂದ ಮನೋನಿಗ್ರಹವನ್ನು ಸಾಧಿಸುವದು ಮಾತ್ರ ಸುಲಭವಾಗುವದು. ಹೀಗೆ ಸಾಧಿಸಿದ ಮನೋನಿಗ್ರಹವನ್ನು ಬುದ್ಧಿಯೋಗಕ್ಕಾಗಿ ಹೇಗೆ ಬಳಸಬೇಕೆಂಬುದನ್ನೂ ಹಾಗೆ ಬಳಸಿದ್ದರಿಂದ ಯಾವ ಸಿದ್ಧಿಯು ಕೈಗೂಡುವದೆಂಬದನ್ನೂ ಈ ಶ್ಲೋಕದಲ್ಲಿ ಹೇಳಿದೆ. ನಿಯತಮಾನಸನಾದ ಯೋಗಿಯು ಸತತವೂ ತನ್ನ ಯೋಗವನ್ನು ಆಚರಿಸಬೇಕಾಗುವದು. ಹೀಗೆ ಪಾತಂಜಲ ಯೋಗವನ್ನು ಆಚರಿಸುವದು ಶಕ್ಯವಲ್ಲ. ಇದೂ ಅಲ್ಲದೆ ಮನೋನಿಗ್ರಹದನಂತರ ಶಾಂತಿಯೂ ಶಾಂತಿಯಿಂದ ಯಥಾರ್ಥ ಜ್ಞಾನ ವಿಜ್ಞಾನವೂ ಜ್ಞಾನವಿಜ್ಞಾನದ ಮೂಲಕ ಶಾಶ್ವತವಾದ ಆಧ್ಯಾತ್ಮಿಕ ಸುಖವೂ ಬುದ್ಧಿಯೋಗದ ಪರಿಶೀಲನೆಯಿಂದಲೇ ಪ್ರಾಪ್ತವಾಗುವವೆಂದು ಗೀತೆಯು ಬೋಧಿಸುವದು. ಈ ಬುದ್ಧಿಯೋಗದ ಹವ್ಯಾಸವಿಲ್ಲದೆ ಪಾತಂಜಲ ಯೋಗವನ್ನು ಮಾತ್ರ ಕೈಗೂಡಿಸಿಕೊಂಡರೆ, ಅದು ನಿರರ್ಥಕವಾಗುವದೆಂದು ಸೂಚಿಸುವದಕ್ಕಾಗಿಯೇ ಈ ಪ್ರಮೇಯದಲ್ಲಿ ಪಾತಂಜಲ ಯೋಗವನ್ನು ಬುದ್ಧಿಯೋಗಕ್ಕನ್ವಯಿಸಿ ಶ್ರೀಕೃಷ್ಣನು ವಿವರಿಸಿರುವನು. ಆದುದರಿಂದ ಶಾಶ್ವತ ಮನೋನಿಗ್ರಹವನ್ನೂ ಶಾಂತಿಯನ್ನೂ ಇವೆರಡರಿಂದಲೂ ಮುಂದೆ ಲಭಿಸುವ ನಿರ್ವಾಣಮುಕ್ತಿಯನ್ನೂ ಬುದ್ಧಿಯೋಗದಲ್ಲಿ ಹೇಳಿದಂತೆ ಸೃಷ್ಟಿಯೊಳಗಿನ ಪುರುಷೋತ್ತಮನ ಭಾವದೊಂದಿಗೆ ಸಮರಸವಾಗಿ ಪ್ರಾಪ್ತ ಮಾಡಿಕೊಳ್ಳಬೇಕು. ಈ ಶ್ಲೋಕಗಳಲ್ಲಿ ಹೇಳಿರುವ ಯೋಗಾಭ್ಯಾಸವಾದರೂ ಹೀಗೆ ಬುದ್ಧಿಯೋಗವನ್ನೇ ಸೇರಿರುವದು. ಅದಕ್ಕಾನುಷಂಗಿಕವಾಗಿ ಪಾತಂಜಲ ಯೋಗವಾದರೂ ಗ್ರಾಹ್ಯವೆಂಬದು ಕ್ರಮ ಪ್ರಾಪ್ತವಾಗಿದೆ.

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ ।**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ ೧೬ ॥**

ಗೀತೆಯಲ್ಲಿ ಬೋಧಿಸಿರುವ ಯೋಗಸಾಧನೆಯು ಪಾತಂಜಲ

ಯೋಗದ ಮುಖ್ಯ ಲಕ್ಷಣವಾಗಿರುವ ವಿಶಿಷ್ಟ ಶಾರೀರಿಕ ನಿರ್ಬಂಧಗಳ ನ್ನಾಗಲಿ ಅಭ್ಯಾಸಗಳನ್ನಾಗಲಿ ಅವಲಂಬಿಸಿರುವದಿಲ್ಲ. ಪಾತಂಜಲ ಯೋಗ ವನ್ನು ಅನುಸರಿಸುವುದರಿಂದ ಮನಸ್ಸು ಸುಲಭವಾಗಿ ವಶವಾಗುವದು ನಿಜ. ಆದರೆ ಇಲ್ಲಿ ವಿಸ್ತರಿಸುತ್ತಿರುವ ಬುದ್ಧಿಯೋಗವನ್ನು ಮನಸ್ಸು ಶಾಂತ ವಾದನಂತರವೇ ಸಂಪೂರ್ಣವಾಗಿ ಸಾಧಿಸಬೇಕಾಗುವದು. ಆಹಾರ ನಿದ್ರೆಗಳನ್ನು ಯಥೋಚಿತವಾಗಿ ಮಾಡಿದ ಮಾತ್ರಕ್ಕೆ ಯೋಗವು ಎಂದಿಗೂ ಸಾಧಿಸಲಾರದು. ಮಿತಿಮೀರಿ ತಿನ್ನುವವನಿಗಾಗಲಿ ಆಹಾರವನ್ನು ಸಂಪೂರ್ಣವಾಗಿ ಬಿಟ್ಟವನಿಗಾಗಲಿ ಹಾಗೆಯೇ ನಿದ್ರೆಯಲ್ಲಿ ಆಸಕ್ತಿಯುಳ್ಳ ವನಿಗಾಗಲಿ ಅಥವಾ ನಿತ್ಯ ಜಾಗ್ರತನಾಗಿರುವವನಿಗಾಗಲಿ ಈ ಯೋಗವು ಸಾಧಿಸಲಾರದು.

**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ।೧೭॥**

ಮನಸ್ಸು ಶಾಂತವಾದೊಡನೆಯೇ ಮನುಷ್ಯ ಸ್ವಭಾವಕ್ಕೆ ಸಹಜ ವಾದ ಬಾಹ್ಯಸ್ಪರ್ಶಗಳಲ್ಲಿರುವ ಆಸಕ್ತಿಯನ್ನು ಬಿಟ್ಟಂತಾಗುವದು. ಬುದ್ಧಿಯೋಗದ ಅಭ್ಯಾಸದಲ್ಲಿ ಇದು ಮೊದಲನೆಯ ಮೆಟ್ಟು. ಆದರ ನಿಜ ವಾದ ಅಭ್ಯಾಸವನ್ನು ಆ ಬಳಿಕಲೇ ಮಾಡಬೇಕಾಗುವದು. ಬ್ರಹ್ಮಯೋಗ ಯುಕ್ತ ( ೫–೨೧ ) ನಾಗುವದರಲ್ಲೇ ಬುದ್ಧಿಯೋಗಸಾಧನೆಯ ಮರ್ಮ ವಿರುವದು. ಅದು ಪಾತಂಜಲ ಯೋಗಸಾಧನೆಯಲ್ಲಿ ಇರುವದಿಲ್ಲ. ಹೀಗೆ ಬ್ರಹ್ಮಯೋಗಯುಕ್ತನಾಗಿ ಇಲ್ಲವೆ ಅದನ್ನು ಸಾಧಿಸುವ ಪ್ರಯತ್ನಪರ ನಾಗಿ ಆಹಾರ ವಿಹಾರಗಳನ್ನಾಗಲಿ ಮತ್ತಾವ ಕರ್ಮಗಳನ್ನಾಗಲಿ ಮಾಡಿ ದುದಾದರೆ ಇಂಥ ಆಚರಣೆಯಲ್ಲಿ ಗರ್ಭಿತವಾದ ಬುದ್ಧಿಯೋಗದ ಪ್ರಭಾವ ದಿಂದ ಆಸಕ್ತಿಪೂರ್ಣ ಆಹಾರವಿಹಾರಗಳಿಂದ ಪರಿಣಮಿಸುವ ದುಃಖ ಇಲ್ಲವೆ ಬಂಧನಗಳು ಇಲ್ಲದಾಗುವವು. ನಿದ್ರೆಯಲ್ಲಾಗಲಿ ಜಾಗ್ರತಾವಸ್ಥೆ ಯಲ್ಲಾಗಲಿ ಈ ಬ್ರಹ್ಮಯೋಗಯುಕ್ತ ಸ್ಥಿತಿಯು ಅಂದರೆ ಆಧ್ಯಾತ್ಮ ಸ್ವಭಾವಜನ್ಯವೃತ್ತಿಯು ಬುದ್ಧಿಯೋಗದಲ್ಲಿ ಅವ್ಯಾಹತವಾಗಿ ಉಳಿಯು ವದೇ ಹೊರತು ಪಾತಂಜಲಯೋಗದಲ್ಲಿ ಅಲ್ಲ.

ಯುಕ್ತವೆಂಬ ಶಬ್ದಕ್ಕೆ ಈ ಶ್ಲೋಕದಲ್ಲಿ ಮಿತಿಯಿಂದ, ಅಳತೆ ತಿಳಿದು, ಯುಕ್ತಪ್ರಮಾಣದಲ್ಲಿ ಎಂದು ಸರ್ವಸಾಧಾರಣವಾಗಿ ಅರ್ಥಮಾಡುವದುಂಟು. ಇದು ಸರಿಯಲ್ಲನೆಂಬುದು ಮುಂದಿನ ಶ್ಲೋಕದಿಂದ ಕಂಡುಬರುವದು. ಅದರಲ್ಲಿ ಸಹೇತುಕವಾಗಿ ಹಾಗು ತಪ್ಪುತಿಳುವಳಿಕೆಯಾಗಬಾರದೆಂಬ ಉದ್ದೇಶದಿಂದ ಸರಲವಾಗಿಯೂ ಸ್ಪಷ್ಟವಾಗಿಯೂ ಈ ಶಬ್ದದ ಅರ್ಥವನ್ನು ಹೇಳಿದೆ. ಹೀಗಿದ್ದರೂ ಈ ಅರ್ಥವನ್ನು ಲಕ್ಷಿಸದೆ ಪರಿಮಿತಿ-ಅಳತೆ-ಇಲ್ಲವೆ ಪ್ರಮಾಣವೆಂದೇ ಅರ್ಥಮಾಡುವದು ಅನರ್ಥವೇ ಸರಿ.

**ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।**
**ನಿಃಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥ ೧೮ ॥**

ಮನಸ್ಸಿನಲ್ಲಿ ಉದ್ಭವಿಸುವ ಸರ್ವ ಕಾಮನೆಗಳನ್ನು ಅಂದರೆ ವಿಷಯಗಳ ವಿಚಾರವನ್ನು ಬಿಟ್ಟು ಮೊದಲು ನಿಸ್ಪೃಹನಾಗಬೇಕು. ಆ ಮೆಟ್ಟನ್ನು ಕೈಗೂಡಿಸುವದಕ್ಕೆ ಪಾತಂಜಲಯೋಗವು ಉಪಯುಕ್ತವೆಂದು ಹೇಳಿದ್ದಾಯಿತು. **ಆನಂತರ ಬುದ್ಧಿಯನ್ನು ಆತ್ಮಸ್ವಭಾವದ ಕಡೆಗೆ ತಿರುಗಿಸಿದರೆ ಅದು ಚಿತ್ತವಾಗಿ ಪರಿಣಮಿಸುವದು. ಈ ಚಿತ್ತವನ್ನು ಆತ್ಮದೃಷ್ಟಿಯಿಂದ ಪುರುಷೋತ್ತಮನಲ್ಲಿ ನಿಲ್ಲಿಸಿದರೆ ಮನುಷ್ಯನು ಯುಕ್ತನಾಗುವನೆಂದು ಗೀತೆಯು ಹೇಳುವದು.** ಮಿತಿಯನ್ನಾಗಲಿ ಅಳತೆಯನ್ನಾಗಲಿ ಕಂಡುಹಿಡಿದ ತತ್ವವೇತ್ತನನ್ನು "ಯುಕ್ತ"ನೆಂದು ಗೀತೆಯು ಒಪ್ಪಿಕೊಳ್ಳುವದಿಲ್ಲ. ಏಕಾಗ್ರವಾದ ಬುದ್ಧಿಯಿಂದ ಆತ್ಮಸ್ವಭಾವಜಾಗ್ರತಿಯಿಂದ ಯಾವನು ತನ್ನ ಇಂದ್ರಿಯ ವ್ಯವಸಾಯ-ವ್ಯವಹಾರ-ಗಳೆಲ್ಲವನ್ನೂ ಮಾಡುವನೋ ಅವನೇ ನಿಜವಾದ ಬುದ್ಧಿಯೋಗಿಯು ಎಂಬವಾಗಿ ಆರಂಭದಲ್ಲಿಯೇ (೨-೪೧) ಅವನ ಮುಖ್ಯಲಕ್ಷಣವನ್ನು ಹೇಳಿದೆ. ಆ ಬುದ್ಧಿಯೋಗಿಯನ್ನೇ ಈಗ ತಾತ್ವಿಕದೃಷ್ಟಿಯಿಂದ ಬುದ್ಧಿಯೋಗಯುಕ್ತನೆಂದೂ ಅಥವಾ ಯುಕ್ತನೆಂದೂ ಶ್ರೀಕೃಷ್ಣನು ಹೇಳುವನು.

**ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಂಜತೋ**
**ಯೋಗಮಾತ್ಮನಃ ॥ ೧೯ ॥**

ಯೋಗಿಯನ್ನರಿಯುವದಕ್ಕೆ ಅವನ ಮುಖ್ಯಲಕ್ಷಣಗಳನ್ನು ಅವನ ಅನ್ನಪಾನಗಳಲ್ಲಿ ಅಥವಾ ಇಂಥ ಇತರ ವ್ಯವಹಾರಗಳಲ್ಲಿ ಶೋಧಿಸಬಾರದು. ಆದರೆ ಅವನ ಚಿತ್ತದ—ಬುದ್ಧಿಯ ಆತ್ಮವಿಷಯಕ-ಏಕಾಗ್ರತೆಯಲ್ಲಿಯೇ ನೋಡಬೇಕು. ಪರಮಾತ್ಮನೊಂದಿಗೆ ಯೋಗಯುಕ್ತನಾಗುವ ಪ್ರಯತ್ನದಲ್ಲಿ ತೊಡಗಿದ ಯೋಗಿಯ ಚಿತ್ತಕ್ಕೆ ಗಾಳಿಯಿಲ್ಲದ ಸ್ಥಳದಲ್ಲಿಟ್ಟ ನಿಶ್ಚಲವಾದ ಜ್ಯೋತಿಯ ಉಪಮೆಯನ್ನು ಕೊಟ್ಟಿರುವದು ಬಹು ಸಮರ್ಪಕವಾಗಿರುವದು.

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ।**
**ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥ ೨೦ ॥**

ನಿರುದ್ಧ-ಎಂದರೆ ನಿಯಮನ ಮಾಡಿದ-ಸ್ಥಿತಿಯಲ್ಲಿ ಯೋಗವನ್ನನುಭವಿಸುತ್ತ ಚಿತ್ತವು ಯಾವುದರಲ್ಲಿ ಸಂತೋಷಮಗ್ನವಾಗಿರುವದೋ ಯಾವ ಸ್ಥಿತಿಯಲ್ಲಿ ಆತ್ಮನು (ಪುರುಷನು) ಆತ್ಮನನ್ನು (ಪುರುಷೋತ್ತಮನನ್ನು) ಪ್ರತ್ಯಕ್ಷವಾಗಿ ಸಂದರ್ಶಿಸಿ ಆತ್ಮನಲ್ಲಿ (ತನ್ನಲ್ಲಿ)ಯೇ ಸಂತುಷ್ಟನಾಗಿರುವನೋ

**ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಂ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ವತಃ ॥ ೨೧ ॥**

ಇಂದ್ರಿಯಗಳಿಗೆ ಅಗೋಚರವಾದರೂ ಬುದ್ಧಿಗೆ ಸಂಪೂರ್ಣಗಮ್ಯವಾದ ಆತ್ಯಂತಿಕಸುಖವು ಯಾವ ಸ್ಥಿತಿಯಲ್ಲಿ ಅನುಭವಕ್ಕೆ ಬರುವದೋ ಹಾಗು ಯಾವ ಸ್ಥಿತಿಯನ್ನು ಸೇರಿದಮಾತ್ರಕ್ಕೆ ಸತ್ಯದಿಂದ ಚ್ಯುತವಾಗುವ ಸಂಭವವಿಲ್ಲವೋ

**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ।**
**ಯಸ್ಮಿಂಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥ ೨೨ ॥**

ಯಾವ ಸ್ಥಿತಿಯನ್ನು ಪಡೆದಬಳಿಕ ಅದಕ್ಕೂ ಹೆಚ್ಚಿನ ಸಂಪಾದನೆಯು ಯಾವುದೂ ಉಳಿಯುವದಿಲ್ಲವೋ ಮತ್ತು ಯಾವ ಸ್ಥಿತಿಯಲ್ಲಿ ಎಂಥ ಮಹತ್ವವಾದ ದುಃಖವು ಪ್ರಾಪ್ತವಾದರೂ ಅದರಿಂದ ಚಿತ್ತವು ಚಲಿಸುವದಿಲ್ಲವೋ

**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥೨೩॥**

ಆ ಸ್ಥಿತಿಯಲ್ಲಿ ದುಃಖದಿಂದ ನಿತ್ಯ ಮುಕ್ತಿಯು ದೊರೆಯುವದೆಂದು ಅರ್ಜುನನು ತಿಳಿಯಬೇಕು. **ಈ ಸ್ಥಿತಿಗೇ ಯೋಗವೆಂದು ಹೆಸರು** ಇಂಥ ಯೋಗವನ್ನು–ಬ್ರಹ್ಮಯೋಗಯುಕ್ತ ಸ್ಥಿತಿಯನ್ನು–ಅವನು ದೃಢನಿಶ್ಚಯದಿಂದ ಆತ್ಮಾಭಿಮುಖನಾಗಿ ಏಕಾಗ್ರವೂ ನಿರ್ವ್ಯಾಕುಲವೂ ಆದ ಬುದ್ಧಿಯಿಂದ ಅಭ್ಯಾಸಮಾಡಬೇಕು.

**ಸಂಕಲ್ಪಪ್ರಭವಾನ್ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥ ೨೪ ॥**

ಈ ಸ್ಥಿತಿಯನ್ನು ಸಾಧಿಸಲಿಕ್ಕೆ ಪಾತಂಜಲಯೋಗವು ರಾಜಮಾರ್ಗವಾಗಲಾರದು. ಆ ಯೋಗವು ಎಲ್ಲರಿಗೂ ಸಾಧ್ಯವಲ್ಲ. ಹಲಕೆಲವರಿಗೆ ಅದರಿಂದ ಪ್ರಯೋಜನ ಉಂಟೆಂಬುದು ನಿಜ. ಆದುದರಿಂದಲೇ ಅದನ್ನು ಗೀತೆಯಲ್ಲಿ ಚರ್ಚಿಸಿದೆ. ಆದರೆ ಈ ಬ್ರಹ್ಮಯೋಗಯುಕ್ತ ಸ್ಥಿತಿಯನ್ನು ಸೇರಲಿಕ್ಕೆ ಗೀತೆಯ ಸ್ವತಂತ್ರ ರಾಜಮಾರ್ಗವು ಮತ್ತೊಂದಿರುವದು. ಅದರ ವಿಷಯವಾಗಿ ಇಲ್ಲಿಂದ ಮುಂದಕ್ಕೆ ಹೇಳಲಾರಂಭಿಸಿದೆ. ಎಲ್ಲ ಜೀವರಿಗೂ ಈ ಮಾರ್ಗವು ಸುಲಭವು ಹಾಗೂ ಸಾಧ್ಯವು (೯–೨).

ಇಂದ್ರಿಯ ಸ್ವಭಾವ ಮೂಲಕವಾಗಿ ಮನಸ್ಸಿನಲ್ಲಿ ಉದ್ಭವಿಸುವ ಕಾಮಸಂಕಲ್ಪಗಳನ್ನೆಲ್ಲ ನಿಶ್ಶೇಷವಾಗಿ ಬಿಟ್ಟುಬಿಡಬೇಕು. ಮತ್ತು ಮನಸ್ಸಿನಿಂದ ಇಂದ್ರಿಯಗಳನ್ನು ಎಲ್ಲ ಕಡೆಯಿಂದಲೂ ನಿಯಮನ ಮಾಡಬೇಕು (೨-೫೯-೬೧).

**ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥೨೫॥**

ಬುದ್ಧಿಗೆ ಸಹಜವಾಗಿರುವ ಆತ್ಮದ ಕಡೆಯ ಪ್ರವೃತ್ತಿಯನ್ನು ಪ್ರಯತ್ನಪೂರ್ವಕವಾಗಿಯೂ ದೃಢವಾಗಿಯೂ ಪೋಷಿಸಿ, ಅದು ವೃದ್ಧಿಗೊಳ್ಳುವ ಹಾಗೆ ಮಾಡಬೇಕು. ಮತ್ತು ಮೆಲ್ಲಮೆಲ್ಲನೆ ಶಾಂತಿಯನ್ನು ಸಾಧಿಸಬೇಕು. ಹೀಗೆ ಶಾಂತನಾದ ಮೇಲೆ ಮನಸ್ಸನ್ನಾದರೂ ಬುದ್ಧಿ

ಯಂತೆ ಆತ್ಮರತವಾಗಿ ಮಾಡಿ ಯಾವುದಕ್ಕಾಗಿಯೂ ಚಿಂತಿಯುಸ್ನು ತಿಲಮಾತ್ರವೂ ಹಿಡಿಯುಬಾರದು. ಹೀಗೆ ಪ್ರಯತ್ನಪಡುವಾಗ ಮನಸ್ಸೂ ಇಂದ್ರಿಯಗಳೂ ಆ ಪ್ರಯತ್ನದಲ್ಲಿ ತಾವಾಗಿ ನೆರವಾಗುವದಿಲ್ಲ. ತಮ್ಮ ವಿಷಯಪ್ರಪಂಚದ ಆನಂದವನ್ನು ತೊರೆದು ಆತ್ಮಪ್ರಪಂಚದ ಆನಂದವನ್ನು ಗ್ರಹಿಸುವ ಕಾರ್ಯವು ಮೊದಲು ಮೊದಲು ಅವುಗಳಿಗೆ ಅಪ್ರಿಯವಾಗಿ ಕಾಣುವುದು. ತಾವು ಸಾಧಿಸಿ ಕೊಡಬಹುದಾದ ಸ್ವರ್ಗ ಸುಖಗಳೆಲ್ಲ ಬುದ್ಧಿಯನ್ನನುಸರಿಸಿದರೆ ಕೈ ಸೇರದೆ ಹೋಗುವವೆಂದು ಮನಸ್ಸೂ ಇಂದ್ರಿಯಗಳೂ ಮೊರೆ ಇಡುವವು. ಆ ಹೊತ್ತಿನಲ್ಲಿ ಎಂಥವನಿಗೂ ಕ್ಷಣಮಾತ್ರ ಸಂದೇಹವು ಉಂಟಾಗಬಹುದು. ಆದರೆ ಸಾಧಕನಾದವನು ಶಾಂತನಾಗಿ ಈ ಭಯಸೂಚನೆಗಳನ್ನು ದುರ್ಲಕ್ಷ್ಯ ಮಾಡಬೇಕು.

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಂ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥ ೨೬ ॥**

ಇಂಥ ಸ್ಥಿತಿಯಲ್ಲಿ ಮನಸ್ಸಿನ ನಿರೋಧವನ್ನಾಗಲಿ ಬುದ್ಧಿಯ ಮೇಲಿನ ಅದರ ವಿಶ್ವಾಸವನ್ನಾಗಲಿ ಸ್ಥಿರವಾಗಿ ಕಾದುಕೊಳ್ಳುವದು ದುರ್ಘಟವೆಂಬುದು ನಿಜ. ಮನಸ್ಸು ಬಾರಿಬಾರಿಗೂ ತಪ್ಪಿಸಿಕೊಂಡು ಓಡಿಹೋಗುವ ಸಂಭವವು ಇದ್ದೇ ಇರುವದು. ಹೀಗಾದ ಪಕ್ಷಕ್ಕೆ ಪಾತಂಜಲಯೋಗವೇ ತಾರಣೋಪಾಯವೆಂಬುದಾಗಿ ಶ್ರೀಕೃಷ್ಣನು ಇಲ್ಲಿ ಹೇಳುವದಿಲ್ಲ. **ಚಂಚಲವೂ ಅಸ್ಥಿರವೂ ಆದ ಮನಸ್ಸು ನುಸುಳಿಹೋಗಿ ಇಂದ್ರಿಯಗಳ ಕಡೆಗೆ ಹೆಜ್ಜೆಯಿಟ್ಟ ಹಾಗೆಲ್ಲ ತಿರುತಿರುಗಿ ಅದನ್ನು ನಿಗ್ರಹಿಸಿ ಆತ್ಮದೃಷ್ಟಿಯಿಂದ ಶುದ್ಧವೂ ಶಾಂತವೂ ಆದ ಬುದ್ಧಿಯ ಕಡೆಗೆ ಎಳೆದು ವಶಮಾಡಿಕೊಳ್ಳಲಿಕ್ಕೆ ಯತ್ನಿಸಬೇಕು.**

**ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥ ೨೭ ॥**

ಹೀಗೆ ಎಡೆಬಿಡದೆ ಮಾಡಿದ ಪ್ರಯತ್ನದಿಂದ ಮನಸ್ಸು ಕೊನೆಗೆ ಶಾಂತವೂ ಸ್ವಾಧೀನವೂ ಆಗಲೇಬೇಕು; ಮತ್ತು ಹಾಗೆ ಆಗಿಯೇ ತೀರುವುದು. ಏಕೆಂದರೆ ಆತ್ಮ ಮತ್ತು ಬುದ್ಧಿಗಳು ಮನಸ್ಸು ಇಂದ್ರಿಯಗಳಿಗೆ ಆಹುತಿ

ಯಾದಾಗ ಎಷ್ಟು ನಿರ್ವೀರ್ಯವಾಗಿ ಕಂಡರೂ ಅವುಗಳ ಮೂಲಸ್ವಭಾವವು ಇಂದ್ರಿಯ ಮನಸ್ಸುಗಳನ್ನು ಸಹಜವಾಗಿ ಜಯಿಸುವಷ್ಟು ಪ್ರಭಾವವುಳ್ಳದ್ದಾಗಿದೆ. ಮನಸ್ಸಿನ ರಾಜಸವು ನಿಃಶ್ಶೇಷವಾಗಿ ಸವೆದು ಹೋಗಿ ಅದು ನಿತ್ಯ ಶಾಂತವಾದರೆ **ಅಂಥ ಮನುಷ್ಯನು ಬ್ರಹ್ಮಭೂತನಾದನೆಂದೂ ನಿಷ್ಪಾಪಿಯಾದನೆಂದೂ ತಿಳಿಯಬೇಕು.** ಇಂಥ ಯೋಗಿಯು ಉತ್ತಮವಾದ ಸುಖವನ್ನು ಪಡೆಯುವನು (೫-೨೧).

**ಯುಂಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥ ೨೮ ॥**

ಸತತವೂ ಈ ರೀತಿಯಾಗಿ ಯೋಗಾಭ್ಯಾಸವನ್ನು ಮಾಡಿ ಆತ್ಮೋನ್ನತಿಯನ್ನು ಸಾಧಿಸುವವನು ಎಲ್ಲ ಪಾಪದಿಂದಲೂ ಮುಕ್ತನಾಗುವನು. ಇಷ್ಟೇ ಅಲ್ಲ. ಅವನಿಗೆ ಬ್ರಹ್ಮನ ಅನುಭವವು ಸುಸೂತ್ರವಾಗಿಯೂ ನಿರಾಯಾಸವಾಗಿಯೂ ಬರುವದು. ಹೀಗಾದಾಗ ಅವನು ಆತ್ಯಂತಿಕ ಬ್ರಹ್ಮಾನಂದವನ್ನೇ ಉಪಭೋಗಿಸುವನು.

ಇಲ್ಲಿ (೬-೨೪-೨೭) ಹೇಳಿರುವ ಯೋಗಸಾಧನೆಯ ಮಾರ್ಗವು ಗೀತಾವಿಶಿಷ್ಟವಾಗಿದೆ. ಈ ಯೋಗದ ಅಂತಿಮಸಾಧ್ಯಗಳೆಂದರೆ ಸಂಪೂರ್ಣ ಬ್ರಾಹ್ಮೀಸ್ಥಿತಿಯು ಮತ್ತು ಬ್ರಹ್ಮನಿರ್ವಾಣವು ಎಂಬದನ್ನು ಲಕ್ಷ್ಯದಲ್ಲಿಡಬೇಕು. ಆದರೆ ಪಾತಂಜಲಯೋಗಸಾಧನೆಯಿಂದ ದೊರೆಯುವ ಅತ್ಯಂತ ಸಿದ್ಧಿಯನ್ನು ಹಿಂದೆ ಹೇಳಿದೆ. ಅದು ಇದಕ್ಕಿಂತ ಬಹಳ ಕನಿಷ್ಠವಾಗಿರುವದಾಗಿ ನಾವು ಅಲ್ಲಿ ತೋರಿಸಿಕೊಟ್ಟಿರುವೆವು. ಈ ವಿಷಯವನ್ನು ಗಮನಿಸಿದರೆ ಗೀತೆಯು ಪಾತಂಜಲಯೋಗವನ್ನೇ ಹೇಳುವದೆಂದೂ ಅಥವಾ ಪಾತಂಜಲಯೋಗವು ಸ್ವತಂತ್ರವೂ ಸಾರ್ವತ್ರಿಕವೂ ಆದ ಮೋಕ್ಷಮಾರ್ಗವಾಗಬಹುದೆಂದೂ ಎಂದಿಗೂ ಹೇಳಲಾಗದು.

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ ೨೯ ॥**

ಯಾವನ ಆತ್ಮವು ಪೂರ್ಣ ಯೋಗಯುಕ್ತವಾಯಿತೋ ಮತ್ತು ಮೇಲೆ ಹೇಳಿದ ಹಾಗೆ ಯಾವನು ಬ್ರಹ್ಮಸ್ವಭಾವವನ್ನು ಅನುಭವಿಸಿದನೋ

ಅವನ ದೃಷ್ಟಿಯು ಸರ್ವತ್ರವೂ ಸಮವಾಗಿರುವದು. ಏಕೆಂದರೆ ಯಾವನು ಎಲ್ಲ ಭೂತಗಳಲ್ಲಿಯೂ ಇರುವನೋ ಮತ್ತು ಯಾರಲ್ಲಿ ಎಲ್ಲ ಭೂತಗಳೂ ಇರುವವೋ ಅಂಥ ಪುರುಷೋತ್ತಮನೇ ಅವನ ಜ್ಞಾನ ದೃಷ್ಟಿಗೆ ಪ್ರತ್ಯಕ್ಷನಾಗಿರುವನು.

ಯೋಗಿಯಾದವನು ತನ್ನ ಆತ್ಮದಲ್ಲಿ ಜಗತ್ತನ್ನೂ ಜಗತ್ತಿನಲ್ಲಿ ತನ್ನ ಆತ್ಮವನ್ನೂ ನೋಡುವನೆಂದು ಈ ಶ್ಲೋಕದ ಅರ್ಥವನ್ನು ಮಾಡುವರು. ಮುಂದಿನ ಶ್ಲೋಕವನ್ನು ನೋಡಿದರೆ ಇದು ಸರಿ ಇದ್ದಂತೆ ತೋರುವದಿಲ್ಲ.

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥೩೦॥**

ಯಾವನು ಸರ್ವತ್ರವೂ ನನ್ನನ್ನು ಅಂದರೆ ಪುರುಷೋತ್ತಮನಾದ ಶ್ರೀಕೃಷ್ಣನನ್ನು ನೋಡುವನೋ ಮತ್ತು ಎಲ್ಲವನ್ನೂ ಶ್ರೀಕೃಷ್ಣನಲ್ಲಿ ನೋಡುವನೋ–ಇವನೇ ಮೇಲಿನ ಶ್ಲೋಕದಲ್ಲಿ ಹೇಳಿದ ಯೋಗಯುಕ್ತಾತ್ಮನು–ಅವನನ್ನು ನಾನು ಎಂದಿಗೂ ಬಿಟ್ಟಿರುವದಿಲ್ಲ; ಮತ್ತು ಅವನಾದರೂ ನನ್ನನ್ನು ಎಂದಿಗೂ ಬಿಡುವದಿಲ್ಲ.

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥೩೧॥**

ಸರ್ವಭೂತಗಳಲ್ಲಿಯೂ ವಾಸಮಾಡುವವನಾದ ನನ್ನನ್ನು (ಶ್ರೀಕೃಷ್ಣನನ್ನು) ಏಕಮೇವನೆಂದು ತಿಳಿದು (೧೩-೧೬) ಭಜಿಸುವ ಯೋಗಿಯು ಹೇಗೆ ವರ್ತಿಸಿದರೂ ನನ್ನಲ್ಲಿಯೇ ವರ್ತಿಸುತ್ತಿರುವನು. ಅರ್ಥಾತ್ ಶ್ರೀಕೃಷ್ಣನ ಭಾವವನ್ನು ಮೀರಿಯಾಗಲಿ ಅದಕ್ಕೆ ವಿರುದ್ಧವಾಗಿಯಾಗಲಿ ಅವನು ವರ್ತಿಸುವದು ಅಶಕ್ಯವು.

ಈ ಶ್ಲೋಕದಲ್ಲಿ ಹೇಳಿದ ಏಕತ್ವವು ತನ್ನ ಆತ್ಮಸ್ವಭಾವದ ಮಹತ್ವವನ್ನು ನಂಬಿ, ತನ್ನ ವಿಸ್ತಾರವನ್ನು ತಾನೇ ಸೃಷ್ಟಿಯಲ್ಲೆಲ್ಲ ಕಲ್ಪನೆಯಿಂದ ಹಬ್ಬಿಸುವ ಜೀವಭೂತನದಲ್ಲ; ಆದರೆ ಶ್ರೀಕೃಷ್ಣ ಪುರುಷೋತ್ತಮನದಾಗಿದೆ ಯೆಂದು ನಮಗೆ ತೋರುವದು.

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ**
**ಮತಃ ॥ ೩೨ ॥**

ಎಲ್ಲೆಲ್ಲಿಯೂ ಹಬ್ಬಿಕೊಂಡಿರುವ ವ್ಯಷ್ಟಿಸಮೂಹದೊಳಗೆ ಒಂದೊಂದು ವ್ಯಕ್ತಿಯಲ್ಲಿಯೂ ಪುರುಷೋತ್ತಮನಿರುವನಾದುದರಿಂದ ಎಲ್ಲರಲ್ಲಿ ಸಲ್ಲುವ ಸಾಮ್ಯ ಅಥವಾ ಆತ್ಮೌಪಮ್ಯವನ್ನನುಲಕ್ಷಿಸಿ, ಸರ್ವತ್ರ ಸಮ ದೃಷ್ಟಿಯಿಂದ ಯಾವನು ನಡೆಯುವನೋ ಹಾಗೆಯೇ ತನಗೆ ಸುಖ ವಾಗಲಿ ದುಃಖವಾಗಲಿ ಅವುಗಳ ವಿಷಯದಲ್ಲಿ ಸಮಭಾವವನ್ನಿಡುವನೋ ಅವನನ್ನೇ ಪರಮಯೋಗಿಯೆಂದು ಬಗೆಯಬೇಕು.

ಅರ್ಜುನ ಉವಾಚ—

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ**
**ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ಸ್ಥಿತಿಂ ಸ್ಥಿರಾಮ್ ॥ ೩೩ ॥**

ನೀನು ಉಪದೇಶಮಾಡುವ ಯೋಗವನ್ನು ಸಮದೃಷ್ಟಿಯಿಂದ ಸಾಧಿಸಬೇಕು. ಈ ಸಮದೃಷ್ಟಿಯನ್ನು ಹೀಗೆ ಸ್ಥಿರವಾಗಿ ಸಾಧಿಸಬಹು ದೆಂಬದು ನನಗೆ ಗೋಚರವಾಗಲಿಲ್ಲ ಮನಸ್ಸು ಬಹು ಚಂಚಲವು. ಅದನ್ನು ನಿಗ್ರಹಿಸುವದು ನನಗೆ ಶಕ್ಯವಾಗಿ ತೋರುವದಿಲ್ಲ.

**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥ ೩೪ ॥**

ಮನಸ್ಸು ಚಂಚಲವೆಂಬುದರಲ್ಲಿ ಸಂದೇಹವೇ ಇಲ್ಲ. ಅದು ಚಿತ್ತ ವೃತ್ತಿಯನ್ನು ಕಲಕಿ ಬಿಡುವದೂ ಬಲವುಳ್ಳದ್ದೂ ಹಟಮಾರಿಯೂ ಆಗಿರು ವದು. ಗಾಳಿಯನ್ನು ನಿಗ್ರಹಿಸುವದು ಎಷ್ಟು ಅಸಾಧ್ಯವೋ ಅಷ್ಟೇ ಮನಸ್ಸನ್ನು ನಿಗ್ರಹಿಸುವದಾದರೂ ಅಸಾಧ್ಯವೆಂದು ನನಗೆ ತೋರುವದು.

ಶ್ರೀಭಗವಾನುವಾಚ—

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥ ೩೫ ॥**

ಮನಸ್ಸು ಚಂಚಲವೆಂಬುದು ನಿಜ, ಅದನ್ನು ನಿಗ್ರಹಿಸುವದು ನಿಃಸ್ಸಂಶಯವಾಗಿ ಕಷ್ಟಸಾಧ್ಯವೇ. ಹಾಗಿದ್ದರೂ ಅಭ್ಯಾಸದಿಂದ ತ್ಯಾಗ ವೈರಾಗ್ಯಗಳು ಮನಸ್ಸಿನಲ್ಲಿ ನೆಲಸುವವೆಂಬದಾದರೂ ನಿಜವೇ.

**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥ ೩೬ ॥**

ಮನಸ್ಸಿನ ಸಂಯಮವು ಸಾಧಿಸದವನಿಗೆ (ಬುದ್ಧಿ) ಯೋಗವಾದರೂ ಸಾಧಿಸುವದು ಶಕ್ಯವಲ್ಲ. ಇದೇ ಶ್ರೀಕೃಷ್ಣನ ನಿಶ್ಚಿತ ಮತ. ಆದರೆ ಮನಸ್ಸನ್ನು ವಶಮಾಡಿಕೊಂಡು ಯಾವನು ಯೋಗವನ್ನು ಸಾಧಿಸಲು ಯತ್ನಿಸುವನೋ ಅವನಿಗೆ ಅದು ಅಭ್ಯಾಸದಿಂದ ಸಾಧ್ಯವಾಗುವದು.

ಅರ್ಜುನ ಉವಾಚ:—

**ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥ ೩೭ ॥**

ಮನಸ್ಸಿನ ನಿಗ್ರಹವು ತನಗೆ ಅಶಕ್ಯವಾಗಿ ತೋರಿದರೂ ಶ್ರೀಕೃಷ್ಣನು ಹೇಳಿದಂತೆ ಅದು ಶಕ್ಯವೆಂದು ಅರ್ಜುನನು ಶ್ರದ್ಧೆಯಿಂದ ಗ್ರಹಿಸುವನು. ಆದರೆ ಅವನ ಉಪಾಯವಾಗಲಿ ಪ್ರಯತ್ನವಾಗಲಿ ಕೊನೆಗಾಣದೆ ಅವನ ಮನಸ್ಸು ಯೋಗಾಭ್ಯಾಸದಿಂದ ಜಾರಿಹೋದರೆ, ಅವನಿಗೆ ಸಿದ್ಧಿಯು ಕೈಗೂಡಲಾರದೆಂಬದು ನಿಜ. ಆಗ ಈ ಪರಿಸ್ಥಿತಿಯಲ್ಲಿ ಅವನ ಗತಿಯೇನಾಗುವದು?

**ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥ ೩೮ ॥**

ಯೋಗಸಾಧನೆಗಾಗಿ ಇಂದ್ರಿಯಸುಖಗಳನ್ನೇನೋ ಬಿಟ್ಟದ್ದಾಯಿತು.

ಸಾಧ್ಯವು ಕೈತಪ್ಪಿಹೋದುದರಿಂದ ಆತ್ಮಸುಖವು ದೊರೆಯಲಿಲ್ಲ. ಹೀಗೆ ಉಭಯಭ್ರಷ್ಟನಾದ ಯತಿಯು ಆಧಾರವೇ ಇಲ್ಲದೆ ಆಕಾಶದಲ್ಲಿ ಅದೃಶ್ಯವಾಗುವ ಮೇಘದಂತೆ ಬ್ರಹ್ಮಪ್ರಾಪ್ತಿಯ ಪ್ರಯತ್ನದಲ್ಲಿ ಕೈಸೋತು ನಾಶಹೊಂದುವದಿಲ್ಲವಷ್ಟೇ.

**ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥ ೩೯ ॥**

ಕೃಷ್ಣಾ, ಈ ನನ್ನ ಸಂಶಯವನ್ನು ನೀನೇ ಪೂರ್ಣವಾಗಿ ಪರಿಹರಿಸಬೇಕು. ಏಕೆಂದರೆ, ನನ್ನ ಸಂದೇಹವನ್ನು ಸಮಾಧಾನಪಡಿಸುವದು ನಿನಗಲ್ಲದೆ ಮತ್ತಾರಿಗೂ ಶಕ್ಯವಲ್ಲ.

ಶ್ರೀಭಗವಾನುವಾಚ—

**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥ ೪೦ ॥**

ಹೀಗೆ ಯೋಗಭ್ರಷ್ಟನಾದವನಿಗೆ ಇಹಲೋಕದಲ್ಲಾಗಲಿ ಪರಲೋಕದಲ್ಲಾಗಲಿ ನಾಶವೆಂಬದು ಎಂದೆಂದಿಗೂ ಇರುವದಿಲ್ಲ. ಯಾವನಿಂದ ಸದಾಚರಣೆಯು ಸಂಭವಿಸಿತೋ ಅವನಿಗೆ ದುರ್ಗತಿಯು ಎಂದೆಂದಿಗೂ ಪ್ರಾಪ್ತವಾಗದು.

**ಪ್ರಾಪ್ಯ ಪುಣ್ಯಕೃತಾಂಲ್ಲೋಕಾನುಷಿತ್ವಾ ಶಾಶ್ವತೀಃ ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽ-**
**ಭಿಜಾಯತೇ ॥ ೪೧ ॥**

ಪುಣ್ಯವಂತರಿಗೆ ಪ್ರಾಪ್ತವಾಗುವ ಲೋಕಗಳಿಗೆ ಇಂಥ ಯೋಗಭ್ರಷ್ಟನು ಹೋಗುವನು. ಅಲ್ಲಿ ದೀರ್ಘಕಾಲವಿದ್ದು ಅವನು ಪುಣ್ಯವಂತರಾದ ಶ್ರೀಮಂತರ ಮನೆಯಲ್ಲಿ ಪುನಃ ಜನ್ಮವೆತ್ತುವನು.

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥ ೪೨ ॥**

ಅಥವಾ ಬುದ್ಧಿವಂತರಾದ ಯೋಗಿಗಳ ಕುಲದಲ್ಲಾದರೂ ಅವನು ಹುಟ್ಟುವನು. ಇಂಥ ಜನ್ಮವು ಈ ಜಗತ್ತಿನಲ್ಲಿ ದೊರೆಯುವದು ಬಹಳ ದುರ್ಲಭವೇ ಸರಿ.

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥೪೩॥**

ಪೂರ್ವಜನ್ಮಸಂಸ್ಕಾರದ ಪ್ರಭಾವದಿಂದ ಆ ಕುಲದಲ್ಲಿ ಅವನಿಗೆ ಪುನಃ ಬುದ್ಧಿಯೋಗದ ಸಂಯೋಗವು ಉಂಟಾಗಿ ಅವನು ಮೊದಲಿನಗಿಂತಲೂ ಹೆಚ್ಚಾಗಿ ಸಿದ್ಧಿಯನ್ನು ಪಡೆಯುವ ಪ್ರಯತ್ನವನ್ನು ಮಾಡುವನು.

**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥೪೪॥**

ಪ್ರತ್ಯಕ್ಷವಾಗಿ ಮಾಡಿದ ಪ್ರಯತ್ನವು ಅಲ್ಪವಾದರೂ ಅದಕ್ಕೆ ಮಿಗಿಲಾದ ತೀವ್ರಗತಿಯಿಂದ ಅವನು ಈ ಯೋಗದ ಕಡೆಗೆ ಎಳೆಯಲ್ಪಡುವನು. ಪೂರ್ವ ಜನ್ಮದಲ್ಲಿ ಮಾಡಿದ್ದ ಯೋಗಾಭ್ಯಾಸವೇ ಇದಕ್ಕೆ ಕಾರಣವಾಗುವದು. ಕೇವಲ ಜಿಜ್ಞಾಸು ದಶೆಯಲ್ಲಿಯೇ ಈ ಯೋಗದಲ್ಲಿ ಅವನು ಬಹು ಶೀಘ್ರವಾಗಿ ಪ್ರಗತಿಯನ್ನು ಪಡೆದು ಪ್ರವೀಣನಾಗುವನು. ಶಬ್ದಬ್ರಹ್ಮವನ್ನು ಸಹ ದಾಟುವನಲ್ಲದೆ ಗೀತೆಯಲ್ಲಿ ಹೇಳಿದ ಯೋಗವು ಇವನಿಗೆ ಪ್ರತ್ಯಕ್ಷ ಅನುಭವಕ್ಕೆ ಬರುವದು. ಯೋಗವು ಅನುಭವಸಿದ್ಧವಾಯಿತೆಂದರೆ, ಅದರ ವಿಷಯವಾಗಿ ಕೇಳುವದಾಗಲಿ ಕೇಳಿದುದಾಗಲೀ ಮನಸ್ಸಿಗೆ ರುಚಿಸದು. **ಹೀಗೆ ಯೋಗಾನುಭವವನ್ನು ಸವಿದು ಶ್ರವಣಲಾಲಸೆಯನ್ನು ಮೀರುವದಕ್ಕೇ ಶಬ್ದಬ್ರಹ್ಮವನ್ನು ದಾಟುವದೆಂದು ಹೇಳಿದೆ** (೨-೫೨).

**ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।**
**ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥೪೫॥**

ಯೋಗಾಭ್ಯಾಸವ್ಯಾಸಂಗವನ್ನು ಬೆಳೆಯಿಸಿ ಅವನು ಪಾಪದಿಂದ ಮುಕ್ತನಾಗುತ್ತ ಹೋಗುವನು. ಹೀಗೆ ನಡೆದಿರುವಾಗ ಕ್ರಮಪ್ರಾಪ್ತವಾದ ಹಲವು ಜನ್ಮಗಳು ಈ ಪುಣ್ಯಕಾರಕವಾದ ಯೋಗವನ್ನು ಅನುಸರಿಸುವುದರಲ್ಲಿ ಕಳೆದು ಹೋಗುವವು. ಕೊನೆಯಲ್ಲಿ ಅವನು ಪರಮ ಸಿದ್ಧಿಯನ್ನು ಪಡೆಯುವನು; ಎಂದರೆ, ಪುಣ್ಯಮಯವಾದ ( ಬುದ್ಧಿ ) ಯೋಗಯುಕ್ತ ಬ್ರಾಹ್ಮೀಸ್ಥಿತಿಯು ಬ್ರಹ್ಮ ನಿರ್ವಾಣವಾಗಿ ಪರಿಣಮಿಸುವದು.

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿಮತೋಽಧಿಕಃ ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ**
**ಭವಾರ್ಜುನ ॥ ೪೬ ॥**

ಬುದ್ಧಿಯೋಗ- ಸಮತ್ವಯೋಗ- ಬ್ರಹ್ಮಯೋಗ- ಕರ್ಮಯೋಗ- ಸಂನ್ಯಾಸಯೋಗ-ಅಭ್ಯಾಸಯೋಗ ಇತ್ಯಾದಿಗಳಲ್ಲಿ ಯಾವ ಹೆಸರಿನಿಂದ ಕರೆದರೂ ಗೀತೆಯಲ್ಲಿ ಬೋಧಿಸಿದ ಯೋಗವು ಒಂದೇ. ಅದು ನಿಷ್ಕಳ ಜ್ಞಾನಯೋಗವಲ್ಲ, ಕರ್ಮಯೋಗವಲ್ಲ ಅಥವಾ ಭಕ್ತಿಯೋಗವೂ ಅಲ್ಲ. ಅದಕ್ಕೆ ಶ್ರೀಕೃಷ್ಣನು ಬುದ್ಧಿಯೋಗವೆಂಬ ಪ್ರತ್ಯೇಕವಾದ ಹೆಸರನ್ನು ಕೊಟ್ಟಿರುವನು. ಈ ಬುದ್ಧಿಯೋಗವೆಂದರೇನು, ಶ್ರೀಕೃಷ್ಣನೇ ಈ ಯೋಗಕ್ಕೆ ಹೇಗೆ ಆತ್ಮನಾಗಿರುವನು ಎಂಬ ವಿಷಯಗಳನ್ನು ಅರ್ಜುನನು ಮನಗಂಡಿರುವನು. ಈ ಬುದ್ಧಿಯೋಗವನ್ನನುಸರಿಸುವ ಯೋಗಿಯು ತಪಸ್ವಿಗಿಂತಲೂ ಶ್ರೇಷ್ಠನೆಂದು ಎಣಿಸಲ್ಪಟ್ಟಿದ್ದಾನೆ. ಅವನು ಜ್ಞಾನಯೋಗಿಗಿಂತಲೂ ಅಧಿಕನು. ಹಾಗೆಯೇ ಶುಷ್ಕಕರ್ಮಪರಾಯಣನಾದ ಕರ್ಮಯೋಗಿಗಿಂತಲೂ ಮಿಗಿಲಾದವನು. ಆದುದರಿಂದ ಅರ್ಜುನನು ( ಬುದ್ಧಿ )ಯೋಗಿಯಾಗಬೇಕು.

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।**
**ಶ್ರದ್ಧಾವಾನ್ಭಜತೇ ಯೋ ಮಾಂ ಸ ಮೇ ಯುಕ್ತ-**
**ತಮೋ ಮತಃ ॥೪೭॥**

ವೇದಾಂತವೆಂಬ ತಾಯಿಯ ಹೊಟ್ಟೆಯಲ್ಲಿ ಇನ್ನೂ ಎಷ್ಟು ವಿಧದ ಯೋಗಗಳು ಅಡಕವಾಗಿರಬಹುದೋ ಯಾರು ಬಲ್ಲರು ? ಇದಲ್ಲದೆ ಗೀತೆಯ

ನಿಮಿತ್ತವಾಗಿಯೇ ಇಂಥ ಯೋಗಗಳ ಸಂಖ್ಯೆಯು ಬೆಳೆಯುತ್ತಲಿದೆ. ಅದು ಹೇಗೆಯೇ ಇರಲಿ,ಯಾವನ ಅಂತರಾತ್ಮದಲ್ಲಿ ಶ್ರೀಕೃಷ್ಣ ಪುರುಷೋತ್ತಮನ ವಿಷಯದ ಆಸಕ್ತಿಯು ತುಂಬಿ ತುಳುಕುತ್ತಿರುವುದೋ ಯಾವನು ಅವನಲ್ಲಿ ನಿತಾಂತ ಶ್ರದ್ಧೆಯುಳ್ಳವನಾಗಿ ಆತನನ್ನು ಭಜಿಸುವನೋ ಅವನು ಎಲ್ಲ ಯೋಗಗಳಲ್ಲಿ ಹೆಚ್ಚಿನಯೋಗಯುಕ್ತನೆಂಬುದೇ ಶ್ರೀಕೃಷ್ಣನ ಮತ.

**ಆರನೆಯ ಅಧ್ಯಾಯವು ಸಮಾಪ್ತವು.**

---

ಓಂ

# ಏಳನೆಯ ಅಧ್ಯಾಯವು



**ಅವತರಣಿಕೆ—**

ಆರನೆಯ ಅಧ್ಯಾಯದ ಕೊನೆಯಲ್ಲಿ ಅರ್ಜುನನು ಕೇಳಿದ ಸಂಶಯು ವನ್ನು ನೋಡಿದರೆ, ಶ್ರೀಕೃಷ್ಣನ ವಿಚಾರ ಸರಣಿಯು ಅವನಿಗೆ ಸಾಕಷ್ಟು ತಿಳಿದಂತೆಯೂ ಸಮ್ಮತವಾದಂತೆಯೂ ಕಾಣುವದು. ಮೊದಮೊದಲು ವಿಷಯ ನಿರೂಪಣೆಯು ಅವನಿಗೆ ದುರ್ಬೋಧವಾಗಿ ತೋರಿದುದಕ್ಕೆ ಅದರ ಹೊಸ ಅರ್ಥವೂ ಈ ಅರ್ಥವನ್ನು ಸಾಧಿಸಲಿಕ್ಕಾಗಿ ಶಬ್ದಾರ್ಥಗಳಲ್ಲಿ ಶ್ರೀ ಕೃಷ್ಣನು ಮಾಡಿದ ವ್ಯತ್ಯಾಸವೂ ಕಾರಣವಾಗಿತ್ತೆಂದು ನಾವು ತೋರಿಸಿರುವೆವು. ಈ ಹೊಸ ವ್ಯತ್ಯಾಸಗಳನ್ನು ಅರ್ಜುನನಿಗೆ ತಿಳಿಸಲಿಕ್ಕೆ ಈ ವರೆಗೆ ಆರು ಅಧ್ಯಾಯಗಳು ಆದವು. ವಿಷಯವನ್ನು ಸರಲವಾಗಿಯೂ ಸುಲಭವಾಗಿಯೂ ಗ್ರಹಿಸುವಷ್ಟು ಶ್ರೀ ಕೃಷ್ಣನ ಪರಿಭಾಷೆಯು ಈಗ ಅರ್ಜುನನಿಗೆ ಪರಿಚಿತವಾಗಿದೆ. ಆದರೆ ಈ ಪರಿಚಯುವು ಸಾಲದು. ಶ್ರೀ ಕೃಷ್ಣನಿಂದ ತಾನು ತಿಳಿಯಬಹುದಾದ ಸಂಗತಿಗಳು ಮಹತ್ವವುಳ್ಳವೆಂದು ಅವನ ಲಕ್ಷ್ಯಕ್ಕೆ ಈಗ ಬಂದಿರುವದು. ಆದುದರಿಂದ ತನಗೆ ಪ್ರಾಪ್ತವಾದ ನೂತನ ದೃಷ್ಟಿಕೋನವನ್ನೂ ಪರಿಭಾಷೆಯನ್ನೂ ಅನುಸರಿಸಿ ಶ್ರೀಕೃಷ್ಣನು ಮುಂದೆ ಸಾಗಿಸುವ ವಿಷಯದ ವಿವೇಚನೆಯನ್ನು ಕೇಳಲು ಅವನು ಉತ್ಸು ಕನೂ ತತ್ಪರನೂ ಆಗಿರುವನು.

ಅರ್ಜುನನ ಸ್ವಭಾವ, ಪರಿಸ್ಥಿತಿ ಅಡಚಣಿಗಳಿಗನುರೂಪವಾಗಿ ತನ್ನ ಪರಿಭಾಷೆಯ ಹೊಸ ಭಾವವನ್ನು ತಿಳಿಸಿ ಹೇಳಲಾರಂಭಿಸಿದ ಶ್ರೀ ಕೃಷ್ಣನು ಆರನೆಯ ಅಧ್ಯಾಯದ ಕೊನೆಗೆ ತನ್ನ ಕಾರ್ಯವನ್ನು ನೆರವೇರಿಸಿರುವನು. ಬುದ್ಧಿಯೋಗ ಶಾಸ್ತ್ರವನ್ನು ಶಾಸ್ತ್ರೀಯ ರೀತಿಯಿಂದ ನಿರೂಪಿಸುವದು

ಶ್ರೀ ಕೃಷ್ಣನಿಗೆ ಅಸಾಧ್ಯವಾಗಿರಲಿಲ್ಲ; ಆದರೆ ಅವನು ಹಾಗೆ ಮಾಡಲು ಯತ್ನಿಸಿದ್ದರೆ ವಿಷಯವು ಅರ್ಜುನನಿಗೆ ದುರ್ಬೋಧವಾಗುತ್ತಿತ್ತು. ಅದು ಅವನ ವಿಶ್ವಾಸಕ್ಕೆ ಪಾತ್ರವಾಗುತ್ತಿರಲಿಲ್ಲ. ಇದನ್ನು ತಿಳಿದು ತಾಯಿಯು ಮಗುವಿನ ತ್ರಾಣವನ್ನರಿತು ತುತ್ತುಗಳನ್ನು ಉಣಿಸುವಂತೆ ಶ್ರೀ ಕೃಷ್ಣನು ಅರ್ಜುನನ ಗ್ರಾಹಕ ಶಕ್ತಿಯನ್ನರಿತು ತನ್ನ ನಿರೂಪಣ ಪದ್ಧತಿಯನ್ನು ನಿಶ್ಚಯಿಸಿರುವನು. ಗೀತೆಯ ಮೊದಲಿನ ಆರು ಅಧ್ಯಾಯಗಳಲ್ಲಿ ವಿಷಯದ ಸಂಗತಿಗಳು ವಿಸ್ಖಲಿತವಾಗಿ ಹೇಳಲ್ಪಟ್ಟಿರುವವೆಂದು ಭಾಸವಾಗುವದಕ್ಕೆ ಇದೇ ಕಾರಣವು. ಈ ಅಧ್ಯಾಯಗಳು ನಾವು ತೋರಿಸಿದ ಮೇರೆಗೆ ಪಾರಿಭಾಷಿಕ ಶಬ್ದಗಳ ಪರಿಚಯವನ್ನು ಮಾಡಿಕೊಡಲಿಕ್ಕೆ ಹೇಳಲ್ಪಟ್ಟಿರುವವೆಂದು ತಿಳಿದರೆ, ಅವು ಎಷ್ಟು ಪ್ರವಾಹ ಯುಕ್ತವಾಗಿಯೂ ಅನುರೂಪವಾಗಿಯೂ ಇರುವವೆಂಬದು ಲಕ್ಷ್ಯಕ್ಕೆ ಬರುವದು. ಇನ್ನು ಈ ಅಧ್ಯಾಯದಿಂದ ಶ್ರೀ ಕೃಷ್ಣನು ಶಾಸ್ತ್ರೀಯ ರೀತಿಯಿಂದ ತಾನು ಮನಸ್ಸಿನಲ್ಲೆಣಿಸಿರುವಂತೆ ವಿಷಯವನ್ನು ಕ್ರಮವಾಗಿ ಹೇಳಲನುವಾಗುವನು.

ಈ ವರೆಗೆ ಅರ್ಜುನನು ತಿಳಿದ ಅಂಶಗಳಾವವೆಂಬುದನ್ನು ಇಲ್ಲಿ ಸಂಕ್ಷೇಪವಾಗಿ ಹೇಳುವದು ಉಚಿತವು.

ಬುದ್ಧಿಯೋಗವೇ ಗೀತೆಯಲ್ಲಿ ಹೇಳಿದ ವಿಷಯವು. ಈ ಒಂದೇ ಒಂದು ಯೋಗವನ್ನು ತಿಳಿದುಕೊಂಡು ಅದನ್ನು ಆಚರಿಸಿದರೆ ಜಗತ್ತಿನೊಳಗಿನ ಆಧ್ಯಾತ್ಮ ವಿಷಯಕ ರಹಸ್ಯಗಳೆಲ್ಲ ಸ್ಪಷ್ಟವಾಗುವವು. ಈ ಬುದ್ಧಿಯೋಗವನ್ನು ಕುರಿತು ಮನುಷ್ಯನು ಪರಿಸ್ಥಿತಿಗನುಸಾರವಾಗಿ ಎರಡು ವಿಧದಿಂದ ಪ್ರಯತ್ನ ಮಾಡುವನು. ಯೋಗಾಭಿಮುಖನಾಗುವದಕ್ಕಿಂತ ಮೊದಲು ಕೇವಲ ಜಿಜ್ಞಾಸೆಯಿಂದ ಮಾಡುವ ಪ್ರಯತ್ನಕ್ಕೆ ಸಾಂಖ್ಯ ಅಥವಾ ಸಂನ್ಯಾಸವೆಂದು ಹೆಸರು. ಸಂನ್ಯಾಸವೆಂದು ಹೆಸರಿಟ್ಟರೂ ಈ ಮೆಟ್ಟಿನಲ್ಲಿ ಮಾಡಿದ ಪ್ರಯತ್ನದೊಳಗೆ ಕರ್ಮವನ್ನು ಬಿಟ್ಟುಬಿಡುವ ಕಲ್ಪನೆಯು ಇಲ್ಲ. ಇಷ್ಟೇ ಅಲ್ಲ; ಈ ಸಾಂಖ್ಯಪರಿಸ್ಥಿತಿಯಲ್ಲಿ ಅವಶ್ಯವೆಂದು ಮಾಡಿದ ಕರ್ಮವೇ ಮುಂದೆ ಫಲಿಸುವ ಸಿದ್ಧಿಗೆ ಕಾರಣವಾಗುವದು. ಆದರೆ ಈ ಸ್ಥಿತಿಯಲ್ಲಿ ಕರ್ಮದ ಉತ್ಪತ್ತಿಯ ಅಥವಾ ಅಂತಿಮ ಉದ್ದೇಶದ ಕಲ್ಪನೆಯು ಇರುವದಿಲ್ಲ. ಸಾಂಖ್ಯನಿಷ್ಠೆಯನ್ನು ದಾಟಿ ಬುದ್ಧಿಯೋಗದಲ್ಲಿ

ಪ್ರವೇಶಿಸಿದೊಡನೆಯೆ ಇವುಗಳ ವಿಷಯದಲ್ಲಿ ಯೋಗ್ಯ ಭಾವನೆಯು ಅಂಕು ರಿಸುವದು. ಪುರುಷೋತ್ತಮ ಶ್ರೀಕೃಷ್ಣನಿಗೂ ಸೃಷ್ಟಿಗೂ ತನಗೂ ಇರುವ ಸಂಬಂಧದ ಸರಿಯಾದ ಜ್ಞಾನವು ಜಾಗ್ರುತವಾಗುವದು. ಗೀತಾ ವಿಶಿಷ್ಟವಾದ ಕರ್ಮಕೌಶಲವೆಂದರೇನು ? ಯೋಗಪೂರ್ವಕವಾಗಿ ಶ್ರೀಕೃ ಷ್ಣನಿಗೆ ಕರ್ಮಗಳನ್ನು ಸಮರ್ಪಿಸುವದರಿಂದ ಸಂನ್ಯಾಸವು ಹೇಗೆ ಸಾಧಿ ಸುವುದು? ಈ ಸಂನ್ಯಾಸವನ್ನು ಸಾಧಿಸಲಿಕ್ಕೆ ಬೇಕಾಗುವ ಯೋಗದ ಸತ್ಯಸ್ವರೂಪವೇನು ? ಎಂಬ ವಿಷಯಗಳೆಲ್ಲ ಬುದ್ಧಿಗೋಚರವಾಗುವವು.

ಬುದ್ಧಿಯೋಗಶಾಸ್ತ್ರವನ್ನು ಗ್ರಹಿಸಲಿಕ್ಕೆ ಕರ್ಮ, ಸಂನ್ಯಾಸ ಹಾಗು ಯೋಗ ಈ ಶಬ್ದಗಳು ಬಹುಮಹತ್ವವುಳ್ಳವಾಗಿವೆ. ಈ ಶಬ್ದಗಳ ರೂಢಾ ರ್ಥವನ್ನು ಅಲ್ಲಗಳೆದು ಬುದ್ಧಿಯೋಗಕ್ಕೆ ಅನುರೂಪವಾದ ಅವುಗಳ ಪಾರಿ ಭಾಷಿಕ ಅರ್ಥವನ್ನು ಅರ್ಜುನನಿಗೆ ತಿಳಿಸಿಹೇಳಲಿಕ್ಕೆ ಗೀತಾನಿರೂಪಣೆ ಯನ್ನು ಈ ವರೆಗೆ ಸಂದರ್ಭಾನುಸಾರ ಶ್ರೀಕೃಷ್ಣನು ಮಾಡಿರುವನು.

ಶ್ರೀ ಭಗವಾನುವಾಚ—

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ ಮದಾಶ್ರಯಃ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥ ೧ ॥**

ಮನುಷ್ಯನು ಕರ್ಮ ಮಾಡುವದಕ್ಕಾಗಿ ಇರುವನು. ಕರ್ಮವನ್ನು ಸಂನ್ಯಾಸ ಸಾಧನೆಗಾಗಿ ಮಾಡಬೇಕು. ಯೋಗವಿಲ್ಲದಿದ್ದರೆ ಸನ್ಯಾಸವು ಶಕ್ಯವಲ್ಲ. ಯೋಗವೆಂದರೆ ಪುರುಷೋತ್ತಮ ಶ್ರೀಕೃಷ್ಣನಲ್ಲಿ ಆಸಕ್ತಿಯು. ಅವನಲ್ಲಿಟ್ಟ ಆಸಕ್ತಿಯಿಂದ ಮನುಷ್ಯನ ಪಾಪಗಳು ನಾಶವಾಗಬೇಕೆಂದು ಸಷ್ಟಿಸ್ವಭಾವದಲ್ಲಿ ಅವನಿಂದಲೇ ನೇಮಿಸಲ್ಪಟ್ಟದೆ. ಮನುಷ್ಯನು ತನ್ನ ಲ್ಲಿಟ್ಟ ಪ್ರೇಮಾದರಗಳನ್ನು ಪುರುಷೋತ್ತಮನು ಒಪ್ಪಿಕೊಳ್ಳುವನು; ಆದರೆ ಮನುಷ್ಯನ ಪಾಪ ಪುಣ್ಯಗಳನ್ನು ಅವನು ನೋಡುವದೂ ಇಲ್ಲ; ಒಪ್ಪಿ ಕೊಳ್ಳುವದೂ ಇಲ್ಲ. ಅವನು ವಿಧಿಸಿದ ಮೇರೆಗೆ ಸ್ವಭಾವ ನಿಯಮವೇ (೫.೧೪.೧೫)ಪಾಪ ಪುಣ್ಯಗಳ ನಿರ್ಣಯವನ್ನು ಮಾಡುತ್ತ ಹೋಗುವದು. ಪುರಷೋತ್ತಮನಲ್ಲಿಟ್ಟ ಪ್ರೇಮವು ಹೆಚ್ಚು ಕಡಿಮೆಯಾದಂತೆ ಯೋಗಿಯ ಯೋಗ್ಯತೆಯು ಹೆಚ್ಚು ಕಡಿಮೆಯಾಗುವದು. ಯಾವನ ಅಂತರಾತ್ಮವು

ಪುರುಷೋತ್ತಮನಲ್ಲಿಟ್ಟ ಪ್ರೇಮಾಸಕ್ತಿಗಳಿಂದ ತುಂಬಿ ತುಳುಕುತ್ತಿರುವದೋ ಅವನಿಗೆ ಜ್ಞಾನವು ಇಲ್ಲದಿದ್ದರೂ ನಡೆಯುವದು. ಶ್ರದ್ಧೆಯಂತೂ ಇದ್ದೇ ಇರುವದು. ಪುರುಷೋತ್ತಮನಲ್ಲಿಟ್ಟ ಆಸಕ್ತಿಯಿಂದಲೇ ಯೋಗಿಯನ್ನು ಪರೀಕ್ಷಿಸುವದಲ್ಲದೆ ಅವನ ಜ್ಞಾನದ ಮಹತ್ವದಿಂದಲ್ಲ. ಹೀಗೆ ದೃಢಾಸಕ್ತಿಯಿಂದ ಕೂಡಿದ ಯೋಗಿಯೇ ಶ್ರೇಷ್ಠನೆಂದು ಎಣಿಸಲ್ಪಟ್ಟಿರುವನು.

ಆದುದರಿಂದ **ಪುರುಷೋತ್ತಮನಲ್ಲಿ ಮನಸಿನ ಆಸಕ್ತಿಯನ್ನಿಡುವದೂ ಎಲ್ಲ ಸಂಗತಿಗಳಿಗಾಗಿ ಅವನನ್ನೇ ಆಶ್ರಯಿಸುವದೂ ಸೃಷ್ಟಿಯಲ್ಲಿ ಅವನು ಹವಣಿಸಿದ ಭಾವದೊಂದಿಗೆ ಯೋಗ ಯುಕ್ತನಾಗಿ ಅಂದರೆ ಸಮರಸನಾಗಿ ವರ್ತಿಸುವದೂ ಇವೇ ಶ್ರದ್ಧೆಯ ಲಕ್ಷಣಗಳು.** ಇಂಥ ಶ್ರದ್ಧೆಯು ಇದ್ದರೆ ಪುರುಷೋತ್ತಮನ ವಿಷಯದ ಸಂಪೂರ್ಣ ಜ್ಞಾನವನ್ನು ನಿಃಸ್ಸಂಶಯವಾಗಿ ಪಡೆಯಬಹುದು ಅದು ಹೇಗೆಂಬುದನ್ನು ಶ್ರೀಕೃಷ್ಣನು ಹೇಳುವನು, ಅರ್ಜುನನು ಕೇಳಬೇಕು.

**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥ ೨ ॥**

ವಿಜ್ಞಾನದಿಂದ ಕೂಡಿದ ಜ್ಞಾನವನ್ನು ಕುರಿತು ಶ್ರೀಕೃಷ್ಣನು ಅರ್ಜುನನಿಗೆ ನಿಃಶೇಷವಾಗಿ ಹೇಳಲಿರುವನು. **ವಿಜ್ಞಾನಶೂನ್ಯವಾದ ಜ್ಞಾನವು** ಗೀತೆಯನ್ನು ಬಿಟ್ಟು ಅನ್ಯತ್ರ ವಿಪುಲವಾಗಿ ದೊರೆಯುವದು. ಇಂಥ ಜ್ಞಾನವು ಯಥಾರ್ಥವಲ್ಲ, ಸಂಪೂರ್ಣವೂ ಅಲ್ಲ. ಜ್ಞಾನದಿಂದ (ಅದು ಪಾರಮಾರ್ಥಿಕ ಜ್ಞಾನವೇ ಯಾಕಾಗಲೊಲ್ಲದು) ಸಮಾಧಾನವು ಕೈಗೂಡದೆ ಮನುಷ್ಯನಲ್ಲಿ ಆಶೆ ಆಕಾಂಕ್ಷೆಗಳು ಹೆಚ್ಚಾಗಿ ಅಶಾಂತತೆಯು ಬೆಳೆದರೆ ಇದಕ್ಕೆ ವಿಜ್ಞಾನದ ಅಭಾವವೇ ಕಾರಣವೆಂದು ತಿಳಿಯಬೇಕು. **ವಿಜ್ಞಾನವೆಂದರೆ ಆತ್ಮಸ್ವಭಾವದಿಂದ ಉಂಟಾಗುವ ಪುರುಷೋತ್ತಮನ ವಿಷಯದ ಜ್ಞಾನವೆಂದು ಗೀತೆಯಲ್ಲಿ ಅರ್ಥವಾಗುವದು.** ಇತಿಹಾಸ ಭೂಮಿತಿ ಶಾಸ್ತ್ರಗಳಂಥ ವಿಶಿಷ್ಟ ಅಥವಾ ವಿಶೇಷ ಜ್ಞಾನವೆಂದು ಅರ್ಥವಾಗುವದಿಲ್ಲ. ವಿಜ್ಞಾನಕ್ಕೆ ಅಧ್ಯಾತ್ಮವೆಂಬ ಸಂಜ್ಞೆಯೂ ಉಂಟು.

ಈ ವಿಜ್ಞಾನಯುಕ್ತವಾದ ಜ್ಞಾನವನ್ನು ತಿಳಿದರೆ ಇನ್ನು ತಿಳಿಯಬೇಕಾದುದು ಯಾವುದೂ ಉಳಿಯುವದಿಲ್ಲ.

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ ೩ ॥**

ಸಾವಿರಾರು ಜನಗಳಲ್ಲಿ ಯಾವನಾದರೊಬ್ಬನು ಈ ಯೋಗಸಿದ್ಧಿಗಾಗಿ ಪ್ರಯತ್ನಪಡುವನು. ಹೀಗೆ ಪ್ರಯತ್ನಪಡುವವರಲ್ಲಿ ಯಾವನಾದರೊಬ್ಬನೇ ಪುರುಷೋತ್ತಮ ಶ್ರೀಕೃಷ್ಣನನ್ನು ತತ್ತ್ವತಃ ತಿಳಿಯುವನು.

ಮನುಷ್ಯನಲ್ಲಿ ಯೋಗವನ್ನು ಸಾಧಿಸುವ ಪ್ರವೃತ್ತಿಯು ಅಲ್ಪ ಪ್ರಮಾಣದಲ್ಲಿರುವದಕ್ಕೆ ಕಾರಣವೇನೆಂದರೆ ಜ್ಞಾನವನ್ನು ಅಜ್ಞಾನವು ಮುಸುಕಿರುವದೆಂದೂ ಆದರಿಂದ ಜೀವರು ಮೋಹಿತರಾಗುವರೆಂದೂ ಹಿಂದೆ ಹೇಳಿದೆ (೫-೧೫). ತನ್ನನ್ನು " ತತ್ತ್ವತಃ " ತಿಳಿಯಬೇಕಾದರೆ ಭಕ್ತಿಯಿಂದಲೇ ಅದು ಶಕ್ಯವೆಂದು ಶ್ರೀಕೃಷ್ಣನು ಮುಂದೆ ( ೧೧-೫೪ ) ಹೇಳುವನು. ಇಂಥ ಭಕ್ತಿಯನ್ನೇ ಇಲ್ಲಿ ವಿಜ್ಞಾನವೆಂದು ಹೇಳುತ್ತಲಿರುವನು.

**ಭೂಮಿರಾಪೋಽನಲೋವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೪ ॥**

ವಿಜ್ಞಾನದಿಂದ ಅಂದರೆ ಶ್ರದ್ಧಾ ಭಕ್ತಿಗಳಿಂದ ಒಂದು ಬಾರಿ ಪುರುಷೋತ್ತಮ ಶ್ರೀಕೃಷ್ಣನ ಜ್ಞಾನವಾದರೆ ಮುಂದೆ ಅವನ ವಿಷಯದ ಹೆಚ್ಚಿನ ಜ್ಞಾನವು ಬೆಳೆಯುತ್ತ ನಡೆಯುವದು. ಪುರುಷೋತ್ತಮನಿಗೆ ಪ್ರಕೃತಿಯುಂಟು. ಏಕಂದರೆ ಪ್ರಕೃತಿಯಿಲ್ಲದ ಪುರುಷನಿರುವದಿಲ್ಲ. ಇವೆರಡೂ ಅನಾದಿಯಾಗಿ ಹೊಂದಿಕೊಂಡಿರುವವು ಪುರುಷೋತ್ತಮನ ಪ್ರಕೃತಿಯು ಎರಡು ಬಗೆಯಾಗಿರುವದು. ಕನಿಷ್ಠವಾದ ಪ್ರಕೃತಿಯು ಪೃಥ್ವಿ ಅಪ್ ತೇಜ ಮೊದಲಾದ ಸೂಕ್ಷ್ಮ ಮಹಾಭೂತ ತತ್ತ್ವಗಳಿಂದಲೂ ಬುದ್ಧಿ ಅಹಂಕಾರ ಮನಸ್ಸೆಂಬ ಅಂತಃಕರಣ ತತ್ತ್ವಗಳಿಂದಲೂ ಕೂಡಿರುವದು

**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ ।**
**ಜೀವಭೂತಾಂ ಮಹಾಬಾಹೋ ಯಯೇದಂ**
**ಧಾರ್ಯತೇ ಜಗತ್ ॥ ೫ ॥**

ಇದಕ್ಕೂ ಶ್ರೇಷ್ಠವಾದ ಮತ್ತೊಂದು ಬಗೆಯ ಪ್ರಕೃತಿಯನ್ನು ಅರ್ಜುನನು ಗ್ರಹಿಸಬೇಕು. ಈ ಶ್ರೇಷ್ಠ ಪ್ರಕೃತಿಯಿಂದ ಸೃಷ್ಟಿಯೊಳಗಿನ ಸರ್ವ ಭೂತಗಳನ್ನು ಪುರುಷೋತ್ತಮ ಶ್ರೀಕೃಷ್ಣನು ತನ್ನಲ್ಲಿ ಧಾರಣ ಮಾಡುವನು.

ಬ್ರಹ್ಮ ಮತ್ತು ಜೀವರ ಸ್ವಭಾವರಚನೆಗೆ ಅನುವಾಗಿರುವ **ಪುರುಷೋತ್ತಮನ ಅಂಶಭೂತ ಪುರುಷತತ್ವವನ್ನೇ ಶ್ರೇಷ್ಠವಾದ** ತನ್ನ ಪ್ರಕೃತಿಯೆಂದು (೧೦.೪೨) ಇಲ್ಲಿ ಶ್ರೀಕೃಷ್ಣನು ಹೇಳುವನು. ಈ ಪುರುಷ ತತ್ವಕ್ಕೂ ಪುರುಷೋತ್ತಮನ ಸ್ವಭಾವಕ್ಕೂ ಇರುವ ವ್ಯತ್ಯಾಸವೇನೆಂದರೆ, ಯಜ್ಞವನ್ನು ಉತ್ಪನ್ನಮಾಡುವದಕ್ಕಾಗಿಯೇ ಜೀವಪುರುಷನು ನಿಯಮಿತನಾಗಿದ್ದಾನೆ. ಅವನು ತನ್ನ ಸುಖವನ್ನು ಈ ನಿಯತ ಸ್ಥಿತಿಯಲ್ಲಿಯೆ ಸಾಧಿಸಬೇಕು. ಆದರೆ ಪುರುಷೋತ್ತಮನು ತನ್ನ ಪ್ರಜೆಯಿಂದ ತನಗೆ ಅರ್ಪಿತವಾದ ಯಜ್ಞವನ್ನು ಉಪಭೋಗಿಸಿ ಸುಖವನ್ನು ಪಡೆಯುವನು–ಅಧಿಯಜ್ಞನು. ಆದಕಾರಣ ಜೀವಪುರುಷೋತ್ತಮರ ಮೂಲಪುರುಷ ಸ್ವಭಾವವು ಒಂದೇ ಆದರೂ ಜೀವಪುರುಷನು ಪುರುಷೋತ್ತಮನಿಗೆ ಪ್ರಕೃತಿರೂಪನಾಗಿರುವನು. ಪುರುಷಪ್ರಕೃತಿಗಳ ಅನ್ಯೋನ್ಯ ಸಂಬಂಧವು ಹೇಗಿರುವದೆಂದು ಹದಿಮೂರನೆಯ ಅಧ್ಯಾಯದಲ್ಲಿ ಹೇಳಿರುವದನ್ನು ಸಂಪೂರ್ಣವಾಗಿ ಗಮನಿಸಿದರೆ, ಇಲ್ಲಿ ವಿವರಿಸಿದ ಗೀತೆಯ ಮತವು ಸಮ್ಮತವಾಗದಿರದು.

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥ ೬ ॥**

ಈ ಸೃಷ್ಟಿಯನ್ನುಂಟುಮಾಡಿದವನು ಪುರುಷೋತ್ತಮ ಶ್ರೀಕೃಷ್ಣನು. ಮೇಲೆ ವರ್ಣಿಸಿದ ದ್ವಿವಿಧ ಪ್ರಕೃತಿಗಳು ಅವನಿಗೆ ಯೋನಿಗಳಾಗಿವೆ. ಅವುಗಳ ಮೂಲಕ ತನ್ನಲ್ಲಿಯೇ ಎಲ್ಲ ಭೂತಮಾತ್ರಗಳನ್ನು ಅವನು ಧರಿಸುವನು.

ಜಗತ್ತೆಲ್ಲವನ್ನು ಹೀಗೆ ಹುಟ್ಟಿಸುವವನೇ ಅಲ್ಲದೆ ಲಯ ಮಾಡುವವನೂ ಪುರುಷೋತ್ತಮ ಶ್ರೀಕೃಷ್ಣನೇ ಸರಿ.

**ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ ೭ ॥**

ನನ್ನನ್ನು ಮೀರಿದ ವಸ್ತುವು ಯಾವುದೂ ಇಲ್ಲ. ಅಸ್ತಿತ್ವದಲ್ಲಿರುವ ವಸ್ತುಗಳೆಲ್ಲ ಸೂತ್ರದೊಳಗೆ ಮಣಿಗಳನ್ನು ಪವಣಿಸಿದಂತೆ ನನ್ನೊಳಗೆ ಪೋಣಿಸಲ್ಪಟ್ಟಿವೆ.

**ರಸೋಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥ ೮ ॥**

ನೀರಿನೊಳಗಿನ ರಸವು ನಾನು. ಸೂರ್ಯಚಂದ್ರರಲ್ಲಿಯ ಪ್ರಭೆಯು ನಾನು. ವೇದಗಳಲ್ಲೆಲ್ಲ ಪ್ರಣವ (ಓಂಕಾರ) ವು ನಾನು. ಆಕಾಶದಲ್ಲಿ ಶಬ್ದವು ನಾನು. ಪುರುಷನಲ್ಲಿ ಪೌರುಷವು ನಾನು.

**ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥ ೯ ॥**

ಪೃಥ್ವಿಯಲ್ಲಿರುವ ಪುಣ್ಯಗಂಧವು ನಾನು. ಅಗ್ನಿಯೊಳಗಿನ ತೇಜವು ನಾನು. ಎಲ್ಲ ಭೂತಗಳ ಜೀವನಾಧಾರವು ನಾನು. ತಪಸ್ವಿಗಳಲ್ಲಿ ತಪವಾದರೂ ನಾನಾಗಿರುವೆನು.

**ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಂ ।**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಂ ॥ ೧೦ ॥**

ಎಲ್ಲ (ಸಂ) ಭೂತ ವಸ್ತುಗಳಿಗೆ ನಾನು ಸನಾತನ ಬೀಜವಾಗಿರುವೆನು. ಬುದ್ಧಿವಂತರಲ್ಲಿ ಬುದ್ಧಿಯು ನಾನು; ತಪಸ್ವಿಗಳ ತೇಜವಾದರೂ ನಾನೇ.

**ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಂ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಸ್ಮಿ ಭರತರ್ಷಭ ॥ ೧೧ ॥**

ಬಲವಂತರಲ್ಲಿ ಬಲವು ನಾನು; ಆದರೆ ಅದು ಕಾಮ ಮತ್ತು ಆಸಕ್ತಿ ರಹಿತವಾಗಿದ್ದಾಗ ಮಾತ್ರವೇ. ಧರ್ಮಕ್ಕೆ ವಿರುದ್ಧವಲ್ಲದ ಪ್ರಾಣಿಗಳೊಳಗಿನ ಕಾಮವಾದರೂ ನಾನೇ.

ಪ್ರಾಣಿಗಳ ಆತ್ಮಸ್ವಭಾವಸಹಜವಾದ ಪುರುಷೋತ್ತಮನಲ್ಲಿಯ ಆಸಕ್ತಿಯೇ (ಕಾಮವೇ) ಇಲ್ಲಿ ಅಭಿಪ್ರೇತವಾಗಿದೆ ಮತ್ತು ಅದು ಧರ್ಮಕ್ಕೆ ವಿರುದ್ಧವಾದುದಲ್ಲ. ತದಿತರ ಕಾಮಗಳೆಲ್ಲವೂ ಗೀತೆಯಲ್ಲಿ ವ್ಯಭಿಚಾರಾರ್ಥವಾದವೆಂದು ಎಣಿಸಲ್ಪಡುವವು. ಅವು ಜೀವಿಗಳ ಶ್ರೇಯಸ್ಸಂಪಾದನೆಗೆ ತಡೆಯಾಗುವವು.

**ಯೇ ಚೈವ ಸಾತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ।**
**ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ॥೧೨॥**

ಸೃಷ್ಟಿಯಲ್ಲಿ ಪ್ರಕಟವಾದ ಸಾತ್ವಿಕ–ರಾಜಸ–ತಾಮಸ ಭಾವಗಳೆಲ್ಲ ನನ್ನಿಂದಲೇ ಉಂಟಾದುವೆಂದು ತಿಳಿ. ಆದರೆ ಅವು ನನ್ನಲ್ಲಿರುವವು ನಾನು ಮಾತ್ರ ಅವುಗಳಲ್ಲಿಲ್ಲ. ಅವು ಜೀವರನ್ನು ಬಾಧಿಸುವಂತೆ ಶ್ರೀಕೃಷ್ಣನನ್ನು ಬಾಧಿಸವೆಂಬುದೇ ಇದಕ್ಕೆ ಅರ್ಥ. ಅವನು ಅವುಗಳಿಂದ ಪೂರ್ಣವಾಗಿ ಅಲಿಪ್ತನಾಗಿರುವವನು. ಅವು ಮಾತ್ರ ಅವನ ಇಚ್ಛೆಯನ್ನು (ಮಾಯೆಯನ್ನು) ಅವಲಂಬಿಸಿರುವವು

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಂ ॥೧೩॥**

ತ್ರಿಗುಣಮಯವಾದ ಭಾವಗಳಿಂದ ಈ ಜಗತ್ತೆಲ್ಲವೂ ಮೋಹವಶವಾಗಿರುವದು; ಮತ್ತು ಆ ಗುಣಗಳಿಂದ ಪ್ರತ್ಯೇಕವಾಗಿರುವ ಹಾಗು ಆ ಗುಣಗಳ ಮೇಲೆ ನಿಃಸ್ಸೀಮವಾದ ಅಧಿಕಾರವನ್ನು ನಡೆಯಿಸುವ ನನ್ನನ್ನು ಅರಿಯದು.

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ।**
**ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ**
**ತರಂತಿ ತೇ ॥೧೪॥**

ಸೃಷ್ಟಿಯಲ್ಲಿ ಪಸರಿಸಿದ ಈ ಮೂರು ಗುಣಗಳ ಹಾವಳಿಯು ನಿಜವಾಗಿ

ನನ್ನ ದೈವೀ ಇಚ್ಛೆಯಿಂದಲೇ ಬಲಗೊಂಡಿರುವದು. ನಿರ್ವ್ಯಾಜವೂ ನಿರಂಕುಶವೂ ಆದ ನನ್ನ ಈ ಮಾಯೆಯು ಪ್ರಾಣಿಗಳಿಗೆ ದುಸ್ತರವಾಗಿರುವದು ನಿಜ. ಆದರೆ ನನಗೆ ಶರಣು ಬಂದವರು ಈ ಮಾಯೆಯನ್ನು ಸುಲಭವಾಗಿ ದಾಟುವರು (೨ ೬೧).

**" ದೈವೀ " ಎಂದರೆ " ಸೃಷ್ಟಿಯನ್ನುಂಟುಮಾಡಿದ ಆದಿದೇವನ ಭಾವವನ್ನನುಸರಿಸುವ " ಎಂದರ್ಥ.** ಅವನಿಗೆ ಶರಣುಹೋದ ಮಾತ್ರಕ್ಕೆ ಗುಣಗಳಾಗಲಿ ಅವುಗಳ ವಿವಿಧ ಭಾವಗಳಾಗಲಿ ಬಿಟ್ಟುಹೋಗುವವೆಂದು ತಿಳಿಯಬಾರದು. ಆದರೆ ಅವು ಇದ್ದರೂ ಆ ಪ್ರಾಣಿಯನ್ನು ಬಾಧಿಸುವದಿಲ್ಲ. **ಭಗವಂತನ ಇಚ್ಛೆಯಿಂದ—ಮಾಯೆಯಿಂದ—ಸೃಷ್ಟಿಸ್ವಭಾವಸಹಜವಾಗಿ** (೫-೧೪) ಹೀಗೆ ಅವು ಬಾಧಿಸಬಾರದೆಂದು ಏರ್ಪಟ್ಟಿದೆ.

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।**
**ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥ ೧೫ ॥**

ದುಷ್ಕರ್ಮಗಳಲ್ಲಿಯೇ ನಿರತರಾದ ಮೂಢ ನರಾಧಮರು ನನಗೆ ಶರಣು ಬರುವದಿಲ್ಲ. ದುರ್ದಮವಾದ ಮಿಥ್ಯಾಹಂಕಾರದಿಂದ ಅವರ ಜ್ಞಾನವೆಲ್ಲ ನಷ್ಟವಾಗಿರುವದು. ಇಂಥವರು ಆಸುರಭಾವವನ್ನು ಆಶ್ರಯಿಸಿರುವರು.

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ ೧೬ ॥**

ಗುಣಗಳಿಂದ ಕೂಡಿದ ಅಪರಿಹಾರ್ಯವಾದ ನನ್ನ ಮಾಯೆಯನ್ನು ದಾಟಲಿಕ್ಕೆ ನನ್ನಲ್ಲಿ ಪ್ರೀತಿಯು ಮಾತ್ರ ಬೇಕು. ಉಪಾಯವು ಇಷ್ಟು ಸುಲಭವಾಗಿದ್ದರೂ ಆಸುರವೃತ್ತಿಯುಳ್ಳವರಿಗೆ ಅದು ಗಮನಕ್ಕೆ ಬಾರದು; ಅಥವಾ ಬಂದರೂ ಸಾಧಿಸಲಾರದು. ನನ್ನ ನೆನಹು ಉಂಟಾಗಿ ನನ್ನನ್ನು ಭಜಿಸಲರಿಯಬೇಕಾದರೆ ಪೂರ್ವಸುಕೃತದ ಬೆಂಬಲವು ಬೇಕು. ಹೆಚ್ಚು ಕಡಿಮೆ ಪೂರ್ವಪುಣ್ಯದಿಂದ ನನ್ನನ್ನು ಹೀಗೆ ಭಜಿಸುವವರಲ್ಲಿ ಆರ್ತರು, ಜಿಜ್ಞಾಸುಗಳು, ಅರ್ಥಾರ್ಥಿಗಳು ಮತ್ತು ಜ್ಞಾನಿಗಳು ಎಂಬ ನಾಲ್ಕು ತರದವರಿರುವರು.

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥೧೭॥**

**ನನ್ನಲ್ಲಿಟ್ಟ ನಿತ್ಯವೂ ಏಕಾಂತಿಕವೂ ಆದ ಭಕ್ತಿಗಾಗಿ ಜ್ಞಾನಿಯೇ ಇವರೆಲ್ಲರಲ್ಲಿ ಶ್ರೇಷ್ಠನು.** ನಿಜವಾಗಿಯೂ ಜ್ಞಾನಿಯಾದವನಿಗೆ ನಾನು ಅತ್ಯಂತ ಪ್ರಿಯನು. ಮತ್ತು ಅವನಾದರೂ ನನಗೆ ಪ್ರಿಯನು.

ಪುರುಷೋತ್ತಮ ಮತ್ತು ಜ್ಞಾನಿ ಇವರಲ್ಲಿ ಇಲ್ಲಿ ಹೇಳಿದಂತೆ ನಡೆಯುವ ಪ್ರೇಮದ ಪರಸ್ಪರ ವಿನಿಯೋಗವು ರುಕ್ಷವೂ ರಸಹೀನವೂ ಆದ ವೇದಾಂತವಿಷಯವನ್ನು ಸವಿಯಾಗಿ ಮಾಡುವ ನಿಮಿತ್ತ ಅದರಲ್ಲಿ ಬೆರಿಸಿರುವ ಒಂದು ಸುಗ್ರಾಸವೆಂದು ಅಥವಾ ವ್ಯಂಜನ ಪದಾರ್ಥವೆಂದು ಊಹಿಸಬಾರದು. **ಆ ಪುರುಷೋತ್ತಮನಲ್ಲಿಯ ಪ್ರೇಮವು ಜ್ಞಾನಿಗೆ ಜೀವದ ಸ್ವಾರಸ್ಯವಾಗಿಯೂ ಬುದ್ಧಿಯೋಗಶಾಸ್ತ್ರಕ್ಕೆ ನಿಶ್ಚಿತವೂ ಶಾಶ್ವತವೂ ಆದ ತಳಹದಿಯಾಗಿಯೂ** ಇರುವದನ್ನು ಗಮನಿಸಬೇಕು.

**ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಂ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಂ ॥ ೧೮ ॥**

ಈ ನಾಲ್ಕು ಬಗೆಯ ಭಕ್ತರೆಲ್ಲರೂ ಮಹನೀಯರೇ ಸರಿ. ಆದರೆ ಜ್ಞಾನಿಯಾದವನನ್ನು ಭೇದವನ್ನೆಣಿಸದೆ ನನ್ನಂತೆಯೇ ನಾನು ತಿಳಿಯುವೆನು. ಏಕೆಂದರೆ, ಯೋಗಯುಕ್ತಾತ್ಮನಾಗಿ ನಾನೇ ತನಗೆ ಪರಮ ಹಾಗು ಉತ್ತಮ ಗತಿಯಾಗಿರುವೆನೆಂದು ಅವನು ಭಾವಿಸುವನು.

**ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ ೧೯ ॥**

ಇಂಥ ಜ್ಞಾನಿಯು ಹಲವು ಜನ್ಮಗಳನ್ನೆತ್ತಿದ ಬಳಿಕ ನನಗೆ ಸಂಪೂರ್ಣ ಶರಣಾಗತನಾಗುವನು. “ ಸರ್ವವೂ ವಾಸುದೇವನೇ ”ಎಂದು ಭಾವಿಸುವ ಮಹಾತ್ಮರು ದುರ್ಲಭರೇ ಸರಿ.

“ ಸರ್ವವೂ ವಾಸುದೇವನೇ ”ಎಂದು ಬಗೆಯುವವರಲ್ಲಿ ಪರಾಕಾಷ್ಠೆಯ ಜ್ಞಾನವೂ ಯೋಗವೂ ಒಂದುಗೂಡಿರುವವು. ವಾಸುದೇವನನ್ನು

ಬಿಟ್ಟರೆ ಬೇರೆ ಇಲ್ಲ,ಯಾವುದೂ ಇಲ್ಲ ಎಂಬದು ಜ್ಞಾನಮೂಲಕವೇ ಅಲ್ಲದೆ ಯೋಗ (ವಿಜ್ಞಾನ) ಮೂಲಕವಾಗಿಯೂ ಅವರಿಗೆ ಪ್ರತ್ಯಕ್ಷ ಅನುಭವದಿಂದ ತಿಳಿದಿರುವದು.

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥ ೨೦ ॥**

ಜ್ಞಾನಿಯ ಹೊರತು ಉಳಿದ ಮೂರು ಬಗೆಯ ಭಕ್ತರು ಜ್ಞಾನಿಯಂತೆ ಪ್ರತ್ಯಕ್ಷವಾಗಿ ನನ್ನನ್ನು ಭಜಿಸುವದಿಲ್ಲ. ಯಾವುದಾದರೊಂದು ಆಕಾಂಕ್ಷೆಯಲ್ಲಿ ಆಸಕ್ತರಾದಮೂಲಕ ಇವರಲ್ಲಿ ನನ್ನ ವಿಷಯದ ಸತ್ಯವಾದಜ್ಞಾನವು ಕಳೆದುಹೋಗಿರುವದು.ನನ್ನನ್ನು ಬಿಟ್ಟು ಅನ್ಯ ದೇವತೆಗಳನ್ನು ತಮ್ಮ ತಮ್ಮ ಪ್ರಕೃತಿಗನುರೂಪವಾದ ವ್ರತಾನುಷ್ಠಾನಗಳಿಂದ ಇವರು ಆರಾಧಿಸುವರು.

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾ-**
**ರ್ಚಿತುಮಿಚ್ಛತಿ ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ ॥ ೨೧ ॥**

ಭಕ್ತನಾದವನು ನನ್ನ ಯಾವ ಯಾವ ಸ್ವರೂಪವನ್ನು ನೆನೆದು ಶ್ರದ್ಧೆಯಿಂದ ಪೂಜಿಸಲು ಬಯಸುವನೋ ಅವನ ಆ ಶ್ರದ್ಧೆಯನ್ನೇ ನಾನು ಸ್ಥಿರಪಡಿಸುವೆನು.

**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ಹಿ ತಾನ್ ॥ ೨೨ ॥**

ಹೀಗೆ ಸ್ಥಿರಪಡಿಸಿದ ಶ್ರದ್ಧೆಯನ್ನೊಳಗೊಂಡ ಈಶ್ವರ ಸ್ವರೂಪವನ್ನು ಅದೇ ಶ್ರದ್ಧೆಯಿಂದ ಅವನು ಆರಾಧಿಸುವನು.ಮನಸಿನಲ್ಲಿದ್ದ ಅವನ ಮನೋರಥವು ಸಫಲವಾಗುವದು. ಹೀಗೆ ಅದನ್ನು ಸಲಿಸುವವನಾದರೂ ನಾನೇ.

ಇತರ ದೇವತೆಗಳೆಲ್ಲ ಪುರುಷೋತ್ತಮ ಶ್ರೀಕೃಷ್ಣನ ಕನಿಷ್ಠಸ್ವರೂಪಗಳೆಂದು ಗೀತೆಯಲ್ಲಿ ಪ್ರತಿಪಾದಿಸಿದೆ. ಈ ಅನ್ಯಸ್ವರೂಪಗಳೊಳಗಿನ ದೇವತಾಭಾವವು ಅದನ್ನು ಕಲ್ಪಿಸುವ ಭಕ್ತನ ಶ್ರದ್ಧೆಯನ್ನೇ ಅವಲಂಬಿಸುವದು. ಅಂದರೆ, ಯಾವನಿಗೆ ವಿಶಿಷ್ಟವಾದ ಒಂದು ಸ್ವರೂಪದಲ್ಲಿ

ಶ್ರದ್ಧೆಯೂ ಇರುವದಿಲ್ಲವೋ ಅವನಿಗೆ ಆ ಸ್ವರೂಪದಲ್ಲಿ ದೇವತಾಭಾವವನ್ನು ತಳೆಯುವ ಅಗತ್ಯವೂ ಇರುವದಿಲ್ಲ. ಈ ತತ್ವವು ಬಹಳ ಮಹತ್ವದ್ದಾಗಿದೆ. ಜಗತ್ತಿನೊಳಗಿನ ಧರ್ಮವಿಷಯದ ಪರಸ್ಪರ ಜಗಳಗಳೂ ದ್ವೇಷಗಳೂ ಎಷ್ಟು ನಿರರ್ಥಕವಾಗಿರುವವೆಂಬದನ್ನು ಇದರಿಂದ ಊಹಿಸಬಹುದು. ಭಕ್ತರು ಕಲ್ಪಿಸಿದ ಸ್ವರೂಪದಲ್ಲಿಯೇ ದೇವತಾಭಾವ ಸರ್ವಸ್ವವೂ ನೆಲೆಯಾಗಿರುವದು. ತಮ್ಮ ಈ ದೇವತೆಯ ಅಂತಸ್ತನ್ನೂ ಪಾವಿತ್ರ್ಯವನ್ನೂ ಅವರ ಭಕ್ತರೇ ಅಲ್ಲದೆ ಜಗತ್ತೆಲ್ಲವೂ ಒಪ್ಪಿಕೊಳ್ಳಲೇ ಬೇಕು, ಎಂಬ ಆಗ್ರಹವು ಜಗತ್ತಿನ ಪ್ರತಿಯೊಂದು ಧರ್ಮದಲ್ಲಿಯೂ ಹೆಚ್ಚು ಕಡಿಮೆಯಾಗಿ ಕಂಡು ಬರುವದು. ಈ ಆಗ್ರಹಕ್ಕೆ ಕೇವಲ ಕುರುಡುತನದ ಧರ್ಮಭ್ರಾಂತಿಗಳೇ ಕಾರಣವೆಂದು ಗೀತೆಯು ಬಗೆಯುವದು. ವ್ಯವಹಾರ ಸೌಷ್ಠವಕ್ಕಾಗಿ ಇಲ್ಲವೆ ಪರಸ್ಪರ ಪ್ರೇಮಾದರಗಳಿಂದ ಪರಸ್ಪರ ಧರ್ಮಭಾವನೆಗಳನ್ನು ಮರ್ಯಾದೆಯಿಂದ ಕಾಣುವದು ಸೌಜನ್ಯದ ಲಕ್ಷಣವೆನಿಸುವದೇ ಹೊರತು ಎಂದಿಗೂ ಧರ್ಮಶಾಸ್ತ್ರಸಿದ್ಧಾಂತವೆನಿಸದು. ಯಾವ ವ್ಯಕ್ತಿಗೇ ಆಗಲಿ ಸಮಾಜಕ್ಕೇ ಆಗಲಿ ತನ್ನ ಇಚ್ಛೆಗೆ ಬಂದಂತೆ ದೇವತಾ ಸ್ವರೂಪವನ್ನು ಕಲ್ಪಿಸಿ ಅದರಿಂದ ತನ್ನ ಲೌಕಿಕ ಧಾರ್ಮಿಕ ಯೋಗಕ್ಷೇಮವನ್ನು ಪಡೆಯುವ ಸ್ವಾತಂತ್ರ್ಯವನ್ನು ಗೀತೆಯು ಕೊಡುವದು. ಆದರೆ ತನ್ನ ಕಲ್ಪನೆಗಳನ್ನೇ ಅನ್ಯರ ಮೇಲೆ ಹೇರುವದೂ ಹಾಗೆ ಅದನ್ನು ಸ್ವೀಕರಿಸದ ವ್ಯಕ್ತಿಯನ್ನೂ ಸಮಾಜವನ್ನೂ ದ್ವೇಷಿಸುವದೂ ಇಲ್ಲವೆ ಹಿಂಸಿಸುವದೂ ಅಧರ್ಮವೆಂದು ಗೀತೆಯು ಪ್ರತಿಪಾದಿಸುವದು.

ಸಾರಾಂಶವೇನೆಂದರೆ, ದೇವತೆಗಳ ಸ್ವರೂಪಗಳೆಲ್ಲ ಭಕ್ತರ ಭಾವನೆಗೆ ಮಾತ್ರವೇ ಸತ್ಯವಾಗಿರುವವು. ಶ್ರೀಕೃಷ್ಣ ಪುರುಷೋತ್ತಮನ ದೇವ ಸ್ವಭಾವವು ಎಲ್ಲ ಸ್ಥಳದಲ್ಲಿಯೂ ಎಲ್ಲಕಾಲಕ್ಕೂ ಅಖಂಡವಾಗಿರುವದು ವ್ಯಕ್ತಿಗಳೂ ಸಮಾಜಗಳೂ ತಮ್ಮ ತಮ್ಮ ಶ್ರದ್ಧೆಯೆಂಬ ಸಂಕುಚಿತ ದೃಷ್ಟಿಯಿಂದ ಅವನ ದೇವತ್ವವನ್ನು ಲಕ್ಷಿಸುವರು. ಆದುದರಿಂದ ಅದು ಸಂಪೂರ್ಣವಾಗಿ ಅವರಿಗೆ ಗೋಚರವಾಗುವದಿಲ್ಲ. ತಮ್ಮ ಕಣ್ಣಿಗೆ ಬಿದ್ದದ್ದೇ ಸತ್ಯವೆಂದೂ ಇತರರಿಗೆ ದೃಷ್ಟಾಂತವಾದುದೆಲ್ಲ ಅಸತ್ಯವೆಂದೂ ಭ್ರಮೆಯುಂಟಾಗುವದು. ಶ್ರೀಕೃಷ್ಣನ ದೈವಿಕ ಸತ್ಯಸ್ವರೂಪವು ಬೇರೆ ಬೇರೆ ಎಷ್ಟು

ಬಗೆಯ ಅಲ್ಪಸ್ವರೂಪಗಳಲ್ಲಿ ಪ್ರಕಟವಾದರೂ ಅದು ಅಖಂಡವಾಗಿ ನಿಲ್ಲುವ ದೆಂದೂ ಆ ಅಲ್ಪಸ್ವರೂಪವನ್ನು ಭಜಿಸುವದರಿಂದ ಲಭಿಸುವ ಸಮಾಧಾನವೂ ಸೌಖ್ಯವೂ ಐಹಿಕಲಾಭವೂ ಶ್ರೀ ಕೃಷ್ಣಪುರುಷೋತ್ತಮನಿಂದಲೇ ದೊರೆಯುವವೆಂದೂ ತಿಳಿಯಬೇಕು.

**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಂ ।**
**ದೇವಾನ್ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ॥ ೨೩ ॥**

ಪುರುಷೋತ್ತಮನ ಸ್ವರೂಪವನ್ನಲ್ಲದೆ ಇನ್ನುಳಿದ ಯಾವ ಸ್ವರೂಪವನ್ನು ಭಜಿಸಿದರೂ ಅದು ಅನ್ಯವೂ ಅಪರಿಪೂರ್ಣವೂ ಎನಿಸುವದು. ಹೀಗೆ ಭಜಿಸುವವರ ಬುದ್ಧಿಯು ಅಲ್ಪವಾದುದು. ಆದುದರಿಂದ ಅವರಿಗೆ ದೊರೆಯುವ ಫಲಗಳು ಅಲ್ಪಕಾಲ ಮಾತ್ರ ತಡೆಯುವವು- ಅಂತವುಳ್ಳವು. ಅನ್ಯದೇವತೆಗಳನ್ನು ಭಜಿಸುವವರು ಆ ದೇವತೆಗಳನ್ನು ಸೇರುವರು. ಪುರುಷೋತ್ತಮಶ್ರೀಕೃಷ್ಣನ ಭಕ್ತರು ಅವನನ್ನು ಸೇರುವರು.

ತನ್ನ ಕನಿಷ್ಠಸ್ವರೂಪವನ್ನು ನಂಬುವವರ ಶ್ರದ್ಧೆಯನ್ನು ಸ್ಥಿರಪಡಿಸುವದರಲ್ಲಿ ಶ್ರೀಕೃಷ್ಣನ ಉದ್ದೇಶವೇನೆಂದರೆ ಭಕ್ತನು ತನಗೆ ಪ್ರಾಪ್ತವಾದ ಶ್ರದ್ಧೆಯನ್ನೇ ಬೆಳೆಯಿಸಿ ಮುಂದಕ್ಕೆ ಅವನ ಪೂರ್ಣಸ್ವರೂಪವನ್ನು ತಿಳಿಯಬೇಕೆಂಬುವದು. ಆದರೆ ಭಕ್ತನು ತಾನು ಅಲ್ಪಬುದ್ಧಿಯಿಂದ ಪಡೆದ ಅಲ್ಪಫಲದಲ್ಲಿಯೇ ಆಸಕ್ತನಾಗಿಬಿಡುವನು. ಇಲ್ಲವೆ ತಾನು ಸಾಧಿಸಿದ ಶ್ರೀಕೃಷ್ಣನ ಕನಿಷ್ಠ ಸ್ವರೂಪವನ್ನೇ ಅವಚಿಕೊಂಡು ಕೂಡುವನು. ಹೀಗಾದಾಗ ಅವನಲ್ಲಿ ಶ್ರದ್ಧೆಯನ್ನೂ ನಿಷ್ಠೆಯನ್ನೂ ಪೋಷಿಸಿದ್ದರಲ್ಲಿ ಶ್ರೀಕೃಷ್ಣನು ತಳೆದ ಉದ್ದೇಶವು ನಿಷ್ಫಲವಾಗುವದು.

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।**
**ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಂ ॥ ೨೪ ॥**

ಅಲ್ಪ ತಿಳುವಳಿಕೆಯುಳ್ಳ ಹಲವರು ಅವ್ಯಕ್ತನಾದ ನನ್ನನ್ನು ವ್ಯಕ್ತಸ್ವರೂಪದಲ್ಲಿಯೇ ಒಪ್ಪಿಕೊಳ್ಳುವರು. ನನ್ನ ಶ್ರೇಷ್ಠವೂ ಉತ್ತಮೋತ್ತಮವೂ ಅವ್ಯಯವೂ ಆದ ಭಾವವನ್ನು ಅವರು ಅರಿತಿರುವದಿಲ್ಲ.

ತಾವು ಮನಗಂಡ ಶ್ರೀಕೃಷ್ಣನ ಕನಿಷ್ಠ ವ್ಯಕ್ತಸ್ವರೂಪಕ್ಕೂ ಶ್ರೀ ಕೃಷ್ಣನ ಶ್ರೇಷ್ಠವಾದ ಅವ್ಯಕ್ತ ಸ್ವರೂಪಕ್ಕೂ ಸಂಬಂಧವಿರುವದೆಂಬು ವದು ಅವನ ಕನಿಷ್ಠಸ್ವರೂಪವನ್ನು ಮಾತ್ರ ಒಪ್ಪಿಕೊಳ್ಳುವವರಿಗೆ ತಿಳಿಯು ವದಿಲ್ಲ. ಅವರ ಬುದ್ಧಿಯು ಅದೂರದರ್ಶಿಯಾಗಿರುವದೇ ಇದಕ್ಕೆ ಕಾರ ಣವು. ಇದಕ್ಕೆ ಬದಲು **ಅವನ ಪರಾತ್ಪರ ಭಾವವನ್ನು ತಿಳಿದ ಬಳಿಕ ಅವನ ಕನಿಷ್ಠ ಸ್ವರೂಪದಲ್ಲಿ ಅವಿಶ್ವಾಸವುಂಟಾಗುವದಿಲ್ಲ.** ಏಕೆಂದರೆ ಉಭಯ ಸ್ವರೂಪಗಳ ಉಪಯೋಗವೂ ಸಾರ್ಥಕ್ಯವೂ ಮೇಲೆ ಬೋಧಿಸಿದ ಮೇರೆಗೆ ತಿಳಿದು ಬರುವವು.

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾ ಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜ-**
**ಮವ್ಯಯಂ ॥ ೨೫ ॥**

ಶ್ರೀಕೃಷ್ಣನನ್ನು ಕನಿಷ್ಠಸ್ವರೂಪವಲ್ಲದರೂ ಬಗೆಯುವವರ ವಿಷಯ ವಾಗಿ ಈ ವರೆಗೆ ನಿರೂಪಣೆಯಾಯಿತು. ಇನ್ನು ಅವನ ಯಾವ ಸ್ವರೂಪವೂ ಯಾರಿಗೆ ನಿಜವಾಗಿ ತೋರುವದಿಲ್ಲವೋ, ಹಾಗೆ ತೋರಿದರೂ ಯಾರು ಅದನ್ನು ನಂಬಲರಿಯರೋ ಅಂಥವರನ್ನು ಕುರಿತು ಹೇಳಿದೆ. ಶ್ರೀ ಕೃಷ್ಣನು ತನ್ನ ಯೋಗಮಾಯೆಯಲ್ಲಿ ಸಮಾವಿಷ್ಟನಾಗಿರುವದೇ ಇವರು ಹೀಗಾಗು ವದಕ್ಕೆ ಕಾರಣವು. ಈ ಯೋಗಮಾಯೆಯೆಂದರೆ, ಪ್ರಕೃತಿಯಿಂದ ಅಥವಾ ತ್ರಿಗುಣಗಳಿಂದ ಹುಟ್ಟಿದ ಯಾವದೋ ಒಂದು ಮೋಹಜಾಲವೆಂದು ತಿಳಿ ಯಬಾರದು. ಅವನ ಸೃಷ್ಟಿಸಂಕಲ್ಪವನ್ನೊಳಗೊಂಡಿರುವ ನಿಯಮಗಳ ಅನಿ ವಾರ್ಯತೆಯೇ ಈ ಯೋಗಮಾಯೆಯ ಸ್ವರೂಪವು. **ಯಾವ ಭಾವನೆ ಯಿಂದಲೇ ಆಗಲಿ, ಯಾರು ತನ್ನನ್ನು ಬುದ್ಧಿ ಪುರಃಸರವಾಗಿ ಅರಿಯ ಲಿಚ್ಛಿಸುವದಿಲ್ಲವೋ ಅಂಥವರಿಗೆ ತಾನು ಎಂದೆಂದಿಗೂ ಅಗೋಚರ ನಾಗಿಯೇ ಉಳಿಯುವನೆಂಬದೊಂದು ಅವನ ಯೋಗಮಾಯಾ ಮೂಲಕವಾದ ನಿರ್ಧಾರವು.** ಈ ಅವನ ನಿಶ್ಚಯಕ್ಕಾಗಿಯೇ ಜನ್ಮರಹಿತನೂ ಅವ್ಯಯನೂ (absolute) ಆದ ಶ್ರೀಕೃಷ್ಣಪುರುಷೋತ್ತಮನನ್ನು ಇಂಥ ಮೂಢರು ತಿಳಿಯದೆ ಹೋಗುವರು.

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ ೨೬ ॥**

ತನನ್ನು ಯಾರಾದರೂ ಅರಿಯಲಿ ಅರಿಯದಿರಲಿ, ಸ್ವತಃ ಶ್ರೀಕೃಷ್ಣನು ಅರಿಯದಿರುವ ವಸ್ತುವಾಗಲಿ ವ್ಯಕ್ತಿಯಾಗಲಿ ಕಾಲವಾಗಲಿ ಯಾವುದೂ ಇರುವದಿಲ್ಲ. ಭೂತ ಭವಿಷ್ಯ ವರ್ತಮಾನ ಇವೆಲ್ಲವನ್ನೂ ಅವನು ತಿಳಿದಿರುವನು. ಹಾಗೆಯೇ ಸೃಷ್ಟಿಯಲ್ಲಿ ಉತ್ಪನ್ನವಾದ ಭೂತಮಾತ್ರಗಳ ವಿಷಯದ ಎಲ್ಲ ಸಂಗತಿಗಳನ್ನೂ ಸಾದ್ಯಂತವಾಗಿ ಅವನು ಬಲ್ಲನು. ಆದರೆ ಅದೇ ಪ್ರಕಾರದ ಸಾದ್ಯಂತ ಜ್ಞಾನವು ಅದನ ವಿಷಯವಾಗಿ ಭೂತಮಾತ್ರದೊಳಗಿನ ಯಾವ ವ್ಯಕ್ತಿಗೂ ಇರುವದಿಲ್ಲ. ಆತ್ಯಂತಿಕ ಮುಕ್ತಿಯನ್ನು ದೊರಕಿಸಿದವನಿಗೆ ಪ್ರಾಪ್ತವಾದ **ಜ್ಞಾನವು ಎಷ್ಟು ಹೆಚ್ಚಿನದಾದರೂ** ಶ್ರೀಕೃಷ್ಣನ ವಿಷಯದ ಸಾದ್ಯಂತಜ್ಞಾನವು ಅವನಿಗೆ ಇರುವದೆಂದು ಹೇಳಲಾಗದು. ಗೀತೆಯಲ್ಲಿ ಮುಕ್ತಿಯನ್ನು ಪಡೆಯುವದಕ್ಕೆ **ಭಕ್ತಿಯ ಪೂರ್ಣತೆಯೇ ಅವಶ್ಯವೆಂದು ಹೇಳಿದೆಯಲ್ಲದೆ** ಜ್ಞಾನದ ಪೂರ್ಣತೆಯೆಂದು ಹೇಳಿಲ್ಲ.

**ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ।**
**ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥ ೨೭ ॥**

ಪುರುಷೋತ್ತಮನ ವಿಷಯದ ಸಂಪೂರ್ಣ ಜ್ಞಾನವು ಯಾರಿಗೂ ಆಗುವದಿಲ್ಲ. ಹೀಗಿದ್ದರೂ ಆ ಜ್ಞಾನವು ಅಲ್ಪಪ್ರಮಾಣವಲ್ಲಿ ಸಾಧಿಸಿದ್ದೇ ಆದರೆ,ಅದರಿಂದ ಪ್ರಪಂಚದಲ್ಲಿ ಎಷ್ಟು ಹಿತವಾಗುವದೆಂಬದನ್ನು ಈ ಮೊದಲೇ ಹೇಳಿದೆ. ಕಾರ್ಯಾನುಕೂಲವಾಗುವಷ್ಟು ಅಲ್ಪಜ್ಞಾನವನ್ನು ಪಡೆಯುವದು ಕೂಡ ಪ್ರಾಣಿಗಳಿಗೆ ಏಕೆ ಪ್ರಯಾಸವೆನಿಸುವದು ? **ಇಚ್ಛಾ-ದ್ವೇಷ ಸುಖದುಃಖಾದಿ ದ್ವಂದ್ವಗಳ** ಮೋಹದ ಬಲೆಯಲ್ಲಿ ಅವರು ಸಿಲುಕಿರುವರು. ಅವರು ಮೋಸಹೋಗುವದಕ್ಕಾದರೂ ಇದೇ ಕಾರಣವು.ಹೀಗೆ ಕರ್ಮಬಂಧನಕ್ಕೆ ಒಳಗಾದ ಬಳಿಕ ಪುನರ್ಜನ್ಮದ ಶುಕ್ಲಕಾಷ್ಠವು ಬೆನ್ನುಹತ್ತದೆ ಬಿಡುವದಿಲ್ಲ.

**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಂ।**
**ತೇದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ॥೨೮॥**

ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಸಾಮಾನ್ಯವಾಗಿ ಎಲ್ಲ ಪ್ರಾಣಿಗಳೂ ಕ್ಷರರಾದುದರಿಂದ ಮೋಸಹೋಗುವದುಂಟು. ಆದರೂ ತಮ್ಮ ಕ್ಷರತ್ವ ವನ್ನು ಕಳೆದುಕೊಂಡು ಅಕ್ಷರತ್ವವನ್ನು ಪಡೆದವರೂ ಇರುವರು. ಇವರು ಪುಣ್ಯಕರ್ಮಗಳನ್ನು ಮಾಡುವರು; ಅವರ ಪಾಪಗಳು ತೊಳೆದು ಹೋಗಿರು ವವು. ಅವರು ದ್ವಂದ್ವಮೋಹಕ್ಕೆ ಒಳಗಾಗದೆ ದೃಢವ್ರತರಾಗಿ ಶ್ರೀಕೃಷ್ಣ ಪರಮಾತ್ಮನನ್ನೇ ಭಜಿಸುವರು.

**ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಂ ॥ ೨೯॥**
**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥ ೩೦ ॥**

ಜರಾಮರಣಗಳಿಂದೊದಗುವ ದುಃಖವನ್ನು ನೀಗಿಕೊಳ್ಳುವದ ಕ್ಕಾಗಿಯೂ ಎಲ್ಲ ಬಂಧನಗಳಿಂದ ಮುಕ್ತರಾಗುವದಕ್ಕಾಗಿಯೂ ಇವರು ಶ್ರೀಕೃಷ್ಣಪುರುಷೋತ್ತಮನಿಗೆ ಶರಣು ಹೋಗುವರು; ಅವನನ್ನೇ ಆಶ್ರಯಿ ಸುವರು. ಅಂಥವರಲ್ಲಿ ಭಕ್ತಿಮಾತ್ರ ಇರಬಹುದು—ಜ್ಞಾನವನ್ನು ಸಂಪಾ ದಿಸುವದಕ್ಕಾಗಿ ಅವರು ಪ್ರಯತ್ನ ಪಟ್ಟವರಲ್ಲವಾದುದರಿಂದ—ಅವರಲ್ಲಿ ಜ್ಞಾನವಿರುವದು ಅಶಕ್ಯವೆಂದು ತಿಳಿಯಬಾರದು. **ಪಾಪವಿಮುಕ್ತರಾದ ಈ ಯೋಗಿಗಳಲ್ಲಿ ಅವರ ಏಕಾಂತಿಕ ಭಕ್ತಿಯ ಪ್ರಭಾವದಿಂದ ಜ್ಞಾನವು ಅಂಕುರಿಸಿ ಬೆಳೆದು ಬೇರೂರಿರುವದು.** ಸರ್ವಗತ ಸಂಪೂರ್ಣ ಬ್ರಹ್ಮ ನನ್ನೂ ಅಧ್ಯಾತ್ಮವನ್ನೂ ಕರ್ಮವನ್ನೂ ಅಧಿಭೂತವನ್ನೂ ಅಧಿದೈವವನ್ನೂ ಇವರು ಚೆನ್ನಾಗಿ ಅರಿತಿರುವರು. ಇಷ್ಟೇ ಅಲ್ಲ. ಶ್ರೀಕೃಷ್ಣಪುರುಷೋತ್ತ ಮನೇ ಅಧಿಯಜ್ಞನೆಂಬ ಶಾಸ್ತ್ರದ ತಿರುಳನ್ನು ಈ ನಿಷ್ಪಾಪರಾದ ಯೋಗಿಗಳು ಬಲ್ಲರು. ಮರಣಕಾಲದಲ್ಲಿ ಯುಕ್ತಚೇತಸರಾಗಿ ಅಂದರೆ ಪುರುಷೋತ್ತ ಮನಲ್ಲಿಟ್ಟ ಆಸಕ್ತಿಯಿಂದ ಏಕಾಗ್ರಚಿತ್ತರಾಗಿ ಈ ಪುರುಷೋತ್ತಮ ಶ್ರೀಕೃಷ್ಣನನ್ನು ಅವರು ಅರಿಯುವರು. **ಹೀಗೆ ಅವನನ್ನು ತಿಳಿಯುವದೇ ನಿಜವಾದ ಜ್ಞಾನವು.**

**ಏಳನೆಯ ಅಧ್ಯಾಯವು ಸಮಾಪ್ತವು.**

ಓಂ

# ಎಂಟನೆಯ ಅಧ್ಯಾಯವು



**ಅವತರಣಿಕೆ—**

ಏಳನೆಯ ಅಧ್ಯಾಯದಲ್ಲಿ ಹೇಳಲಾರಂಭಿಸಿದ ಜ್ಞಾನ ವಿಜ್ಞಾನದ ಸ್ವರೂಪವೇನೆಂಬುದನ್ನು ವಿಚಾರಿಸುವ. ಈ ವರೆಗೆ ನಿರೂಪಿಸಿದ ವಿಷಯ ವನ್ನು ನಿಷ್ಕರ್ಷೆಯಾಗಿ ತಿಳಿದುಕೊಳ್ಳುವದರಿಂದ ಈ ಅಧ್ಯಾಯದಲ್ಲಿ ಬರುವ ವಿಷಯವು ಯಾವ ಸಂದರ್ಭಾನುಸಾರವಾಗಿ ಮುಂದೆವರಿಯುವ ದೆಂಬದು ಲಕ್ಷ್ಯಕ್ಕೆ ಬರುವದು.

ಜ್ಞಾನವೆಂದರೆ ಸೃಷ್ಟಿಗೆ ಸಂಬಧಪಟ್ಟ ಬುದ್ಧಿಗಮ್ಯವಾದ ವಿಚಾರಗಳು ಅರ್ಜುನನಿಗೆ ಈ ವರೆಗೆ ಇರಲಿಲ್ಲವೆಂದು ಊಹಿಸಲಾಗದು. ಅವನಿಗೆ ಇಂಥ ಜ್ಞಾನವು ವಿಪುಲವಾಗಿ ಇದ್ದಿತು. ಆದರೆ ಅವನಿಗಿದ್ದ ಜ್ಞಾನಕ್ಕೆ ವಿಜ್ಞಾನದ ಬೆಂಬಲವಿರಲಿಲ್ಲ. ಆಕಾಲದ ವೇದಾಂತ ಶಾಸ್ತ್ರದಲ್ಲಿ ಅವನು ಪಾರಂಗತ ನಾಗಿದ್ದನು ಮತ್ತು ಹಿಂದಿನ ಅಧ್ಯಾಯದಲ್ಲಿ ವಿವರಿಸಿದ ಜ್ಞಾನವೆಲ್ಲವೂ ಬಹುಮಟ್ಟಿಗೆ ಅವನಿಗೆ ಮೊದಲೇ ತಿಳಿದಿತ್ತು. ಅಷ್ಟಧಾಪ್ರಕೃತಿ,ಪರಾಪ್ರಕೃತಿ, ಪರಮಾತ್ಮನ ಸರ್ವವ್ಯಾಪ್ತಿತ್ವ, ತ್ರಿಗುಣಗಳ ಹಾವಳಿ, ಜ್ಞಾನಿಯ ಮೋಕ್ಷಸಾಧನೆ, ದುಃಖಮಯವಾದ ಜರಾಮರಣ ಇವೇ ಮೊದಲಾದ ವಿಷಯಗಳು ಅವನಿಗೆ ಪೂರ್ಣವಿದಿತವಾದವುಗಳೇ. ಆದರೂ ಅವುಗಳನ್ನು ಕುರಿತು ಶ್ರೀಕೃಷ್ಣನು ಹೇಳಿದ ಸಂಗತಿಗಳು ಅವನಿಗೆ ಹೊಸವಾಗಿಯೂ ಬೇರೆಯಾಗಿಯೂ ತೋರಿದವು. ತಾನು ಹೇಳಿದ ಜ್ಞಾನದೊಂದಿಗೆ ಶ್ರೀಕೃಷ್ಣನು ಬೆರಸಿದ ವಿಜ್ಞಾನವೇ ಇದಕ್ಕೆ ಕಾರಣವು. ಏಳನೆಯಅಧ್ಯಾಯ ದಲ್ಲಿ ವಿವರಿಸಿದ ವಿಜ್ಞಾನದ ಸ್ವರೂಪವೇನೆಂಬುದನ್ನು ವಿಚಾರಿಸಿದರೆ, ಶ್ರೀಕೃಷ್ಣನಿಗೂ ಅವನು ಹೇಳಿದ ಜ್ಞಾನವೆಲ್ಲಕ್ಕೂ ಅವನು ತೋರಿಸಿ

**ಕೊಟ್ಟ ಸಂಬಂಧವೇ ವಿಜ್ಞಾನವೆನಿಸುವದೆಂದು ಕಂಡುಬರುವದು.** ಪ್ರಕೃತಿಗಳೆರಡೂ ಶ್ರೀಕೃಷ್ಣನ ಯೋನಿಗಳಾಗಿವೆ. ಸರ್ವವ್ಯಾಪಿಯಾದ ಪರಮೇಶ್ವರನಾದರೂ ಶ್ರೀಕೃಷ್ಣನೇ. ತ್ರಿಗುಣಗಳ ಆಟವು ಶ್ರೀಕೃಷ್ಣನ ದೈವೀ ಮಾಯೆಯು ಲೀಲೆಯು. ಜ್ಞಾನಿಯು ಪಡೆಯುವ ಪರಾಕಾಷ್ಠೆಯ ಮೋಕ್ಷವೆಂದರೆ, ಶ್ರೀಕೃಷ್ಣನಿಗಾಗಿ ಅವನು ಮಾಡಿದ ಏಕಾಂತಿಕ ಭಕ್ತಿಯು ಮತ್ತು ಸಂಪಾದಿಸಿದ ಅವನ ಆಶ್ರಯವು. ಜರಾ, ಮರಣ, ದುಃಖಾದಿಗಳಿಂದ ವಿಮುಕ್ತನಾಗುವದಕ್ಕೆ ಶ್ರೀಕೃಷ್ಣನ ಪ್ರಸಾದವೇ ಕಾರಣವು. ಅವನಿಲ್ಲದ ಪದಾರ್ಥವಿಲ್ಲ, ಅವನಿಲ್ಲದ ಸ್ಥಳವಿಲ್ಲ. ಮುಕ್ತಿ, ಭಕ್ತಿ, ಜ್ಞಾನ ಎಲ್ಲವೂ ಅವನ ಆಶ್ರಯದಿಂದಲೇ.

ಈ ವಿಜ್ಞಾನವು ಮನುಷ್ಯನ ಪುರುಷಭೂತ ಆತ್ಮಸ್ವಭಾವದಲ್ಲಿ ಮೊದಲು ಮೂಡುವದು—ಆತ್ಮವು ಜಾಗ್ರತವಾಯಿತೆಂದರೆ, ವಿಜ್ಞಾನವು ಪ್ರತ್ಯಯಕ್ಕೆ ಬರುವದು. ಒರಿಯ ಜ್ಞಾನಕ್ಕೆ ಈ ವಿಜ್ಞಾನವು ಜೊತೆಗೂಡಿದರೆ, ಆ ಜ್ಞಾನದ ಸ್ವರೂಪವೂ ಅರ್ಥವೂ ಭಿನ್ನವಾಗುವವಲ್ಲದೆ ಮಹತ್ವವು ಬೆಳೆಯುವದು ವಿಜ್ಞಾನ ಸಹಿತ ಜ್ಞಾನವು ವಿಜ್ಞಾನರಹಿತ ಜ್ಞಾನದಿಂದ ಭಿನ್ನವಾಗಿ ಒಡೆದು ಕಾಣಿಸುವದು. ಬ್ರಹ್ಮ, ಕರ್ಮ ಇವೇ ಮೊದಲಾದ ಆಧ್ಯಾತ್ಮಿಕ ಕಲ್ಪನೆಗಳು ಅರ್ಜುನನಿಗೆ ಹೊಸವಲ್ಲ. ಈ ಕಲ್ಪನೆಗಳೆಲ್ಲ ಅವನಿಗೆ ಆಜನ್ಮ ಪರಿಚಿತವಾಗಿದ್ದವು. ಆದರೂ ಅವುಗಳಿಂದ ವಿಜ್ಞಾನಿಗಾಗುವ ಬೋಧವು ಅರ್ಜುನನಿಗೆ ಆಗಿರಲಿಲ್ಲ. ಆದುದರಿಂದ ಈ ಅಧ್ಯಾಯದಲ್ಲಾಗಲಿ ಮುಂದಿನ ಅಧ್ಯಾಯಗಳಲ್ಲಾಗಲಿ ನಮಗೆ ಕಂಡುಬರುವ ವಿಜ್ಞಾನದ ಸ್ವರೂಪವು ಈ ತರದ್ದಾಗಿದೆಯೆಂಬುದನ್ನು ಲಕ್ಷ್ಯಕ್ಕೆ ತಂದುಕೊಳ್ಳಬೇಕು. ಮತ್ತು ಆ ದೃಷ್ಟಿಯಿಂದಲೇ ಅದರಿಂದ ಬೋಧ ಪಡೆಯುವ ಪ್ರಯತ್ನವನ್ನು ಮಾಡಬೇಕು.

ಅರ್ಜುನ ಉವಾಚ—

**ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥ ೧ ॥**

ಆ ಬ್ರಹ್ಮವೆಂದರೇನು, ಅಧ್ಯಾತ್ಮವೆಂದರೇನು, ಕರ್ಮವೆಂದರೇನು, ಅಧಿಭೂತವೆಂದು ಯಾವುದನ್ನು ಹೇಳುವರು, ಅಧಿದೈವವು ಯಾವುದು.?

**ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ಮಧುಸೂದನ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥೨॥**

ಈ ದೇಹದಲ್ಲಿ ಅಧಿಯಜ್ಞನು ಯಾರು? ಮತ್ತು ಮರಣಸಮಯದಲ್ಲಿ ಆಧ್ಯಾತ್ಮ ಚಿತ್ತರಾದ ಪುರುಷರು ಶ್ರೀಕೃಷ್ಣನನ್ನು ಹೇಗೆ ತಿಳಿಯುವರು?

ಶ್ರೀ ಭಗವಾನುವಾಚ—

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮ ಉಚ್ಯತೇ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮ ಸಂಜ್ಞಿತಃ ॥೩॥**

ಪರಮ ಅಕ್ಷರನಾದವನು ಬ್ರಹನು-ಗೀತೆಯಲ್ಲಿ ಅಕ್ಷರವೆಂಬ ಪದವು ಯಾವಾಗಲೂ ಪುರುಷನನ್ನು ಅನುಲಕ್ಷಿಸಿ ಉಪಯೋಗಿಸಲ್ಪಡು ವದು(೩–೨೪ ವಿವರಣೆ). ಮತ್ತು ಅದು ಆ ಪುರುಷನ ಭಾವವನ್ನು ಸಂಬಂಧಿ ಸಿರುವದು. ಜೀವಭೂತ ಪುರುಷರು ಭಾವದಲ್ಲಿ ಕ್ಷರರೆಂದು ಹೇಳಿದೆ. ಹೀಗಿದ್ದರೂ ಆಧ್ಯಾತ್ಮಿಕ ಪ್ರಯತ್ನದಿಂದ ಅವರು ಕೂಟಸ್ಥರಾಗಿ (೬–೮) ಅಕ್ಷರ ಸ್ಥಿತಿಯನ್ನು-ಬ್ರಹ್ಮ ನಿರ್ವಾಣಸ್ಥಿತಿಯನ್ನು (೧೫–೧೬)-ಪಡೆಯ ಬಹುದು. ಹೀಗೆ ಉತ್ತೀರ್ಣರಾದ ಜೀವಭೂತರು ತಮ್ಮ ವ್ಯಕ್ತಿತ್ವವನ್ನು ತಳೆದು ಬ್ರಹ್ಮನಲ್ಲಿ ಸಮಾವಿಷ್ಟರಾಗುವರೆಂಬ ಕಲ್ಪನೆಯು ಗೀತೆಯಲ್ಲಿರು ವದು (೬–೮). **ಇದೇ ಗೀತೆಯ ಬ್ರಹ್ಮನಿರ್ವಾಣವು. ಇಂಥ ಅಕ್ಷರ ವ್ಯಕ್ತಿಗಳನ್ನು ಮೀರಿ ತಾನು ಸಾಕ್ಷಾತ್ ಮತ್ತು ಸ್ವಭಾವತಃ ಅಕ್ಷರ ನಾದುದರಿಂದ ಬ್ರಹ್ಮನನ್ನು ಪರಮಅಕ್ಷರನೆಂದು ಇಲ್ಲಿ** ಹೇಳಿದೆ ಬ್ರಹ್ಮನು ಕೂಟಸ್ಥ ಪುರುಷನಾದುದರಿಂದ ಅವನಿಗೆ ನಿಯತವಾದ ಭಾವವೊಂದುಂಟು. ಆ ಭಾವದಲ್ಲಿ ಅವನು **ಅಕ್ಷರನೆಂದು** ಹೇಳಿದುದಾಯಿತು. **ಅವನ ಅಂಥ ಅಕ್ಷರ ಭಾವಕ್ಕೆ ಅಧ್ಯಾತ್ಮವೆಂದು ಹೆಸರು.**"ಅಧ್ಯಾತ್ಮ"ವೆಂದರೆ ಗೀತೆಯಲ್ಲಿ "ಕೇವಲ ಆತ್ಮಕ್ಕೆ ಸಂಬಂಧಪಟ್ಟದು" ಎಂದು ಅರ್ಥವಾಗುವದಿಲ್ಲ ಅಧ್ಯಾ ತ್ಮವೆಂಬ ಶಬ್ದಕ್ಕೆ ಗೀತೆಯಲ್ಲಿ ಬಹು ಗೂಢವಾದ ಅರ್ಥವುಂಟು (೧೧–೧).

ಬ್ರಹ್ಮನು ಅಕ್ಷರನಾಗಿ ಉದ್ಭವಿಸಿದನು. ಯಜ್ಞ ಮಾಡಿ ಪುರುಷೋತ್ತಮನ ಯಜ್ಞಭೋಕ್ತೃತ್ವದ ಹಸಿವನ್ನು ಹಿಂಗಿಸಬೇಕೆಂದು ಇವನ ಉತ್ಪತ್ತಿಯಾಯಿತು. ಆದುದರಿಂದ ಇವನ ಭಾವವು ನಿರಂತರವೂ ಪುರುಷೋತ್ತಮನನ್ನು ಅನುಲಕ್ಷಿಸಿ ಇರುವದು. ಮತ್ತು ಸ್ವಾರ್ಥತ್ಯಾಗ ಪ್ರೇರಿತವಾಗಿರುವದು. ಪುರುಷೋತ್ತಮನ ವಿಷಯದ ಅವನ ಈ ನಿತ್ಯನಿರಂತರ ಕರ್ತವ್ಯಜಾಗೃತಿಯೇ ಅವನ ಚಿತ್ ಸ್ವಭಾವವೆಂದು ಹೇಳಲ್ಪಡುವದು. **ಈ ಚಿತ್ ಸ್ವಭಾವಕ್ಕೆ ಗೀತೆಯಲ್ಲಿ ಆಧ್ಯಾತ್ಮವೆಂಬ ಹೆಸರು.** ಅಧ್ಯಾತ್ಮವೆಂದರೆ ಪುರುಷೋತ್ತಮನಿಗಾಗಿ ನಿಯತವಾದ ಬ್ರಹ್ಮನ ಸ್ವಭಾವವು. ಈ ಅವನ ಸ್ವಭಾವವು ಮೇಲೆ ಹೇಳಿದಂತೆ ಅಕ್ಷರವೆನಿಸುವದು.

ಪರಮಾತ್ಮನು ಪುರುಷೋತ್ತಮನಾಗಿ ಸೃಷ್ಟಿಯ ಉತ್ಪತ್ತಿಯ ಸಂಕಲ್ಪವನ್ನು ಮಾಡಿದೊಡನೆ **ಕರ್ಮತತ್ವವು ಪ್ರಕಟವಾಯಿತು.** ಈ ಕರ್ಮತತ್ವದಲ್ಲಿ ಎರಡು ಪ್ರಕಾರಗಳುಂಟು. ಅವುಗಳಿಗೆ ಭಾವವೆಂದೂ ಭೂತವೆಂದೂ ಹೆಸರು. **ಭಾವವೆಂದರೆ ಪುರುಷ ಸ್ವಭಾವಕ್ಕೆ ಸಹಜವಾದ ಸುಖಲಾಲಸೆ; ಭೂತವೆಂದರೆ ಕೋರುವ ಸುಖವನ್ನು ಉಂಟುಮಾಡಿಕೊಳ್ಳಲು ಅನುವಾಗಿರುವ ಆ ಪುರುಷನ ಸಹಜ ಶಕ್ತಿಯು. ಇದಕ್ಕೆ ಪ್ರಕೃತಿಯೆಂದು ಹೆಸರು.** ಆದುದರಿಂದ ಜೀವಭೂತರಲ್ಲಿ ಪುರುಷ ಹಾಗು ಪ್ರಕೃತಿ ಸ್ವಭಾವಗಳು ಅಂದರೆ ಸುಖಾಭಿಲಾಷೆಯೂ ಆ ಸುಖವನ್ನು ಉಂಟುಮಾಡಿಕೊಳ್ಳುವ ಶಕ್ತಿಯೂ ಕರ್ಮತತ್ವದಿಂದ ಪ್ರಕಟವಾಗುವವು.

**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಂ ।**
**ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ** ॥ ೪ ॥

ಪುರುಷಸ್ವಭಾವಸಹಜವಾದ ಸುಖಾಭಿಲಾಷೆಯು-ಭಾವವು-ಜೀವಭೂತನಲ್ಲಿ ಎರಡು ಮಾರ್ಗದಿಂದ ತೃಪ್ತಿಪಡುವಂತೆ ಅವನ ಸ್ವಭಾವರಚನೆಯಾಗಿರುವದು. ಬ್ರಹ್ಮನಂತೆ ತನ್ನ ಆತ್ಮಸ್ವಭಾವದಿಂದ ಆಧ್ಯಾತ್ಮಿಕ ಸುಖವನ್ನು ಅವನು ಸಾಧಿಸಬಹುದು. ಇಲ್ಲವೆ ಇಂದ್ರಿಯಸ್ವಭಾವದಿಂದ ಆಸುರಸುಖವನ್ನಾದರೂ ಪಡೆಯಬಹುದು. ಇವುಗಳಲ್ಲಿ ಯಾವದೊಂದು ಸುಖವನ್ನು ಪಡೆಯುವದು ಜೀವನ ಸ್ವೇಚ್ಛೆಯನ್ನು ಅವಲಂಬಿಸಿದ್ದರೂ

ಇಂದ್ರಿಯ ಸ್ವಭಾವದಿಂದ ದೊರೆಯುವ ಸುಖವು ಜೀವನ ಶ್ರೇಯವನ್ನು ಮಣ್ಣುಪಾಲುಮಾಡುವದೆಂದು ಗೀತೆಯು ಸಾರಿ ಹೇಳುವದು. ಅದು ಹೇಗೆಯೇ ಇರಲಿ ಜೀವರು ಈ ಎರಡು ಸುಖಗಳಿಗಾಗಿ ಹಾರೈಸುವದುಂಟು. ಜೀವರ ಈ ಎರಡು ವಿಧದ ಹಂಬಲವೇ ದೈವಾಸುರ ಸಂಪದ್ವಿಭಾಗದಲ್ಲಿ ಮುಂದೆ ಹೇಳಿದೆ. ಈ ಶ್ಲೋಕದಲ್ಲಿ ಇವೆರಡು ಬಗೆಯ ಜೀವರ ತಾತ್ವಿಕ ನಿರ್ದೇಶವು ಉಂಟು.

ಸುಖಾಭಿಲಾಷೆಯಿಂದ ಇಂದ್ರಿಯ ಸ್ವಭಾವವನ್ನೇ ಅನುಸರಿಸುವವನು ತನ್ನ ಭೂತಸ್ವಭಾವಕ್ಕೆ ಪೂರ್ಣ ಅಧೀನನಾಗಿರುವದರಿಂದ **ಅವನನ್ನು ಅಧಿಭೂತನೆಂದು** ಅಂದರೆ ಭೂತಸ್ವಭಾವಕ್ಕೆ ತುತ್ತಾದವನೆಂದು ಹೇಳಿದೆ. ಪುರುಷಸ್ವಭಾವಕ್ಕೆ **ನಿಯತವಾದ ಅಧ್ಯಾತ್ಮ ಸುಖವನ್ನೇ ಬಯಸುವವನು ಪುರುಷನೆಂದೇ ಹೇಳಲ್ಪಡುವನು.** ಇವನು ತನ್ನ ಇಂದ್ರಿಯ ಸ್ವಭಾವವನ್ನು ಯಥಾಯೋಗ್ಯವಾಗಿ ಅಂಕೆಯಲ್ಲಿಟ್ಟುಕೊಳ್ಳುವದರಿಂದ ಇವನಲ್ಲಿ ಅಧ್ಯಾತ್ಮಸ್ವಭಾವದ ಪ್ರಾಬಲ್ಯವು ವೃದ್ಧಿಪಡುವದು. ಅಧ್ಯಾತ್ಮ ಸ್ವಭಾವದ ಈ ಪ್ರಾಬಲ್ಯವನ್ನೇ (೧೬ನೆಯ ಅಧ್ಯಾಯದಲ್ಲಿ) ದೈವೀ ಸಂಪತ್ತೆಂದು ಹೇಳಿದೆ. ಈ ಕಾರಣ, **ದೈವೀಸಂಪತ್ತನ್ನು ಕಾಪಾಡಿಕೊಂಡ ಪುರುಷನನ್ನು ಅಧಿದೈವನೆಂದು** ಅಂದರೆ ದೈವೀಸಂಪತ್ತುಳ್ಳವನೆಂದು ಇಲ್ಲಿ ಹೇಳಿದೆ. ಬುದ್ಧಿಯೋಗ ಶಾಸ್ತ್ರಾನುಸಾರವಾಗಿ ವಿಜ್ಞಾನದೃಷ್ಟಿಯಿಂದ ಅಧಿಭೂತ ಮತ್ತು ಅಧಿದೈವವೆಂಬ ಶಬ್ದಗಳಿಗೆ ಮೇಲೆ ಹೇಳಿದ ಅರ್ಥವೇ ಉದ್ದಿಷ್ಟವಾಗಿದೆ. ಅಧ್ಯಾತ್ಮಭಾವದಿಂದ ಶ್ರೀಕೃಷ್ಣನನ್ನು ಶರಣುಹೋದರೆ ಆ ಶಬ್ದಗಳ ಇಂಥ ವಿಜ್ಞಾನಪರವಾದ ಅರ್ಥವು ವಿಶದವಾಗುವದು. ಆದರೆ ಕೇವಲ ರೂಢಾರ್ಥವನ್ನೇ ಗಮನಿಸಿ ಈ ಶಬ್ದಗಳನ್ನು ಈ ಸಂದರ್ಭದಲ್ಲಿ ತಿಳಿಯುವದರಿಂದ ಅರ್ಥಹಾನಿಯಾಗುವದು.

ಕರ್ತೃವಿನ ಯೋಗಭಾವದಿಂದ ಕೂಡಿದ ಕರ್ಮವನ್ನು—ಯಜ್ಞವನ್ನು—ಅವನ ಶರೀರದಲ್ಲಿದ್ದು ಸ್ವೀಕರಿಸುವ **ಅಧಿಯಜ್ಞನು ಶ್ರೀಕೃಷ್ಣ ಪುರುಷೋತ್ತಮನೇ** ಎಂದು ಅರ್ಜುನನು ತಿಳಿಯತಕ್ಕದ್ದು. ಶರೀರದಲ್ಲಿ ಜೀವಪುರುಷನೊಂದಿಗೆ ಅವನು ಹೇಗೆ ಸಹವಾಸಿಯಾಗಿರುವನು, ಅಲ್ಲಿ ಅವನ ವಿವಿಧ ಭಾವಗಳು ಹೇಗಿರುವವು ಎಂಬ ವಿವರಣೆಯು ಮುಂದೆ ಬರುವದು

(೧೩–೨೨). ಪುರುಷೋತ್ತಮ ಶ್ರೀಕೃಷ್ಣನೇ ಈ ಶರೀರದೊಳಗಿನ ಅಧಿಯಜ್ಞನು ಎಂದು ಅರ್ಜುನನು ತಿಳಿಯತಕ್ಕದ್ದು.

**ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಂ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ॥೫॥**

ಅಂತ್ಯಕಾಲದಲ್ಲಿ ಪುರುಷೋತ್ತಮ ಶ್ರೀಕೃಷ್ಣನನ್ನೇ ಸ್ಮರಿಸುತ್ತ ಯಾರು ತಮ್ಮ ದೇಹವನ್ನು ತ್ಯಾಗಮಾಡುವರೋ ಅವರು ಶ್ರೀ ಕೃಷ್ಣನ ಭಾವವನ್ನು ಸೇರುವರೆಂಬಲ್ಲಿ ಸಂದೇಹವಿಲ್ಲ.

**ಶ್ರೀಕೃಷ್ಣನ ಭಾವವನ್ನು ಸೇರುವದೆಂದರೆ ಯಜ್ಞಭೋಕ್ತೃತ್ವ ಪ್ರಭುತ್ವಗಳನ್ನು ಪಡೆಯುವ ಅವನ ಸಂಕಲ್ಪವನ್ನು ನೆರವೇರಿಸುವದು** ಎಂದರ್ಥ. ಅವನ ಪ್ರಜೆಗಳೆಲ್ಲ ಅವನ ಪ್ರಭುತ್ವವನ್ನು ಮನ್ನಿಸಬೇಕೆಂಬುದೇ ಸೃಷ್ಟಿಯೊಳಗಿನ ಅವನ ಸಂಕಲ್ಪವು (೯.೨೪). ಇದನ್ನು ನೆರವೇರಿಸುವದರಿಂದ ಅವರು ಅವನ ಭಾವವನ್ನು ಸೇರುವರೆಂದು ಹೇಳುವದೇ ಈ ಶ್ಲೋಕದ ಉದ್ದೇಶವು.

ಒಂದು ವಸ್ತುವು ಸಜಾತಿಯಲ್ಲಿ ಕೂಡಿ ಏಕರೂಪವಾಗುವಂತೆ ಜೀವರು ಪರಮಾತ್ಮನಲ್ಲಿ ಕೂಡಿ ಹೋಗುವರೆಂದು ಇದರ ಅರ್ಥವಲ್ಲ.

**ಯಂ ಯಂ ವಾಪಿ ಸ್ಮರನ್ಭಾವಂ ತ್ಯಜತ್ಯಂತೇ ಕಲೇವರಂ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥೬॥**

ಶರೀರತ್ಯಾಗ ಮಾಡುವಾಗ ತನ್ನನ್ನು ಸ್ಮರಿಸುವವರು ತನ್ನಭಾವವನ್ನೇ ಸೇರುವರೆಂದು ಮೇಲಿನ ಶ್ಲೋಕದಲ್ಲಿ ಹೇಳಿದೆ. ಇದು ಶ್ರೀಕೃಷ್ಣನು ತನಗಾಗಿ ಮಾಡಿಕೊಂಡ ನಿಯಮವಲ್ಲ; ಮನುಷ್ಯಸ್ವಭಾವದ ಒಂದು ಸರ್ವಸಾಧಾರಣ ನಿಯಮವಾಗಿದೆ. ಶರೀರವನ್ನು ಬಿಟ್ಟು ಹೋಗುವಾಗ ಕೊನೆಯ ಹೊತ್ತಿನಲ್ಲಿ ಆವ ಭಾವವನ್ನು ಮನುಷ್ಯನು ಸ್ಮರಿಸುತ್ತಿರುವನೋ ಆ ಭಾವವನ್ನೇ ಅವನು ಸೇರುವನು ಹೀಗೆ ಅಂತ್ಯಕಾಲದಲ್ಲಿ ಯಾವದೊಂದು ಭಾವವು ಸ್ಥಿರವಾಗುವದಕ್ಕೆ ಆಜನ್ಮವೂ ಅದರ ಚಿಂತನೆಯನ್ನು ಮಾಡುತ್ತಿರಬೇಕಾಗುವದು. ಇದಾದರೂ ಮನುಷ್ಯಸ್ವಭಾವದ ನಿಯಮವು.

**ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುದ್ಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ ॥ ೭ ॥**

ಆದುದರಿಂದ ಮರಣಸಮಯದಲ್ಲಿ ಮಾತ್ರ ತಪ್ಪದೆ ಶ್ರೀಕೃಷ್ಣನನ್ನು ನೆನಿಸಿದರಾಯಿತೆಂದು ಅರ್ಜುನನು ಯೋಚಿಸಬಾರದು. ನಿತ್ಯನಿರಂತರವೂ ಅವನು ಶ್ರೀಕೃಷ್ಣನನ್ನೇ ಮನಸ್ಸಿನಲ್ಲಿಟ್ಟುಕೊಂಡು ನಡೆಯಬೇಕು. ಈಗ ಯುದ್ಧ ವನ್ನಾದರೂ ಅವನು ಈ ಬುದ್ಧಿಯಿಂದಲೇ ಮಾಡಬೇಕು. ಹೀಗೆ ತನ್ನ ಮನಸ್ಸನ್ನೂ ಬುದ್ಧಿಯನ್ನೂ ಶ್ರೀಕೃಷ್ಣನಿಗೆ ಅರ್ಪಿಸಿದರೆ ಅಂತ್ಯಕಾಲಕ್ಕೆ ಅರ್ಜುನನು ಅವನನ್ನು ಸೇರುವದರಲ್ಲಿ ತಿಲಮಾತ್ರವೂ ಸಂದೇಹವಿಲ್ಲ.

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥ ೮ ॥**

ಬುದ್ಧಿಯನ್ನು ಹೀಗೆ ಯೋಗಯುಕ್ತವಾಗಿ ಮಾಡುವ ಅಭ್ಯಾಸವನ್ನು ಆಚರಿಸುತ್ತಿರುವವನು ಅಧ್ಯಾತ್ಮರತನೂ ಏಕಾಗ್ರ ಬುದ್ಧಿಯುಳ್ಳವನೂ ಆಗು ವನು. ಆತನ ಬುದ್ಧಿಯು ಮನಸ್ಸನ್ನು ಅನುಸರಿಸಿ ಬಾಹ್ಯಸ್ಪರ್ಶಗಳಿಗಾಗಿ ಹಾತೊರೆಯುವದನ್ನು–ವ್ಯಭಿಚಾರವನ್ನು–ಬಿಟ್ಟುಬಿಡುವದು. ದಿವ್ಯನಾದ ಪರಮಪುರುಷನನ್ನೇ ಚಿಂತಿಸುತ್ತಿರುವ ಇಂಥ ಯೋಗಿಯು ಆ ಪುರುಷ ನನ್ನೇ ಸೇರುವನು.

**ಕವಿಂ ಪುರಾಣಮನುಶಾಸಿತಾರ ।**
**ಮಣೋರಣೀಯಾಂಸಮನುಸ್ಮರೇದ್ಯಃ ॥**
**ಸರ್ವಸ್ಯ ಧಾತಾರಮಚಿಂತ್ಯರೂಪ ।**
**ಮಾದಿತ್ಯವರ್ಣಂ ತಮಸಃ ಪರಸ್ತಾತ್ ॥ ೯ ॥**

**ಪ್ರಯಾಣಕಾಲೇ ಮನಸಾಚಲೇನ ।**
**ಭಕ್ತ್ಯಾಯುಕ್ತೋ ಯೋಗಬಲೇನ ಚೈವ ॥**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್ ।**
**ಸ ತಂ ಪರಂ ಪುರುಷಮುಪೈತಿ ದಿವ್ಯಂ ॥ ೧೦ ॥**

ಸರ್ವಜ್ಞನನ್ನು, ಪುರಾಣಪುರುಷನನ್ನು, ಸೃಷ್ಟಿಯ ಮೇಲಿನ ಸರ್ವ ಶ್ರೇಷ್ಠನಾದ ಅಧಿಕಾರಿಯನ್ನು ಸೂಕ್ಷ್ಮಕ್ಕಿಂತಲೂ ಸೂಕ್ಷ್ಮನನ್ನು, ಎಲ್ಲಕ್ಕೂ ಆಧಾರನಾದವನನ್ನು, ಅಚಿಂತ್ಯನನ್ನು ಅಂದರೆ ಯಾವನನ್ನು ಆ ಮೂಲಾಗ್ರ ವಾಗಿ ಚಿಂತಿಸುವದು ಶಕ್ಯವಲ್ಲವೋ ಅಂಥವನನ್ನು, ತೇಜದಲ್ಲಿ ಸೂರ್ಯ ನಿಗೆ ಸಮಾನನಾದವನನ್ನು ಅಂಧಕಾರವನ್ನು ಮೀರಿದವನನ್ನು ಅಂದರೆ ಅಜ್ಞಾನವಾಗಲಿ ಪಾಪವಾಗಲಿ ಯಾವನನ್ನು ಸೋಂಕುವದಿಲ್ಲವೋ ಅವ ನನ್ನು ಸ್ಮರಿಸುತ್ತ ಮನಸ್ಸನ್ನು ನಿಶ್ಚಲಗೊಳಿಸಿ ಭಕ್ತಿಯಿಂದ ಕೂಡಿದವನಾಗಿ ಯೋಗಬಲದಿಂದ ಹುಬ್ಬುಗಳ ನಡುವೆ ಪ್ರಾಣವನ್ನು ಸ್ಥಿರಪಡಿಸಿ ಮರಣ ವನ್ನು ಹೊಂದುವವನು ಆ ದಿವ್ಯನೂ ಪರಮನೂ ಆದ ಪುರುಷನನ್ನು ಸೇರುವನು.

ಅಚಿಂತ್ಯನೆಂದರೆ ಚಿಂತನೆಗೆ ಸರ್ವಥಾ ಅಗಮ್ಯನೆಂದು ತಿಳಿಯ ಬಾರದು. ಅವನು ಜ್ಞೇಯನೆಂದೂ ಜ್ಞಾನಗಮ್ಯನೆಂದೂ ಗೀತೆಯಲ್ಲಿ ಹೇಳಿದೆ (೧೩–೧೭). ಅವನನ್ನು ಸಂಪೂರ್ಣವಾಗಿ ಆಕಲನಮಾಡುವದು, ಮನುಷ್ಯನಿಗೆ ಶಕ್ಯವಲ್ಲೆಂದು ಅಚಿಂತ್ಯನು. ಆದರೂ ಶ್ರದ್ಧೆಯುಳ್ಳ ಮನುಷ್ಯ ನಿಗೆ ಎಲ್ಲ ಪರಿಸ್ಥಿತಿಯಲ್ಲಿ ಅನುಭವಗಮ್ಯನು.

**ಯದಕ್ಷರಂ ವೇದವಿದೋ ವದಂತಿ ।**
**ವಿಶಂತಿ ಯದ್ಯತಯೋ ವೀತರಾಗಾಃ ॥**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ।**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥ ೧೧ ॥**

ಯಾವುದನ್ನು ವೇದವೇತ್ತರು ಅಕ್ಷರನೆಂದು ಹೇಳುವರು, ನಿಸ್ಪೃಹ ರಾದ ಯತಿಗಳು ಯಾವುದರಲ್ಲಿ ಪ್ರವೇಶಿಸುವರು, ಯಾವುದನ್ನು ಸೇರಲು ಹವಣಿಸಿ ಅವರು ಬ್ರಹ್ಮಚರ್ಯವನ್ನು ಆಚರಿಸುವರು ಆ ಪದವನ್ನು ಕುರಿತು ಶ್ರೀಕೃಷ್ಣನು ಇನ್ನು ಸಂಕ್ಷೇಪವಾಗಿ ಹೇಳುತ್ತಾನೆ.

**ಸರ್ವದ್ವಾರಾಣಿ ಸಂಯಮ್ಯ ಮನೋಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ**
**ಯೋಗಧಾರಣಾಂ ॥ ೧೨ ॥**

**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಂ ॥ ೧೩ ॥**

ಇಂದ್ರಿಯಗಳನ್ನೆಲ್ಲ ನಿಯಮನಮಾಡಿ, ಮನಸ್ಸನ್ನು ಹೃದಯದಲ್ಲಿ ಸ್ಥಿರಪಡಿಸಿ, ಪ್ರಾಣಗಳನ್ನೆಲ್ಲ ಮಸ್ತಕಕ್ಕೆ ಆಕರ್ಷಿಸಿ ಯೋಗಧಾರಣವನ್ನು ಮಾಡುವವರು ಓಂ ಎಂಬ ಏಕಾಕ್ಷರ ಬ್ರಹ್ಮರೂಪ ಪ್ರಣವವನ್ನು ಉಚ್ಚರಿಸುತ್ತಲೂ ಪುರುಷೋತ್ತಮ ಶ್ರೀಕೃಷ್ಣನನ್ನು ಸ್ಮರಿಸುತ್ತಲೂ ದೇಹವನ್ನು ಬಿಡುವರು. ಇವರು ಪರಮಗತಿಯನ್ನು ಪಡೆಯುವರು. ಈ ಯೋಗಿಗಳನ್ನು ಹಿಂದೆಯೂ(೬-೧೧-೧೪-) ವರ್ಣಿಸಿದೆ.

**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥ ೧೪ ॥**

ಏಕಾಗ್ರವೂ ಅನನ್ಯವೂ ಆದ ಬುದ್ಧಿಯಿಂದ ನನ್ನನ್ನು ನಿತ್ಯದಲ್ಲಿಯೂ ಯಾರು ಸ್ಮರಿಸುವರೋ ಆ ನಿತ್ಯ ಬುದ್ಧಿಯೋಗ ಯುಕ್ತರಾದ ಯೋಗಿಗಳಿಗೆ ನಾನು ಸುಲಭನು. ಈ ಯೋಗಿಗಳನ್ನು ಹಿಂದೆ (೬. ೨೯-೩೨)ವರ್ಣಿಸಿದೆ.

**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಂ ।**
**ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥ ೧೫ ॥**

ಪುರುಷೋತ್ತಮ ಶ್ರೀಕೃಷ್ಣನನ್ನು ಪಡೆದು ಪರಮಸಂಸಿದ್ಧಿಯನ್ನು ಯಾವ ಮಹಾತ್ಮರು ಹೊಂದಿರುವರೋ ಅವರಿಗೆ ದುಃಖಕ್ಕೆ ತವರು ಮನೆಯೂ ಅಶಾಶ್ವತವೂ ಆದ ಪುನರ್ಜನ್ಮವು ಬಾರದು.

**ಆ ಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ ೧೬ ॥**

ಉತ್ತಮ ಗತಿಯೂ ಸಿದ್ಧಿಯೂ ಈ ಜಗತ್ತಿನಲ್ಲಿ ಅಥವಾ ಬ್ರಹ್ಮಲೋಕದಲ್ಲಿ ಕೊನೆಗಾಣುವಾಗ ಅಂದರೆ ಕೋರುವವನು ಶ್ರೀಕೃಷ್ಣನನ್ನು ಅಪೇಕ್ಷಿಸದೆ ಈ ಜಗತ್ತಿನೊಳಗಿನ ಅಥವಾ ಬ್ರಹ್ಮಲೋಕದೊಳಗಿನ ಉತ್ತಮ ಸ್ಥಿತಿಗಳನ್ನೇ ಕೋರುವಾಗ ಆ ಜೀವನಿಗೆ ಪುನರ್ಜನ್ಮವು ಸಂಭವಿಸದೆ

ಇರುವದಿಲ್ಲ. ಆದರೆ ಶ್ರೀಕೃಷ್ಣನನ್ನೇ ಕೋರಿ ಭವನನ್ನು ಸೇರುವವರಿಗೆ ಪುನರ್ಜನ್ಮದ ಸಂಭವವು ಎಂದಿಗೂ ಇರುವದಿಲ್ಲ.

**ಸಹಸ್ರಯುಗ ಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರ-**
**ವಿದೋ ಜನಾಃ ॥ ೧೭ ॥**

ಸಾವಿರಯುಗಗಳಾದರೆ ಬ್ರಹ್ಮನಿಗೆ ಒಂದು ಹಗಲು; ಅವನಿಗೆ ರಾತ್ರಿಯಾದರೂ ಹಾಗೆಯೇ ಸಾವಿರ ಯುಗಗಳ ಅನಂತರದಲ್ಲಿ ಮುಗಿಯುವದು. ಬ್ರಹ್ಮನ ಅಹೋರಾತ್ರಿಗಳನ್ನು ಅವರು ತಿಳಿದಿರುವರು. ಇಲ್ಲಿ ಸಾವಿರವೆಂದರೆ ಎಣಿಸಿ ಸಾವಿರವೆಂದು ತಿಳಿಯುವದಕ್ಕಿಂತಲೂ ಸಾವಿರಾರು ಎಂದೂ ಅರ್ಥವಿರಬಹುದು.

**ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ॥ ೧೮ ॥**

ಬ್ರಹ್ಮನ ಹಗಲು ಆರಂಭಿಸುವಾಗ ಅವನ ಅವ್ಯಕ್ತ ಸ್ಥಿತಿಯಿಂದಲೇ ಎಲ್ಲವೂ ವ್ಯಕ್ತ ಅಂದರೆ ಪ್ರಕಟ (ಉತ್ಪನ್ನ)ವಾಗುವದು. ಮತ್ತು ಅವನ ರಾತ್ರಿಯು ಪ್ರಾರಂಭವಾಗುವಾಗ ಯಾವದನ್ನು ಅವ್ಯಕ್ತವೆಂದು ಹೇಳುವರೋ ಆ ಬ್ರಹ್ಮನಲ್ಲಿಯೇ ಅದೆಲ್ಲವೂ ಲಯವಾಗುವದು.

ಪ್ರಾಣಿಗಳೆಲ್ಲರೂ ಬ್ರಹ್ಮನಿಂದಲೇ ಉಂಟಾಗುವರಲ್ಲದೆ ಅವನ ಹಗಲಿನಲ್ಲಿ ಅಂದರೆ ಸೃಷ್ಟಿಯು ಒಂದು ಕಲ್ಪವು ನಡೆದಿರುವ ವರೆಗೆ ಅವರು ಅವನಲ್ಲಿಯೇ ಯಾವದೊಂದು ಸ್ಥಿತಿಯಲ್ಲಿ ವಾಸಮಾಡುತ್ತಿರುವರೆಂದು ಈ ಶ್ಲೋಕದಿಂದ ತಿಳಿಯುವದು. ಮುಕ್ತಿಯನ್ನು ದೊರಕಿಸಲು ಬ್ರಹ್ಮನನ್ನೇ ಉಲ್ಲಂಘಿಸಿ ಸೃಷ್ಟಿಯಿಂದ ತಪ್ಪಿಸಿಕೊಂಡು ಹೋಗುವ ಕಲ್ಪನೆಯು ಗೀತೆಯಲ್ಲಿ ಇರುವದಿಲ್ಲೆಂದು ತೋರುವದು.

**ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ ೧೯ ॥**

ಈ ಭೂತಸಮುದಾಯುವೆಲ್ಲವೂ ಮೇಲೆ ಹೇಳಿದಂತೆ ಮರಳಿ ಮರಳಿ ಹುಟ್ಟುವದು; ಮತ್ತೆ ಬ್ರಹ್ಮನ ರಾತ್ರಿಯು ಒದಗಿದೊಡನೆ ಇಲ್ಲದಾಗುವದು. ಇಷ್ಟೇ ಅಲ್ಲ, ತಿರುಗಿ ಬ್ರಹ್ಮನ ಹಗಲು ಪ್ರಾರಂಭವಾಗಲು ಅವಶವಾಗಿ ಅಂದರೆ ಪ್ರಕೃತಿಗೆ ವಶವಾಗಿ ಪುನಃ ಉತ್ಪನ್ನವಾಗುವದು. ಇಲ್ಲಿ ಅವಶ ವೆಂದು ಹೇಳಿದುದಕ್ಕೆ "ತಮ್ಮ ತಮ್ಮ ಅವಶಿಷ್ಟ (ಪಾಪಪುಣ್ಯಗಳ) ಕರ್ಮ ಬಂಧನದ ಪ್ರಭಾವದಿಂದ ಪರವಶರಾಗಿ" ಎಂಬ ಅಭಿಪ್ರಾಯವು ಇರು ವಂತೆ ತೋರುವದಿಲ್ಲ. ಕರ್ಮಬಂಧನವು ಉಳಿಯುದಿದ್ದವರಿಗೆ ಈ ಕಲ್ಪನೆ ಯಂತೆ ಸೃಷ್ಟಿಯಲ್ಲಿ ಹುಟ್ಟಲಿಕ್ಕೆ ಅವಕಾಶವು ಉಳಿಯುವದಿಲ್ಲ. ಮತ್ತು ಜೀವರು ಮುಕ್ತರಾಗುತ್ತ ಹೋದಂತೆ ಸೃಷ್ಟಿಯೊಳಗಿನ ಜೀವರ ಸಂಖ್ಯೆಯು ಕ್ಷೀಣವಾಗಬೇಕು. ಎಲ್ಲ ಜೀವಭೂತಗಳ ಸಮುದಾಯವೂ ಪುನಃ ಪುನಃ ಜನ್ಮತಳೆವುದೆಂದು ಇಲ್ಲಿ ಹೇಳಿದೆ; ಹಾಗೂ ಯಾರಿಗೂ, ಮುಕ್ತ ಜೀವರಿಗೂ ಕೂಡ, ಬಿಡುಗಡೆ ಕೊಟ್ಟಂತಿಲ್ಲ. ಆದುದರಿಂದ ಮುಕ್ತಜೀವ ರಾದರೂ ಕಲ್ಪಾರಂಭದಲ್ಲಿ ಉತ್ಪನ್ನರಾಗುವರೆಂದೇ ತಿಳಿಯಬೇಕು. ಇನ್ನೊಂದು ವಿಶೇಷವೇನೆಂದರೆ, ಸೃಷ್ಟಿಯು ಆದಿಯಲ್ಲಿ ಉತ್ಪನ್ನವಾಗಲಿಕ್ಕೆ ತತ್ಪೂರ್ವ ಕಲ್ಪಗಳಿಂದ ಅವಶೇಷವಾಗಿ ಬಂದ ಕರ್ಮಬಂಧನವು ಅವಶ್ಯ ವೆಂದು ತಿಳಿದ ಪಕ್ಷಕ್ಕೆ ಮೊಟ್ಟಮೊದಲು ಕಲ್ಪವು ಯಾವಾಗ ಆರಂಭವಾ ಯಿತು, ಮತ್ತು ಜೀವಭೂತರಿಗೆ ಕರ್ಮಬಂಧನದ ಸಂಪರ್ಕವು ಕೂಡ ಇರಲ್ಲಿಲ್ಲ, ಆಗ ಜೀವರ ಉತ್ಪತ್ತಿಗೆಯಾವ ಕಾರಣವನ್ನು ಹೇಳಬಹುದು ?

ಸೃಷ್ಟಿಯುಂಟಾಗುವದಕ್ಕೆ ಇಂಥ ಆಗಂತುಕ ಕಾರಣಗಳು ಗೀತೆಗೆ ಅವಶ್ಯವಾಗಿರುವದಿಲ್ಲ.

ಶ್ರೀಕೃಷ್ಣಪುರುಷೋತ್ತಮನ ಕೇವಲ ಮಾಯೆಯಿಂದ ಅಂದರೆ ಇಚ್ಛೆ ಯಿಂದ ಅಥವಾ ಲೀಲೆಯಿಂದ ಅದು ಉಂಟಾಗುವದು. ಅವನ ಆ ಇಚ್ಛಾ ಶಕ್ತಿಯು ಬ್ರಹ್ಮನ ಮೂಲಕ ಪ್ರಕಟವಾಗಿ ಬ್ರಹ್ಮನಿಂದಲೇ ಎಲ್ಲ ಭೂತಗಳು ಉತ್ಪನ್ನವಾಗುವವು. ಹೀಗೆ ಯದೃಚ್ಛೆಗೆ (೪-೨೨) ಸ್ವಾಧೀನವಾಗಿ- **ಅವಶರಾಗಿ**-ಪ್ರಾಣಿಗಳೆಲ್ಲರೂ ಸಂಭವಿಸುವರು. ಆದುದರಿಂದಲೇ ಉತ್ಪನ್ನ ವಾಗುವ ವಿಷಯದಲ್ಲಿ **ಅವರು ಅವಶರು ಅಥವಾ ಪರತಂತ್ರರೆಂದು** ಈ ಶ್ಲೋಕದಲ್ಲಿ ಹೇಳಿದೆ.

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।**
**ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ೨೦ ॥**

ಬ್ರಹ್ಮನರಾತ್ರಿಯು ಬಂದೊಡನೆ ಭೂತಸಮುದಾಯವೆಲ್ಲ ಇಲ್ಲದಾಗುವದು; ಹಾಗೆಯೇ ಬ್ರಹ್ಮನಾದರೂ ಕಲ್ಪಾಂತದಲ್ಲಿ ಪುರುಷೋತ್ತಮನಲ್ಲಿ ಲೀನವಾಗುವನು. ಎಲ್ಲ ಸಂಭೂತ ವ್ಯಕ್ತಿಗಳಿಗೂ ಹೀಗೆ ಲಯವುಂಟು. ಆದರೆ ಈ ವ್ಯಕ್ತಿಗಳೆಲ್ಲ ಇಲ್ಲದಾದರೂ ಶಾಶ್ವತವಾಗಿರುವ ವ್ಯಕ್ತಿಯೊಬ್ಬನು ಇರುವನು. ಆ ವ್ಯಕ್ತಿಯ ಭಾವವು ಈ ಎಲ್ಲ ಭೂತಗಳ ಭಾವದಿಂದ ಭಿನ್ನವಾಗಿರುವದು. ಅವನು ಎಲ್ಲ ಅವ್ಯಕ್ತಗಳನ್ನೂ ಮೀರಿದ ಅವ್ಯಕ್ತನು. ಮೇಲಿನ ೧೮ನೆಯ ಶ್ಲೋಕದಲ್ಲಿ ಬ್ರಹ್ಮನನ್ನು ಅವ್ಯಕ್ತನೆಂದು ಹೇಳಿದೆ. ಈ ಅವ್ಯಕ್ತ ವ್ಯಕ್ತಿಯು ಆ ಬ್ರಹ್ಮನೆಂಬ ಅವ್ಯಕ್ತವ್ಯಕ್ತಿಗಿಂತ ಶ್ರೇಷ್ಠನು, ಆಚೆಗಿರುವವನು ಹಾಗು ಅವನನ್ನು ಮೀರಿದ ಸನಾತನನು. ಗೀತೆಯ ಮೇರೆಗೆ ಜೀವಭೂತವ್ಯಕ್ತಿಯೂ ಸನಾತನವು (೧೫-೭); ಅವ್ಯಕ್ತ ಬ್ರಹ್ಮನೂ ಸನಾತನನು ಮತ್ತು ಜನ್ಮವಿರಹಿತ ಈ ಪರಮವ್ಯಕ್ತಿಯು ಮೊದಲಿನ ಎರಡು ವ್ಯಕ್ತಿಗಳನ್ನೂ ಮೀರಿದ ಸನಾತನವೆನಿಸುವದು. ಗೀತೆಯಲ್ಲಿರುವ **ಈ ಸನಾತನತ್ವದ ತಾರತಮ್ಯವನ್ನು** ಗಮನಿಸಿದರೆ ಜಿಜ್ಞಾಸುಗಳ ದೃಷ್ಟಿಯು ತಿಳಿಯಾಗುವದೆಂದು ತೋರುವದು. ಈ ಶ್ಲೋಕದಲ್ಲಿ ಹೇಳಿರುವ ಎಲ್ಲವನ್ನು ಮೀರಿದ ವ್ಯಕ್ತಿಯು ಪುರುಷೋತ್ತಮನಾದ ಶ್ರೀಕೃಷ್ಣನೇ ಆಗಿರುವನು. ಮುಂದಿನ ಶ್ಲೋಕದಲ್ಲಿ ಇದು ವಿಶದವಾಗಿದೆ.

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಂ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೨೧ ॥**

ಹೀಗೆ ಅವ್ಯಕ್ತನೆಂದೂ ಅಕ್ಷರನೆಂದೂ ಹೇಳಲ್ಪಡುವವನನ್ನು ಪರಮಗತಿಯೆಂದು ಭಾವಿಸುವರು. ಅವನನ್ನು ಪಡೆದವರಿಗೆ ಪುನರ್ಜನ್ಮವು ಸಂಭವಿಸದು. ಪರಮಗತಿಯನ್ನು ಪಡೆದವರು ಸೇರುವ ಸ್ಥಾನವೇ ನನ್ನ ಪರಮನಿವಾಸವೆನಿಸುವದು (೧೫-೬).

ಜೀವಭೂತರಿಗೆ ಕೊನೆಯ ಗತಿಯಾಪದ್ದು ಅವ್ಯಕ್ತ ಅಥವಾ ಅಕ್ಷರ

ವೆನಿಸುವದೆಂಬ ಕಲ್ಪನೆಯು ವೇದಾಂತದಲ್ಲಿ ರೂಢವಾಗಿದೆ. ಅದು ನಿಜವೂ ಇರುವದು. ಆದರೆ ಈ ಕೊನೆಯ ಅವ್ಯಕ್ತವಾಗಲಿ ಅಕ್ಷರವಾಗಲಿ ಯಾವದಾಗಿರಬಹುದೆಂಬ ವಿಷಯದಲ್ಲಿ ಬಗೆಬಗೆಯ ಕಲ್ಪನೆಗಳು ಉಂಟಾಗಿರುವವು. ಆ ಕಲ್ಪನೆಗಳನ್ನು ಗೀತೆಯು ಒಪ್ಪುವದಿಲ್ಲ. ಪುರುಷೋತ್ತಮನಾದ ಶ್ರೀಕೃಷ್ಣನು ತಾನೇ ಎಲ್ಲವನ್ನೂ ಮೀರಿದ ಶ್ರೇಷ್ಠ ಅಕ್ಷರನೆಂದು ಹೇಳುವದು ಈ ಶ್ಲೋಕದ ಭಾವವು.

**ಪುರುಷಃ ಸ ಪರ: ಪಾರ್ಥ ಭಕ್ತ್ಯಾ ಲಭ್ಯ ಸ್ತ್ವನನ್ಯಯಾ ।**
**ಯಸ್ಯಾಂತಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಂ ॥ ೨೨ ॥**

ಜೀವರಿಗೆಲ್ಲ ಕೊನೆಯ ಗತಿಯಾದ ಈ ಅಕ್ಷರವು ಪುರುಷಸ್ವಭಾವವುಳ್ಳದ್ದೆಂಬದನ್ನು ಮೊದಲು ಗಮನಿಸಬೇಕು. ಇದೇ ಪುರುಷೋತ್ತಮನೆನಿಸುವದು.ಅವನು ಎಲ್ಲ ಪುರುಷರಲ್ಲಿ ಶ್ರೇಷ್ಠನು(೧೫-೧೯).ಅನನ್ಯ ಭಕ್ತಿಯಿಂದಲೇ ಈ ಪುರುಷೋತ್ತಮನನ್ನು ಸಾಧಿಸಬಹುದು (೧೧-೫೪). ಅವನು ಯಾವನೆಂಬದನ್ನು ಗುರುತಿಸುವದು ಕಠಿಣವಲ್ಲ ಎಲ್ಲ ಭೂತಗಳೂ ಅವನಲ್ಲಿಯೇ ವಾಸವಾಗಿರುವವು; ಮತ್ತು ಸೃಷ್ಟಿಯೆಲ್ಲವೂ ಅವನಿಂದಲೇ ಹಬ್ಬಿರುವದು.

**ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥ ೨೩ ॥**

ಒಂದು ವಿಶಿಷ್ಟಮರ್ಯಾದೆಯವರೆಗಿನ ಆತ್ಮೋನ್ನತಿಯನ್ನು ಪಡೆಯದೆ ಪುರುಷೋತ್ತಮನನ್ನು ಮನಗಾಣುವದು ಜೀವಭೂತರಿಗೆ ಸಾಧ್ಯವಲ್ಲ. ಹೀಗೆ ಆತ್ಮೋನ್ನತಿಯನ್ನು ಪಡೆದವರಾದರೂ ಪುರುಷೋತ್ತಮನ ದೃಷ್ಟಿಯಿಂದ ವಿವಿಧ ಯೋಗ್ಯತೆಯುಳ್ಳವರಾಗಿರುವರು. ಅವರ ಯೋಗ್ಯತೆಯು ಎಷ್ಟಿರುವದೆಂಬದನ್ನು ಅವನೇ ನಿರ್ಧರಿಸುವನು. ಅವನನ್ನು ಪಡೆಯಬೇಕೆಂದು ಪ್ರಯತ್ನಪಡುವ ಯೋಗಿಗಳು ಅನೇಕ ಜನ್ಮಗಳ ವರೆಗೂ ಆತ್ಮೋನ್ನತಿಯನ್ನು ಸಾಧಿಸುತ್ತಿರುವರೆಂದು ಹಿಂದೆ (೭-೧೯) ಹೇಳಿದೆ. ಹೀಗೆ ಅವರು ಪ್ರಯತ್ನ ಪಡುತ್ತಿರುವಾಗ ಅವರಿಗೆ ಯಾವ ಕಾಲದಲ್ಲಿ ಮುಕ್ತಿಯು ಪ್ರಾಪ್ತವಾಗುವದು ಮತ್ತು ಯಾವ ಕಾಲದವರೆಗೆ ಪ್ರಾಪ್ತವಾಗುವದಿಲ್ಲ ಎಂಬದನ್ನು ಇನ್ನು ಶ್ರೀಕೃಷ್ಣನು ಹೇಳುವನು.

**ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಂ ।**
**ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ೨೪ ॥**

ಈ ಶ್ಲೋಕವೂ ಮುಂದಿನ ಶ್ಲೋಕವೂ ಬಹಳವಾಗಿ ಚರ್ಚಿಸಲ್ಪಟ್ಟಿವೆ. ಸತ್ತವನ ಆತ್ಮವು ದೇವಯಾನ ಅಥವಾ ಪಿತೃಯಾನ ಮಾರ್ಗದಿಂದ ಹೋಗುವದೆಂದೂ ಆ ಮಾರ್ಗಗಳಲ್ಲಿ ಆತ್ಮನು ಮಾಡುವ ಪ್ರವಾಸದ ವರ್ಣನೆಯು ಈ ಶ್ಲೋಕಗಳಲ್ಲಿ ಇರುವದೆಂದೂ ಊಹಿಸುವದುಂಟು. ಆದರೆ ಇದು ಸಯುಕ್ತಿಕವಾಗಿ ತೋರುವದಿಲ್ಲ.

ಗೀತೆಯಲ್ಲಿ ಬುದ್ಧಿಯೋಗ ಶಾಸ್ತ್ರಾನುರೋಧವಾಗಿ ಹೇಳಿದ ಸಂಗತಿಗಳನ್ನೇ ಈ ಶ್ಲೋಕಗಳಲ್ಲಿ ಉಲ್ಲೇಖಿಸಿದೆಯೆಂದು ನಮಗೆ ತೋರುವದು. ಮುಕ್ತಿಯನ್ನೂ ಬ್ರಾಹ್ಮೀಸ್ಥಿತಿಯನ್ನೂ ಬ್ರಹ್ಮನಿರ್ವಾಣವನ್ನೂ ಕುರಿತು ಗೀತೆಯಲ್ಲಿ ಈ ವರೆಗೆ ವಿಸ್ತಾರವಾಗಿ ವಿವೇಚಿಸಿದೆ. ಇಷ್ಟೇ ಅಲ್ಲ; ಇನ್ನು ಮುಂದೆಯೂ ಈ ವಿಷಯಗಳ ವಿವೇಚನವು ಪುನಃ ಪುನಃ ಬರುವದು. ಹೆಚ್ಚೇಕೆ, ಮುಕ್ತಿ,ಬ್ರಾಹ್ಮೀಸ್ಥಿತಿ ,ಬ್ರಹ್ಮನಿರ್ವಾಣ ಇವುಗಳನ್ನು ಜೀವನು ಹೇಗೆ ಪಡೆಯುವನೆಂಬದನ್ನು ಹೇಳುವದೇ ಗೀತೆಯಲ್ಲಿ ತುದಿಮೊದಲು ಪ್ರದಿಪಾಸಲ್ಪಟ್ಟ ವಿಷಯವು. ಉಪಕ್ರಮದಲ್ಲಾಗಲಿ ಅಭ್ಯಾಸದಲ್ಲಾಗಲಿ ಉಪಸಂಹಾರದಲ್ಲಾಗಲಿ ಇವುಗಳನ್ನೇ ನಿಸ್ಸಂದಿಗ್ಧವಾಗಿ ಹೇಳಿದೆ. ಗೀತೆಯಲ್ಲೆಲ್ಲೆಲ್ಲಿಯೂಬಂದಿರುವ ವಿಷಯಗಳ ವಿವರಣೆಯಲ್ಲಿ ದೇವಯಾನದ ಅಥವಾ ಪಿತೃಯಾನದ ಉಲ್ಲೇಖವು ಇರುವದಿಲ್ಲ. ಗೀತೆಯ ವಿಚಾರಸರಣಿಯ ಮರ್ಯಾದೆಯಲ್ಲಿ ಈ ಮಾರ್ಗಗಳು ಬರುವದಿಲ್ಲೆಂದು ನಮ್ಮ ಅಭಿಪ್ರಾಯವು. ಹೀಗಿರುವಾಗ ಅಕಸ್ಮಾತ್ತಾಗಿ ಈ ಶ್ಲೋಕಗಳಲ್ಲಿ ಪರ್ಯಾಯದಿಂದ ಆ ಮಾರ್ಗಗಳನ್ನೆತ್ತಿಕೊಂಡು ವಿವೇಚಿಸುವದಕ್ಕೆ ನಿಮಿತ್ತವಿದ್ದಂತೆ ನಮಗೆ ಕಾಣುವದಿಲ್ಲ.ಮೃತಮನುಷ್ಯನ ಶರೀರವು ಅಗ್ನಿಸಂಪರ್ಕವನ್ನು ಹೊಂದುವದೆಂದು ಕ್ಷಣಹೊತ್ತು ಒಪ್ಪಿಕೊಂಡರೂ ಅವನ ಆತ್ಮವೂ ಅಗ್ನಿಸಂಪರ್ಕವನ್ನು ಹೊಂದುವದೆಂದು ಹೇಳಲಿಕ್ಕೆ ಗೀತೆಯಲ್ಲಿ ಆಧಾರವಿಲ್ಲ. ಅದುಕಾರಣ ದೇವಯಾನ ಪಿತೃಯಾನಗಳೂ ಅರ್ಚಿರಾದಿ ಧೂಮ್ರಾದಿ ಮಾರ್ಗಗಳೂ ಈ ಶ್ಲೋಕಗಳಲ್ಲಿ ಅಭಿಪ್ರೇತವಾಗಿರುವದು ಸಂಭವನೀಯವಲ್ಲ ಮತ್ತು ಹಾಗೆ ಅರ್ಥ ಹೇಳುವವರು ಸಹ ಆ ಅರ್ಥದಲ್ಲಿ ಸಂದೇಹವುಳ್ಳವರಾಗಿರುವರು.

ಜೀವಭೂತರು ಮೋಕ್ಷಕ್ಕಾಗಿ ವಿಧ ವಿಧವಾಗಿ ಪ್ರಯತ್ನ ಪಡುವರೆಂದು ಗೀತೆಯಲ್ಲಿ ಹಲವು ಸಾರೆ( ೫-೨೪-೨೮; ೧೩-೨೪ )ಹೇಳಿದೆ. ಮುಕ್ತಿಯನ್ನು ಪಡೆದು ಬ್ರಾಹ್ಮೀ ಸ್ಥಿತಿಯನ್ನು ಪ್ರವೇಶಿಸುವಾಗ ಇಂಥ ಜೀವರಿಗೆ ಪುನರ್ಜನ್ಮದ ಬಂಧನವು ತಪ್ಪುವದು ನಿಜ ವಿಧ ವಿಧವಾಗಿ ಪ್ರಯತ್ನ ಪಡುವ ಜೀವರು ಯಾವ ಬಗೆಯ ಆತ್ಮಸ್ಥಿತಿಯಲ್ಲಿರುವಾಗ ಬ್ರಾಹ್ಮೀಸ್ಥಿತಿಯನ್ನು ಪಡೆಯುವರೆಂಬದನ್ನು ರೂಪಕಾಲಂಕಾರದಿಂದ ಈ ಶ್ಲೋಕದಲ್ಲಿ ಹೇಳಿದೆ. ಇದು ವಿಶದವಾಗಬೇಕಾದರೆ ಈಶ್ಲೋಕದೊಳಗಿನ ರೂಪಕದ ಅರ್ಥವು ಮೊದಲು ತಿಳಿಯಬೇಕು. ಉತ್ತರಾಯಣ ಹಾಗು ಷಣ್ಮಾಸವೆಂಬ ಶಬ್ದಗಳು ಈ ಶ್ಲೋಕದಲ್ಲಿ ಕೇವಲ ಕಾಲವಾಚಕಗಳಲ್ಲವೆಂಬದನ್ನು ಗಮನಿಸಬೇಕು. **ಉತ್ತರಾಯಣವೆಂದರೆ ಜೀವಾತ್ಮನ ಊರ್ಧ್ವಗತಿಯೆಂದೂ** (೧೪-೧೮), ಷಣ್ಮಾಸವೆಂದರೆ ಆರು ಇಂದ್ರಿಯಗಳಿಂದ ಯುಕ್ತನಾದಂಥ ಜೀವನೆಂದೂ ಇಲ್ಲಿ ರೂಪಕವಿದೆ (೧೫-೭). ಅಗ್ನಿ, ಜ್ಯೋತಿ, ಅಹ, ಶುಕ್ಲವೆಂಬವು ಆ ಮುಮುಕ್ಷು ಜೀವರ ಅಂತ್ಯಕಾಲದ ಆತ್ಮಸ್ಥಿತಿಯನ್ನು ಸೂಚಿಸುವವು. ಈ ನಾಲ್ಕು ತರದ ಜೀವಭೂತ ಮುಮುಕ್ಷುಗಳ ವಿಷಯವಾಗಿಯೂ ಹಿಂದೆ (೫-೨೪-೨೮) ಉಲ್ಲೇಖಗಳು ಬಂದಿವೆ. ಅಲ್ಲಿ ನಾವು ಈ ಶ್ಲೋಕಕ್ಕೂ ಆ ಶ್ಲೋಕಗಳಿಗೂ ಇರುವ ಸಂಬಂಧವನ್ನು ತೋರಿಸಿರುವೆವು.

ಇನ್ನು ಆಯಾ ಮುಮುಕ್ಷುಗಳ ಆತ್ಮಸ್ಥಿತಿಯನ್ನು ಸೂಚಿಸುವದಕ್ಕಾಗಿ ಅವರಿಗೆ ಕೊಟ್ಟ ಹೆಸರುಗಳ ಭಾವವನ್ನು ತಿಳಿದುಕೊಂಡರೆ ಶ್ಲೋಕದ ಅರ್ಥವು ಸ್ಪಷ್ಟವಾಗುವದು. ಜೀವಭೂತರ ಸ್ವಭಾವದಲ್ಲಿರುವ ಮುಕ್ತಿಗೆ ಸಾಧಕವಾದ ಹಾಗು ಬಾಧಕವಾದ ಸಂಗತಿಗಳನ್ನು ಅನುಕ್ರಮವಾಗಿ ಅಗ್ನಿಯೆಂದೂ ಧೂಮವೆಂದೂ ಬೇರೆಡೆಯಲ್ಲಿ ಹೋಲಿಸಿ ಹೇಳಿದೆ (೧೮-೪೮). ಪುನರ್ಜನ್ಮದ ಬಂಧನವು ಜೀವರಿಗೆ ಅವರ ದೋಷಕ್ಕಾಗಿಯೇ ಸಂಭವಿಸುವದು ನಿಜ. ಆದರೂ ಮುಮುಕ್ಷುವಾದವನು ಮುಕ್ತನಾಗುವಾಗ ಅತ್ಯಂತ ನಿರ್ದೋಷನಾಗಬೇಕೆಂದು ಗೀತೆಯು ಒತ್ತಾಯ ಮಾಡುವದಿಲ್ಲ. ಹೆಚ್ಚುಕಡಿಮೆ ಸತ್ಪಾತ್ರರಾದ ಜೀವರನ್ನು ಪುರುಷೋತ್ತಮನು ತನ್ನ ದಯಾದಾತೃತ್ವಗಳಿಗಾಗಿ ಮತ್ತು ಅವರಲ್ಲಿ ತನಗಿರುವ ಅಭಿಮಾನಕ್ಕಾಗಿ ಕರ್ಮ ಬಂಧನದಿಂದ ಬಿಡಿಸುವನೆಂದೂ ವಿವಿಧ ಪಾತ್ರತೆಯುಳ್ಳ ಜೀವರು ಹೆಚ್ಚು ಕಡಿಮೆಯ

ಲ್ಲದೆ ಬ್ರಾಹ್ಮೀಸ್ಥಿತಿಯನ್ನು ತಲಪುವರೆಂದೂ ನಿಸ್ಸಂದಿಗ್ಧವಾಗಿ ಹೇಳಿದೆ (೧೦-೧೧). ಆದುದರಿಂದ ಈ ನಾಲ್ಕು ತರದ ಮುಮುಕ್ಷುಗಳಲ್ಲಿರುವ ಆತ್ಮ ಪಾವಿತ್ರ್ಯದೊಳಗಿನ ತಾರತಮ್ಯವನ್ನು ತೋರಿಸುವದಕ್ಕಾಗಿಯೇ ಈ ಶ್ಲೋಕದಲ್ಲಿ ಅಗ್ನಿ, ಜ್ಯೋತಿ,ಅಹ, ಶುಕ್ಲವೆಂಬ ನಾಲ್ಕು ಹೆಸರುಗಳನ್ನು ಕಲ್ಪಿಸಿದೆ.

ವಿಜ್ಞಾನದಿಂದುಂಟಾಗುವ ಆತ್ಮದ ಪರಿಶುದ್ಧತೆಯಿಂದಲೇ ಕೊನೆಯಲ್ಲಿ ಮುಕ್ತಿಯು ದೊರೆಯುವದು. ಹೀಗೆ ಮುಕ್ತಿಯನ್ನು ಪಡೆಯುವವನಿಗೆ ಆತ್ಮದ ಪರಿಶುದ್ಧತೆಯು ನಿರಪೇಕ್ಷವಾಗಿ (unconditionally) ಸಾಧಿಸಿರುವದು. ಎಲ್ಲ ಭಾಗದಲ್ಲಿಯೂ ತಾನು ಪಡೆದ ಪರಿಣತಿಯನ್ನು ಅವನು ಆತ್ಮಸ್ವಭಾವದಲ್ಲಿಯೇ ಅನುಭವಿಸುವನು. ಅವನ ಆತ್ಮಸ್ವಭಾವವು ಅಂತಃಸುಖದಲ್ಲಿಯೇ ರಮಿಸುವದು; ಅಂತಃಶಾಂತಿಯಿಂದಲೇ ಸಮಾಧಾನ ಪಡುವದು; ಮತ್ತು ಅಂತಜ್ಞಾನದಿಂದಲೇ ಅಂದರೆ ಅಧ್ಯಾತ್ಮದೃಷ್ಟಿಯಿಂದಲೇ ಎಲ್ಲವನ್ನೂ ತಿಳಿಯುವದು. ಇಂಥ ಪರಿಣತನಾದ ಆತ್ಮನಿಗೆ ಬ್ರಾಹ್ಮೀ ಸ್ಥಿತಿಯಾಗಲಿ ಬ್ರಹ್ಮನಿರ್ವಾಣವಾಗಲಿ ಕೈಗೂಡುವವು. ಇಂಥ ಪರಿಪಕ್ವನೂ ಕಲ್ಮಷರಹಿತನೂ ಆದ ಆತ್ಮನಿಗೆ (೫-೨೪) ಇಲ್ಲಿ ಅಗ್ನಿಯೆಂಬ ರೂಪಕವನ್ನು ಕೊಟ್ಟಿದೆ.

ಅವನ ತರುವಾಯ, ತನ್ನ ಬುದ್ಧಿಸ್ವಭಾವದ ವಿಕಾಸದಿಂದ ಪೂರ್ಣತ್ವವನ್ನು ಪಡೆಯಲಿಚ್ಛಿಸುವವನು ಬರುವನು. ಆದರೆ ಬುದ್ಧಿಯಿಂದ ಇವನು ಪಡೆದ ಪೂರ್ಣತ್ವವು ಆತ್ಮದ ಪೂರ್ಣತ್ವದಂತೆ ನಿರಪೇಕ್ಷವಾದುದಲ್ಲ. ಬುದ್ಧಿಯ ಪೂರ್ಣತ್ವದೊಂದಿಗೆ ಆತ್ಮಸ್ವಭಾವದ ಪೂರ್ಣತೆಯಿಲ್ಲದಿದ್ದರೂ ಸಾಕಷ್ಟು ಪರಿಪಕ್ವತೆಯು (೫-೧೭) ಅವಶ್ಯವಾಗಿ ಬೇಕು. ಇಂಥವನು ಕಲ್ಮಷರಹಿತನಾಗಿರಬೇಕು; ಸಿದ್ವಂದ್ವನಾಗಿರಬೇಕು; ಆಧ್ಯಾತ್ಮಿಕ ಉನ್ನತಿಯ ಪ್ರಯತ್ನದಲ್ಲಿರಬೇಕು. ಈ ಪ್ರಕಾರದ ಯೋಗ್ಯತೆಯನ್ನು ಹೊಂದಿದ ಸಮದರ್ಶಿಗಾದರೂ ಬ್ರಹ್ಮನಿರ್ವಾಣವು ದೊರೆಯಬಹುದು. ಇಂಥ ಜ್ಞಾನಿಯ ಆತ್ಮಸ್ಥಿತಿಯನ್ನು ಇಲ್ಲಿ ಜ್ಯೋತಿಯೆಂದು ಹೇಳಿದೆ (೫-೨೫).

ರಾಜಯೋಗವನ್ನು ಅಭ್ಯಾಸ ಮಾಡಿ ತನ್ನ ಮನೋವಿಕಾರಗಳನ್ನೆಲ್ಲ ಜಯಿಸಿದ ಯೋಗಿಯು ಮುಕ್ತಿಗಾಗಿ ಪ್ರಯತ್ನಪಡುವಾಗ ಆತ್ಮೋನ್ನತಿಯನ್ನು ತಕ್ಕಮಟ್ಟಿಗೆ ಸಾಧಿಸಬೇಕೆಂಬ ನಿರ್ಬಂಧವಿರುವದು. ಹಾಗೆ ಸಾಧಿಸಿದರೆ ಇವನಿಗಾದರೂ ಮುಕ್ತಿಯೂ ಅದರೊಡನೆ ಬ್ರಾಹ್ಮೀಸ್ಥಿತಿಯೂ ತದನಂತರ ಬ್ರಹ್ಮನಿರ್ವಾಣವೂ ಕೈಸೇರುವವು (೫-೨೬). ಇವನ ಆತ್ಮಸ್ಥಿತಿಯನ್ನು ಇಲ್ಲಿ ಅಹವೆಂದು ಹೇಳಿದೆ.

ಪ್ರಾಣ ಮತ್ತು ಇಂದ್ರಿಯ ಸ್ವಭಾವಗಳನ್ನು ನಿರೋಧಿಸಿ ಅಥವಾ ನಿಗ್ರಹಿಸಿ ಮೋಕ್ಷಮಾರ್ಗವನ್ನಾಕ್ರಮಿಸುವವರು (೫-೨೭-೨೮) ಕರ್ಮಬಂಧನದಿಂದ ಮುಕ್ತರಾಗಿ ಶಾಂತಿಯನ್ನು ಪಡೆಯುವದರಲ್ಲಿ ಸಂದೇಹವಿಲ್ಲ. ಹೀಗೆ ಶಾಂತಿಯು ಕೈಗೂಡಿದ ಬಳಿಕ ಕೊನೆಯ ಧ್ಯೇಯವನ್ನು ಪಡೆಯುವದು ಅವರ ಸ್ವಾಧೀನವಾಗಿರುವದು. ಇಂಥವರ ಆತ್ಮಸ್ಥಿತಿಯನ್ನು ಇಲ್ಲಿ ಶುಕ್ಲವೆಂದು ಹೇಳಿದೆ.

ಕರ್ಮಬಂಧನದಿಂದ ಮುಕ್ತಿಯು, ಮುಕ್ತಿಯಿಂದ ಬ್ರಾಹ್ಮೀಸ್ಥಿತಿಯು, ಬ್ರಾಹ್ಮೀಸ್ಥಿತಿಯಿಂದ ಬ್ರಹ್ಮನಿರ್ವಾಣವು ಇವೇ ಆಧ್ಯಾತ್ಮಿಕ ಪರಿಣತಿಯ ಮೆಟ್ಟಲುಗಳಾಗಿವೆ. ಅಗ್ನಿ, ಜ್ಯೋತಿ, ಅಹ ಮತ್ತು ಶುಕ್ಲ ಎಂಬ ನಾಲ್ಕು ತರದ ಯೋಗಿಗಳಿಗೆ ಮೊದಲಿನ ಎರಡು ಮೆಟ್ಟಲುಗಳು ಹೆಚ್ಚುಕಡಿಮೆ ಸುಲಭಸಾಧ್ಯವಾಗಿರುವವು. ಅಂತ್ಯಕಾಲದ ಅವರ ಆತ್ಮಸ್ಥಿತಿಯಲ್ಲಿ ಪಾತ್ರತೆಯ ದೃಷ್ಟಿಯಿಂದ ವ್ಯತ್ಯಾಸವಿರುವದೇ ಈ ಹೆಚ್ಚುಕಡಿಮೆಗೆ ಕಾರಣವು. ಅವರಲ್ಲಿರಬೇಕೆಂದು ಹೇಳಿರುವ ಗುಣಗಳು ಯಾವವೆಂಬದನ್ನು ನೋಡಿದರೆ ಇದು ಸ್ಪಷ್ಟವಾಗಿ ಕಾಣುವದು. ಆತ್ಮಯೋಗಿಯ ಸ್ಥಿತಿಯು ಪರಿಪೂರ್ಣವಾದುದರಿಂದ ಅವನು ನಿಷ್ಕಲಂಕನೆಂಬದನ್ನು ಸೂಚಿಸುವದಕ್ಕಾಗಿ ಅವನಿಗೆ ಅಗ್ನಿಯೆಂಬ ಹೆಸರನ್ನಿಟ್ಟಿದೆ. ಉಳಿದ ಯೋಗಿಗಳ ಆತ್ಮಸ್ಥಿತಿಯು ಪೂರ್ಣತ್ವಾಭಿಮುಖವಾಗಿದ್ದರೂ ಸಿದ್ಧಿಯು ಅವರ ಮುಂದಿನ ಪ್ರಯತ್ನದ ಸಾಫಲ್ಯವನ್ನು ಅವಲಂಬಿಸಿರುವದು. ಅವರ ಸ್ಥಿತಿಗಳಲ್ಲಿರುವ ಅಧಿಕಾರದ ತಾರತಮ್ಯವನ್ನು ತೋರಿಸುವದಕ್ಕಾಗಿ ಅವರನ್ನು ಜ್ಯೋತಿ, ಅಹ, ಶುಕ್ಲ ಎಂದು ಬೇರೆಬೇರೆಯಾಗಿ ಶ್ರೀಕೃಷ್ಣನು ಹೇಳಿರುವನು.

ಅನುರೂಪವಾಗಿ ಪ್ರಯತ್ನಪಡುವ ಈ ಎಲ್ಲ ಯೋಗಿಗಳಿಗೂ ಪುರುಷೋತ್ತಮನಾದ ಶ್ರೀಕೃಷ್ಣನ ಕೃಪೆಯಿಂದ ಮುಕ್ತಿಸಾಧನೆಯು ಸುಲಭವಾಗಬಹುದೆಂಬುದರಲ್ಲಿ ಸಂದೇಹವಿಲ್ಲ (೩-೩೧). ಆದರೂ ಶ್ರೀಕೃಷ್ಣನ ಕೃಪೆಯುಂಟೆಂದು ಅವರು ಪ್ರಯತ್ನವನ್ನು ಬಿಟ್ಟು ಬಿಡುವದಕ್ಕೆ ಅವಕಾಶವಿಲ್ಲವೆಂಬುವದಾದರೂ ನಿಜವೇ.

ಈ ಪ್ರಕಾರ, ಅಗ್ನಿ ಜ್ಯೋತಿ ಅಹ ಶುಕ್ಲ ಎಂಬೀ ಆತ್ಮಸ್ಥಿತಿಗಳಲ್ಲಿರುವ ಷಣ್ಮಾಸರು ಅಂದರೆ ಆರು ಇಂದ್ರಿಯಗಳಿಂದ ಕೂಡಿದವರು (೧೫-೭) ಉತ್ತರಾಯಣರೆಂದರೆ ಊರ್ಧ್ವಗತಿಯಿಂದ ಅಥವಾ ಸಾತ್ವಿಕವೃತ್ತಿಯಿಂದ ಮುಕ್ತಿಗಾಗಿ ಪ್ರಯತ್ನಪಡುವಾಗ ದೇಹವನ್ನಿಟ್ಟರೆ, ಬ್ರಹ್ಮನನ್ನು ಸಂಪೂರ್ಣವಾಗಿ ತಿಳಿದವರಾದುದರಿಂದ ಬ್ರಹ್ಮನನ್ನೇ ಸೇರುವರು ಅಂದರೆ ಬ್ರಹ್ಮಸ್ಥಿತಿಯನ್ನು ಪಡೆಯುವರು.

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಂ ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥೨೫॥**

ಹಿಂದಿನ ಶ್ಲೋಕದ ಅರ್ಥವನ್ನು ನಾವು ವಿವರಿಸಿದಂತೆ ಗ್ರಹಿಸಿದರೆ ಈ ಶ್ಲೋಕದ ಅರ್ಥವೂ ಸುಲಭವಾಗುವದು.

ತನ್ನ ಪ್ರಯತ್ನದಿಂದ ಪುನರ್ಜನ್ಮದ ಬಂಧನವನ್ನು ಕಳೆದುಕೊಂಡವರ ವಿಷಯವಾಗಿ ಹಿಂದಿನ ಶ್ಲೋಕದಲ್ಲಿ ಹೇಳಿದೆ. ಈ ಶ್ಲೋಕದಲ್ಲಿ ಪುನರ್ಜನ್ಮದ ಮಡುವಿನಲ್ಲಿ ಸಿಕ್ಕಿರುವವರನ್ನು ಕುರಿತು ಹೇಳಿದೆ. ಅವರ ಆಧ್ಯಾತ್ಮಿಕ ಯೋಗ್ಯತೆಯನ್ನು ಇಲ್ಲಿ ಪರಾಮರಿಸುತ್ತಿರುವದರಿಂದ ಅವರನ್ನು ಯೋಗಿಗಳೆಂದು ಸಂಬೋಧಿಸಿರುವದು ಕೇವಲ ಔಪಚಾರಿಕವೇ ಸರಿ. ನಿಜವಾಗಿ ನೋಡಿದರೆ ಇವರು ಯೋಗಿಗಳೂ ಅಲ್ಲ, ಮುಮುಕ್ಷುಗಳೂ ಅಲ್ಲವೆಂದು ಕಂಡುಬರುವದು. ಮನುಷ್ಯಲೋಕದಲ್ಲಿ ಕರ್ಮಬಂಧನದ ಸಂದಡಿಯಲ್ಲಿ ಸಿಲುಕಿ ಪುನರ್ಜನ್ಮವೆಂಬ ಸಂಸಾರಸಾಗರದಲ್ಲಿ ತೇಲಿ ಮುಳುಗುತ್ತಿರುವವರನ್ನು ಈ ಶ್ಲೋಕವು ಸಂಬಂಧಿಸಿರುವದು

ಇಂಥವರನ್ನು ಆರ್ತರು, ಜಿಜ್ಞಾಸುಗಳು, ಅರ್ಥಾರ್ಥಿಗಳೆಂದು ಮೂರು ವಿಧವಾಗಿ ಗೀತೆಯಲ್ಲಿ ವಿಂಗಡಿಸಿದೆ (೭-೧೬). ಅವರು ಮಾಡಿದ

ಪೂರ್ವಸುಕೃತದಿಂದ—ಪುನರ್ಜನ್ಮವನ್ನು ಕಳೆದುಕೊಳ್ಳುವಷ್ಟು ಇಲ್ಲದೆ ಹೋದರೂ—ಪ್ರಸಂಗಾನುಸಾರವಾಗಿ ಇವರಿಗೆ ಪುರುಷೋತ್ತಮನ ಸ್ಮರಣೆಯುಂಟಾಗುವದು. ಆದರೆ ಮೂಢರು ಆಸುರರು ಮತ್ತು ನರಾಧಮರೆಂದು (೭–೧೫) ಸಂಬೋಧಿಸಲ್ಪಟ್ಟ ಇನ್ನೊಂದು ತರಗತಿಯವರು ಗೀತೆಯಲ್ಲಿ ವಿವರಿಸಲ್ಪಟ್ಟಿರುವರು. ಅವರಿಗೆ ಪುರುಷೋತ್ತಮನ ನೆನಪು ಅಪ್ಪಿತಪ್ಪಿ ಸಹ ಆಗುವದಿಲ್ಲ. ಈ ನಾಲ್ಕು ವಿಧದ ಜನರನ್ನು ಅನುಲಕ್ಷಿಸಿ ಈ ಶ್ಲೋಕದಲ್ಲಿ ಹೇಳಿದೆ. ಅದು ಹೇಗೆಂಬುದನ್ನು ಇನ್ನು ನೋಡುವ.

ಇವರಲ್ಲಿ ಜಿಜ್ಞಾಸುವನ್ನು ಧೂಮವೆಂದು ಹೇಳಿದೆ. ಇವನಲ್ಲಿ ಮಿಕ್ಕವರಿಗಿಂತ ದೈವೀಭಾವನೆಯು ಹೆಚ್ಚಾಗಿರುವದೆಂಬುದು ಸ್ಪಷ್ಟವು. ಆದರೂ ಅವನ ವೃತ್ತಿಯು ಮೇಲಿನ ಇಂದ್ರಿಯ ಸ್ವಭಾವದ ಬಲುಮೆಯು ಅವನ ಆಧ್ಯಾತ್ಮಿಕ ಭಾವನೆಯ ವರ್ಣವನ್ನು ಬಿಳುಪಿಗಿಂತ ಕಪ್ಪಿನ ಕಡೆಗೇ ಹೆಚ್ಚು ಎಳೆಯುವದು. ಆದುದರಿಂದ ಇವನಲ್ಲಿ ಶ್ರದ್ಧೆಯು ಇದ್ದರೂ ಇವನಿಗೆ ಧೂಮದ ಉಪಮೆಯನ್ನು ಕೊಟ್ಟಿರುವರು.

ಆರ್ತರಾಗಲಿ ಅರ್ಥಾರ್ಥಿಗಳಾಗಲಿ ಅಧ್ಯಾತ್ಮದೃಷ್ಟಿಯಿಂದ ಒಂದೇ ತರಗತಿಯಲ್ಲಿ ಬರುವರು. ಒಬ್ಬನು ಇಲ್ಲವೆಂದು ಬಳಲಿದರೆ ಇನ್ನೊಬ್ಬನು ಬೇಕು ಎಂದು ಬಳಲುವನು. ಇಷ್ಟೇ ಭೇದ. ಇಬ್ಬರ ಮೇಲೆಯೂ ಇಂದ್ರಿಯ ಸ್ವಭಾವದ ಅಮಲು ಸಮಾನವಾಗಿಯೇ ನಡೆಯುವದು. ಆದರೆ ಈ ಸಂದರ್ಭದಲ್ಲಿಯೂ ಪುರುಷೋತ್ತಮನ ನೆನಪು—ಅಪ್ರತ್ಯಕ್ಷವಾಗಿ ಕಾರ್ಯಾಸಕ್ತಿಗೋಸುಗವೇ ಆಗಲಿ—ಆಗಾಗ ಇವರಿಗೆ ಆಗುವದುಂಟು. ಇದಕ್ಕಾಗಿಯೇ ಇವರನ್ನು ರಾತ್ರಿಗೆ ಹೋಲಿಸಿದೆ. ರಾತ್ರಿಯು ಕತ್ತಲೆಯಿಂದ ತುಂಬಿದ್ದರೂ ಅದರಲ್ಲಿ ಹೆಜ್ಜೆ ಇಡುವಷ್ಟು ಬೆಳಕು ಕಾಣಬಹುದೆಂಬ ಅನುಭವವು ಕತ್ತಲೆಯಲ್ಲಿ ತಿರುಗುವವರಿಗೆ ಇರುವದಷ್ಟೇ.

**ಕೃಷ್ಣಶಬ್ದದಿಂದ ನಿರ್ದಿಷ್ಟರಾದವರೇ ಆಸುರ ನರಾಧಮರೆಂದು ತಿಳಿಯಬೇಕು.** ಇವರಲ್ಲಿ ದೈವೀಸಂಪತ್ತಿನ ಗಂಧವೂ ಇರುವದಿಲ್ಲ.

ಹೀಗೆ ಧೂಮ ರಾತ್ರಿ ಮತ್ತು ಕೃಷ್ಣ ಎಂಬ ಆತ್ಮಸ್ಥಿತಿಗಳಲ್ಲಿರುವಾಗ ಅವರು ಸರ್ವಕಾಲದಲ್ಲಿಯೂ ದಕ್ಷಿಣಾಯನರು ಅಂದರೆ ಅಧೋಗಾಮಿಗಳು (೧೬–೧೮) ಆಗಿರುವರೆಂದೂ ಷಣ್ಮಾಸರು ಅಂದರೆ ಮನಸ್ಸಮೇತ ಆರು

ಇಂದ್ರಿಯಗಳಿಂದ ಕೂಡಿರುವರೆಂದೂ ಮರಣಾನಂತರ ಮನೋಮಯವೃತ್ತಿಯಿಂದ ಚಂದ್ರಲೋಕವನ್ನು ಸೇರಿ ಪ್ರಗತಿಯನ್ನು ಪಡೆದು ಆ ಬಳಿಕ ಮರಳಿ ಜನ್ಮವೆತ್ತುವರೆಂದೂ ಇಲ್ಲಿ ಹೇಳಿದೆ

**ಶುಕ್ಲಕೃಷ್ಣೇ ಗತೀಹ್ಯೇತೇ ಜಗತಃ ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ ॥ ೨೬ ॥**

ಶುಕ್ಲ ಮತ್ತು ಕೃಷ್ಣವೆಂಬ ಈ ಎರಡು ಆಧ್ಯಾತ್ಮಿಕ ಗತಿಗಳೂ ಜಗತ್ತಿನಲ್ಲಿ ಪ್ರಾಣಿಗಳಿಗೆ ಶಾಶ್ವತವೆಂದು ಎಣಿಸಲ್ಪಟ್ಟಿರುವವು. ಶುಕ್ಲಗತಿಯಿಂದ ಪುನರ್ಜನ್ಮವು ತಪ್ಪುವವರೆಗೆ ಉತ್ತರೋತ್ತರ ಪ್ರಗತಿಯಾಗುತ್ತ ಹೋಗುವದು ಮತ್ತು ಕೃಷ್ಣಗತಿಯಿಂದ ಪುನರ್ಜನ್ಮವು ಅಪರಿಹಾರ್ಯವಾಗಿ ಬರುವದು.

ಈ **ಶುಕ್ಲಕೃಷ್ಣ ಗತಿಗಳು ಗೀತೆಯಲ್ಲಿ** ವರ್ಣಿಸಿರುವ ಊರ್ಧ್ವ ಮತ್ತು ಅಧೋಗತಿಯಿಂದಲೂ ದೈವಾಸುರ ಸಂಪತ್ತಿನಿಂದಲೂ ಬೇರೆಯಾದುವಲ್ಲವೆಂದು ಪುನಃ ಹೇಳುವದು ಅನವಶ್ಯವು.

**ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥ ೨೭ ॥**

ಯೋಗಿಗಳಾದವರು ತಮ್ಮ ಉನ್ನತಿಯನ್ನು ಸಾಧಿಸಲಿಕ್ಕಾಗಿ ಈ ಮಾರ್ಗಗಳನ್ನು ಅರಿಯಬೇಕು. ಯಾವ ಮನುಷ್ಯನೇ ಆಗಲಿ ಸ್ವಭಾವ ನಿಯಮಕ್ಕೆ ವಶನಾಗಿ ಇವೆರಡರೊಳಗೆ ಯಾವದೊಂದು ಮಾರ್ಗದಲ್ಲಿ ವ್ಯವಹರಿಸುತ್ತಲಿರುವನು. ಪುನರ್ಜನ್ಮವನ್ನು ತಪ್ಪಿಸಬೇಕಾದುದು ಅವಶ್ಯವು. ಏಕೆಂದರೆ, ಐಹಿಕದೃಷ್ಟಿಯಿಂದ ಅದು ದುಃಖಮಯವೂ ಪಾರಮಾರ್ಥಿಕ ದೃಷ್ಟಿಯಿಂದ ಬಂಜೆಯಾದುದೂ ಹುರುಳಿಲ್ಲದ್ದೂ ಆಗಿವೆ. ಅಧಿಭೂತ (೮-೪) ಸ್ವಭಾವದಿಂದ ಸಂಭವಿಸುವ ಜನ್ಮಗಳೇ ಪುನರ್ಜನ್ಮಗಳು. ಆದುದರಿಂದ ಅರ್ಜುನನು ಕೃಷ್ಣಮಾರ್ಗವನ್ನು ಬಿಟ್ಟುಬಿಡಬೇಕು. ಸರ್ವಕಾಲದಲ್ಲಿಯೂ ಶುಕ್ಲಮಾರ್ಗವನ್ನೇ ಅವಲಂಬಿಸಬೇಕು. ನಿಜವಾಗಿಯೂ ಯೋಗಿಯಾದವನಿಗೆ ಈ ಸಂಗತಿಗಳೆಲ್ಲ ತಿಳಿದಿರುವವು. ಅವನಿಗೆ ಎಂಥ ಸಂಕಟಸಮಯ

ದಲ್ಲಾಗಲಿ ತನ್ನ ವರ್ತನೆಯ ವಿಷಯದಲ್ಲಿ ಸಂದೇಹವು ಅಥವಾ ವ್ಯಾಮೋಹವು ಉಂಟಾಗುವದಿಲ್ಲ. ಆದುದರಿಂದ ಅರ್ಜುನನು ಇವುಗಳನ್ನೆಲ್ಲ ತಿಳಿದುಕೊಂಡು ಯೋಗಿಯಾಗಬೇಕು; ನಿತ್ಯನಿರಂತರವೂ ಯೋಗಯುಕ್ತ ನಾಗಿ ವರ್ತಿಸಬೇಕು.

**ವೇದೇಷು ಯಜ್ಞೇಷು ತಪಸ್ಸು ಚೈವ ।**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಂ ॥**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ ।**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಂ ॥ ೨೮ ॥**

ವೇದ, ಯಜ್ಞ, ತಪ ಮತ್ತು ದಾನಾದಿಗಳನ್ನಾಚರಿಸಿ ಪಡೆಯುವ ಪುಣ್ಯದ ಫಲವನ್ನೆಲ್ಲವನ್ನೂ ಇಂಥ ಯೋಗಿಯು ಪಡೆಯುವನಲ್ಲದೆ ಈ ಫಲ ಗಳನ್ನೆಲ್ಲ ಮೀರಿದ ಆದಿಮೂಲವೆನಿಸುವ ಪರಮಸ್ಥಾನವನ್ನು ಸಹ ಅವನು ದೊರಕಿಸುವನು.

ವೇದ, ಯಜ್ಞ, ತಪ ಮತ್ತು ದಾನಾದಿಗಳನ್ನು ಆಚರಿಸಿ ತಮ್ಮ ಪಾರಮಾರ್ಥಿಕ ಹಸಿವನ್ನು ಹಿಂಗಿಸುವವರಲ್ಲಿ ಬುದ್ಧಿಯೋಗಶಾಸ್ತ್ರದೃಷ್ಟಿ ಯಿಂದ ಕಲ್ಮಷವು ಸಂಪೂರ್ಣವಾಗಿ ಅಳಿಯದೆ ಉಳಿಯಬಹುದು. ಆದರೆ ಅವರು ಗಳಿಸುವ ಪುಣ್ಯವು ಸಿಕ್ಷಿತವು. ಇಂಥ ಪುಣ್ಯವಂತಿಕೆಗಾಗಿ ಇಹದಲ್ಲಿ ಅವರು ಅನೇಕ ಭೋಗಗಳನ್ನು ಖಂಡಿತವಾಗಿ ಪಡೆಯುವರು(೯–೨೦–೨೧). ಶ್ರೀಕೃಷ್ಣನು ವರ್ಣಿಸಿದ ಬುದ್ಧಿಯೋಗಿಯು ತನ್ನೊಳಗಿನ ಕಲ್ಮಷವನ್ನು ನಿಶ್ಶೇಷವಾಗಿ ಕಳೆದುಕೊಂಡು ಪರಮಪವಿತ್ರನಾಗುವನೆಂದೇ ಒಪ್ಪಿ ಕೊಳ್ಳುವ. ಆದರೂ ಯಜ್ಞ ದಾನ ತಪಗಳಿಂದ ಪ್ರಾಪ್ತವಾಗುವ ಯೋಗ ಕ್ಷೇಮದ ಉಪಭೋಗವಾದರೂ ಇವನಿಗೆ ಇಲ್ಲದೆ ಹೋಗುವದಲ್ಲವೇ? ಎಂಬ ಸಂದೇಹವು ಅರ್ಜುನನಿಗೆ ಉಂಟಾಗಬಹುದು. ಅದಕ್ಕೆ ಈ ಶ್ಲೋಕ ದಲ್ಲಿ ಸಮಾಧಾನವನ್ನು ಹೇಳಿದೆ.

ಬುದ್ಧಿಯೋಗಿಯಾದವನು ತನ್ನ ಯೋಗಕ್ಷೇಮವನ್ನು ಹುಡುಕು ವದಿಲ್ಲವೆಂಬದು ನಿಜ. ಅವನು ನಿರ್ಯೋಗಕ್ಷೇಮನಾಗಿರುವನು. ಆದರೆ ಅವನು ಅವುಗಳನ್ನು ಹುಡುಕುವದಿಲ್ಲವಾದುದರಿಂದ ಅವು ಅವನಿಗೆ ದೊರೆ

ಯವೆಂದು ತಿಳಿಯಬಾರದು. ಪ್ರಯಾಸಪಟ್ಟು ಪ್ರಯತ್ನಪೂರ್ವಕವಾಗಿ ಇತರರಿಗೆ ಸಾಧ್ಯವಾಗುವದಕ್ಕಿಂತಲೂ ಎಷ್ಟೋಮಡಿ ಹೆಚ್ಚು ಯೋಗ ಕ್ಷೇಮಾದಿಗಳು ಬದ್ಧಿಯೋಗಿಯಾದವನಿಗೆ ನಿರಾಯಾಸವಾಗಿ ಪ್ರಾಪ್ತ ವಾಗುವವು. ಇವುಗಳನ್ನು ಒದಗಿಸುವ ಆಲೋಚನೆಯನ್ನು ಅವನಿಗಾಗಿ ಶ್ರೀಕೃಷ್ಣನು ತಾನೇ ಮಾಡುವನಲ್ಲದೆ ಅವುಗಳ ಕೊರತೆಯು ಉಂಟಾಗ ದಂತೆ ನೋಡಿಕೊಳ್ಳುವನು(೯-೨೨). ಬುದ್ಧಿಯೋಗಿಯು ಈ ಭೋಗಗಳೆಲ್ಲ ವನ್ನೂ ಪಡೆದು ವೇದ ಯಜ್ಞ ತಪ ದಾನಾದಿಗಳಿಂದ ದೊರೆಯುವ ಸಿದ್ಧಿ ಯನ್ನು ಮೀರಿದ ಮೋಕ್ಷವನ್ನು ಸಹ ದೊರಕಿಸುವನು. ಆದುದರಿಂದ ಮೇಲಿನ ಶ್ಲೋಕದಲ್ಲಿ ಹೇಳಿದಂತೆ ಜ್ಞಾನವಿಜ್ಞಾನ ತೃಪ್ತನಾದ ಬುದ್ಧಿ ಯೋಗಿಯಾಗಲು ಅರ್ಜುನನು ಯತ್ನಿಸಬೇಕು.

ಎಂಟನೆಯ ಅಧ್ಯಾಯವು ಸಮಾಪ್ತವು.



ಓಂ

# ಒಂಬತ್ತನೆಯ ಅಧ್ಯಾಯವು



**ಅವತರಣಿಕೆ—**

ಬುದ್ಧಿಯೋಗಶಾಸ್ತ್ರಾನುಸಾರವಾಗಿ ಶ್ರೀಕೃಷ್ಣನು ಜ್ಞಾನವಿಜ್ಞಾನ ವನ್ನು ಏಳನೆಯ ಅಧ್ಯಾಯದಿಂದ ಹೇಳಲಾರಂಭಿಸಿದನು. ಅದರೊಳಗಿನ ವಿಜ್ಞಾನದ ಸ್ವರೂಪವನ್ನು ನಾವು ಎಂಟನೆಯ ಅಧ್ಯಾಯದ (ಅವತರಣಿ ಕೆಯ)ಲ್ಲಿ ತೋರಿಸಿರುವೆವು. ಆದರೆ ಅವನು ಮಾಡಿದ ನಿರೂಪಣೆಯೊಳಗಿನ ಶಾಸ್ತ್ರೀಯದೃಷ್ಟಿಯ ಲಕ್ಷಣವನ್ನು ಇನ್ನೂ ಸಮಾಧಾನ ಪೂರ್ವಕವಾಗಿ ಗ್ರಹಿಸಬೇಕಾಗುವದು. ವಿಷಯದ ಶಾಖೋಪಶಾಖೆಗಳನ್ನು ವಿಂಗಡಿಸಿ, ಅವುಗಳ ಒಳಭಾಗಗಳನ್ನು ನಿಶ್ಚಯಿಸಿ, ಒಂದೊಂದು ವಿಭಾಗಕ್ಕೆ ಸಂಬಂಧಿ ಸಿದ ಉಪಲಬ್ಧವಾದ ಸಮಾಚಾರಗಳನ್ನು ಕ್ರಮವಾಗಿ ಇರಿಸಿ, ಅವೆಲ್ಲವುಗಳ ಸಂಬಂಧವನ್ನು ವಿಶದಮಾಡಿ ಸಿದ್ಧಾಂತಗಳನ್ನು ಪ್ರಸ್ಥಾಪಿಸುವದೇ ಶಾಸ್ತ್ರೀಯ ನಿರೂಪಣಪದ್ಧತಿಯೆಂದು ಎಣಿಸಲ್ಪಡುವದು. ಇಂಥ ಶಾಸ್ತ್ರೀಯ ಪದ್ಧತಿಯು ಗೀತೆಯ ನಿರೂಪಣೆಯಲ್ಲಿಲ್ಲವೆಂಬದು ನಿರ್ವಿವಾದವು; ಆದರೆ ಆ ನಿರೂಪಣೆಯಲ್ಲಿ ಇಂಥ ಶಾಸ್ತ್ರೀಯಪದ್ಧತಿಯು ಇಲ್ಲವೆಂದು ಶಾಸ್ತ್ರೀಯ ದೃಷ್ಟಿಯೂ ಇರುವದಿಲ್ಲೆಂದು ಊಹಿಸುವದು ಯೋಗ್ಯವಾಗದು. ಆದರ ಶಾಸ್ತ್ರೀಯ ದೃಷ್ಟಿಯನ್ನು ನಾವು ಕಂಡುಕೊಂಡರೆ ಗೀತೆಯು ಅವಲಂಬಿ ಸಿದ ಸಂಭಾಷಣ ಪದ್ಧತಿಯಿಂದ ಶಾಸ್ತ್ರಕ್ಕೆ ಯಾವ ಕುಂದೂ ಬರುವ ದಿಲ್ಲೆಂದು ಸ್ಪಷ್ಟವಾಗುವದು. ಶ್ರೀಕೃಷ್ಣನು ಅರ್ಜುನನಿಗೆ ಹೇಳಬೇಕಾ ಗಿದ್ದುದು ವಿಜ್ಞಾನಶಾಸ್ತ್ರವೇ. ಆ ವಿಜ್ಞಾನದ ಮಹತ್ವವನ್ನು ಮೊದಲು ಏಳನೆಯ ಅಧ್ಯಾಯದಲ್ಲಿ ಹೇಗೆ ತಿಳಿಸಿರುವನೆಂಬದನ್ನು ನಾವು ವಿವರಿಸಿ ರುವೆವು. ವಿಜ್ಞಾನತತ್ವದ ಸರ್ವವ್ಯಾಪಿತ್ವವನ್ನೂ ಮಹತ್ವವನ್ನೂ ತಿಳಿಸಿ

ಹೇಳಿದ ಬಳಿಕ, ಗ್ರಹಿಸಬೇಕಾಗಿದ್ದ ತದಿತರವೇದಾಂತ ತತ್ವಗಳೆಲ್ಲವೂ ಈ ವಿಜ್ಞಾನದ ದೃಷ್ಟಿಯಿಂದ ಎಲ್ಲಿ ಹೇಗೆ ಬರುವವೆಂಬದನ್ನು ಹೇಳಬೇಕಾದುದೇ ಉಳಿಯುವದು. ಆ ವೇದಾಂತ ತತ್ವಗಳು ಪ್ರವಾಹಾನುರೂಪವಾಗಿ ಎದುರಿಗೆ ಬಂದಂತೆ ಅಥವಾ ತಾನು ಮನಸ್ಸಿನಲ್ಲಿ ಎಣಿಸಿದಂತೆ ತನ್ನ ವಿಜ್ಞಾನರೂಪವಾದ ದಿವ್ಯ ಒರೆಗಲ್ಲಿನ ಮೇಲೆ ಒರೆದುನೋಡಿ ಅದರ ಯೋಗ್ಯತೆಯನ್ನು ತಿಳಿಸಿಹೇಳುವ ಕ್ರಮವನ್ನೇ ಎಲ್ಲೆಲ್ಲಿಯೂ ಶ್ರೀಕೃಷ್ಣನು ಅನುಸರಿಸಿದಂತೆ ಕಂಡು ಬರುವದು. ಹೀಗೆ, ಎದುರಿಗೆ ಬಂದ ವಿಷಯಗಳನ್ನೆಲ್ಲ ಪರಾಮರಿಸುತ್ತ ಹೋಗಿದ್ದರೂ ವೇದಾಂತದಲ್ಲಿ ನೆಲೆಗೊಂಡ ಯಾವ ಕಲ್ಪನೆಯನ್ನೂ ಅರ್ಜುನನಂಥ ಜಿಜ್ಞಾಸುವಿಗೆ ಒದಗುವ ಯಾವ ಸಂಶಯವನ್ನೂ ಉಳಿಸದೆ ಶ್ರೀಕೃಷ್ಣನು ಗೀತೆಯಲ್ಲಿ ವಿಮರ್ಶಿಸಿರುವನೆಂದು ಧಾರಾಳವಾಗಿ ಹೇಳಬಹುದು. ಗೀತೆಯ ಈ ವಿಶಿಷ್ಟ ದೃಷ್ಟಿಯು ಅರ್ಜುನನಿಗೆ ತಿಳಿದುದರಿಂದಲೇ ಅವನು ಅದನ್ನು ಸಂಪೂರ್ಣವಾಗಿ ಮೆಚ್ಚಿದನು. ಅವನಿಗೆ ಕೊನೆಯಲ್ಲಿ ಯಾವ ಆಧ್ಯಾತ್ಮಿಕ ಸಂದೇಹಗಳೂ ಉಳಿಯುವವಿಲ್ಲ.

ಈಶ್ವರನು ತನಗಾಗಿಯೇ ಸೃಷ್ಟಿಯನ್ನು ನಿರ್ಮಿಸಿದನು. ಅಂಥ ಸೃಷ್ಟಿಯು ಅವನ ಭಕ್ತರಾದವರಿಗೆ ಅಧಿಷ್ಠಾನಭೂತವಾಗಿರುವದು. ಅವರೇ ಅದರಲ್ಲಿದ್ದು ಅದನ್ನು ಉಪಭೋಗಿಸುವವರು. ಈ ಭಕ್ತರಿಗೆ ಅವನ ಉಪಾಸನೆಯೇ ಕರ್ತವ್ಯವಾಗಿದೆ. ಹೀಗೆ ಮನುಷ್ಯನ ವೇದಾಂತವಿಷಯದ ಎಲ್ಲ ಜಿಜ್ಞಾಸೆಗೂ ಈಶ್ವರ, ಸೃಷ್ಟಿ, ಭಕ್ತ ಮತ್ತು ಉಪಾಸನೆ ಎಂಬವು ಚತುಃಸೂತ್ರಗಳಾಗಿವೆ. ಈ ಸೂತ್ರಗಳ ಪರಸ್ಪರ ಸಂಬಂಧವನ್ನೂ ಅವುಗಳನ್ನರಿತು ವರ್ತಿಸುವದರಿಂದಾಗುವ ಜೀವನ ಜೀವಿತದ ಸಾರ್ಥಕ್ಯವನ್ನೂ ವಿಶದವಾಗಿ ಹೇಳುವದೇ ಗೀತಾಶಾಸ್ತ್ರದ ಗುರಿಯು. ಈ ವಿಷಯಗಳನ್ನು ಕೇವಲ ಬುದ್ಧಿಯಿಂದ ಗ್ರಹಿಸುವದಲ್ಲದೆ ಅವುಗಳನ್ನು ತಮ್ಮ ಪುರುಷಸ್ವಭಾವದ ವೃತ್ತಿಯಲ್ಲಿ ಬೇರೂರುವ ಹಾಗೆ ಮಾಡಬೇಕು; ಮತ್ತು ಹೆಜ್ಜೆ ಹೆಜ್ಜೆಗೂ ಭಾವಿಸಿ ಅನುಭವಿಸಬೇಕು. ಈ ವಿಧಾನವನ್ನೇ ಇಲ್ಲಿ ವಿಜ್ಞಾನವೆಂದು ಶ್ರೀಕೃಷ್ಣನು ಉಪದೇಶಿಸುತ್ತಿರುವನು. ಈ ವಿಷಯಗಳನ್ನು ಗ್ರಹಿಸುವದಕ್ಕೆ ಬೇಕಾದಷ್ಟು **ಭೂತಪ್ರಕೃತಿಯ (೧೩-೩೪ ವಿವರಣೆ)** ಸಂಗತಿಗಳನ್ನೂ ಬೆರಿಸಿ ಹೇಳುತ್ತಿರುವನು. ಇವುಗಳಿಗೆ ಗೀತೆಯಲ್ಲಿ ಜ್ಞಾನವೆಂದು

ಹೆಸರು. ಹೀಗೆ ಜ್ಞಾನವಿಜ್ಞಾನ ನಿರೂಪಣೆಯು ಏಳನೆಯ ಅಧ್ಯಾಯದಿಂದ ಸಾಗಿ ಬಂದಿರುವದು. ಆದರೂ ಈ ವರೆಗಿನ ನಿರೂಪಣೆಯಲ್ಲಿ ಶಾಸ್ತ್ರೀಯ ಪದ್ಧತಿಯಾಗಲಿ ಅದಕ್ಕೆ ಸಂಬಂಧಿಸಿದ ಪರಿಭಾಷೆಯಾಗಲಿ ಇನ್ನೂ ಸೇರಿಸಲ್ಪಟ್ಟಿರುವದಿಲ್ಲ. ಕೇವಲ ವ್ಯವಹಾರದೃಷ್ಟಿಯಿಂದ ವಾಡಿಕೆಯೊಳಗಿನ ಸಾಧಾರಣಕಲ್ಪನೆಗಳನ್ನೂ ಶಬ್ದಗಳನ್ನೂ ಉಪಯೋಗಿಸಿ ಆಯಾತತ್ವಗಳನ್ನು ಬಿಂಬಿಸುವಕ್ರಮವೇ ನಡೆದಿದೆ. ಅರ್ಜುನನಿಗೆ ಈ ಕಲ್ಪನೆಗಳೆಲ್ಲ ಪರಿಚಿತವಾದ ಒಳಿಕ ಹದಿಮೂರನೆಯ ಅಧ್ಯಾಯದಲ್ಲಿ ಇವೇ ವಿಷಯಗಳನ್ನು ತಿರುಗಿ ವೇದಾಂತದ ಪರಿಭಾಷೆಯನ್ನನುಸರಿಸಿ ಕ್ಷೇತ್ರ, ಕ್ಷೇತ್ರಜ್ಞ, ಜ್ಞಾನ, ಪರಿಜ್ಞಾತೃ, ಜ್ಞೇಯ, ಪುರುಷ, ಪ್ರಕೃತಿ, ಎಂದು ವಿವರಿಸಿದೆ.

ಏಳನೆಯ ಅಧ್ಯಾಯದಿಂದ ಆರಂಭಿಸಿ ಶ್ರೀ ಕೃಷ್ಣನು ನಿರೂಪಿಸುತ್ತಲಿರುವ ಈಶ್ವರ, ಭಕ್ತಿ, ಸೃಷ್ಟಿ ಎಂಬ ವಿಷಯಗಳೇ ಒಂಬತ್ತನೆಯ ಅಧ್ಯಾಯದಲ್ಲಿಯೂ ಮುಂದುವರಿದಿದ್ದು ಕೊನೆಗೆ ಭಕ್ತನು ಮಾಡುವ ಉಪಾಸನೆಯನ್ನು ಅನುಲಕ್ಷಿಸಿ ವಿಸ್ತಾರವಾಗಿ ಹೇಳಿದಲ್ಲಿಗೆ ಈ ಅಧ್ಯಾಯವು ಮುಗಿಯುವದು. ಈಪ್ರಕಾರ ಗೀತೆಯೊಳಗಿನ ಶಾಸ್ತ್ರೀಯ ದೃಷ್ಟಿಯನ್ನೂ ವಿಷಯ ವಿಮರ್ಶೆಯ ಪದ್ಧತಿಯನ್ನೂ ಲಕ್ಷ್ಯಕ್ಕೆ ತಂದುಕೊಂಡರೆ ಸಂಭಾಷಣಪದ್ಧತಿಯನ್ನವಲಂಬಿಸಿರುವದರಿಂದ ಗೀತೆಯಲ್ಲಿ ಶಾಸ್ತ್ರೀಯವಾದ ಹೊಂದಿಕೆ ಕಂಡು ಬರುವದಿಲ್ಲೆಂದು ಸಾಧಾರಣವಾಗಿ ಪ್ರತಿಪಾದಿಸಲ್ಪಡುವದು ಯಥಾರ್ಥವಲ್ಲವೆಂದು ತಿಳಿದು ಬರುವದು.

ಶ್ರೀಭಗವಾನುವಾಚ—

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥ ೧ ॥**

ನೀನು ಅಸೂಯೆಯಿಲ್ಲದವನು. ಆದುದರಿಂದ ಗುಹ್ಯತಮವಾದ ವಿಜ್ಞಾನದಿಂದ ಕೂಡಿದ ಜ್ಞಾನವನ್ನು ನಾನು ನಿನಗೆ ಹೇಳುವೆನು. ಇದನ್ನು ತಿಳಿದು ನೀನು ಅಶುಭದಿಂದ ಮುಕ್ತನಾಗುವೆ.

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥ ೨ ॥**

ನಾನು ಹೇಳುತ್ತಲಿರುವ ಈ ವಿಜ್ಞಾನದಿಂದ ಕೂಡಿದ ಜ್ಞಾನವು ಎಲ್ಲ ವಿದ್ಯೆಗಳಲ್ಲಿ ರಾಜವಿದ್ಯೆಯೆನಿಸುವದು. ಎಲ್ಲ ಗುಹ್ಯಗಳಲ್ಲಿಯೂ ಇದು ರಾಜಗುಹ್ಯವಾಗಿದೆ. ಇದು ಧರ್ಮಸ್ವರೂಪವು; ಆಚರಿಸುವದಕ್ಕೆ ಸುಲಭವು; ಅವ್ಯಯವು ಅಂದರೆ ಎಂದಿಗೂ ಸತ್ಯಸಿದ್ಧವಾದುದು.

**ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರ ವರ್ತ್ಮನಿ ॥೩॥**

ಪುರುಷೋತ್ತಮ ಶ್ರೀಕೃಷ್ಣನನ್ನು ಪ್ರಾಪ್ತಮಾಡಿಕೊಳ್ಳುವದು ಅವನ ಅನುಗ್ರಹವನ್ನು ಸಂಪಾದಿಸುವದು ಇವೇ ಮಾನವ ಜನ್ಮಕ್ಕೆ ಧ್ಯೇಯಗಳು. **ವಿಜ್ಞಾನಧರ್ಮವನ್ನಾಶ್ರಯಿಸಿ ಸಾಧಿಸಬೇಕಾಗಿರುವ ಪುರುಷಾರ್ಥವು ಇದೇ.** ಗೀತೆಯಲ್ಲಿ ಉಪದೇಶಿಸಿರುವ ಈ ಗುಹ್ಯವಿಜ್ಞಾನಧರ್ಮದಲ್ಲಿ ವಿಶ್ವಾಸವಿಲ್ಲದವನು—ಹೀಗೆ ವಿಶ್ವಾಸವಿರುವದೂ ಇಲ್ಲದಿರುವದೂ ಅವನವನ ಪ್ರಕೃತಿಯ ವೃತ್ತಿಯನ್ನವಲಂಬಿಸಿರುವದು—ಶ್ರೀಕೃಷ್ಣನನ್ನು ಪಡೆಯಲಾರನು (೩-೧೭). ಇಂಥವನ ಪಾಲಿಗೆ ಮೃತ್ಯುಮಯ ಸಂಸಾರಮಾರ್ಗದೊಳಗಿನ ಪುನರ್ಜನ್ಮಗಳು ಬರುವದಕ್ಕೆ ಈ ವಿಶ್ವಾಸದ ಅಭಾವವೇ ಕಾರಣವು.

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥೪॥**

ಈ ಜಗತ್ತೆಲ್ಲವೂ ಶ್ರೀಕೃಷ್ಣನ ಅವ್ಯಕ್ತ ಪ್ರಕೃತಿಯ (ಬ್ರಹ್ಮನ ೭.೪) ಸ್ವರೂಪದಿಂದಲೂ ಸ್ವಭಾವದಿಂದಲೂ ತುಂಬಿರುವದು. ಎಲ್ಲ ಭೂತಗಳೂ ಶ್ರೀಕೃಷ್ಣನಲ್ಲಿ ಅಂದರೆ ಅವನನ್ನು ಅವಲಂಬಿಸಿ ಇರುವವು; ಆದರೆ ಶ್ರೀಕೃಷ್ಣನು ಮಾತ್ರ ಅವುಗಳಲ್ಲಿಲ್ಲ; ಎಂದರೆ, ಶ್ರೀಕೃಷ್ಣನಿಲ್ಲದಿದ್ದರೆ ಹೇಗೆ ಭೂತಗಳಿಗೆ ಸಾಗುವದಿಲ್ಲವೋ ಹಾಗೆ ಭೂತಗಳಿಲ್ಲದಿದ್ದರೆ ಶ್ರೀಕೃಷ್ಣನಿಗೆ ಸಾಗಲಾರದೆಂದು ತಿಳಿಯಬಾರದು. ಕೇವಲ ವಾಸ್ತವ್ಯದೃಷ್ಟಿಯಿಂದ ಅವನು ಎಲ್ಲ ಭೂತಗಳಲ್ಲಿಯೂ ಇರುವನು. ಅವನಿಲ್ಲದ ವಸ್ತುವೇ ಇಲ್ಲವೆಂಬ ಸಿದ್ಧಾಂತವನ್ನು ಗೀತೆಯು ಅನೇಕ ಸಾರೆ ಹೇಳುವದು. ಈ ಶ್ಲೋಕದ ಭಾವಾರ್ಥವನ್ನು ನಾವು ಹೇಳಿದಂತೆ ಮಾಡುವದು ಯೋಗ್ಯವು.

**ನ ಚ ಮತ್ಸ್ಥಾನಿ ಭೂತಾನಿ ಪಶ್ಯಮೇ ಯೋಗಮೈಶ್ವರಂ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥ ೫ ॥**

ಇನ್ನೊಂದು ದೃಷ್ಟಿಯಿಂದ ನೋಡಲಾಗಿ ಭೂತಗಳು (Created beings) ಶ್ರೀಕೃಷ್ಣನಲ್ಲಿ ಇರುವದಿಲ್ಲೆಂದೂ ಹೇಳಬಹುದು. ಏಕೆಂದರೆ ಕ್ಲೃಪ್ತವಾದ ಮರ್ಯಾದೆಯನ್ನು ಮೀರದೆ ತಮ್ಮಿಚ್ಛೆಗೆ ಬಂದಂತೆ ವರ್ತಿಸುವ ಸ್ವಾತಂತ್ರ್ಯವು ಅವುಗಳಿಗೆ ಇರುವದು. ಆಕಾಶವು ವಾಯುವನ್ನು ತನ್ನಲ್ಲಿ ಧರಿಸಿದ್ದರೂ ಆ ವಾಯುವಿನ ಸ್ವಚ್ಛಂದ ವಿಹಾರಕ್ಕೆ ಅದು ಅಡ್ಡಿಯಾಗದಂತೆ ಶ್ರೀಕೃಷ್ಣನಾದರೂ ಭೂತಗಳನ್ನೆಲ್ಲ ತನ್ನಲ್ಲಿ ಧರಿಸಿ ಅವುಗಳ ಸ್ವಾತಂತ್ರ್ಯವನ್ನು ತಡೆಯನೆಂದು ಮುಂದಿನ ಶ್ಲೋಕದಲ್ಲಿಯೇ ಹೇಳಿದೆ. ಈ ಶ್ಲೋಕದ ಭಾವಾರ್ಥವಾದರೂ ಇದೇ ಆಗಿದೆ. ಅವನ ಆತ್ಮ ಸ್ವರೂಪದಿಂದಲೇ ಪ್ರಾಣಿಗಳು ಉತ್ಪನ್ನರಾಗುವರು. ಅವನೇ ಭೂತಗಳನ್ನೆಲ್ಲ ತನ್ನಲ್ಲಿ ಧರಿಸುವನು. ಆದರೂ ಭೂತಗಳಲ್ಲಿ ಅವನು ವಾಸವಾಗಿರುವ ಕುರುಹು ಸಹ ಕಾಣುವದಿಲ್ಲ. ಇದೆಲ್ಲ ಅವನ ಯೋಗ ಮಾಯೆಯ ಅಧ್ಭುತ ಪ್ರಭಾವವು.

**ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥೬॥**

ವಾಯುವು ನಿತ್ಯವೂ ಆಕಾಶವನ್ನೇ ಅವಲಂಬಿಸಿರುವದು. ಹೀಗೆ ಪರಾವಲಂಬಿಯಾದರೂ ಅದರ ಸ್ವೈರಸಂಚಾರಕ್ಕೆ ತಡೆಯಿಲ್ಲ. ಹಾಗೆಯೇ ನನ್ನಲ್ಲಿ ಎಲ್ಲ ಭೂತಗಳೂ ಇರುವವೆಂದು ನೀನು ತಿಳಿ.

**ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಂ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥ ೭॥**

ಎಲ್ಲ ಭೂತಗಳೂ ಕಲ್ಪಾಂತದಲ್ಲಿ ನನ್ನ ಅವ್ಯಕ್ತ ಪ್ರಕೃತಿಯೆನಿಸುವ ಬ್ರಹ್ಮನನ್ನು ಸೇರುವವು. ಮರಳಿ ಕಲ್ಪಾದಿಯಲ್ಲಿ ಆ ಅವ್ಯಕ್ತಬ್ರಹ್ಮರೂಪ ಪ್ರಕೃತಿಯಿಂದಲೇ (೮–೧೭–೧೯) ಅವುಗಳನ್ನೆಲ್ಲ ನಾನು ಹುಟ್ಟಿಸುವೆನು.

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ॥**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥ ೮॥**

ನನ್ನ ಪ್ರಕೃತಿಯನ್ನು ನನ್ನಿಷ್ಟದಂತೆ ಬಳಸಿ **ಆ ಪ್ರಕೃತಿಗೆ ಆಧೀನವಾದುದರಿಂದ ಪರತಂತ್ರವಾದ** ಈ ಭೂತಸಮೂಹವನ್ನೆಲ್ಲ ನಾನು ತಿರುತಿರುಗಿ ಅಂದರೆ ಕಲ್ಪಕಲ್ಪಕ್ಕೆ ಹುಟ್ಟಿಸುವೆನು. (ಹಿಂದೆ ೮-೧೯ ರಲ್ಲಿ 'ಅವಶ' ವೆಂಬ ಶಬ್ದದ ಅರ್ಥವನ್ನು ನಾವು ಹೀಗೆಯೇ ಮಾಡಿರುವೆವು).

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ ೯ ॥**

ಹೀಗೆ ಭೂತಗಳನ್ನುಂಟುಮಾಡುವ ಕರ್ಮವನ್ನು ನಾನು ಮಾಡಿದರೂ ಅದರಿಂದ ನನಗೆ ಬಂಧನವು ಸಂಭವಿಸುವದಿಲ್ಲ. ಏಕೆಂದರೆ, **ನಾನಾಗಿ ಕೈಕೊಂಡು ನೆರವೇರಿಸಿದ ಆ ಕರ್ಮಗಳ ವಿಷಯದಲ್ಲಿ ನಾನು ಕೇವಲ ಅನಾಸಕ್ತನೂ ಉದಾಸೀನನೂ ಆಗಿರುವೆನು.**

ಕರ್ಮಬಂಧನವು ತಪ್ಪಲಿಕ್ಕೆ ಯಾವ ನಿಯಮವನ್ನು ಪುರುಷೋತ್ತಮನು ಸಾಧಿಸುವನೋ ಅದನ್ನೇ ಬ್ರಹ್ಮನಾದರೂ ಸಾಧಿಸುವನು. ಅದನ್ನೇ ಜೀವಭೂತನು ಸಾಧಿಸಬೇಕೆಂದು ಗೀತೆಯಲ್ಲಿ ಬೋಧಿಸಿದೆ. ಯೋಗ್ಯತೆಯು ಎಷ್ಟೇ ಹೆಚ್ಚಾಗಿರಲಿ, ಈ ನಿಯಮವು ಬದಲಾಗುವುದಿಲ್ಲ. ಇದಕ್ಕಿಂತಲೂ ಹೆಚ್ಚಿನ ಸಮತೆಯ ಸಾಮ್ರಾಜ್ಯವು ಇನ್ನಾವುದು ? ಪುರುಷೋತ್ತಮನು ಕರ್ಮ ಮಾಡಿಯೂ ಅದರಲ್ಲಿ ಆಸಕ್ತಿಯನ್ನಿಡುವುದಿಲ್ಲ; ಬ್ರಹ್ಮನು ಕರ್ಮ ಮಾಡಿಯೂ ಸಮದೃಷ್ಟಿಯುಳ್ಳವನಾದುದರಿಂದಲೇ ನಿರ್ದೋಷನು. ಇದೇ ನಿಯಮವನ್ನು ಅನುಸರಿಸುವದರಿಂದ ಜೀವಭೂತನಿಗಾದರೂ ಮುಕ್ತಿಯು ಖಂಡಿತವಾಗಿ ದೊರೆಯುವದು

**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ ॥ ೧೦ ॥**

**ಅಧ್ಯಕ್ಷಪದಾರೂಢನಾದ ಶ್ರೀಕೃಷ್ಣನು ನಿಯಮಿಸಿದಂತೆ ಅವನ ಪ್ರಕೃತಿಯು—ಬ್ರಹ್ಮನು— ಚರಾಚರಸೃಷ್ಟಿಯನ್ನು ನಿರ್ಮಿಸುವದು.** ಆದುದರಿಂದ ಜಗತ್ತಿನ ಸಂಸಾರವು ಚಕ್ರನೇಮಿಕ್ರಮದಿಂದ ತಿರುಗಲಾರಂಭಿಸುವದು. ಬ್ರಹ್ಮನ ಮುಖಾಂತರವಾಗಿ ಸೃಷ್ಟಿಯು ಯಾವ ಕ್ರಮದಿಂದ ಮತ್ತು ಯಾವ ಉದ್ದೇಶದಿಂದ ನಿರ್ಮಿಸಲ್ಪಡುವದೆಂಬದನ್ನು ಈ

ವರೆಗೆ ಹೇಳಿದೆ. ಭಕ್ತರ ಮತ್ತು ಅವರು ಮಾಡುವ ಉಪಾಸನೆಯ ವಿಷಯ
ವನ್ನು ಇನ್ನು ಮುಂದೆ ವರ್ಣಿಸಿದೆ.

**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥ ೧೧ ॥**

ಮನುಷ್ಯರೂಪವನ್ನು ತಾಳಿ ಪ್ರಕಟನಾದ ಶ್ರೀಕೃಷ್ಣನನ್ನು ಮೂಢರು ಮನ್ನಿಸುವದಿಲ್ಲ, ಅವಮಾನಿಸುವರು. ಎಲ್ಲ ಭೂತಮಾತ್ರಕ್ಕೂ ಅವನೇ ಮಹೇಶ್ವರನೆಂಬ ಅವನ ಪರಾತ್ಪರಭಾವವು ಅವರಿಗೆ ಹೊಳೆಯುವದಿಲ್ಲ. ಇಂಥವರಿಗೆ ಪುರುಷೋತ್ತಮನ ಕಲ್ಪನೆಯೇ ಬರುವದಿಲ್ಲ; ಬಂದರೂ ಅವನು ಮನುಷ್ಯ ದೇಹದಲ್ಲಿ ಪ್ರಕಟವಾಗುವದು ಇವರಿಗೆ ಸಂಭವನೀಯವಾಗಿ ತೋರುವದಿಲ್ಲ.

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ೧೨ ॥**

ಇವರ ಅಪರಾಧವು ಶ್ರೀಕೃಷ್ಣನನ್ನು ತಾತ್ಕಾರಮಾಡುವದರಲ್ಲಿಲ್ಲ. ಚೇತಸ್ ಎಂದರೆ ಏಕಾಗ್ರಬುದ್ಧಿಯು ಇವರಲ್ಲಿ ಇಲ್ಲದಿರುವದು ಇವರ ನಾಶಕ್ಕೆ ಕಾರಣವಾಗುವದು. ಏಕಾಗ್ರಬುದ್ಧಿಯು ಇಲ್ಲದುದಕ್ಕಾಗಿ ಇವರ ಆಶೆಗಳೆಲ್ಲ ವ್ಯರ್ಥವಾಗುವವು; ಇವರ ಕರ್ಮಗಳೆಲ್ಲ ವ್ಯರ್ಥವಾಗುವವು; ಅವರು ಪಡೆಯುವ ಜ್ಞಾನವೂ ವ್ಯರ್ಥವಾಗುವದು. ಇಂಥವರು ಮೋಹ ವಶರಾಗಿ ರಾಕ್ಷಸ ಮತ್ತು ಆಸುರ ಪ್ರಕೃತಿಯನ್ನೇ ಆಶ್ರಯಿಸಿರುವರು.

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥ ೧೩ ॥**

ಪುರುಷೋತ್ತಮ ಶ್ರೀಕೃಷ್ಣನಲ್ಲಿ ವಿಶ್ವಾಸವಿಲ್ಲದಿದ್ದರೆ ಚೇತಸ್ಸು ವಿಕೃತವಾಗುವದು. ಸದ್ಭಾವಗಳೆಲ್ಲವೂ ನಾಶವಾಗುವವು. ಆಸುರ ವೃತ್ತಿಯು ಬೆಳೆಯುವದು. ಈ ಉತ್ಪಾತಪರಂಪರೆಗೆ ಶ್ರೀಕೃಷ್ಣಪುರುಷೋ ತ್ತಮನಲ್ಲಿ ಅವಿಶ್ವಾಸವೇ ಮೂಲವು. ಆದರೆ ಶ್ರದ್ಧೆಯಿಂದಲೂ ವಿಶ್ವಾಸ ದಿಂದಲೂ ಅವನನ್ನು ನಂಬಿ ದೈವೀ ಪ್ರಕೃತಿಯನ್ನವಲಂಬಿಸುವವರು

ಆತನು ಭೂತಮಾತ್ರಗಳಿಗೆಲ್ಲ ಆದಿಮೂಲನಾದವನೆಂದೂ ಅವ್ಯಯನೆಂದೂ ಬಗೆದು ಅನನ್ಯ ಮನಸ್ಸಿನಿಂದ ಆವನನ್ನು ಭಜಿಸುವರು.

**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥೧೪॥**

ಇಂಥವರು ಸತತವೂ ನನ್ನ ಕೀರ್ತನೆಯನ್ನು ಮಾಡುವರು. ತಮ್ಮ ಮನಸ್ಸು ಬುದ್ಧಿ ಮತ್ತು ಇಂದ್ರಿಯಗಳನ್ನು ನನ್ನ ಕಾರ್ಯಗಳಲ್ಲಿಯೇ ತೊಡಗಿಸುವರು.ದೃಢವ್ರತರಾಗಿ ನನ್ನನ್ನು ಭಕ್ತಿಪೂರ್ವಕವಾಗಿ ನಮಸ್ಕರಿಸುವರು. ಅವರ ಆತ್ಮಸ್ವಭಾವವು ನಿತ್ಯವೂ ನನ್ನಲ್ಲಿಯೇ ರಮಿಸುವದು, ಅವರ ಮನಸ್ಸು ಬುದ್ಧ್ಯಾದಿಗಳಾದರೂ ನನ್ನಲ್ಲಿಯೇ ಸಂತುಷ್ಟಿಯನ್ನು ಪಡೆಯುವವು. ಹೀಗೆ ನಿತ್ಯಯುಕ್ತರಾಗಿ ಆ ಭಕ್ತರು ನನ್ನ ಉಪಾಸನೆಯನ್ನು ಮಾಡುವರು.

ತಾಳಕುಟ್ಟಿ ಭಜನೆಮಾಡುವವರನ್ನೇ ಶ್ರೀಕೃಷ್ಣನು ಮೆಚ್ಚುವನೆಂದೂ ಕರ್ತವ್ಯದಕ್ಷರಾದ ಭಕ್ತರನ್ನು ಆವನು ಮೆಚ್ಚುವದಿಲ್ಲವೆಂದೂ ಈ ಶ್ಲೋಕದಿಂದ ಊಹಿಸಬಾರದು. ನಿತ್ಯನಿರಂತರವಾಗಿ ಅವನನ್ನು ಸ್ಮರಿಸಿ ಅವನ ಉಪಾಸನೆಯನ್ನೇ ಮಾಡುತ್ತಿರಬೇಕೆಂದು ಹೇಳಿದೆಯಷ್ಟೇ. ಕರ್ತವ್ಯದಕ್ಷ ಭಕ್ತರಾದರೂ ತಮಗೆ ಬಿಡುವು ದೊರೆತಾಗ ಹೇಗೆ ಹೊತ್ತು ಕಳೆಯಬೇಕೆಂಬುದನ್ನು ಇಲ್ಲಿ ಸೂಚಿಸಿದೆಯೆಂದು ತೋರುವದು. ಗೀತೆಯಲ್ಲಿ 'ಯತ' ವೆಂಬ ಶಬ್ದಕ್ಕೆ ಬಹಳ ವ್ಯಾಪಕವೂ ಗಹನವೂ ಆದ ಅರ್ಥವಿರುವದು. ಈ ಶಬ್ದದ ಅರ್ಥವು ಏನೆಂದರೆ **ಪುರುಷಸ್ವಭಾವ ಸಹಜವಾದ ಸುಖಲಾಲಸೆಯನ್ನೂ ಬುದ್ಧಿಮನಸ್ಸುಗಳ ಆಸಕ್ತಿಯನ್ನೂ ಬುದ್ಧಿಯೋಗಾನುರೋಧವಾಗಿ ಪುರುಷೋತ್ತಮನಿಗೆ ಅರ್ಪಿಸಿ, ತಾನು ಯಾವ ಕೂಟಸ್ಥ ಪುರುಷನಾದ ಬ್ರಹ್ಮನಲ್ಲಿ ಅಂತರ್ಭೂತನಾಗಿರುವನೋ ಅವನ ಆಧ್ಯಾತ್ಮ ಸ್ವಭಾವವನ್ನು (೮-೨) ತನ್ನಲ್ಲಿ ಅವ್ಯಾಹತವಾಗಿ ಕಾದುಕೊಂಡು, ಅವನ ವೃತ್ತಿ (ಚರ್ಯ)ಯನ್ನೇ ಪರಿಪಾಲಿಸುವದು.** ಇಂಥ ಆಚರಣೆಯಲ್ಲಿ ಸಮಾವಿಷ್ಟವಾಗಲಾರದ ಹೆಚ್ಚಿನ ಕರ್ತವ್ಯವಾಗಲಿ ಧ್ಯೇಯವಾಗಲಿ ನಮಗಂತೂ ಊಹಿಸಲಾಗುವದಿಲ್ಲ.

ಸ್ತ್ರೀಯರೂ ವೈಶ್ಯರೂ ಶೂದ್ರಾದಿಕರೂ ಅವನ ಉಪಾಸಕರಾಗ ಬಹುದೆಂದು ಶ್ರೀಕೃಷ್ಣನು ಹೇಳಿರುವನು (೯–೩೨). ಇಂಥ ಮಹಾತ್ಮ ರನ್ನೂ ಈ ಶ್ಲೋಕದಲ್ಲಿ ನಿರ್ದೇಶಿಸಿರುವನೆಂದು ತೋರುವದು.

ಕರ್ತವ್ಯಗಳು ಮನುಷ್ಯನಿಗೆ ಪುರುಷೋತ್ತಮಪ್ರೇರಿತವಾಗಿಯೇ ಒದಗುವವೆಂದು ಗೀತೆಯ ಅಭಿಪ್ರಾಯವಿರುವದರಿಂದ ತಾಳತಟ್ಟುವವರಿ ಗಿಂತ ತಾನು ಹೆಚ್ಚಿನವನೆಂಬ ಹೆಮ್ಮೆಯನ್ನು ತಾಳದಿರುವವನೇ ನಿಜವಾದ ಬುದ್ಧಿಯೋಗಿಯೆಂಬುದು ಸ್ಪಷ್ಟವು.

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥೧೫॥**

ಇನ್ನು ಕೆಲವರು ಶ್ರೀಕೃಷ್ಣನ ಉಪಾಸನೆಯನ್ನು ಜ್ಞಾನಯಜ್ಞದಿಂದ ಮಾಡುವರು. ಇಂಥ ಜ್ಞಾನಯಜ್ಞಮಾಡುವವರಲ್ಲಿಯೂ ಕೆಲವರು ಅವ ನನ್ನು ಏಕಮೇವಾದ್ವಿತೀಯನೆಂದು ಭಾವಿಸುವರು. ಇನ್ನು ಕೆಲವರು ಅವನನ್ನು ಅನೇಕ ಸ್ವರೂಪಗಳಲ್ಲಿ ಪ್ರಕಟನಾಗುವವನೆಂದು ಬಗೆಯುವರು; ಮತ್ತೆ ಕೆಲವರು ಅವನನ್ನು ವಿಶ್ವತೋಮುಖನೆಂದು ಭಾವಿಸುವರು.

**ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್।**
**ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥೧೬॥**

ಅವನ ವಿಷಯವಾಗಿ ಜ್ಞಾನಯೋಗಿಗಳು ಧರಿಸುವ ಈ ವಿವಿಧ ಭಾವ ನೆಗಳು ಸತ್ಯವಾದವು.

ಕ್ರತುವು ನಾನು, ಯಜ್ಞವು ನಾನು, ಸ್ವಧಾ ಎಂದರೆ ಯಜ್ಞದಲ್ಲಿ ಪಿತೃಗಳಿಗೆ ಅರ್ಪಿಸಿದ ಅನ್ನವು ನಾನು, ಔಷಧವೆಂದರೆ ವನಸ್ಪತಿಗಳಿಂದ ಯಜ್ಞಾರ್ಥವಾಗಿ ಸಿದ್ಧಮಾಡಿದ ಆಹುತಿ ನಾನು, ಮಂತ್ರವು ನಾನು, ತುಪ್ಪವು ನಾನು, ಅಗ್ನಿಯು ನಾನು, ಆಹುತಿಯೂ ನಾನೇ.

**ಪಿತಾಽಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ।**
**ವೇದ್ಯಂ ಪವಿತ್ರಮೋಂಕಾರ ಋಕ್ ಸಾಮ ಯಜುರೇವ ಚ ॥೧೭॥**

ಈ ಜಗತ್ತಿಗೆಲ್ಲ ತಂದೆಯು ನಾನು, ತಾಯಿಯು ನಾನು, ಆಧಾರವು

ನಾನು, ಪಿತಾಮಹನೂ ನಾನೇ. ಈ ಜಗತ್ತಿನಲ್ಲಿ ತಿಳಿಯಬೇಕಾದವನು ನಾನು, ಪವಿತ್ರನು ನಾನು, ಓಂಕಾರವು ನಾನು. ಋಕ್, ಸಾಮ, ಯಜು ರ್ವೇದಗಳೂ ನಾನೇ.

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥ ೧೮ ॥**

ಎಲ್ಲರಿಗೆ ನಾನೇ ಗತಿಯು, ಪೋಷಕನು, ಪ್ರಭುವು, ಸಾಕ್ಷಿಯು, ನಿವಾಸಸ್ಥಾನವು, ರಕ್ಷಕನು, ಸಖನು, ಉತ್ಪತ್ತಿಸ್ಥಿತಿಲಯಾದಿಗಳಿಗೆ ಕಾರಣನು. ಆಶ್ರಯಕೊಡುವವನೂ ಅವ್ಯಯಬೀಜನೂ ನಾನೇ.

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ ೧೯ ॥**

ಬಿಸಿಲನ್ನುಂಟುಮಾಡುವವನು ನಾನು, ಮಳೆಗರೆಯುವವನು ನಾನು, ಅಮೃತವೂ ಮೃತ್ಯುವೂ ಸತ್ ಅಸತ್ತುಗಳೂ ನಾನೇ.

ಈ ಶ್ಲೋಕದಲ್ಲಿ ಸತ್ ಅಸತ್ ಈ ಶಬ್ದಗಳಿಗೆ ದೈವೀ ಆಸುರವೃತ್ತಿಗಳೆಂದು ಅರ್ಥವು; ಇರುವದು ಇಲ್ಲದಿರುವದು ಎಂದು ಅರ್ಥಮಾಡಬಾರದು. ಇಲ್ಲದಿರುವದು ಗೀತೆಯ ಮತದಂತೆ ಇರುವದೇ ಇಲ್ಲ; ಮತ್ತು ಇದೆಯೆಂದು ಅಂಥದನ್ನು ಯಾವ ಸಂದರ್ಭದಲ್ಲಿಯೂ ಹೇಳಲಾಗದು (೨-೧೬).

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ।**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ॥**
**ತೇ ಪುಣ್ಯಮಾಸಾದ್ಯ ಸುರೇಂದ್ರಲೋಕ ।**
**ಮಶ್ನಂತಿ ದಿವ್ಯಾನ್ ದಿವಿ ದೇವ ಭೋಗಾನ್ ॥ ೨೦ ॥**

ವೇದವಾದಿಗಳು ಯಜ್ಞಾದಿಗಳಿಂದ ನನ್ನನ್ನು ಪೂಜಿಸಿ, ಸೋಮ ಸೇವನದಿಂದ ಪಾಪಮುಕ್ತರಾಗಿ, ಸ್ವರ್ಗಲೋಕಗಳನ್ನು ಪಡೆಯಲಿಚ್ಛಿಸಿ, ನನ್ನನ್ನು ಪ್ರಾರ್ಥಿಸುವರು. ದೇವೇಂದ್ರನ ಪುಣ್ಯಲೋಕಕ್ಕೆ ಹೋಗಿ ಅಲ್ಲಿ ಸ್ವರ್ಗದ ದಿವ್ಯಭೋಗಗಳನ್ನು ಉಪಭೋಗಿಸುವರು.

**ತೇತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ।**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ॥**
**ಏವಂ ತ್ರಯೀಧರ್ಮಮನುಪ್ರಪನ್ನಾ ।**
**ಗತಾಗತಂ ಕಾಮಕಾಮಾ ಲಭಂತೇ ॥ ೨೧ ॥**

ವಿಶಾಲವಾದ ಸ್ವರ್ಗಲೋಕವನ್ನು ಉಪಭೋಗಿಸಿ ಪೂರ್ವಾರ್ಜಿತ ಪುಣ್ಯವೆಲ್ಲ ತೀರಿದ ಬಳಿಕ ಅವರು ಮರಳಿ ಮೃತ್ಯುಲೋಕವನ್ನು ಪ್ರವೇಶಿಸುವರು. ಈ ಮೇರೆಗೆ ತಮ್ಮ ಕಾಮನೆಗಳನ್ನು ಅನುಸರಿಸುವ ಈ ವೇದವಾದಿಗಳಿಗೆ ಪುನರ್ಜನ್ಮವು ತಪ್ಪುವದೇ ಇಲ್ಲ.

ಕಾಮಾತ್ಮರಾಗಿ ತಮ್ಮ ಕಾಮನೆಗಳ ಹಿಂದೆ ಓಡುವ ವೇದವಾದಿಗಳು ಪ್ರಯಾಸಪಟ್ಟು ಕ್ಷಣಭಂಗುರಗಳಾದ ಈ ಯೋಗಕ್ಷೇಮಗಳನ್ನು ಪುರುಷೋತ್ತಮನಿಂದ ಪಡೆದು ಮರಳಿ ಕಳೆದುಕೊಳ್ಳುವರು (೭–೨೩). ಕಾಮಾತ್ಮರಾದುದರಿಂದ ಇವರಿಗೆ ಪುನರ್ಜನ್ಮಗಳೇ ಲಭಿಸುವವು.

ಆಚಾರವಿಚಾರಗಳ ವಿಷಯದಲ್ಲಿ ವೇದಗಳೇ ಪರಾಕಾಷ್ಠೆಯ ಪ್ರಮಾಣಗಳೆಂದು ಮನ್ನಿಸುವದುಂಟು. ವೇದಗಳ ವಿಷಯದಲ್ಲಿ ಗೀತೆಯ ದೃಷ್ಟಿಯು ಇಷ್ಟು ಉಚ್ಚವಿರುವದಿಲ್ಲೆಂದು ಹಲವೆಡೆಗಳಲ್ಲಿ ಕಂಡುಬಂದಿರುವದು. ಅದನ್ನೇ ಮತ್ತೊಮ್ಮೆ ಹೇಳಿ, ತನ್ನ ಮತವನ್ನು ಅನುಸರಿಸಿ ಅನನ್ಯಭಕ್ತಿಯಿಂದ ತನ್ನಲ್ಲಿ ಅಧ್ಯಾತ್ಮಯೋಗಭಾವವನ್ನು ಧರಿಸುವ ಭಕ್ತರ ವಿಷಯವಾಗಿ ಶ್ರೀಕೃಷ್ಣನು ಹೇಳತೊಡಗುವನು.

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥ ೨೨ ॥**

ಅನನ್ಯಭಾವದಿಂದ ನನ್ನನ್ನೇ ಚಿಂತಿಸುತ್ತ ನನ್ನ ಉಪಾಸನೆಯನ್ನೇ ಯಾವ ನಿತ್ಯಯೋಗಯುಕ್ತರು ಮಾಡುವರೋ ಅವರ ಯೋಗಕ್ಷೇಮ ವಿಷಯದ ಭಾರವನ್ನು ನಾನೇ ವಹಿಸುವೆನು (೬–೩೮).

**ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಂ ॥ ೨೩ ॥**

ಪುರುಷೋತ್ತಮ ಶ್ರೀಕೃಷ್ಣನಲ್ಲಿಯೇ ಭಕ್ತಿಯನ್ನಿಡದೆ ಶ್ರದ್ಧೆಯಿಂದ ಕೂಡಿದವರಾಗಿ ಅನ್ಯದೇವತೆಗಳನ್ನು ಭಜಿಸುವ ಭಕ್ತರು ಈ ಮೊದಲೇ ಹೇಳಿದಂತೆ ಶ್ರೀಕೃಷ್ಣನ ಗೌಣಸ್ವರೂಪಗಳನ್ನು ಭಜಿಸುವರು. ಆದರೆ ಇದು ವಿಧಿಪೂರ್ವಕವಲ್ಲವೆಂದು ತಿಳಿಯಬೇಕು.

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ॥ ೨೪ ॥**

ಸೃಷ್ಟಿಗೆಲ್ಲ ಪುರುಷೋತ್ತಮ ಶ್ರೀಕೃಷ್ಣನೇ ಅಧಿಯಜ್ಞನಾಗಿರುವನು. **ಸಕಲ ಸೃಷ್ಟಿಗೂ ಅವನೇ ಪ್ರಭುವು.** ಹೀಗೆ ಪ್ರಭುವಾದುದರಿಂದ ಸೃಷ್ಟಿಯಲ್ಲಿ ಸಂಭವಿಸುವ **ಯಜ್ಞಗಳನ್ನು ಉಪಭೋಗಿಸುವದಕ್ಕೆ ಅವನೇ ಅಧಿಕಾರಿಯು.** ಈ ಅಧಿಕಾರದಲ್ಲಿ ಇನ್ನಾರೂ ಪಾಲುಗಾರರಾಗರು. ಬ್ರಹ್ಮನಿಗೂ ಈ ಅಧಿಕಾರವನ್ನು ಗೀತೆಯಲ್ಲಿ ಕೊಟ್ಟಿಲ್ಲ; ಇನ್ನಿತರರ ಮಾತೇ ಬೇಡ. **ಅನ್ಯದೇವತೆಗಳನ್ನು ಭಜಿಸುವವರಿಗೆ ಈ ತತ್ವಗಳು ಸರಿಯಾಗಿ ತಿಳಿದಿರುವದಿಲ್ಲ.** ಆದುದರಿಂದ ಅವರು ಅವಿಧಿಪೂರ್ವಕವಾಗಿ ಅನ್ಯದೇವತೆಗಳನ್ನು ಭಜಿಸಿ ತಾವು ಮಾಡಿದ ಯಜ್ಞಗಳನ್ನು ಅವರಿಗೆ ಸಮರ್ಪಿಸುವರು. ಅವರು ಸೃಷ್ಟಿಯಲ್ಲಿ ಯಜ್ಞವಿಷಯದ ಈ ಮೂಲಭೂತ ತತ್ವವನ್ನು ಅರಿಯದಿದ್ದುದರಿಂದ ಉಪಾಸನೆಯ ಉಚ್ಚತಮ ಧ್ಯೇಯದಿಂದ ಪತಿತರಾಗುವರು.

**ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ ।**
**ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿ-**
**ನೋಽಪಿ ಮಾಂ ॥ ೨೫ ॥**

ಅನ್ಯದೇವತೆಗಳನ್ನು ಭಜಿಸುವ ವಿಷಯದಲ್ಲಿ ಮೇಲೆ ಹೇಳಿದ ತತ್ವವು ಮತ್ತುಳಿದ ಯಜ್ಞಗಳಿಗಾದರೂ ಅನ್ವಯಿಸುವದು. ದೇವತೆಗಳನ್ನು ಭಜಿಸುವವರು ದೇವತೆಗಳನ್ನು ಸೇರುವರು. ಪಿತೃಗಳನ್ನು ವ್ರತಸ್ಥರಾಗಿ ತೃಪ್ತಿಪಡಿಸುವವರು ಪಿತೃಗಳನ್ನು ಸೇರುವರು, ಭೂತಾದಿಗಳನ್ನು ಪೂಜಿಸುವವರು ಭೂತಗಳನ್ನು ಸೇರುವರು. ಪುರುಷೋತ್ತಮ ಶ್ರೀಕೃಷ್ಣನನ್ನು ಭಜಿಸುವವರು ಅವನನ್ನು ಸೇರುವರು.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೨೬ ॥**

ಇಂಥ ದೊಡ್ಡ ಪ್ರಭುವಿಗೆ- ಸೃಷ್ಟಿಗೆಲ್ಲ ಒಡೆಯನಾದವನಿಗೆ-ಪತ್ರ, ಪುಷ್ಪ, ಫಲ,ಜಲಾದಿಗಳಂಥ ಅಲ್ಪವೂ ಕ್ಷುಲ್ಲಕವೂ ಆದ ವಸ್ತುಗಳನ್ನು ಹೇಗೆ ಅರ್ಪಿಸಬಹುದೆಂಬ ಶಂಕೆಯನ್ನು ಯಾರೂ ಮನಸ್ಸಿನಲ್ಲಿ ಹಿಡಿಯಬಾರದು. ಆ ವಸ್ತುಗಳನ್ನಾದರೂ ಭಕ್ತಿಭಾವದಿಂದ ಅವನಿಗೆ ಅರ್ಪಿಸಬಹುದು ಪ್ರಯತ್ನಶೀಲರಾದ ತನ್ನ ಭಕ್ತರ ಭಕ್ತಿಯಿಂದ ಕೂಡಿದ ಇಂಥ ಸಮರ್ಪಣೆ ಗಳನ್ನು ಸಹ ಪುರುಷೋತ್ತಮ ಶ್ರೀಕೃಷ್ಣನು ಪ್ರೇಮಾದರಗಳಿಂದ ಸ್ವೀಕರಿ ಸುವನು.

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ ॥ ೨೭ ॥**

ಭಕ್ತರಿಂದ ಬರುವ ಎಂಥ ಅಲ್ಪವಸ್ತುವನ್ನೂ ಅವನು ನಿರಾಕರಿಸುವ ದಿಲ್ಲವೆಂಬುದು ನಿಜವಾದರೂ ಅರ್ಜುನನು ಅವನಿಗೆ ಅಂಥ ವಸ್ತುಗಳನ್ನೇ ಸಮರ್ಪಿಸಿ ಸಂತುಷ್ಟನಾಗಿ ಮಾಡಲು ಯತ್ನಿಸಕೂಡದು. ಎಲ್ಲ ದೇವತೆ ಗಳಲ್ಲಿ ಶ್ರೀಕೃಷ್ಣ ಪುರುಷೋತ್ತಮನೇ ಶ್ರೇಷ್ಠನಿದ್ದಂತೆ ಎಲ್ಲ ಭಕ್ತರಲ್ಲಿ ಅರ್ಜುನನು ಶ್ರೇಷ್ಠನಾಗಿರುವನು. ಆದುದರಿಂದ ಅವನಿಗೆ ಶ್ರೀಕೃಷ್ಣನು ಬೋಧಿಸುತ್ತಲಿರುವ ಆಧ್ಯಾತ್ಮಯೋಗದ ಪರಮಪ್ರಯತ್ನವನ್ನೇ ಅವನು ಮಾಡತಕ್ಕದ್ದು.

ನೀನು ಮಾಡುವದೆಲ್ಲವನ್ನೂ, ನೀನು ಭೋಗಿಸುವದೆಲ್ಲವನ್ನೂ, ನೀನು ಯಜ್ಞಮಾಡುವದೆಲ್ಲವನ್ನು ಮತ್ತು ನೀನು ಮಾಡುವ ತಪವೆಲ್ಲವನ್ನು ಅಂದರೆ ನಿನ್ನ ಯಾವತ್ತು ಕರ್ಮಗಳನ್ನು (೩-೩೦) ನೀನು ನನಗೆ ಅರ್ಪಿಸು. ಅರ್ಜುನನ ಪರಮಭಕ್ತಿಭಾವದ ವಿಷಯದಲ್ಲಿ ಶ್ರೀಕೃಷ್ಣನಿಗೆ ಸಂದೇಹವು ಇರಲಿಲ್ಲವೆಂಬುದು ಇದರಿಂದ ಸ್ಪಷ್ಟವಾಗುವದು.

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥೨೮॥**

ಮೇಲೆ ಹೇಳಿದಂತೆ ಅರ್ಜುನನು ಮಾಡಬೇಕಾದುದು ಶ್ರೀಕೃಷ್ಣ ನಿಗಾಗಿ ಅಲ್ಲ;ಆದರೆ ತಾನು ಮಾಡಲಿರುವ ಕರ್ಮಗಳ ಶುಭಾಶುಭ ಫಲದಿಂದ ಮುಕ್ತನಾಗುವದಕ್ಕಾಗಿ. **ಕರ್ಮಗಳನ್ನು ಶ್ರೀಕೃಷ್ಣನಿಗೆ ಸಮರ್ಪಿಸಿ ಅರ್ಜುನನು ಸಂನ್ಯಾಸಯೋಗಯುಕ್ತನಾದರೆ** (೪-೩೧) ಕರ್ಮಬಂಧನ ದಿಂದ ಅವನು ಮುಕ್ತನಾಗುವದಲ್ಲದೆ ಶ್ರೀಕೃಷ್ಣನನ್ನು ಸೇರುವನು.

**ಸಮೋಽಹಂ ಸರ್ವಭೂತೇಷು ನಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಂ॥೨೯॥**

ತನ್ನ ಭಕ್ತನ ಪಾಪಪುಣ್ಯಗಳ ಭಾರವನ್ನು ಶ್ರೀಕೃಷ್ಣನು ತನ್ನ ತಲೆಯ ಮೇಲೆ ಹೊರಲು ಸಿದ್ಧನಿರುವನು. ಅವನ ಯೋಗವನ್ನು ನಡೆಯಿಸಲೂ ತಾನೇ ಒಪ್ಪುವನು. ಅವನಿಗೆ ಪರಮಗತಿಯನ್ನು ಒದಗಿಸಿಕೊಡುವದನ್ನಾ ದರೂ ಅಕ್ಕರೆಯಿಂದ ತಾನೇ ಕೈಕೊಳ್ಳುವನು. ಇದೆಲ್ಲವೂ ಶ್ರೀಕೃಷ್ಣನ ಪುರುಷಾರ್ಥಕ್ಕೆ ಭೂಷಣವಾಗಿ ಇರುವದು. ಆದರೆ ಸೃಷ್ಟಿಯೊಳಗಿನ ಭಕ್ತಿ ಹೀನರಾದ ಜೀವರಿಗೆ ಶ್ರೀಕೃಷ್ಣನ ಹಾಗು ಅವನ ಭಕ್ತರ ನಡುವಿನ ವ್ಯವ ಹಾರವೆಲ್ಲ ಅನ್ಯಾಯದ್ದಾಗಿ ಯಾಕೆ ತೋರಬಾರದು? ಅವರನ್ನು ಶ್ರೀ ಕೃಷ್ಣನು ಹೀಗೆ ಬೇರೆಯಾಗಿಡಬೇಕೇಕೆ? ಅವರ ವಿಷಯಕ್ಕೆ ಈ ನಿರ್ದಯ ವಾದ ಪಂಕ್ತಿಪ್ರಪಂಚವೇಕೆ?

ಪುರುಷೋತ್ತಮ ಶ್ರೀಕೃಷ್ಣನು ಎಲ್ಲ ಕಡೆಯಲ್ಲಿಯೂ ಎಲ್ಲ ಭೂತ ಗಳ ವಿಷಯದಲ್ಲಿಯೂ ಸಮದೃಷ್ಟಿಯನ್ನಿಡುವನು. ಅವನಿಗೆ ಪ್ರಿಯ ವಾಗಲಿ ದ್ವೇಷ್ಯವಾಗಲಿ ಯಾವದೂ ಇರುವದಿಲ್ಲ. ಭಕ್ತರ ವಿಷಯದಲ್ಲಿ ವ್ಯಕ್ತವಾಗುವ ಅವನ ಪ್ರೇಮವು ಪಕ್ಷಪಾತ ಪ್ರೇರಿತವಾಗಿರುವದಿಲ್ಲ. ಆದರೆ ಅದು ಸೃಷ್ಟಿಸ್ವಭಾವನಿಯಮವನ್ನು ಅನುಸರಿಸಿರುವದು. ಆಧ್ಯಾತ್ಮ ಮಯವಾದ ಈ ಸೃಷ್ಟಿಸಾಮ್ರಾಜ್ಯದಲ್ಲಿ ನಡೆಯುವ ನಾಣ್ಯವು ಯೋಗವೇ ಎಂದು ತಿಳಿಯಬೇಕು. ಪರಮೇಶ್ವರನಿಗೂ ಸೃಷ್ಟಿಗೂ ಪರಸ್ಪರರಲ್ಲಿ ನಡೆಯ ಬೇಕಾದ ವ್ಯವಹಾರಗಳೆಲ್ಲವನ್ನು ಈ ನಾಣ್ಯದಲ್ಲಿಯೇ ಮಾಡಬೇಕಾಗುವದು. ಪರಮೇಶ್ವರನಲ್ಲಿ ಯಾವನು ಎಷ್ಟು ಭಕ್ತಿಯನ್ನು ಅಥವಾ ಯೋಗವನ್ನು ಆಚರಿಸುವನು ಆ ಪ್ರಮಾಣದಲ್ಲಿ ಯೋಗಕ್ಷೇಮವನ್ನು ಪ್ರತಿಯಾಗಿ ಅವನಿಗೆ

ಕೊಡುವ ಭಾರವು ಪರಮೇಶ್ವರನ ಮೇಲೆ ಬೀಳುವದು. ಅದನ್ನು ನೀಗಿಸು ವದು ಭಗವಂತನಿಗೆ ಕರ್ತವ್ಯವಾಗುವದು. ಶ್ರೀಕೃಷ್ಣನನ್ನು ಅವನ ಭಕ್ತರು ಪ್ರಾಣಪ್ರಿಯನೆಂದು ಒಗೆಯುವರು; ಆದುದರಿಂದ ಶ್ರೀಕೃಷ್ಣನಾದರೂ ಅವರನ್ನು ಪ್ರೀತಿಯಿಂದ ನೋಡುವನು. ಇದರಲ್ಲಿ ಅವನು ಪಂಕ್ತಿಪ್ರಪಂಚ ಮಾಡುವ ಸಂದರ್ಭವಿಲ್ಲ. ತನ್ನನ್ನು ಪ್ರೀತಿಸುವ ಸ್ವಾತಂತ್ರ್ಯವನ್ನು ಅವನು ಎಲ್ಲರಿಗೂ ಸಮಾನವಾಗಿ ಕೊಟ್ಟಿರುವನು. ಅವನ ನ್ಯಾಯಬುದ್ಧಿಗೂ ಸಮ ದೃಷ್ಟಿಗೂ ಇದೇ ಸಾಕ್ಷಿಯಾಗಿದೆ. ಆಸುರ ವೃತ್ತಿಯವರು ಅಸೂಯೆ ಯಿಂದ ಶ್ರೀಕೃಷ್ಣನನ್ನು ಹಳಿಯುವದರಲ್ಲಿ ಹುರುಳಿಲ್ಲ.

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ ೩೦ ॥**

ತಾನು ಸಹೃದಯನೆಂಬುವದನ್ನು ತೋರಿಸುವದಕ್ಕಾಗಿ ಇನ್ನೂ ಹೆಚ್ಚಿನ ಅನುಗ್ರಹವನ್ನು ತೋರಲು ಶ್ರೀಕೃಷ್ಣನು ಸಿದ್ಧನಾಗಿದ್ದಾನೆ. ದುರಾಚಾರಿಯನ್ನಾಗಲಿ ಪಾಪಿಯನ್ನಾಗಲಿ ಅವನು ದ್ವೇಷಿಸುವದಿಲ್ಲ. ಆದರೆ ಸೃಷ್ಟಿಸಂಕಲ್ಪವನ್ನವಲಂಬಿಸಿದ ನಿಯಮವನ್ನು, ಅಧ್ಯಾತ್ಮಸಾಮ್ರಾ ಜ್ಯದ ಕಟ್ಟಳೆಯನ್ನು ಅವನೇ ಉಲ್ಲಂಘಿಸುವದು ಶಕ್ಯವಲ್ಲ. ಪುರುಷೋ ತ್ತಮ ಶ್ರೀಕೃಷ್ಣನಲ್ಲಿ ಬುದ್ಧಿಪುರಸ್ಸರವಾಗಿ ಇಟ್ಟ ಪ್ರೇಮವೇ ಜನರಿಗೆ ತಾರಕವೆಂಬುದು ಸ್ವಭಾವಸಿದ್ಧವಾದ ನಿಯಮವು. ಹೀಗಿರಲು, ಈ ದುರಾ ಚಾರಿಗಳು ಸಹ ತಮ್ಮ ಪಾಪಗಳ ತೂಕವನ್ನಾಗಲಿ ಆಳತೆಯನ್ನಾಗಲಿ ಕಂಡು ಹಿಡಿಯುವ ಗೊಡವೆಗೆ ಹೋಗಬಾರದು. ಅವರು ಯಾವ ಚಿಂತೆ ಯನ್ನೂ ಮಾಡದೆ ಸ್ವಭಾವ ನಿಯಮವನ್ನು ಪರಿಪಾಲಿಸಬೇಕು. ಅನನ್ಯಭಕ್ತಿಯಿಂದ ಶ್ರೀಕೃಷ್ಣನನ್ನು ಬಯಸಿ ಭಜಿಸಬೇಕು. ಹೀಗೆ ಮಾಡಿದವನು ಸಾಧುವೆಂದೇ ಎಣಿಸಲ್ಪಡುವನು. ಅವನ ಈ ನಿರ್ಧಾರ ವಾದರೂ ಶ್ರೀಕೃಷ್ಣನಿಗೆ ಸಂಭಾವ್ಯವೆಂದು ತೋರುವದು ಇಷ್ಟುಮಟ್ಟಿಗೆ ಅಧ್ಯಾತ್ಮ ತತ್ವದಲ್ಲಿ ಶ್ರದ್ಧೆಯು ತಲೆದೋರಿದರೆ ಅದು ಪರಮತಾರಕವಾಗ ದಿರದು. ಆದರೆ ಶ್ರದ್ಧೆಯೇ ಇಲ್ಲದಲ್ಲಿ- ಅಶ್ರದ್ಧೆಯೇ ತುಂಬಿರುವಲ್ಲಿ–ತಾನೇ ಸೃಜಿಸಿದ ಸೃಷ್ಟಿಯ ನಿಯಮವನ್ನು ಉಲ್ಲಂಘಿಸದೆ ಮೌನವನ್ನು ತಾಳಿ ಶ್ರೀ ಕೃಷ್ಣನು ಉದಾಸೀನನಾಗಿರುವನು.

**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।**
**ಕೌಂತೇಯ ಪ್ರತಿ ಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ ३೧ ॥**

ಸ್ವಭಾವ ನಿಯಮವನ್ನು ಶ್ರದ್ಧೆಯಿಂದ ಭಾವಿಸಿದರೂ ಮನುಷ್ಯನು ಸಾಧುವಾಗುವನೆಂದು ಮೇಲೆ ಹೇಳಿದೆ. ಈ ಶ್ರದ್ಧೆಯು ಅಲ್ಪಪ್ರಮಾಣದಲ್ಲಾದರೂ ಆಚರಣೆಯಲ್ಲಿ ಬಂದರೆ ಆ ಮನುಷ್ಯನು ಸದ್ಗತಿಯ ಕಡೆಗೆ ತಿರುಗಿದನೆಂದು ತಿಳಿಯಬೇಕು. ಅವನನ್ನು ತತ್‍ಕ್ಷಣವೇ ಧರ್ಮಾತ್ಮನೆಂದು ಒಪ್ಪಲು ಶ್ರೀಕೃಷ್ಣನು ಸಿದ್ಧನಿರುವನು. ಶ್ರದ್ಧೆಯೇ ಮನುಷ್ಯ ಸ್ವಭಾವಕ್ಕೆ ತಳಹದಿಯಾಗಿದೆ (೧೭-೩). ಶ್ರದ್ಧೆಯು ಹುಟ್ಟಿ (೪-೩೯) ಆಚರಣೆಯೂ ಸುಧಾರಿಸಿದರೆ, ಆ ಪ್ರಾಣಿಯ ಮುಂದಿನ ಸದ್ಗತಿಯ ಹೊಣೆಯನ್ನು ಶ್ರೀಕೃಷ್ಣನು ತಾನೇ ಹೊರುವನು.. ಇಂಥ ಆಚರಣೆಯು ದೃಢವಾಗಿ, ಶಾಶ್ವತ ಶಾಂತಿಯು ಖಂಡಿತವಾಗಿ ದೊರೆಯುವದು. ಶಾಂತಿಯಿಂದ ಮುಕ್ತಿಯು ಬಹಳ ದೂರವಿಲ್ಲೆಂದು ಗೀತೆಯಲ್ಲಿ ಪ್ರತಿಪಾದಿಸಿದೆ.. ಶ್ರೀಕೃಷ್ಣನಲ್ಲಿಯ ಭಕ್ತಿಯಿಂದ ಅಂದರೆ ಸೃಷ್ಟಿಯ ಅಧ್ಯಾತ್ಮ ನಿಯಮವನ್ನು ಅನುಸರಿಸುವದರಿಂದ ಯಾವ ಭಕ್ತನೂ ಕೆಡಲಾರನೆಂಬ ಅಭಿವಚನವನ್ನು ಶ್ರೀಕೃಷ್ಣನು ಅರ್ಜುನನಿಗೆ ಕೊಡುವನು.

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಂ ॥३೨॥**

ಶ್ರೀಕೃಷ್ಣಪುರುಷೋತ್ತಮನಲ್ಲಿ ಭಕ್ತಿಯನ್ನಿಡುವದು, ಅವನಲ್ಲಿ ಆಸಕ್ತನಾಗಿರುವದು, ಆಜನ್ಮವೂ ಅವನನ್ನೇ ಆಶ್ರಯಿಸಿರುವದು ಸೃಷ್ಟಿಯ ಈ ಸ್ವಭಾವಧರ್ಮವನ್ನು ಯಾವನು ಪಾಲಿಸುವನೋ ಅವನು ಜ್ಞಾನವನ್ನು ಶೋಧಿಸುವ ಕಾರಣವಿಲ್ಲ; ಕರ್ಮವನ್ನು ಮೇಲು ಕೀಳೆಂದು ಗಣಿಸುವ ಕಾರಣವಿಲ್ಲ, ಭಕ್ತಿಗಾಗಿ ಅನ್ಯದೇವತೆಗಳನ್ನು ಹುಡುಕುವ ಕಾರಣವಿಲ್ಲ. ಅವನಲ್ಲಿ ಬೇರೂರಿರುವ ನಿಯತಸ್ವಭಾವ ವಿಹಿತವಾದ ಧರ್ಮಾಚರಣೆಯಿಂದ ಜ್ಞಾನ, ಕರ್ಮ, ಭಕ್ತಿ ಇವು ಯಥಾಪ್ರಮಾಣವಾಗಿಯೂ ಯಥೋಚಿತವಾಗಿಯೂ ಸಕಾಲದಲ್ಲಿ ಕೈಗೂಡುವವು. ಅಧರ್ಮವನ್ನಾಚರಿಸಿದವರಾದರೂ ಇಂಥ ಧರ್ಮಾಚರಣೆಯಿಂದ ಹೇಗೆ ಉದ್ಧಾರವಾಗುವರೆಂಬುದು

ಮೇಲೆ ಹೇಳಿದೆ. ಎಂದ ಮೇಲೆ ಸ್ತ್ರೀಯರು, ವೈಶ್ಯರು, ಶೂದ್ರರು ಹಾಗು ಪಾಪಯೋನಿಜರು ಇವರಾದರೂ ಅದೇ ಮಾರ್ಗವನ್ನವಲಂಬಿಸಿ ಅತ್ಯಂತ ಪರಿಶುದ್ಧರಾದ ಜ್ಞಾನಿಗಳು ಪಡೆಯುವ ಪರಮಗತಿಯನ್ನು ಪಡೆಯಬಹುದು.

ಸ್ತ್ರೀಯರು, ವೈಶ್ಯರು, ಶೂದ್ರರು ಇವರ ಮೇಲೆ ಅಧ್ಯಾತ್ಮ ಪರಿಶೀಲನ ವಿಷಯದಲ್ಲಿ ಹಾಕಿದ ನಿರ್ಬಂಧನಗಳಿಗೆ ಮನುಷ್ಯನ ಸಾಮಾಜಿಕ ಸದಸದ್ವಿವೇಕಜನ್ಯ ಕಲ್ಪನೆಗಳೇ ಕಾರಣವಾಗಿವೆ. ಜ್ಞಾನ, ಕರ್ಮ, ಭಕ್ತಿ, ಮುಕ್ತಿಗಳನ್ನು ಸಾಧಿಸುವದಕ್ಕಾಗಿ ಶಾಸ್ತ್ರಕಾರರು ಯಾವ ಮಾರ್ಗವನ್ನು ಅವಲಂಬಿಸುವ ಸಂಕಲ್ಪವನ್ನು ಮಾಡಿದ್ದರೋ ಅದೇ ಮಾರ್ಗವನ್ನು ಇವರಿಗೂ ತೋರಿಸಿದರೆ ಅದು ಸಮಾಜದ ಹಿತಕ್ಕೆ ವಿಘಾತಕವಾಗುವದೆಂಬದೇ ಆ ವಿಷಯದಲ್ಲಿ ಹಾಕಿದ ನಿರ್ಬಂಧಕ್ಕೆ ಕಾರಣವಾಗಿರಬೇಕು.

ಆದರೆ ಗೀತೆಯಲ್ಲಿ ಶ್ರೀಕೃಷ್ಣನು ಸಾರಿರುವ ಮುಕ್ತಿಸಾಧನೆಯ ಮಾರ್ಗವು ಬೇರೆಯಾಗಿರುವದಲ್ಲದೆ ಕೇವಲ ಸ್ವತಂತ್ರವಾಗಿಯೂ ಇರುವದರಿಂದ ಈ ನಿರ್ಬಂಧನಗಳಾಗಲಿ ಸಮಾಜಹಿತದ ಭಯವಾಗಲಿ ಅವನಿಗೆ ಅಗತ್ಯವೆಂದು ತೋರುವದಿಲ್ಲ. ಆದುದರಿಂದ ಹೇಗೆ ಜ್ಞಾನಿಗಳೋ ಹಾಗೆಯೇ ಸ್ತ್ರೀಯರು, ಶೂದ್ರರು, ವೈಶ್ಯರು ಹಾಗು ಪಾಪಯೋನಿಜರಾದರೂ(೪–೩೬) ತಮ್ಮ ತಮ್ಮ ಕ್ರಮಪ್ರಾಪ್ತವಾದ ಸಾಮಾಜಿಕ ಕರ್ಮಗಳನ್ನು–ಇದನ್ನು ಗೀತೆಯು ವರ್ಣವಿಹಿತಕರ್ಮವೆಂದು ಸರ್ವಸಾಧಾರಣವಾಗಿ ಹೇಳಿದೆ—ಬುದ್ಧಿಯೋಗಪರರಾಗಿ ಆಚರಿಸುತ್ತಲಿದ್ದು ಮುಕ್ತಿಯನ್ನು ನಿಸ್ಸಂದೇಹವಾಗಿ ಸಂಪಾದಿಸಬಹುದೆಂದು ಶ್ರೀಕೃಷ್ಣನು ಇಲ್ಲಿ ಹೇಳುವನು.

ಈ ಶ್ಲೋಕದಲ್ಲಿ 'ಪಾಪಯೋನಿಗಳು' ಎಂಬದಕ್ಕೆ ಹಲವು ಅರ್ಥಗಳನ್ನು ಮಾಡುವದುಂಟು. ಗೀತೆಯಲ್ಲಿ ಇದರ ಅರ್ಥವು ಸಂದಿಗ್ಧವಾಗಿರುವಂತೆ ಕಾಣುವದಿಲ್ಲ. ಮನುಷ್ಯನ ಸ್ವಭಾವರಚನೆಯಲ್ಲಿ ಕಾಮಕ್ರೋಧಾದಿಗಳೇ ಪಾಪಕ್ಕೆ ಕಾರಣವೆಂಬ ತತ್ವವನ್ನು ಗೀತೆಯಲ್ಲಿ ಹೇಳಿದೆ(೩–೪೧; ೧೬–೨೧). ಯಾವ ಮನುಷ್ಯನಲ್ಲಿ ಇವುಗಳ ಆವೇಗವು ಸಂಭವಿಸುವದೋ ಅವನೇ ಪಾಪಿಯು. ಗೀತೆಯ ಅಭಿಪ್ರಾಯವೇನೆಂದರೆ, ಎಲ್ಲ ಪ್ರಾಣಿಗಳೂ ಸಕಾರಣವಾಗಿ ಅನುರೂಪಯೋನಿಗಳಲ್ಲಿ ಹುಟ್ಟುವರು. ಯಾವನೊಬ್ಬ ಮನುಷ್ಯನ ಸ್ವಭಾವದಲ್ಲಿ ಕಾಮಕ್ರೋಧಾದಿಗಳ ಉದ್ರೇಕವು ಉಂಟಾದರೆ ಆ

ಮನುಷ್ಯನು ಅಶುಭ ಅಥವಾ ಆಸುರ ಯೋನಿಜನೆಂದು ತಿಳಿಯಬೇಕು (೧೬-೧೯). **ಆಸುರ ಇಲ್ಲವೆ ಪಾಪಯೋನಿಜರ ಲಕ್ಷಣವನ್ನು ಅವರು ಮಾಡುವ ಉಗ್ರ ಕರ್ಮಗಳಿಂದಲೂ ಜಗತ್ತಿನ ವಿಷಯದಲ್ಲಿ ಅವರಿಗಿರುವ ಅಹಿತ ಬುದ್ಧಿಯಿಂದಲೂ ಶತ್ರುತ್ವದಿಂದಲೂ ಕಂಡುಕೊಳ್ಳಬೇಕು.** ಯೋನಿಗಳ ಪೂರ್ವಸಂಸ್ಕಾರಗಳನ್ನು ಪರೀಕ್ಷಿಸಿ ಇದನ್ನು ನಿರ್ಧರಿಸುವದು ಶಕ್ಯವಲ್ಲ. ಭಾರತೀಯ ಯುದ್ಧಪ್ರಸಂಗವನ್ನು ತೆಗೆದುಕೊಂಡರೂ ದುರ್ಯೋಧನ ನನ್ನು ಪಾಪಯೋನಿಜನೆಂದು ಹೇಳಲಿಕ್ಕೆ ಶ್ರೀಕೃಷ್ಣನು ಅನುಮಾನಿಸುವಂತೆ ತೋರುವದಿಲ್ಲ. ಹೀಗಿದ್ದರೂ ಕೌರವ ಪಾಂಡವರ ಪಿತೃಯೋನಿಯು ಒಂದೇ ಆಗಿತ್ತು; ಬೇರೆಬೇರೆಯಲ್ಲ. ಪಾಂಡವರ ತಂದೆಯು ರೋಗಿಷ್ಠನಾಗಿದ್ದನೆಂಬ ಕಾರಣಕ್ಕಾಗಿಯೇ ಅವರನ್ನು ಪಾಪಯೋನಿಜರೆಂದು ಶ್ರೀಕೃಷ್ಣನು ಬಗೆಯ ಲಿಲ್ಲ.

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಂ ॥ ೩೩ ॥**

ಮುಕ್ತಿಸಾಧನದ ಸರ್ವಸಾಧಾರಣ ಮಾರ್ಗಕ್ರಮಣ ಮಾಡಲು ಬೇಕಾಗುವಷ್ಟು ಪುಣ್ಯವಂತಿಕೆಯು ಯಾವ ವರ್ಗದ ಜನರಲ್ಲಿರುವದಿಲ್ಲೆಂದು ಪಂಡಿತರು ನಿರ್ಧರಿಸಿದ್ದರೋ ಅಂಥವರಿಗೆ ಸಹ ಆ ಪಂಡಿತರಿಗೆ ಸರಿಸಮಾನ ವಾಗಿ ಮುಕ್ತಿಯು ದೊರೆಯುವ ಅನುಕೂಲತೆಯನ್ನು ಬುದ್ಧಿಯೋಗ ಶಾಸ್ತ್ರದಲ್ಲಿ ಅಕ್ಕರೆಯಿಂದಲೂ ಅಭಿಮಾನದಿಂದಲೂ ಶ್ರೀಕೃಷ್ಣನು ಮಾಡಿರು ವನು. ಹೀಗಿರುವಾಗ ಪವಿತ್ರರೂ ಪುಣ್ಯಶೀಲರೂ ಆದ ಬ್ರಾಹ್ಮಣರಾಗಲಿ ರಾಜರ್ಷಿಗಳಾಗಲಿ ಅವರಲ್ಲಿ ಕೇವಲ ಶ್ರೀಕೃಷ್ಣಪುರುಷೋತ್ತಮನ ಬಗೆಗೆ ಭಕ್ತಿಯು ನೆಲಸಿದರೆ ವಿಶೇಷ ಸೌಲಭ್ಯದಿಂದ ಮುಕ್ತಿಯನ್ನು ಪಡೆಯುವದ ರಲ್ಲಿ ಸಂದೇಹವೇನು ? ಈ ಜಗತ್ತಿನಲ್ಲಿ ಮನುಷ್ಯಸ್ವಭಾವದೊಂದಿಗೆ ಪ್ರತ್ಯಕ್ಷ ಸಂಪರ್ಕವಾಗುವ ಎಲ್ಲ ವಸ್ತುಗಳೂ ಅನಿತ್ಯವಾಗಿರುವವು. ಈ ವಸ್ತು ಗಳನ್ನು ದಾಟಿ ಅವುಗಳ ಆಚೆಗಿರುವದನ್ನು ಮನುಷ್ಯನ ದೃಷ್ಟಿಯು ಸಾಮಾನ್ಯವಾಗಿ ಕಂಡುಕೊಳ್ಳುವದಿಲ್ಲ. ಇದೊಂದು ದುರ್ದೈವವು. ಆದರೆ ಈ ಜಗತ್ತಿನಲ್ಲಿ ನಿತ್ಯವಸ್ತುವೇ ಇಲ್ಲವೆಂದೂ ನಿತ್ಯಸುಖವು

ದುರ್ಲಭವೆಂದೂ ತಿಳಿಯಬಾರದು. ಪುರುಷೋತ್ತಮ ಶ್ರೀಕೃಷ್ಣನೇ ಆ ನಿತ್ಯವಸ್ತುವು. ಅವನನ್ನು ಪಡೆಯುವದರಿಂದ ಮನುಷ್ಯನಿಗೆ ಶಾಶ್ವತ ಸುಖವು ತಾನಾಗಿಯೇ ದೊರೆಯುವದು. ಆದರೆ ಈ ಸಂಗತಿಗಳು ಅನುಭವಕ್ಕೆ ಬಂದು ಪರಿಚಿತವಾಗಲಿಕ್ಕೆ ಬುದ್ಧಿಯೋಗದ ಅಭ್ಯಾಸವನ್ನು ಸಾಧಿಸಬೇಕು. ಆತ್ಮದ ವಿಜ್ಞಾನವೆಂಬ ಆಧ್ಯಾತ್ಮದೃಷ್ಟಿಯು ಜಾಗೃತವಾಗಬೇಕು. ಇದು ಸಾಧ್ಯವಾದರೆ ಪುರುಷೋತ್ತಮ ಶ್ರೀಕೃಷ್ಣನಲ್ಲಿ ಪ್ರೀತಿಯೂ ಅವನ ಭಜನೆ ಕೀರ್ತನೆಗಳೂ ಮನುಷ್ಯನಿಗೆ ಪರಮ ಕರ್ತವ್ಯವೆಂದು ಅನುಭವಕ್ಕೆ ಬರುವದು. ಅವನು ಈ ಪರಮಸ್ಥಿತಿಯಲ್ಲಿ ನಿಂತು ಮಾಡುವ ಕರ್ಮಗಳೆಲ್ಲ ಶ್ರೀಕೃಷ್ಣನ ಅರ್ಚನೆಗಾಗಿ ಅರ್ಪಿಸಿದ ಸುಮನಗಳಾಗಿ ಪರಿಣಮಿಸುವವು. ಈ ತರದ ಕರ್ತವ್ಯ ಸಮುಚ್ಚಯದಲ್ಲಿ ಮನುಷ್ಯನ ಯೋಗಕ್ಷೇಮ ಚಿಂತನೆಯಿಂದ ಆರಂಭಿಸಿ ಸರ್ವಭೂತ ಹಿತದವರೆಗಿನ ಪ್ರಯತ್ನಗಳೂ ಆಕಾಂಕ್ಷೆಗಳೂ ಉದ್ಧಾರಗಳೂ ಎಲ್ಲವೂ ಸಮಾವೇಶವಾಗಬಹುದು; ಮತ್ತು ಮನುಷ್ಯನು ತನ್ನ ಕರ್ತವ್ಯದ ಧ್ಯೇಯವನ್ನು ಎಷ್ಟು ಉಚ್ಚವಾಗಿಟ್ಟುಕೊಂಡರೂ ಪುರುಷೋತ್ತಮ ಶ್ರೀಕೃಷ್ಣನ ಮೇಲಿನ ಭಕ್ತಿಯು ಅದಕ್ಕೆ ಅಡ್ಡಿಯಾಗುವದಿಲ್ಲ; ಇಷ್ಟೇ ಅಲ್ಲ, ಎಣಿಸಿದ ಕಾರ್ಯಸಾಫಲ್ಯಕ್ಕಾಗಲಿ ಅದರಿಂದ ಪಡೆಯಬೇಕಾದ ಆತ್ಯಂತಿಕವಾದ ನಿತ್ಯಸುಖಕ್ಕಾಗಲಿ ಅದು ಖಂಡಿತವಾಗಿ ನೆರವಾಗುವದು. ಆದುದರಿಂದ ಯಾವ ಜೀವರಿಗೆ ಈ ಜಗವು ಅನಿತ್ಯವೆಂದೂ ದುಃಖಮಯವೆಂದೂ ಅನುಭವಕ್ಕೆ ಬರುವದೋ ಅವರು ತನ್ನ ಭಕ್ತಿಯ ಕಡೆಗೆ ತಿರುಗಬೇಕೆಂದು ಅವರಿಗೆ ಶ್ರೀಕೃಷ್ಣನ ಉಪದೇಶವು.

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥೩೪॥**

ತನ್ನಲ್ಲಿರುವ ಕುಂದುಕೊರತೆಗಳನ್ನು ಒಂದೊಂದು ಪ್ರಸಂಗದಲ್ಲಿಯೂ ಮನುಷ್ಯನು ಹೇಗೆ ಸರಿಪಡಿಸಿಕೊಳ್ಳಬೇಕೆಂಬ ಉಪದೇಶವು ಗೀತೆಯಲ್ಲಿ ಇರುವದಿಲ್ಲ. ಅವನ ಸ್ವಭಾವವನ್ನು ಒಂದು ಸಾರೆ ಆಧ್ಯಾತ್ಮಿಕ ಅಚ್ಚಿನಲ್ಲಿ ಹೊಯಿಸಿಬಿಟ್ಟರೆ ಅದರಲ್ಲಿ ಯಾವ ಕೊರತೆಯೂ ಉಳಿಯುವದಿಲ್ಲ. ಮತ್ತು ಪ್ರಾಪ್ತವಾದ ಪ್ರಸಂಗವು ಇತರರ ಕಣ್ಣಿಗೆ ಸಾಧಿಸಿದಂತೆ ತೋರಲಿ

ತೋರದಿರಲಿ ಆ ಮನುಷ್ಯನು ತನ್ನ ಶ್ರೇಯವನ್ನಂತೂ ಖಂಡಿತವಾಗಿ ಪಡೆದಿರುವನೆಂದು ಗೀತೆಯು ತನ್ನ ಮತವನ್ನು ಹೇಳುವದು. ಇದಕ್ಕಾಗಿಯೇ ಗೀತೆಯಲ್ಲಿ ಮನುಷ್ಯನ ಶೀಲ, ಕರ್ತೃತ್ವ, ಧ್ಯೇಯಗಳಿಗಿಂತಲೂ ಪುರುಷೋತ್ತಮನ ಭಕ್ತಿಗೆ ಮಹತ್ವವು ಕೊಡಲ್ಪಟ್ಟಿದೆ.

ಆರನೆಯ ಅಧ್ಯಾಯದಲ್ಲಿ ಯೋಗವನ್ನು ಅಂದರೆ ಪುರುಷೋತ್ತಮನಲ್ಲಿ ಅನನ್ಯ ಭಕ್ತಿಯನ್ನು ಕುರಿತು ಹೇಳಿದಾಗಿನಿಂದ ಒಂದೊಂದು ಅಧ್ಯಾಯದಲ್ಲಿಯೂ "ಯೋಗಿಯೇ ಪರಮಶ್ರೇಷ್ಠನು" "ನೀನು ಯೋಗಿಯಾಗು" ಎಂದು ಒತ್ತಿ ಒತ್ತಿ ಹೇಳುತ್ತಿರುವದನ್ನು ಉಪಕ್ರಮೋಪಸಂಹಾರ ದೃಷ್ಟಿಯಿಂದ ಗೀತೆಯೊಳಗಿನ ಅಭ್ಯಾಸ ವಿಷಯವನ್ನು ಶೋಧಿಸುವವರು ಕಂಡುಕೊಳ್ಳಬೇಕು. ಯುದ್ಧ ಮಾಡೆಂದು ಅನೇಕಸಾರೆ ಹೇಳಿರುವದಕ್ಕಿಂತಲೂ ಯೋಗಿಯಾಗು ಯುಕ್ತನಾಗು ಎಂದು ಹೇಳಿದ ಪುನಶ್ಚರಣೆಯು ಹೆಚ್ಚು ಮಹತ್ವದ್ದಾಗಿದೆ ಎಂಬದು ಎಲ್ಲರೂ ಒಪ್ಪತಕ್ಕ ಮಾತು,

ಹೀಗೆ ಅರ್ಜುನನು ಯೋಗಿಯೂ ಭಕ್ತನೂ ಆಗುವದರಿಂದ ಅವನ ಸ್ವಭಾವದ ಮೇಲೆಯೂ ಆಚರಣೆಯ ಮೇಲೆಯೂ ಆದರ ಪರಿಣಾಮವೇನಾಗಬಹುದು? ಅವನು ತನ್ನ ಮನಸ್ಸನ್ನು ಶ್ರೀಕೃಷ್ಣನಿಗೆ ಭಾವಸರ್ವಸ್ವದಿಂದಲೂ ಅರ್ಪಿಸಿ ಅವನ ಭಕ್ತನಾಗಿ ಅವನನ್ನು ಆರಾಧಿಸುವದೇ ಇದಕ್ಕೆ ಫಲವು. ಇದು ಬಾಹ್ಯತಃ ಕಾಣಿಸುವಷ್ಟು ಕ್ಷುಲ್ಲಕವಾದುದಲ್ಲ. ಅವನ ಆತ್ಮವು ಪೂರ್ಣತ್ವವನ್ನು ಪಡೆಯದಿದ್ದರೆ ಈ ವಿಷಯಗಳನ್ನು ಸಾಧಿಸುವದು ಸುಲಭವೂ ಅಲ್ಲ ಶಕ್ಯವೂ ಅಲ್ಲ. **ಹೀಗೆ ಆತ್ಮವು ಪುರುಷೋತ್ತಮನಲ್ಲಿ ಪರಾಯಣತೆಯನ್ನು ವಹಿಸಿ, ಬುದ್ಧಿಯು ಯುಕ್ತವಾಗುವದರಿಂದ** ಅವನು ಶ್ರೀಕೃಷ್ಣಪುರುಷೋತ್ತಮನನ್ನು ಸೇರುವದರಲ್ಲಿ ಸಂದೇಹವಿಲ್ಲ. ಇದನ್ನು ಮೀರಿದ ಇತಿಕರ್ತವ್ಯವು ಮನುಷ್ಯನಿಗಿರುವದೆಂದು ಗೀತೆಯು ಒಪ್ಪುವದೇ ಇಲ್ಲ. ಈ ಧರ್ಮವನ್ನು ಪಾಲಿಸುವವನು ಇನ್ನುಳಿದ ಧರ್ಮಗಳನ್ನೆಲ್ಲ ನಿರ್ಭಯನಾಗಿ ತ್ಯಜಿಸಬಹುದು (೧೮-೬೬).

**ಒಂಬತ್ತನೆಯ ಅಧ್ಯಾಯವು ಸಮಾಪ್ತವು.**

ಓಂ

# ಹತ್ತನೆಯ ಅಧ್ಯಾಯವು



**ಅವತರಣಿಕೆ—**

ಪ್ರಾಪ್ತವಾಗಿದ್ದ ಯುದ್ಧವನ್ನು ತಾನು ಮಾಡಬೇಕೋ ಬಿಡಬೇಕೋ ಎಂಬ ನಿರ್ಣಯವನ್ನು ಒಂದೇ ಮಾತಿನಲ್ಲಿ ಶ್ರೀಕೃಷ್ಣನು ತನಗೆ ಹೇಳಿಬಿಡ ಬೇಕೆಂಬ ಛಲವನ್ನು ಹಿಡಿದ ಅರ್ಜುನನಿಗೆ ಆ ಛಲವನ್ನು ಬಿಡಿಸಿ ಅತ್ಯುತ್ತಮ ವಾದ ಬುದ್ಧಿಯೋಗ ಶಾಸ್ತ್ರವನ್ನು ಕ್ರಮವಾಗಿ ಬೋಧಿಸುವ ಸಂಕಲ್ಪ ವನ್ನು ಮಾಡಿ, ಶ್ರೀಕೃಷ್ಣನು ಗೀತೆಯನ್ನು ಹೇಳಲಾರಂಭಿಸಿದ್ದನು. ಈ ಬುದ್ಧಿಯೋಗ ಶಾಸ್ತ್ರದ ನಿರೂಪಣೆಯು ಪ್ರವಾಹವು ಯಾವ ಯಾವ ಮಾರ್ಗ ವಾಗಿ ಹೇಗೆ ಹರಿಯುತ್ತ ಬಂದಿರುವದೆಂಬದನ್ನು ಹೊಸ ದೃಷ್ಟಿಯಿಂದ ಸುಸಂಗತವಾಗಿ ಈ ವರೆಗೆ ನಾವು ವಿವರಿಸಿರುವೆವು. ಅರ್ಜುನನ ಕರ್ಮದ ಕಲ್ಪನೆಯನ್ನು ತಿದ್ದಿ, ಸಂನ್ಯಾಸ ವಿಷಯದ ತಪ್ಪು ತಿಳುವಳಿಕೆಯನ್ನು ನಿವಾ ರಿಸಿ ಬುದ್ಧಿಯೋಗವೇ ಎಲ್ಲ ಯೋಗಗಳಲ್ಲಿ ರಾಜಪದವಿಯನ್ನು ಪಡೆದಿರು ವದೆಂದು ಅವನು ಮನಗಾಣುವಂತೆ ಶ್ರೀಕೃಷ್ಣನು ಈ ವರೆಗೆ ಉಪದೇಶಿಸಿ ದನು. ಇಂಥ ಬುದ್ಧಿಯೋಗದ ಸಂಪೂರ್ಣತೆಗೆ ಆತ್ಮದಿಂದ ದೊರೆಯುವ ವಿಜ್ಞಾನವು ಅಗತ್ಯವು, ಆದರೆ ಬುದ್ಧಿಗಮ್ಯವಾದ ಜ್ಞಾನವಾದರೂ ತಕ್ಕ ಮಟ್ಟಿಗೆ ಅವಶ್ಯವಾಗಿರುವದು. ಬುದ್ಧಿಯೋಗಕ್ಕೆ ಸಂಬಂಧಿಸಿದ ಈ ಜ್ಞಾನ ವಿಜ್ಞಾನಗಳನ್ನು ಏಳನೆಯ ಅಧ್ಯಾಯದಿಂದ ಶ್ರೀಕೃಷ್ಣನು ಹೇಳುತ್ತ ಬಂದಿರು ವನು. ವಿಜ್ಞಾನವೇ ಅರ್ಜುನನಿಗೆ ಬೋಧಿಸಬೇಕಾದ ಹೊಸ ವಿಷಯವು. ಅದನ್ನು ಗ್ರಹಿಸಲಿಕ್ಕೆ ಬೇಕಾದ ಜ್ಞಾನಸಂಗ್ರಹವು ಅವನಲ್ಲಿ ತಕ್ಕಮಟ್ಟಿಗೆ ಇದ್ದಿತು. ಆದುದರಿಂದ ಏಳನೆಯ ಅಧ್ಯಾಯದಿಂದ ಈ ವರೆಗೆ ವಿಜ್ಞಾನ ವನ್ನೇ ಗುರಿಯಾಗಿಟ್ಟುಕೊಂಡು ಗೀತಾನಿರೂಪಣೆಯನ್ನು ಸಾಗಿಸಿದೆ. ಈ

ವಿಜ್ಞಾನದ ಸ್ವರೂಪವು ಗೀತೆಯಲ್ಲಿ ಯಾವ ಹೊಸ ಪರಿಯದಾಗಿದೆ ಯೆಂಬದು ಅರ್ಜುನನಿಗೆ ಈಗ ತಿಳಿದುಬಂದಿದೆ. ಹತ್ತನೆಯ ಅಧ್ಯಾಯದಲ್ಲಿ ವಿಜ್ಞಾನ ವಿಷಯದ ನಿರೂಪಣೆಯ ಸಮಾರೋಪವನ್ನು ಶ್ರೀಕೃಷ್ಣನು ಮಾಡಿರುವನು. ಈ ವಿಜ್ಞಾನ ವಿಷಯದ ಸುಂದರ ವರ್ಣನೆಯನ್ನು ತನ್ನ ಕರ್ಣಾನಂದಕ್ಕಾಗಿ ಮನವಾರೆ ತಿಳಿಸಿಹೇಳೆಂದು ಅರ್ಜುನನಾದರೂ ಕೇಳಿರುವನು.

ಶ್ರೀಭಗವಾನುವಾಚ—

**ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ |**
**ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ||೧||**

ಶ್ರೀಕೃಷ್ಣನು ಅರ್ಜುನನ ಪರಮಹಿತವನ್ನು ಕೋರುವನು. ಅರ್ಜುನನಾದರೂ ಇದನ್ನು ತಿಳಿದು ಅವನ ಬೋಧನೆಯನ್ನು ಪರಮಾದರದಿಂದ ಆಲಿಸಿ ಹಿಗ್ಗುತಲಿದ್ದನು. ಪರಮಶ್ರೇಷ್ಠವೂ ಗುಹ್ಯವೂ ಆದ ಸಿದ್ಧಾಂತಗಳನ್ನು ಶ್ರೀಕೃಷ್ಣನು ಅರ್ಜುನನಿಗೆ ಹೇಳಬಯಸುವನು. ಅದನ್ನು ಅವನು ಮತ್ತೆ ಆಲಿಸಬೇಕು.

**ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ |**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ||೨||**

ವಿಜ್ಞಾನ ವಿಷಯವಾದ ಪುರುಷೋತ್ತಮ ಶ್ರೀಕೃಷ್ಣನ ಹುಟ್ಟನ್ನು ದೇವತೆಗಳಾಗಲಿ ಮಹರ್ಷಿಗಳಾಗಲಿ ತಿಳಿಯರು. ಮಾನವರಿಗೆ ಪರಿಚಿತರಾದ ಎಲ್ಲ ದೇವತೆಗಳಿಗೂ ಮಹರ್ಷಿಗಳಿಗೂ ಪುರುಷೋತ್ತಮ ಶ್ರೀಕೃಷ್ಣನೇ ಆದಿಕಾರಣನು.

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಂ |**
**ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ||೩||**

ಪುರುಷೋತ್ತಮ ಶ್ರೀಕೃಷ್ಣನಿಗೆ ಹುಟ್ಟೇ ಇಲ್ಲವೆಂಬ ಸಂಗತಿಯು ಮಹತ್ವದ್ದಾಗಿದೆ. ಹುಟ್ಟಿಲ್ಲದ್ದನ್ನು ಅನಾದಿಯೆಂದೂ ಹೇಳುವದುಂಟು. ಆದುದರಿಂದ ಅವನು ಆದಿಯಿಲ್ಲದವನೂ ಆಗಿರುವನು. ಅವನನ್ನು

ಅನಾದಿಯೆಂದು ಹೇಳುವದು ಅವನ ಆತ್ಮಸ್ವಭಾವ ಮಾತ್ರಕ್ಕಾಗಿ ಅಲ್ಲ. ಆತ್ಮಸ್ವಭಾವವು ಅರ್ಜುನನಿಗಾದರೂ ಇರಲಿಲ್ಲವೇ? ಆತ್ಮಸ್ವಭಾಗಕ್ಕಾಗಿ ಅರ್ಜುನನು ಜನ್ಮರಹಿತನೆಂದೂ ಅನಾದಿಯಾದವನೆಂದೂ ಗೀತೆಯಲ್ಲಿ ಹೇಳ ಲಿಲ್ಲ. ಹಾಗೆ ಏಕೆ ಹೇಳಲಿಲ್ಲವೆಂದು ಅವನು ಕೇಳಲಿಲ್ಲ. ಅವನಿಗೆ ಬಂದ ಅನೇಕ ಸಂದೇಹಗಳಲ್ಲಿ ಈ ಸಂದೇಹವು ಗೀತೆಯಲ್ಲಿ ಕಾಣುವದಿಲ್ಲ. **ಶ್ರೀ ಕೃಷ್ಣಪುರುಷೋತ್ತಮನನ್ನು ಅಜನೆಂದೂ ಅಥವಾ ಅನಾದಿಯೆಂದೂ ಹೇಳುವದಕ್ಕೆ ಅವನ ಯೋಗ್ಯತೆಯೇ ಕಾರಣವು.** ಸೃಷ್ಟಿಗೂ ಸೃಷ್ಟ್ಯಂತ ರ್ಗತವಾದ ಜೀವ ಜಡಕೋಟಿಗಳಿಗೂ ಜನ್ಮಕೊಡುವ ಅಧಿಕಾರವು ಅವ ನದು. ಅವನಿಗೆ ಜನ್ಮ ಕೊಡುವ ಅಧಿಕಾರವುಳ್ಳ ವ್ಯಕ್ತಿಯು ಇರುವದೇ ಇಲ್ಲ. ಇದೇ ಯೋಗ್ಯತೆಗಾಗಿ ಅವನು ಈ ಸೃಷ್ಟಿಯೊಳಗಿನ ಲೋಕಗಳಿಗೆಲ್ಲ ಮಹೇಶ್ವರನಾಗಿರುವನು. ಹೀಗಿದ್ದರೂ ಅವನನ್ನು ಮಹೇಶ್ವರನೆಂದು ತಿಳಿ ಯುವದು ಅಥವಾ ತಿಳಿಯದಿರುವದು ಮನುಷ್ಯನ ಇಚ್ಛೆಯ ಮಾತು. ಅವ ನನ್ನು ಹಾಗೆ ತಿಳಿಯಲಿಕ್ಕೆ ವಿಜ್ಞಾನವನ್ನು ಸಾಧಿಸಿರಲು ಬೇಕು. ವಿಜ್ಞಾನ ವಿಲ್ಲದವನಿಗೆ ಆತನ ಕಲ್ಪನೆಯೇ ಶಕ್ಯವಿಲ್ಲದ ಬಳಿಕ ಅವನ ಮಹೇಶ್ವರತ್ವದ ಅರಿವು ಎಲ್ಲಿಯದು ? ಆದರೆ ಹೀಗೆ ವಿಜ್ಞಾನವಿಹೀನರಾಗಿ ಅವನನ್ನು ಅರಿಯ ದಿರುವವರು ಸಂಮೂಢರು; ತಮ್ಮ ಹಿತವನ್ನೇ ತಾವು ಅರಿಯದವರು. ವಿಜ್ಞಾನಸಮಂಡಿತರಾದವರು "ಅಸಂಮೂಢರು" ಅಂದರೆ ವ್ಯಾಮೋಹಕ್ಕೆ ಒಳಗಾಗದವರು. ಅವರು ಮರ್ತ್ಯರಾದರೇನಾಯಿತು ! ಮರ್ತ್ಯರಿಗಾದರೂ ಮರಣವು ಭಯಂಕರವಲ್ಲ. ಅದು ಪಾಪಮೂಲಕವಾದಾಗಲೇ ಭಯಂಕರ ವಾಗುವದು. ವಿಜ್ಞಾನದಿಂದ ಪುರುಷೋತ್ತಮ ಶ್ರೀಕೃಷ್ಣನನ್ನು ಲೋಕ ಮಹೇಶ್ವರನೆಂದು ತಿಳಿದಮಾತ್ರಕ್ಕೆ ಎಲ್ಲ ಪಾಪಗಳು ನಾಶವಾಗಿ ಹೋಗು ವವು. ಪಾಪವಿಲ್ಲದ ಮೇಲೆ ಮರ್ತ್ಯನಿಗೆ ಮೃತ್ಯುವು ಭಯಂಕರವಾಗಿ ತೋರದು.

**ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋ ಭಾವೋ ಭಯಂ ಚಾಭಯಮೇವ ಚ ॥೪॥**

**ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ ೫ ॥**

ಮನುಷ್ಯರ ಶರೀರಧರ್ಮಕ್ಕೆ ಸಹಜವಾದ ಬುದ್ಧಿ, ಜ್ಞಾನ, ನಿರ್ಮೋಹ, ಕ್ಷಮೆ, ಸತ್ಯ, ಶಾಂತಿ, ಇಂದ್ರಿಯದಮನ, ಸುಖದುಃಖ, ಆಗುಹೋಗುಗಳು, ಭಯಾಭಯ, ಅಹಿಂಸೆ, ಸಮತೆ, ತುಷ್ಟಿ, ತಪ, ದಾನ, ಯಶ, ಅಪಯಶ, ಇವೇ ಮೊದಲಾದ ಬೇರೆ ಬೇರೆ ಭಾವನೆಗಳು ಶ್ರೀಕೃಷ್ಣ ನಿಂದಲೇ ಪ್ರಾಪ್ತವಾಗುವವು.

**ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥ ೬ ॥**

ಮಾನವ ವಂಶಕ್ಕೆಲ್ಲ ಮೂಲ ಪಿತೃಗಳೆಂದು ಬಗೆಯಲ್ಪಟ್ಟ ನಿಷ್ಪಾಪ ರಾದ ಏಳುಜನ ಮಹರ್ಷಿಗಳೂ ನಾಲ್ವರು ಮನುಗಳೂ ನನ್ನ ಮನಸ್ಸಿನಲ್ಲಿ ಭಾವರೂಪವಾಗಿ ಮೊದಲು ಹುಟ್ಟಿದರು. ಹೀಗೆ ಹುಟ್ಟಿದುದಕ್ಕೆ ವಿಭೂತಿ ಯೆಂಬ ಹೆಸರು. ಅವರಿಂದಲೇ ಈ ಲೋಕವೆಲ್ಲ ವಿಸ್ತಾರಗೊಂಡಿತು.

**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।**
**ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥ ೭ ॥**

ಈ ರೀತಿಯಾಗಿ ನನ್ನಿಂದುಂಟಾದ ಸೃಷ್ಟಿಯನ್ನೂ (ವಿಭೂತಿ ಯನ್ನೂ) ಅದರಲ್ಲಿಟ್ಟ ನನ್ನ ಆತ್ಮಯೋಗವನ್ನೂ "ತತ್ತ್ವತಃ" ಎಂದರೆ ಗೀತೆಯಲ್ಲಿಯೇ ತತ್ತ್ವಪೂರ್ವಕವಾಗಿ ವಿಶದ ಮಾಡಿರುವಂತೆ ತಿಳಿಯುವವರು ನನ್ನಲ್ಲಿ ಆಧ್ಯಾತ್ಮಯೋಗವನ್ನು ನಿಶ್ಚಲರಾಗಿ ಆಚರಿಸುವದರಲ್ಲಿ ಸಂದೇಹ ವಿಲ್ಲ.

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥ ೮ ॥**

ಮೇಲೆ ವರ್ಣಿಸಿದ ಜ್ಞಾನಿಗಳು ಎಲ್ಲಕ್ಕೂ ನಾನೇ ಮಹಾಪ್ರಭುವು ನನ್ನಿಂದಲೇ ಎಲ್ಲವೂ ಉಂಟಾಗಿರುವದು ಎಂದು ಬಗೆದು ನನ್ನನ್ನು ಭಕ್ತಿ ಯಿಂದ ಭಜಿಸುವರು.

**ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಂ ।**
**ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥ ೯ ॥**

ಚಿತ್ತವನ್ನು ಸರ್ವಸ್ವವಾಗಿ ನನ್ನಲ್ಲಿಟ್ಟು, ಪ್ರಾಣಗಳನ್ನೆಲ್ಲ ನನಗರ್ಪಿಸಿ ನನ್ನ ವಿಷಯವಾಗಿಯೇ ಪರಸ್ಪರರಿಗೆ ಬೋಧಿಸುತ್ತ, ನನ್ನ ವಿಷಯದ ಕಥೆಗಳನ್ನೇ ನಿತ್ಯವೂ ಹೇಳುತ್ತ ಕೇಳುತ್ತ ಅವರು ಸಂತೋಷವನ್ನು ಪಡೆದು ಆನಂದವನ್ನು ಅನುಭವಿಸುವರು.

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥೧೦॥**

ಶ್ರೀಕೃಷ್ಣನ ಮತದಂತೆ ಇವರೇ ಯೋಗಿಗಳು; ನಿತ್ಯಯೋಗಯುಕ್ತರು; ಅವನನ್ನು ಪ್ರೀತಿಯುಕ್ತರಾಗಿ ಭಜಿಸುವವರು; ಅವನು ಪ್ರಸನ್ನಚಿತ್ತನಾಗಿ ಬುದ್ಧಿಯೋಗವನ್ನು ಅವರಿಗೆ ಕೊಡುವನು. ಆ ಭಕ್ತರು ಈ ಬುದ್ಧಿಯೋಗವನ್ನನುಸರಿಸಿ ಅವನನ್ನು ತಪ್ಪದೆ ಬಂದು ಸೇರುವರು ಅರ್ಜುನನಾದರೂ ಅವರಂಥ ಭಕ್ತನೇ ಆದುದರಿಂದ ಈ ಬುದ್ಧಿಯೋಗವನ್ನು ಅವನಿಗೆ ಶ್ರೀಕೃಷ್ಣನು ಬೋಧಿಸುತ್ತಿರುವನು. ಅವರಂತೆಯೇ ಅರ್ಜುನನೂ ಶ್ರೀಕೃಷ್ಣನನ್ನು ಸೇರುವನೆಂಬದರಲ್ಲಿ ಸಂದೇಹವಿಲ್ಲ.

**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥೧೧॥**

ಅವರ ಭಕ್ತಿಗೆ ಮೆಚ್ಚಿ ಅವರನ್ನು ಅನುಗ್ರಹಿಸಬೇಕೆಂದು ಅವರ ಆತ್ಮಭಾವದಲ್ಲಿ ತಾನೇ ನಿಂತು, ಅಂದರೆ ತನ್ನ ವಿಷಯದಲ್ಲಿ ಅವರಿಗಿದ್ದ ಶ್ರದ್ಧೆಯನ್ನು ದೃಢಪಡಿಸಿ, ಅವರ ಅಂತಃಕರಣವನ್ನು ಜ್ಞಾನದೀಪದಿಂದ ಬೆಳಗಿ (೧೩. ೭-೧೧) ಅಲ್ಲಿ ಉಳಿದಿದ್ದ ಅಜ್ಞಾನವನ್ನು ಶ್ರೀಕೃಷ್ಣನು ನಾಶಮಾಡುವನು.

ಅರ್ಜುನ ಉವಾಚ—

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಂ ॥೧೨॥**

ಶ್ರೀಕೃಷ್ಣನ ಪರಮಶ್ರೇಷ್ಠವಾದ ಪದಪಿಯನ್ನೂ ಅವನು ತನ್ನಲ್ಲಿಟ್ಟ ಅಗಾಧವಾದ ನಿರ್ವ್ಯಾಜ ಪ್ರೇಮವನ್ನೂ ಮನಗಂಡು ಕೃತಜ್ಞತೆಯಲ್ಲಿ ಮುಳುಗಿದ ಅಂತಃಕರಣದಿಂದ ಅರ್ಜುನನು ಈ ಪ್ರಕಾರ ನುಡಿಯುವನು:- ನೀನು ಪರಮಬ್ರಹ್ಮನು-ಜೀವರಿಗೆ ಶ್ರೇಷ್ಠವೂ ಪವಿತ್ರವೂ ಆದ ನಿವಾಸ ಸ್ಥಾನವು, ಶಾಶ್ವತನಾದ ದಿವ್ಯಪುರುಷನು, ಆದಿ ದೇವನು, ಜನ್ಮರಹಿತನು, ಸರ್ವವ್ಯಾಪಿಯು.

**ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥೧೩॥**

ನಾರದ, ಅಸಿತ, ದೇವಲ, ವ್ಯಾಸ ಮತ್ತು ಇನ್ನಿತರ ಋಷಿಗಳೆಲ್ಲರೂ ನಿನ್ನ ವಿಷಯವಾಗಿ ಹೀಗೆಯೇ ಹೇಳಿರುವರು. ಈಗ ನೀನಾದರೂ ನನಗೆ ಹೀಗೆಯೇ ಹೇಳುತಲಿರುವಿ.

**ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥೧೪॥**

ನೀನು ಹೇಳುವದೆಲ್ಲವನ್ನೂ ಸತ್ಯವೆಂದೇ ನಾನು ತಿಳಿಯುವೆನು. ಎಲೈ ಭಗವಂತನೇ, ನಿನ್ನ ವ್ಯಕ್ತಿತ್ವವನ್ನು ದೇವತೆಗಳಾಗಲಿ ದಾನವರಾಗಲಿ ಅರಿಯರು.

**ಸ್ವಯಮೇವಾತ್ಮನಾಽಽತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥೧೫॥**

ಎಲೈ ಭೂತಗಳನ್ನು ಇಚ್ಛಾಮಾತ್ರದಿಂದ ಉಂಟು ಮಾಡುವವನೇ, ಎಲೌ ಭೂತಗಳೊಡೆಯನೇ, ದೇವಾದಿದೇವನೇ, ಎಲೌ ಜಗತ್ಪತಿಯೇ ಪುರುಷೋತ್ತಮನೇ ನಿನ್ನನ್ನು ನೀನೇ ಅರಿಯಬೇಕು.

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂವ್ಯಾಪ್ಯ ತಿಷ್ಠಸಿ ॥೧೬॥**

ಇಂಥ ನೀನು ನಿನ್ನ ವಿಭೂತಿಗಳಿಂದ ಈ ಲೋಕಗಳನ್ನೆಲ್ಲ

ತುಂಬಿಕೊಂಡು ನಿಂತಿರುವಿಯಾದಕಾರಣ ಆ ನಿನ್ನ ದಿವ್ಯವಾದ ಆತ್ಮವಿಭೂತಿಗಳನ್ನೆಲ್ಲ ಒಂದನ್ನೂ ಬಿಡದೆ ಕೃಪೆಯಿಟ್ಟು ವರ್ಣಿಸಿ ಹೇಳಬೇಕು.

**ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿಂತಯನ್ ।**
**ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ॥೧೭॥**

ಎಲೌ ಯೋಗೇಶ್ವರನೇ, ಸರ್ವಕಾಲವೂ ಚಿಂತಿಸುತ್ತಲಿದ್ದು ನಿನ್ನನ್ನು ನಾನು ತಿಳಿಯುವದು ಹೇಗೆ? ಭಗವಂತನೇ, ನಿನ್ನನ್ನು ಯಾವ ಯಾವ ಭಾವ ಸ್ವರೂಪದಲ್ಲಿ ನಾನು ಚಿಂತಿಸಬೇಕು?

**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಂ॥೧೮॥**

ಎಲೈ ಜನಾರ್ದನನೇ, **ನೀನು (ವಸ್ತುಗಳೊಂದಿಗೆ) ಹೊಂದಿದ ಆತ್ಮಯೋಗವನ್ನೂ** ನಿನ್ನ ವಿಭೂತಿಗಳನ್ನೂ ವಿಸ್ತಾರವಾಗಿ ಪುನಃ ವರ್ಣಿಸಿ ಹೇಳು. ಆ ಅಮೃತತುಲ್ಯವಾದ ವರ್ಣನೆಯನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯಾಗಲೊಲ್ಲದು.

**ಶ್ರೀ ಭಗವಾನುವಾಚ—**

**ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।**
**ಪ್ರಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ॥೧೯॥**

ಎಲೈ ಅರ್ಜುನನೇ, ನನ್ನ ಮುಖ್ಯಮುಖ್ಯವೂ ದಿವ್ಯವೂ ಆದ ಆತ್ಮವಿಭೂತಿಗಳನ್ನು ಹೇಳುವೆನು ಕೇಳು. ನನ್ನ ವಿಸ್ತಾರಕ್ಕೆ ಅಂತವಿಲ್ಲವಾದುದರಿಂದ ನೀನು ಬಯಸಿದ ಹಾಗೆ ನಿಶ್ಶೇಷವಾಗಿ ಹೇಳುವದು ಸಾಧ್ಯವಿಲ್ಲ.

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ॥೨೦॥**

ಎಲ್ಲ ಭೂತಗಳ ಹೃದಯದಲ್ಲಿ ಅಧಿಯಜ್ಞನೂ ಕ್ಷೇತ್ರಜ್ಞನೂ ಆಗಿ ನಿಂತಿರುವ ಆತ್ಮನು ನಾನು. ಭೂತಗಳಿಗೆ ಆದಿಯೂ ಮಧ್ಯವೂ ಅಂತ್ಯವೂ ನಾನೇ ಆಗಿರುವೆನು.

**ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥೨೧॥**

ಆದಿತ್ಯರಲ್ಲಿ ನಾನು ವಿಷ್ಣುವು; ಪ್ರಕಾಶವುಳ್ಳ ವಸ್ತುಗಳಲ್ಲಿ ನಾನು ಕಿರಣಗಳಿಂದ ಕೂಡಿದ ಸೂರ್ಯನು; ಮರುದ್ದೇವತೆಗಳಲ್ಲಿ ನಾನು ಮರೀಚಿಯು; ನಕ್ಷತ್ರಗಳಲ್ಲಿ ನಾನು ಚಂದ್ರನು.

**ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥೨೨॥**

ವೇದಗಳಲ್ಲಿ ಸಾಮವೇದವು ನಾನು; ದೇವತೆಗಳಲ್ಲಿ ಇಂದ್ರನು ನಾನು; ಇಂದ್ರಿಯಗಳಲ್ಲಿ ಮನಸ್ಸು ನಾನು; ಭೂತಗಳಲ್ಲಿ ಚೈತನ್ಯವು ನಾನು.

**ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಂ ।**
**ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಂ ॥೨೩॥**

ರುದ್ರರಲ್ಲಿ ನಾನು ಶಂಕರನು;ಯಕ್ಷರಾಕ್ಷಸರಲ್ಲಿ ನಾನು ಕುಬೇರನು; ವಸುಗಳಲ್ಲಿ ನಾನು ಅಗ್ನಿಯು; ಪರ್ವತಗಳಲ್ಲಿ ನಾನು ಮೇರುವು.

**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಂ ।**
**ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ॥೨೪॥**

ಪುರೋಹಿತರಲ್ಲಿ ಮುಖ್ಯನಾದ ಬೃಹಸ್ಪತಿಯು ನಾನೇ ಎಂದು ತಿಳಿ; ಸೇನಾಪತಿಗಳಲ್ಲಿ ನಾನು ಸ್ಕಂದನು; ಜಲಾಶಯಗಳಲ್ಲಿ ನಾನು ಸಮುದ್ರ ರಾಜನು.

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಂ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ**
**ಹಿಮಾಲಯಃ ॥ ೨೫ ॥**

ಮಹರ್ಷಿಗಳಲ್ಲಿ ನಾನು ಭೃಗುಋಷಿಯು; ವಾಣಿಯಲ್ಲಿ ಏಕಾಕ್ಷರ ವಾದ ಓಂಕಾರವು; ಯಜ್ಞಗಳಲ್ಲಿ ನಾನು ಜಪಯಜ್ಞವು; ಸ್ಥಾವರಗಳಲ್ಲಿ ನಾನು ಹಿಮಾಚಲವು.

**ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥ ೨೬ ॥**

ವೃಕ್ಷಗಳಲ್ಲೆಲ್ಲ ನಾನು ಅಶ್ವತ್ಥವು; ದೇವಮುನಿಗಳಲ್ಲಿ ನಾನು ನಾರದನು; ಗಂಧರ್ವರಲ್ಲಿ ನಾನು ಚಿತ್ರರಥನು; ಸಿದ್ಧರಲ್ಲಿ ಕಪಿಲಮುನಿಯು.

**ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಂ।**
**ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಂ ॥ ೨೭ ॥**

ಅಶ್ವಗಳಲ್ಲಿ ನಾನು ಉಚ್ಚೈಃಶ್ರವಸ್ಸೆಂಬ ದೇವಲೋಕದ ಅಶ್ವವು; ಗಜಶ್ರೇಷ್ಠರಲ್ಲಿ ನಾನು ಐರಾವತವು; ನರರಲ್ಲಿ ನಾನು ನರಾಧಿಪನು.

**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕೀ ॥ ೨೮ ॥**

ಆಯುಧಗಳಲ್ಲಿ ನಾನು ವಜ್ರವು; ಆಕಳುಗಳಲ್ಲಿ ನಾನು ಕಾಮಧೇನುವು; ಪ್ರಜೋತ್ಪಾದಕರಲ್ಲಿ ನಾನು ಮನ್ಮಥನು; ಸರ್ಪಗಳಲ್ಲಿ ವಾಸುಕಿಯು.

**ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಂ।**
**ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಂ॥ ೨೯ ॥**

ನಾಗಗಳಲ್ಲಿ ನಾನು ಅನಂತನು; ಜಲದೇವತೆಗಳಲ್ಲಿ ನಾನು ವರುಣನು; ಪಿತೃಗಳಲ್ಲಿ ನಾನು ಅರ್ಯಮನು; ಸಂಯಮನಶೀಲರಲ್ಲಿ ನಾನು ಯಮನು.

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಂ।**
**ಮೃಗಾಣಾಂಚ ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಂ॥೩೦॥**

ದೈತ್ಯರಲ್ಲಿ ನಾನು ಪ್ರಹ್ಲಾದನು; ಭಕ್ಷಿಸುವವರಲ್ಲಿ ನಾನು ಕಾಲನು; ಮೃಗಗಳಲ್ಲಿ ನಾನು ಸಿಂಹನು; ಪಕ್ಷಿಗಳಲ್ಲಿ ನಾನು ಗರುಡನು.

**ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಂ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥೩೧॥**

ವೇಗವುಳ್ಳವುಗಳಲ್ಲಿ ನಾನು ವಾಯುವು; ಶಸ್ತ್ರಧಾರಿಗಳಲ್ಲಿ ನಾನು

ರಾಮಚಂದ್ರನು; ಮೀನುಗಳಲ್ಲಿ ನಾನು ಮೊಸಳೆಯು; ನದಿಗಳಲ್ಲಿ ನಾನು ಗಂಗೆಯು.

**ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಂ ॥೩೨॥**

ಸರ್ಗಗಳಿಗೆ ಆದಿಮಧ್ಯಅಂತಗಳೆಲ್ಲ ನಾನು; ವಿದ್ಯೆಗಳಲ್ಲಿ ಅಧ್ಯಾತ್ಮ ವಿದ್ಯೆಯು ನಾನು; ವಾದಿಸುವದರಲ್ಲಿ ವಾದವು ನಾನು.

**ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ।**
**ಅಹಮೇವಾಕ್ಷಯಃ ಕಾಲೋ ಧಾತಾಽಹಂ ವಿಶ್ವತೋಮುಖಃ ॥೩೩॥**

ಅಕ್ಷರಗಳಲ್ಲಿ ಅಕಾರವು ನಾನು; ಸಾಮಾಸಿಕ ವಸ್ತುಗಳಲ್ಲಿ ದ್ವಂದ್ವ ಭಾವವು ನಾನು; ಅಕ್ಷಯರೂಪ ಕಾಲನು ನಾನು; ವಿಶ್ವತೋಮುಖವುಳ್ಳ ಬ್ರಹ್ಮನು ನಾನು.

**ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಂ।**
**ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥೩೪॥**

ಸರ್ವಾಪಹಾರಕನಾದ ಮೃತ್ಯುವು ನಾನು; ಭವಿಷ್ಯದಲ್ಲಿ ಉತ್ಪತ್ತಿ ತತ್ವವು ನಾನು; ಸ್ತ್ರೀಭಾವಗಳಲ್ಲಿ ಕೀರ್ತಿ, ಲಕ್ಷ್ಮಿ, ವಾಣಿ, ಸ್ಮೃತಿ, ಮೇಧಾಶಕ್ತಿ, ಧೃತಿ, ಕ್ಷಮೆ ಇವೆಲ್ಲ ನಾನು.

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಂ।**
**ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ ॥೩೫॥**

ಸಾಮಮಂತ್ರಗಳಲ್ಲಿ ನಾನು ಬೃಹತ್ಸಾಮವು; ಛಂದಸ್ಸುಗಳಲ್ಲಿ ನಾನು ಗಾಯತ್ರಿಯು; ತಿಂಗಳುಗಳಲ್ಲಿ ನಾನು ಮಾರ್ಗಶೀರ್ಷವು; ಋತುಗಳಲ್ಲಿ ನಾನು ವಸಂತವು.

**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಂ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ವಂ ಸತ್ವವತಾಮಹಂ ॥೩೬॥**

ಮೋಸಗಾರರಲ್ಲಿ ಜೂಜು ನಾನು; ತೇಜಸ್ವಿಗಳಲ್ಲಿ ತೇಜವು ನಾನು, ಜಯವು ನಾನು, ನಿಶ್ಚಯವು ನಾನು ಸತ್ವಶೀಲರ ಸತ್ವವು ನಾನು.

**ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾಕವಿಃ ॥ ೩೭ ॥**

ವೃಷ್ಣಿಗಳಲ್ಲಿ ನಾನು ವಾಸುದೇವನು; ಪಾಂಡವರಲ್ಲಿ ಧನಂಜಯನು; ಮುನಿಗಳಲ್ಲಿ ನಾನು ವ್ಯಾಸಮುನಿಯು; ಕವಿಗಳಲ್ಲಿ ಶುಕ್ರಾಚಾರ್ಯನು.

**ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಂ ॥ ೩೮ ॥**

ಶಾಸಕರ ದಂಡವು ನಾನು ಜಯವನ್ನು ಬಯಸುವವರ ನೀತಿಯು ನಾನು; ಗೌಪ್ಯಗಳಲ್ಲಿ ಮೌನವು ನಾನು; ಜ್ಞಾನಿಗಳ ಜ್ಞಾನವು ನಾನೇ.

**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ॥ ೩೯ ॥**

ಸರ್ವ ಭೂತಗಳಿಗೂ ಬೀಜವಾಗಿರುವದು ಯಾವದೋ ಅದು ನಾನು; ನಾನಿಲ್ಲದಿರುವ ಭೂತಗಳು ಚರಾಚರಗಳಲ್ಲಿ ಯಾವವು ಇಲ್ಲ.

**ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ೪೦ ॥**

ಎಲೌ ಅರ್ಜುನನೇ! ನನ್ನ ದಿವ್ಯ ವಿಭೂತಿಗಳಿಗೆ ಅಂತವಿಲ್ಲ; ಆದಕಾರಣ ಅವುಗಳ ವಿಸ್ತಾರವನ್ನು ನಾನು ನಿನಗೆ ಸಾಕಷ್ಟು ಹೇಳಿರುವೆನು.

**ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಂಽಶಸಂಭವಮ್ ॥ ೪೧ ॥**

ಯಾವ ವಸ್ತುವೇ ಆಗಲಿ ವೈಭವ ಸಂಪನ್ನತೆ ಅಭಿವೃದ್ಧಿಗಳಿಂದ ಯುಕ್ತವಾಗಿದ್ದರೆ ಅದು ನನ್ನ ತೇಜದ ಅಂಶದಿಂದ ಹುಟ್ಟಿದೆಯೆಂದು ತಿಳಿ.

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥ ೪೨ ॥**

ಎಲೌ ಅರ್ಜುನನೇ, ಈ ವಿಸ್ತಾರವನ್ನು ಎಷ್ಟು ಹೇಳಿದರೂ ಸಾಲದು. ನನ್ನ ಒಂದು ಅಂಶಮಾತ್ರದಿಂದ ಈ ಜಗತ್ತೆಲ್ಲವನ್ನೂ ವ್ಯಾಪಿಸಿ ನಿಂತಿರುವೆನು.

ಈ ಜಗತ್ತಿನಲ್ಲಿ ಎಲ್ಲವೂ ಶ್ರೀಕೃಷ್ಣಪರಮಾತ್ಮನ ಅಂಶಸಂಭೂತವು. ಅವನ ಸಂಪರ್ಕವೂ ಸಾನ್ನಿಧ್ಯವೂ ಸಂಬಂಧವೂ ಇಲ್ಲದ ವಸ್ತುವು ಈ ಜಗತ್ತಿನಲ್ಲಿಲ್ಲ. **ಅವನ ಈ ಮಾಹಾತ್ಮ್ಯವನ್ನು ಗ್ರಹಿಸಿ ಯಾವ ವಸ್ತುವನ್ನೇ ಆಗಲಿ ವಿಭೂತಿಯೆಂದು ಭಾವಿಸುವ ಭಾಗವು ಭಾವಿಕನ ಅಧ್ಯಾತ್ಮ ಸ್ವಭಾವ ಜಾಗೃತಿಯನ್ನೂ ಸಂಪದಭಿವೃದ್ಧಿಗಳ ಕಲ್ಪನೆಯನ್ನೂ ಅವಲಂಬಿಸಿರುವದು.**

**ಹತ್ತನೆಯ ಅಧ್ಯಾಯವು ಸಮಾಪ್ತವು.**

---

ಓಂ

# ಹನ್ನೊಂದನೆಯ ಅಧ್ಯಾಯವು



**ಅವತರಣಿಕೆ—**

ಹಿಂದಿನ ಹತ್ತು ಅಧ್ಯಾಯಗಳಲ್ಲಿ ಬೋಧಿಸಿದ ಗೀತಾಜ್ಞಾನದಿಂದ ಆತ್ಮತೃಪ್ತಿಯನ್ನು ಪಡೆದು ತಾನು ಅದರಿಂದ ಗ್ರಹಿಸಿದ ತತ್ವಸ್ವಾರಸ್ಯವನ್ನು ಅರ್ಜುನನು ತನ್ನ ಮುಖದಿಂದಲೇ ಈ ಅಧ್ಯಾಯದ ಆರಂಭದಲ್ಲಿ ಕೌತುಕ ದಿಂದಲೂ ಪರಮಾವಧಿಯ ಆತ್ಮಾನಂದದಿಂದಲೂ ನುಡಿಯುವನು. ಇದೇ ಈ ಅಧ್ಯಾಯಕ್ಕೆ ಅನುರೂಪವಾದ ಪ್ರಸ್ತಾವನೆಯಾಗಲಿಕ್ಕೆ ಸಾಕು. ಹೀಗೆ ಆತ್ಮತೃಪ್ತನಾದರೂ ಅವನ ಇಂದ್ರಿಯ ಸ್ವಭಾವವು ತೃಪ್ತಿಯನ್ನು ಪಡೆದಿರ ಲಿಲ್ಲ. ಇಂದ್ರಿಯಸ್ವಭಾವಕ್ಕೆ ದೃಕ್ ಪ್ರತ್ಯಯವಲ್ಲದೆ ಬೇರೆ ಸಾಕ್ಷಿಗಳು ಎಷ್ಟು ಶ್ರೇಷ್ಠವಾಗಿದ್ದರೂ ಸಾಲುವದಿಲ್ಲ. ಆ ಸ್ವಭಾವಕ್ಕೆ ಕಣ್ಣಿನಲ್ಲಿದ್ದ. ಆಪ್ತತ್ವವು ಆತ್ಮದಲ್ಲಿ ಇರುವದಿಲ್ಲ. ಬುದ್ಧಿಯಿಂದ ನಿಜವೆಂದು ಭಾವಿಸಿದ ಸಂಗತಿಗಳನ್ನು ಪ್ರಯೋಗಪೂರ್ವಕವಾಗಿ ಕಣ್ಣಾರೆ ಕಾಣುವ ಪ್ರಬಲ ಜಿಜ್ಞಾಸೆಯು ಮನುಷ್ಯ ಸ್ವಭಾವದಲ್ಲಿ ಇದಕ್ಕಾಗಿಯೇ ಕಂಡುಬರುವದು. ತಾವು ಒಪ್ಪಿಕೊಂಡ ವಿಷಯಗಳಲ್ಲಿಯೂ ಸಾಶಂಕವೃತ್ತಿಯನ್ನು ತಾಳಿ ಆಗಾಗ ಅವುಗಳನ್ನು ಅಲ್ಲಗಳೆಯುವದಕ್ಕೆ ಮನಸ್ಸೂ ಇಂದ್ರಿಯಗಳೂ ಅನು ಮಾನಿಸುವದಿಲ್ಲ. ಒಂದುಸಾರೆ ಕಣ್ಣುಗಳು ತೃಪ್ತಿಪಟ್ಟರೆ ಸಂಬಲಾಗದ ವಿಷಯಗಳಲ್ಲಿಯೂ ಇಂದ್ರಿಯಸ್ವಭಾವವು ವಿಶ್ವಾಸವನ್ನಿಡುವದನ್ನು ಆಗಾಗ ಕಾಣಬಹುದು. ಈ ಅಧ್ಯಾಯದಲ್ಲಿ ಅರ್ಜುನನು ತನ್ನ ಇಂದ್ರಿಯಸ್ವಭಾವದ ಸಮಾಧಾನಕ್ಕಾಗಿ ತನಗೆ ವಿಶ್ವರೂಪವನ್ನು ತೋರಿಸೆಂದು ಶ್ರೀಕೃಷ್ಣ ನನ್ನು ಕೇಳಿರುವದೂ ಅರ್ಜುನನಿಗೆ ತನ್ನಲ್ಲಿರುವ ವಿಶ್ವಾಸವು ಶಾಶ್ವತವಾಗ ಬೇಕಾದರೆ ಇದು ಅವಶ್ಯವೆಂಬದನ್ನು ತಿಳಿದು ಅದನ್ನು ಶ್ರೀಕೃಷ್ಣನು ಅವ ನಿಗೆ ತೋರಿಸಿದುದೂ ಪ್ರಸಂಗೋಚಿತವಾಗಿವೆ.

ಅರ್ಜುನ ಉವಾಚ-

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಂ ।**
**ಯತ್ವಯೋಕ್ತಂ ವಚಸ್ತೇನ ಮೋಹೋಽಯಂ**
**ವಿಗತೋ ಮಮ ॥ ೧ ॥**

ನನ್ನನ್ನು ಅನುಗ್ರಹಿಸಬೇಕೆಂದು ನೀನು ಮಾಡಿದ ಅಧ್ಯಾತ್ಮವೆಂಬ ಗುಹ್ಯವಾದ ಬೋಧನೆಯಿಂದ ನನ್ನ ಮೋಹವು ನಷ್ಟವಾಯಿತು.

ಅರ್ಜುನನಿಗುಂಟಾಗಿದ್ದ ವ್ಯಾಮೋಹವು ಹಿಂದಿನ ಒಂಬತ್ತು ಅಧ್ಯಾಯಗಳಲ್ಲಿ ಶ್ರೀಕೃಷ್ಣನು ಬೋಧಿಸಿದ ಹಿತವಚನಗಳಿಂದ ನಷ್ಟವಾಯಿತು. ಈ ವಚನಗಳಿಂದ ಅವನು ಎರಡು ಸಂಗತಿಗಳನ್ನು ಚೆನ್ನಾಗಿ ಮನಗಂಡಿರುವನು. ಅಧ್ಯಾತ್ಮವೆಂಬ ಸರ್ವಸಾಧಾರಣ ಹೆಸರನ್ನಿಟ್ಟು ಬೋಧಿಸಿದರೂ ಶ್ರೀಕೃಷ್ಣನು ಹೇಳಿದ ವಿಷಯವು, ಅವನು ಆಜನ್ಮ ಅದೇ ಹೆಸರಿನಲ್ಲಿ ಕೇಳುತ್ತಿದ್ದ ವಿಷಯದಿಂದ ಭಿನ್ನವಾಗಿತ್ತು; ಇಷ್ಟೇ ಅಲ್ಲದೆ, ಅದು ಬಹು ಗುಹ್ಯವೂ ಆಗಿತ್ತು. ಅಂದರೆ ಸೃಷ್ಟ್ಯುತ್ಪತ್ತಿಕರ್ತನಾದ ಶ್ರೀಕೃಷ್ಣನಿಂದಲ್ಲದೆ ಇನ್ನಾರಿಂದಲೂ ಅದನ್ನು ತಿಳಿಯುವದು ಶಕ್ಯವಿರಲಿಲ್ಲ. ಅದು ಅರ್ಜುನನಿಗೆ ಗುಹ್ಯವಾಗಿದ್ದಂತೆ ಆ ಕಾಲದ ವೇದಾಂತಪ್ರಪಂಚಕ್ಕಾದರೂ ಗುಹ್ಯವಾಗಿತ್ತು. ಶ್ರೀಕೃಷ್ಣನು ಬೋಧಿಸುತ್ತಲಿರುವ ಬುದ್ಧಿಯೋಗಶಾಸ್ತ್ರವು ಈ ಜಗತ್ತಿನಲ್ಲಿ ನಷ್ಟವಾಯಿತೆಂದು ಆತನು ನಾಲ್ಕನೆಯ ಅಧ್ಯಾಯದಲ್ಲಿ ಹೇಳಿದುದನ್ನು ಅರ್ಜುನನು ಮನಗಂಡು ಆತನಿಂದ **ತಾನು ಪಡೆದ ಅಧ್ಯಾತ್ಮಜ್ಞಾನವು ಆತನು ಹೇಳಿದಂತೆ ಗುಹ್ಯವಾಗಿ ಇರುವದೆಂದು** ಇಲ್ಲಿ ಒಪ್ಪಿಕೊಳ್ಳುತ್ತಿರುವನು.

**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಹಾತ್ಮ್ಯಮಪಿ ಚಾವ್ಯಯಂ ॥ ೨ ॥**

ಈ ಸೃಷ್ಟಿಯಲ್ಲಿ ಭೂತಗಳು ಉಂಟಾಗುವ ಮತ್ತು ಇಲ್ಲದಾಗುವ ಕ್ರಮವನ್ನು ಕೃಷ್ಣಾ ನಿನ್ನಿಂದ ನಾನು ವಿಸ್ತಾರವಾಗಿ ಕೇಳಿದೆನು, ನಿನ್ನ, ಅವ್ಯಯ ಮಾಹಾತ್ಮ್ಯವನ್ನೂ ಕೇಳಿದೆನು.

**ಏವಮೇತದ್ಯಥಾಽಽತ್ಥ ತ್ವಮಾತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥೩॥**

ಎಲೈ ಪರಮ ಈಶ್ವರನೇ, ನಿನ್ನಿಂದ ಈಗಲೇ ನಾನು ಕೇಳಿದ ನಿನ್ನ ಈಶ್ವರಸ್ವರೂಪವನ್ನು ನಾನು ಕಣ್ಣಾರೆ ಕಾಣಬಯಸುವೆನು.

**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಂ ॥ ೪ ॥**

ಎಲೈ ಪ್ರಭುವೇ, ಎಲೌ ಯೋಗೀಶ್ವರನೇ ಅದನ್ನು ನಾನು ಕಾಣುವದು ಶಕ್ಯವೆಂದು ನಿನಗೆ ತೋರಿದರೆ ನಿನ್ನ ಅವ್ಯಯ ಸ್ವರೂಪದ ದರ್ಶನವನ್ನು ನನಗೆ ಕರುಣಿಸು.

ಈ ಶ್ಲೋಕಗಳಲ್ಲಿ ಶ್ರೀಕೃಷ್ಣನಿಂದ ಅರ್ಜುನನು ಪಡೆದ ಜ್ಞಾನ-ವಿಜ್ಞಾನಗಳ ಲಕ್ಷಣಗಳನ್ನು ಪ್ರತ್ಯೇಕವಾಗಿ ಕಂಡುಕೊಳ್ಳಬೇಕು. ಶ್ರೀ ಕೃಷ್ಣಪರಮಾತ್ಮನ ಪ್ರಭುತ್ವ, ಈಶ್ವರತ್ವ, ಮಾಹಾತ್ಮ್ಯ ಇವುಗಳ ಬೋಧವೇ ಅವನು ತಿಳಿದ ವಿಜ್ಞಾನವು. ಭೂತಗಳ ಉತ್ಪತ್ತಿಲಯಾದಿ ವಿಧಾನಗಳೇ ಜ್ಞಾನವು. ಅಧ್ಯಾತ್ಮವೆಂದರೆ ಈ ಜ್ಞಾನ ವಿಜ್ಞಾನಗಳೇ.

ಶ್ರೀಭಗವಾನುವಾಚ---

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ ೫ ॥**

ನಾನಾ ವಿಧದಿಂದಲೂ ನಾನಾ ವರ್ಣಾಕೃತಿಗಳಿಂದಲೂ ಸಾವಿರಾರು ರೂಪಗಳಿಂದಲೂ ಕೂಡಿದ ನನ್ನ ಸ್ವರೂಪವನ್ನು, ಪಾರ್ಥ, ನೀನು ನೋಡು.

**ಪಶ್ಯಾದಿತ್ಯಾನ್ವಸೂನ್ರುದ್ರಾನಶ್ವಿನೌ ಮರುತಸ್ತಥಾ ।**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥ ೬ ॥**

ಆದಿತ್ಯರನ್ನೂ ವಸುಗಳನ್ನೂ ರುದ್ರರನ್ನೂ ಅಶ್ವಿನೀ ದೇವತೆಗಳನ್ನೂ ಮರುದ್ದೇವತೆಗಳನ್ನೂ, ಇಷ್ಟಲ್ಲದೆ ಈ ವರೆಗೆ ನೀನು ಕಂಡಿರದ ಇನ್ನೂ ಅನೇಕ ಆಶ್ಚರ್ಯಗಳನ್ನೂ, ಎಲೌ ಭಾರತನೇ, ನೀನು ನೋಡು.

ಈ ದೇವತೆಗಳನ್ನೆಲ್ಲ ಇದುವರೆಗೆ ಅರ್ಜುನನು ತನ್ನ ಕಲ್ಪನೆಯಿಂದಲೇ ಊಹಿಸುತ್ತಿದ್ದನು

**ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಂ |**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ || ೭ ||**

ಜಗತ್ತೆಲ್ಲವನ್ನೂ ಅದರೊಳಗಿನ ಚರಾಚರಗಳೊಡನೆ ನೀನು ನೋಡಬೇಕೆಂದು ಕೋರುವ ಮತ್ತಾವುದನ್ನೂ, ಎಲೌ ಅರ್ಜುನನೇ, ಈ ನನ್ನ ದೇಹದಲ್ಲೇ ನೋಡಿಕೊಳ್ಳು.

**ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ |**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಂ || ೮ ||**

ಚರ್ಮಚಕ್ಷುವಿನಿಂದ ನನ್ನ ವಿಶ್ವರೂಪವನ್ನು ನೀನು ಕಾಣುವದು ಶಕ್ಯವಲ್ಲ. ನಾನು ನಿನಗೆ ದಿವ್ಯದೃಷ್ಟಿಯನ್ನು ಕೊಡುವೆನು, ನನ್ನ ಯೋಗೈಶ್ವರ್ಯವನ್ನೆಲ್ಲ ನೀನು ನೋಡುವವನಾಗು.

ಈ ಶ್ಲೋಕದೊಳಗಿನ ದಿವ್ಯದೃಷ್ಟಿಯೂ ಯೋಗೈಶ್ವರ್ಯವೂ ಶ್ರೀಕೃಷ್ಣನ ಒಂದು ಮಾಯಾಜಾಲವೆಂದು ಊಹಿಸುವ ಕಾರಣವಿಲ್ಲ. ತನ್ನ ಒಂದಂಶವನ್ನೇ ಸೃಷ್ಟಿಯು ಸಾರವಾಗಿ ಮಾತ್ರವಲ್ಲದೆ ಅದರಲ್ಲಿ ಸಮಾವಿಷ್ಟವಾಗಿದ್ದ ವಸ್ತುಗಳ ಬೇರೆ ಬೇರೆ ಸ್ವರೂಪಗಳಲ್ಲಿಯೂ ವಿವಿಧ ದ್ರವ್ಯಗಳು ವಿವಿಧ ಆಕಾರಗಳು ಇವುಗಳಲ್ಲಿಯೂ ತಾನು ಪರಿವರ್ತಿಸಲು ಕೈಕೊಂಡ ಉಪಾಯವನ್ನು (೧೦-೪-೭,೪೨) **ಯೋಗವೆಂದೂ ಯೋಗಮಾಯೆಯೆಂದೂ** (೭-೨೫)**ಆತ್ಮಯೋಗವೆಂದೂ ಅಥವಾ ತನ್ನ ಅನಿರುದ್ಧವಾದ ಇಚ್ಛಾನುಸಾರವಾಗಿ ತಾನು ಮಾಡಿದ ತನ್ನ ಪ್ರಕೃತಿಶಕ್ತಿಯ ರೂಪಾಂತರವೆಂದೂ** ಮೊದಲೇ ಗೀತೆಯಲ್ಲಿ ಶ್ರೀಕೃಷ್ಣನು ವಿವರಿಸಿರುವನು ಅರ್ಜುನನಾದರೂ ಈ ವಿಷಯವನ್ನು ಯಥಾರ್ಥವಾಗಿ ಗ್ರಹಿಸಿರುವನು. (೧೦-೧೮). ಸೃಷ್ಟಿಯೊಳಗಿನ ಸರ್ವ ವಸ್ತುಸ್ವರೂಪನಾಗುವಂತೆಯೇ ಶ್ರೀಕೃಷ್ಣನು ಅರ್ಜುನನ ಜ್ಞಾನದೃಷ್ಟಿಯೊಂದಿಗೆ ಅಂದರೆ ಅವನ ಅಧ್ಯಾತ್ಮಭಾವದೊಂದಿಗೆ (೧೦-೧೧) ಸಂಯುಕ್ತನಾದರೆ ಅವನ ಆ ದೃಷ್ಟಿಗೆ ಜ್ಞಾನ

ಜ್ಯೋತಿಯು ಬೆಳಗಿ, ಶ್ರೀಕೃಷ್ಣನ ವಿಶ್ವರೂಪವು, ಸಂಪೂರ್ಣ ಗೋಚರ ವಾಗುವದು. ಅರ್ಜುನನಿಗೆ ದಿವ್ಯದೃಷ್ಟಿಯನ್ನು ಕೊಡುವದೆಂದರೆ ಇದೇ. ಈ ಕ್ರಮವು ಅಶಕ್ಯವೆಂದು ಭಾವಿಸುವವರು ಕಣ್ಣುಕಟ್ಟುಗರ ವಿದ್ಯೆಗೆ ಜನ ಸಮೂಹಗಳು ವಶವಾಗುವ ಕ್ರಮವನ್ನು ಗಮನಿಸಬೇಕು. ಈ ಐಂದ್ರ ಜಾಲವು ಹುಸಿಯಾದುದು. ಆದರೆ ಪುರುಷೋತ್ತಮನ ಯೋಗ ಮಾಯೆಯು ಸತ್ಯಸ್ವರೂಪದ್ದಾಗಿದೆ.

ಸಂಜಯ ಉವಾಚ—

**ಏವಮುಕ್ತ್ವಾ ತತೋ ರಾಜನ್ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಂ ॥ ೯ ॥**

ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳಿದ್ದು— ಎಲೌ ಧೃತ ರಾಷ್ಟ್ರರಾಜನೇ, ಅರ್ಜುನನನ್ನು ಕುರಿತು ಹೀಗೆ ನುಡಿದು ಮಹಾಯೋಗೇ ಶ್ವರನಾದ ಶ್ರೀಕೃಷ್ಣನು ತನ್ನ ಶ್ರೇಷ್ಠವಾದ ಈಶ್ವರಸ್ವರೂಪವನ್ನು ಅವನಿಗೆ ತೋರಿಸಿದನು.

**ಅನೇಕವಕ್ತ್ರನಯನಮನೇಕಾದ್ಭುತದರ್ಶನಂ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಂ ॥ ೧೦ ॥**

ಅನೇಕ ಮುಖಗಳಿಂದಲೂ ಕಣ್ಣುಗಳಿಂದಲೂ ಅದ್ಭುತವಾದ ನೋಟ ಗಳಿಂದಲೂ ಅನೇಕ ದಿವ್ಯವಾದ ಆಭರಣಗಳಿಂದಲೂ ಅನೇಕ ದಿವ್ಯ ಹಿರಿ ದಾಯುಧಗಳಿಂದಲೂ ಆ ವಿಶ್ವರೂಪವು ಯುಕ್ತವಾಗಿತ್ತು.

**ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಂ ।**
**ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಂ ॥ ೧೧ ॥**

ಅತ್ಯಂತ ಆಶ್ಚರ್ಯಮಯವಾದ ಆ ದೇವಸ್ವರೂಪವು ಅನಂತ ವಾಗಿಯೂ ವಿಶ್ವತೋಮುಖವುಳ್ಳದ್ದಾಗಿಯೂ ದಿವ್ಯ ಪೂಮಾಲೆಗಳಿಂದ ದಿವ್ಯ ಉಡಿಗೆ-ತೊಡಿಗೆಗಳಿಂದ ಹಾಗು ದಿವ್ಯ ಗಂಧಲೇಪನಾದಿಗಳಿಂದ ಶೋಭಿ ಸುತ್ತಿತ್ತು.

ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।
ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥ ೧೨ ॥

ಸಹಸ್ರಸೂರ್ಯರು ಏಕಕಾಲದಲ್ಲಿ ಆಕಾಶದಲ್ಲಿ ಬೆಳಗಿದರೆ ಗೋಚರಿಸಬಹುದಾದ ಪ್ರಕಾಶವು ಆ ಮಹಾತ್ಮನ ತೇಜಕ್ಕೆ ಸಮಾನವಾಗಬಹುದು.

ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತ ಮನೇಕಧಾ ।
ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ ॥ ೧೩ ॥

ಅನೇಕ ವಿಧವಾಗಿ ವಿಭಕ್ತವಾಗಿರುವ ಈ ವಿಶ್ವವೆಲ್ಲವೂ ಆ ದೇವಾದಿದೇವನ ಶರೀರದಲ್ಲಿ ಒಂದುಗೂಡಿ ಏಕಾಂಗವಾಗಿದ್ದುದನ್ನು ಅರ್ಜುನನು ಕಂಡನು.

ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯ ।
ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥ ೧೪ ॥

ಆ ದೃಶ್ಯವನ್ನು ನೋಡಿದೊಡನೆಯೆ ಆಶ್ಚರ್ಯಚಕಿತನೂ ರೋಮಹರ್ಷಿತನೂ ಆದ ಅರ್ಜುನನು ದೇವನನ್ನು ತಲೆವಾಗಿ ನಮಿಸಿ ಅಂಜಲಿಬದ್ಧನಾಗಿ ಇಂತು ನುಡಿದನು.

ಅರ್ಜುನ ಉವಾಚ—

ಪಶ್ಯಾಮಿ ದೇವಾಂಸ್ತವ ದೇವ ದೇಹೇ
ಸರ್ವಾಂಸ್ತಥಾ ಭೂತವಿಶೇಷಸಂಘಾನ್ ॥
ಬ್ರಹ್ಮಾಣಮೀಶಂ ಕಮಲಾಸನಸ್ಥ-
ಮೃಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥ ೧೫ ॥

ಹೇ ದೇವಾ, ನಿನ್ನ ದೇಹದಲ್ಲಿ ಎಲ್ಲ ದೇವತೆಗಳನ್ನೂ ಭೂತಸಮೂಹಗಳನ್ನೂ ಕಮಲಾಸನನೂ ಈಶ್ವರನೂ ಆದ ಬ್ರಹ್ಮನನ್ನೂ ಋಷಿಗಳೆಲ್ಲರನ್ನೂ ದಿವ್ಯ ಸರ್ಪಗಳನ್ನೂ ನಾನು ನೋಡುತಲಿರುವೆನು.

ಅನೇಕಬಾಹೂದರವಕ್ತ್ರನೇತ್ರಂ ।
ಪಶ್ಯಾಮಿ ತ್ವಾಂ ಸರ್ವತೋಽನಂತರೂಪಮ್ ॥
ನಾಂತಂ ನ ಮಧ್ಯಂ ನ ಪುನಸ್ತವಾದಿಂ
ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥೧೬॥

ಅನೇಕ ಬಾಹುಗಳಿಂದಲೂ ಮುಖಗಳಿಂದಲೂ ಕಣ್ಣುಗಳಿಂದಲೂ ಅನಂತ ರೂಪಗಳಿಂದಲೂ ಕೂಡಿದ ನಿನ್ನನ್ನೇ ಎಲ್ಲೆಲ್ಲಿಯೂ ಕಾಣುತಲಿರು ವೆನು. ಅಂತವಿಲ್ಲದ ಮಧ್ಯವಿಲ್ಲದ ಹಾಗೆಯೇ ಆದಿಯೂ ಇಲ್ಲದ ನಿನ್ನ ವಿಶ್ವ ರೂಪವನ್ನು ಎಲೌ ವಿಶ್ವೇಶ್ವರನೇ ನಾನು ಕಾಣುತಲಿರುವೆನು.

ಕಿರೀಟಿನಂ ಗದಿನಂ ಚಕ್ರಿಣಂ ಚ
ತೇಜೋರಾಶಿಂ ಸರ್ವತೋ ದೀಪ್ತಿಮಂತಂ ॥
ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾತ್
ದೀಪ್ತಾನಲಾರ್ಕದ್ಯುತಿಮಪ್ರಮೇಯಂ ॥೧೭॥

ಕಿರೀಟಧಾರಿಯೂ ಗದಾಧಾರಿಯೂ ಚಕ್ರಧಾರಿಯೂ ಆದ ತೇಜೋ ರಾಶಿಯಾದ ಎಲ್ಲೆಲ್ಲಿಯೂ ಕಾಂತಿಯನ್ನು ಬೀರುವ, ನೋಡಿ ಸಹಿಸಲಸಾಧ್ಯ ವಾದ ಮತ್ತು ಪ್ರಜ್ವಲಿತ ಅಗ್ನಿಯಂತೆ ಅಥವಾ ಸೂರ್ಯನಂತೆ ಎಲ್ಲ ದಿಕ್ಕು ಗಳಲ್ಲಿಯೂ ಹೊಳೆಯುತ್ತಲಿರುವ ನಿನ್ನ ಅಪಾರವಾದ ರೂಪವನ್ನು ನಾನು ನೋಡುತಲಿರುವೆನು.

ತ್ವಮಕ್ಷರಂ ಪರಮಂ ವೇದಿತವ್ಯಂ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ ॥
ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ
ಸನಾತನಸ್ತ್ವಂ ಪುರುಷೋ ಮತೋ ಮೇ ॥೧೮॥

ಅಕ್ಷರನು ನೀನೇ, ತಿಳಿಯತಕ್ಕುದಾದ ಪರಮವಸ್ತುವು ನೀನೇ. ವಿಶ್ವಕ್ಕೆಲ್ಲ ಪರಮ ಆಧಾರನಾದವನು ನೀನು. ನೀನೇ ಅವ್ಯಯನು. ಶಾಶ್ವತ ಧರ್ಮವನ್ನು ರಕ್ಷಿಸತಕ್ಕವನು ನೀನು. ನೀನೇ ಸನಾತನ ಪುರುಷನೆಂದು ನಾನು ಮನಗಂಡಿರುವೆನು.

ಅನಾದಿಮಧ್ಯಾಂತಮನಂತವೀರ್ಯ-
ಮನಂತಬಾಹುಂ ಶಶಿಸೂರ್ಯನೇತ್ರಂ ||
ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ
ಸ್ವತೇಜಸಾ ವಿಶ್ವಮಿದಂ ತಪಂತಂ ||೧೯||

ಆದಿಮಧ್ಯಅಂತಗಳಿಲ್ಲದವನೂ ಅಪಾರ ವೀರ್ಯಶಾಲಿಯೂ ಅನಂತ ಬಾಹುಗಳುಳ್ಳವನೂ ಶಶಿಸೂರ್ಯರನ್ನು ಕಣ್ಣುಗಳಾಗಿಟ್ಟುಕೊಂಡವನೂ ಆದ ನೀನು ಪ್ರಜ್ವಲಿತ ಅಗ್ನಿಯಂತೆ ಮುಖವುಳ್ಳವನಾಗಿಯೂ ನಿನ್ನ ಪ್ರಖರ ತೇಜದಿಂದ ವಿಶ್ವವನ್ನು ತಪಿಸುವಂಥವನಾಗಿಯೂ ನನಗೆ ಕಾಣುತಲಿರುವೆ.

ದ್ಯಾವಾಪೃಥಿವ್ಯೋರಿದಮಂತರಂ ಹಿ
ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ||
ದೃಷ್ಟ್ವಾಽದ್ಭುತಂ ರೂಪಮುಗ್ರಂ ತವೇದಂ
ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ||೨೦||

ಆಕಾಶವನ್ನೂ ಪೃಥ್ವಿಯನ್ನೂ ಇವೆರಡರ ಮಧ್ಯದ ಅಂತರಿಕ್ಷವನ್ನೂ ಎಲ್ಲ ದಿಕ್ಕುಗಳನ್ನೂ ನೀನೊಬ್ಬನೇ ಆಕ್ರಮಿಸಿರುವೆ. ಎಲೌ ಮಹಾತ್ಮನೇ, ಈ ನಿನ್ನ ಉಗ್ರ ಅದ್ಭುತರೂಪವನ್ನು ನೋಡಿ ಮೂರು ಲೋಕಗಳೂ ತಲ್ಲಣಿಸುತ್ತಿರುವವು

ಅಮೀ ಹಿ ತ್ವಾಂ ಸುರಸಂಘಾ ವಿಂಶತಿ
ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ||
ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ
ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ||೨೧||

ಇಗೋ, ದೇವತಾ ಸಮೂಹಗಳು ನಿನ್ನನ್ನು ಪ್ರವೇಶಮಾಡುತ್ತಲಿರುವವು. ಭಯಭೀತರಾದವರು ಕೆಲವರು ಕೈಮುಗಿದು ನಿನ್ನನ್ನು ಪ್ರಾರ್ಥಿಸುತ್ತಿರುವರು. ಮಹರ್ಷಿಗಳ ಮತ್ತು ಸಿದ್ಧರ ಸಮೂಹಗಳು ಸ್ವಸ್ತಿಸ್ವಸ್ತಿ ಎಂದು ನುಡಿಯುತ್ತ ನಿನ್ನನ್ನು ವಿಧವಿಧವಾಗಿ ಸ್ತುತಿಸುತ್ತಿರುವರು.

ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ
ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ॥
ಗಂಧರ್ವಯಕ್ಷಾಸುರಸಿದ್ಧಸಂಘಾ
ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥೨೨॥

ರುದ್ರರು, ಆದಿತ್ಯರು, ವಸುಗಳು, ಸಾಧ್ಯರು, ವಿಶ್ವದೇವತೆಗಳು, ಅಶ್ವಿನೀಕುಮಾರದೇವತೆಗಳು, ಮರುದ್ದೇವತೆಗಳು, ಪಿತೃಗಳು, ಗಂಧರ್ವರು, ಯಕ್ಷರು, ಅಸುರರು, ಸಿದ್ಧರು ಮುಂತಾದವರ ಸಮೂಹಗಳು ವಿಸ್ಮಯದಿಂದ ನಿನ್ನನ್ನು ನೋಡುತ್ತಲಿರುವವು.

ರೂಪಂ ಮಹತ್ತೇ ಬಹುವಕ್ತ್ರನೇತ್ರಂ
ಮಹಾಬಾಹೋ ಬಹುಬಾಹೂರುಪಾದಂ ॥
ಬಹೂದರಂ ಬಹುದಂಷ್ಟ್ರಾಕರಾಲಂ
ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಽಹಮ್ ॥೨೩॥

ಅಸಂಖ್ಯಮುಖಗಳಿಂದಲೂ ಕಣ್ಣುಗಳಿಂದಲೂ ಬಾಹುಗಳಿಂದಲೂ ತೊಡೆಗಳಿಂದಲೂ ಪಾದಗಳಿಂದಲೂ ವಿಕರಾಳವಾಗಿ ತೋರುವ ದವಡೆಗಳಿಂದಲೂ ಕೂಡಿದ ನಿನ್ನ ಮಹಾರೂಪವನ್ನು ಕಂಡು ಈ ಲೋಕಗಳು ವ್ಯಥಿತವಾಗಿರುವವು. ಅವುಗಳಂತೆ ನಾನಾದರೂ ವ್ಯಥಿತನಾಗಿರುವೆನು.

ನಭಃಸ್ಪೃಶಂ ದೀಪ್ತಮನೇಕವರ್ಣಂ
ವ್ಯಾತ್ತಾನನಂ ದೀಪ್ತವಿಶಾಲನೇತ್ರಂ ॥
ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ
ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ॥೨೪॥

ನಭೋಮಂಡಲವನ್ನು ಮುಟ್ಟಿರುವ ತೇಜೋಮಯವಾದ ಅನೇಕ ವರ್ಣಗಳುಳ್ಳ, ತೆರೆದ ಬಾಯಿಯುಳ್ಳ, ಹೊಳೆಯುವ ವಿಶಾಲನೇತ್ರಗಳಿಂದ ಕೂಡಿದ ನಿನ್ನನ್ನು ನೋಡಿ ನನ್ನ ಅಂತರಾತ್ಮವು ವ್ಯಥಿತವಾಗಿರುವದು. ನನಗೆ ಧೈರ್ಯಶಾಂತಿಗಳು ಇಲ್ಲದಾಗಿರುವವು.

ದಂಷ್ಟ್ರಾಕರಾಲಾನಿ ಚ ತೇ ಮುಖಾನಿ
ದೃಷ್ಟ್ವೈವ ಕಾಲಾನಲ ಸಂನಿಭಾನಿ ||
ದಿಶೋ ನ ಜಾನೇ ನ ಲಭೇ ಚ ಶರ್ಮ
ಪ್ರಸೀದ ದೇವೇಶ ಜಗನ್ನಿವಾಸ || ೨೫ ||

ಪ್ರಳಯಕಾಲದ ಅಗ್ನಿಯಂತಿರುವ ವಿಕರಾಳವಾದ ದವಡೆಗಳುಳ್ಳ ನಿನ್ನ ಮುಖವನ್ನು ನೋಡಿ ನನಗೆ ದಿಗ್ಭ್ರಮೆಯಾಗಿದೆ. ಶಾಂತಿಯು ದೊರೆಯು ಲೊಲ್ಲದು. ಹೇ ಜಗನ್ನಿವಾಸನಾದ ದೇವೇಶನೇ ಪ್ರಸನ್ನನಾಗು.

ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ
ಸರ್ವೇ ಸಹೈವಾವನಿಪಾಲಸಂಘೈಃ ||
ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ
ಸಹಾಸ್ಮದೀಯೈರಪಿ ಯೋಧಮುಖ್ಯೈಃ || ೨೬ ||

ಈ ರಾಜರುಗಳ ಸಮೂಹ ಸಹಿತವಾಗಿ ಧೃತರಾಷ್ಟ್ರನ ಪುತ್ರರೂ ಭೀಷ್ಮದ್ರೋಣರೂ ಈ ಕರ್ಣನೂ ಹಾಗೆಯೇ ನಮ್ಮ ಪಕ್ಷದ ಎಲ್ಲ ಪ್ರಮುಖ ವೀರರೂ

ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ
ದಂಷ್ಟ್ರಾಕರಾಲಾನಿ ಭಯಾನಕಾನಿ ||
ಕೇಚಿದ್ವಿಲಗ್ನಾ ದಶನಾಂತರೇಷು
ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ || ೨೭ ||

ನಿನ್ನ ಕರಾಳವಿಕರಾಳ ದವಡೆಗಳುಳ್ಳ ಭಯಂಕರವಾದ ಬಾಯಿಯನ್ನು ಪ್ರವೇಶಿಸುತ್ತಲಿರುವರು. ನಿನ್ನ ಹಲ್ಲುಗಳ ಮಧ್ಯದಲ್ಲಿ ಅನೇಕರ ತಲೆಗಳು ಸಿಕ್ಕು ಒಡೆದು ಪುಡಿಪುಡಿಯಾಗುವದೂ ಕಾಣುತ್ತಲಿರುವದು.

ಯಥಾ ನದೀನಾಂ ಬಹವೋಽಂಬುವೇಗಾಃ
ಸಮುದ್ರಮೇವಾಭಿಮುಖಾ ದ್ರವಂತಿ ||
ತಥಾ ತವಾಮೀ ನರಲೋಕವೀರಾ
ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ || ೨೮ ||

ವೇಗದಿಂದ ಹರಿಯುವ ನದಿಗಳ ಪ್ರವಾಹಗಳೆಲ್ಲ ಸಮುದ್ರದ ಕಡೆಗೇ ಸಾಗುವಂತೆ ಈ ನರವೀರರೆಲ್ಲರೂ ನಿನ್ನ ಪ್ರಜ್ವಲಿತವಾದ ಬಾಯಿಯನ್ನೇ ಪ್ರವೇಶಿಸುತ್ತಲಿರುವರು.

**ಯಥಾ ಪ್ರದೀಪ್ತಂ ಜ್ವಲನಂ ಪತಂಗಾ**
**ವಿಶಂತಿ ನಾಶಾಯ ಸಮೃದ್ಧವೇಗಾಃ ||**
**ತಥೈವ ನಾಶಾಯ ವಿಶಂತಿ ಲೋಕಾ**
**ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ || ೨೯ ||**

ದೀಪದ ಹುಳಗಳು ಉರಿಯುವ ಕಿಚ್ಚಿನಲ್ಲಿ ತಮ್ಮ ನಾಶಕ್ಕಾಗಿ ಭರದಿಂದ ಹೋಗಿ ಬೀಳುವಂತೆ ಈ ಜನರೆಲ್ಲರೂ ತಮ್ಮ ನಾಶಕ್ಕಾಗಿಯೇ ರಭಸದಿಂದ ಬಂದು ನಿನ್ನ ಬಾಯಿಯನ್ನು ಪ್ರವೇಶಿಸುತ್ತಿರುವರು.

**ಲೇಲಿಹ್ಯಸೇ ಗ್ರಸಮಾನಃ ಸಮಂತಾ-**
**ಲ್ಲೋಕಾನ್ಸಮಗ್ರಾನ್ವದನೈರ್ಜ್ವಲದ್ಭಿಃ ||**
**ತೇಜೋಭಿರಾಪೂರ್ಯ ಜಗತ್ಸಮಗ್ರಂ**
**ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ || ೩೦ ||**

ನಿನ್ನ ಪ್ರಜ್ವಲಿಸುವ ಬಾಯಿಯಿಂದ ಸಮಸ್ತ ಜನರನ್ನೂ ನುಂಗಿ ನಾಲಿಗೆಯನ್ನು ನೆಕ್ಕುತ್ತಲಿರುವೆ. ಎಲೈ ವಿಷ್ಣುವೇ, ನಿನ್ನ ಉಗ್ರ ತೇಜಸ್ಸಿನ ಪ್ರಕಾಶವು ಜಗತ್ತೆಲ್ಲವನ್ನೂ ತುಂಬಿಕೊಂಡು ಅದನ್ನು ಸುಡುತ್ತಲಿರುವದು.

**ಆಖ್ಯಾಹಿ ಮೇ ಕೋ ಭವಾನುಗ್ರರೂಪೋ**
**ನಮೋಽಸ್ತು ತೇ ದೇವವರ ಪ್ರಸೀದ ||**
**ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ**
**ನ ಹಿ ಪ್ರಜಾನಾಮಿ ತವ ಪ್ರವೃತ್ತಿಂ || ೩೧ ||**

ಇಂಥ ಉಗ್ರಸ್ವರೂಪವನ್ನು ಧರಿಸಿದವನಾದ ನೀನು ಯಾರೆಂಬದನ್ನು ನನಗೆ ಹೇಳು. ದೇವತೆಗಳಲ್ಲಿ ಶ್ರೇಷ್ಠನೇ, ನಿನ್ನನ್ನು ನಮಸ್ಕರಿಸುವೆನು, ಪ್ರಸನ್ನನಾಗು. ಆದಿಕಾರಣನಾದ ನಿನ್ನ ಸ್ವರೂಪವನ್ನು ತಿಳಿಯಬಿಚ್ಛಿಸುವೆನು. ಕಣ್ಣಾರೆ ನೋಡುತಲಿರುವ ನಿನ್ನ ರೂಪವು ನನಗೆ ತಿಳಿಯದಂತಾಗಿದೆ.

ಹತ್ತನೆಯ ಅಧ್ಯಾಯದಲ್ಲಿ ವರ್ಣಿಸಿದ ವಿಭೂತಿಯೋಗವನ್ನು ಕೇಳಿ ಅರ್ಜುನನು ಕೆಲಮಟ್ಟಿಗೆ ತೃಪ್ತಿಪಡೆದಿದ್ದನು. ಅದೇ ತೃಪ್ತಿಯನ್ನೂ ಸುಖವನ್ನೂ ತನ್ನ ಕಣ್ಣುಗಳು ಸಹ ಅನುಭವಿಸಲೆಂದು ಆ ವಿಭೂತಿಗಳಿಂದ ಕೂಡಿದ ಶ್ರೀಕೃಷ್ಣ ಪುರುಷೋತ್ತಮನ ವಿಶ್ವರೂಪವನ್ನು ಅರ್ಜುನನು ನೋಡಬಯಸಿ, ಅದನ್ನು ತನಗೆ ತೋರಿಸೆಂದು ಶ್ರೀಕೃಷ್ಣನನ್ನು ಕೇಳಿಕೊಂಡನು. ಈ ವರೆಗೆ ಶ್ರೀಕೃಷ್ಣ ಪುರುಷೋತ್ತಮನ ಸ್ವಭಾವರಹಸ್ಯಗಳನ್ನೂ ಸ್ವರೂಪದ ಪ್ರಕಾರಗಳನ್ನೂ ಅವನು ಮನಸದಣಿಯೆ ಕೇಳಿರಲಿಲ್ಲವೇ? ಸೃಷ್ಟಿಯನ್ನು ಹುಟ್ಟಿಸುವವನು ಅವನು. ಅವನಿಂದ ಬ್ರಹ್ಮನು ಬ್ರಹ್ಮನಿಂದ ಪ್ರಜೆಗಳು, ಬ್ರಹ್ಮನಿಗಾಗಲಿ ಪ್ರಜೆಗಳಿಗಾಗಲಿ ದೇವತೆಗಳಿಗಾಗಲಿ ಇವನಂಥ ಪರಮಸಹೃದಯನಾದ ಸಖನಿಲ್ಲ; ಇವನೇ ಎಲ್ಲರನ್ನೂ ಪೋಷಿಸುವ ತಂದೆತಾಯಿ. ಮಳೆಯೂ ಇವನಿಂದ, ಬೆಳೆಯೂ ಇವನಿಂದ, ಎಲ್ಲ ಸ್ವಾರಸ್ಯಕ್ಕೂ ಸೌಂದರ್ಯಕ್ಕೂ ಇವನೇ ಉಗಮಸ್ಥಾನ ಅರ್ಜುನನ ಮನಸ್ಸಿನಲ್ಲಿ ಆಕಾರಗೊಂಡ ಶ್ರೀಕೃಷ್ಣ ಪುರುಷೋತ್ತಮನ ಭಾವಚಿತ್ರವು ಈ ಬಗೆಯದಾಗಿತ್ತು. ಆದರೆ ಆ ಚಿತ್ರವೆಲ್ಲಿ, ಮತ್ತು ಈಗ ಅವನ ಕಣ್ಣಿಗೆ ಕಾಣುವ ಚಿತ್ರವೆಲ್ಲಿ! ಇದು ತನ್ನ ಪ್ರಾಣಸಖನಾದ ಶ್ರೀಕೃಷ್ಣನ ಸ್ವರೂಪವಾಗಬಹುದೆ? ಅವನ ಸೌಂದರ್ಯವೂ ಕಾರುಣ್ಯವೂ ಇಲ್ಲದ ಕಲ್ಲೆದೆಯ ಈ ಕ್ರೂರವಿಶ್ವರೂಪವು ಅವನದಾಗಲಾರದು, ಹಾಗಾದರೆ ಇನ್ನಾರದಿರಬಹುದು? ಹತ್ತನೆಯ ಅಧ್ಯಾಯದಲ್ಲಿ ಹೇಳದೆ ಉಳಿದು ಹೋದ ಶ್ರೀಕೃಷ್ಣನ ರೂಪದಾದರೊಂದು ವಿಭೂತಿಯದಾಗಿರಬಹುದು. ಈ ರೂಪವನ್ನು ಕಣ್ಣಿಂದ ನೋಡಿಯೂ ಅದು ಶ್ರೀಕೃಷ್ಣನದು ಹೇಗಾಗಬಹುದೆಂದು ಅರ್ಜುನನಿಗೆ ತಿಳಿಯದಾಗಿದೆ. ಶ್ರೀಕೃಷ್ಣನ ಈ ವಿಭೂತಿರೂಪವು ಅವನಿಗೆ ಬೇಡ. ಸೃಷ್ಟಿಗೆಲ್ಲ ಆದಿಕಾರಣನಾಗುವ ಶ್ರೀಕೃಷ್ಣನ ಸೌಮ್ಯರೂಪವನ್ನೇ ಅರ್ಜುನನು ತಿಳಿಯಲೆಳಸುವನು; ಅವನ ಭಯಂಕರವಾದ ವಿಕೃತಸ್ವರೂಪವನ್ನು ಒಲ್ಲನು.

ಶ್ರೀಭಗವಾನುವಾಚ—

**ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ**
**ಲೋಕಾನ್ಸಮಾಹರ್ತುಮಿಹ ಪ್ರವೃತ್ತಃ ।।**

ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ
ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥ ೩೨ ॥
ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ
ಜಿತ್ವಾ ಶತ್ರೂನ್ಭುಂಕ್ಷ್ವ ರಾಜ್ಯಂ ಸಮೃದ್ಧಂ॥
ಮಯೈವೈತೇ ನಿಹತಾಃ ಪೂರ್ವಮೇವ
ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ ೩೩ ॥

ನಾನು ಲೋಕವನ್ನು ಸಂಹರಿಸುವ ಪ್ರಚಂಡನಾದ ಕಾಲನು. ಇಲ್ಲಿ ಈಗ ಜನರನ್ನು ಸಂಹಾರ ಮಾಡಲುದ್ಯುಕ್ತನಾಗಿರುವೆನು. ನೀನು (ಅರ್ಜುನನು) ಇಲ್ಲದಿದ್ದರೂ ಸೈನ್ಯಗಳಲ್ಲಿ ಇಲ್ಲಿ ನೆರೆದಿರುವ ಯೋಧರೆಲ್ಲರೂ ನಿಃಶೇಷರಾಗುವದು ಖಂಡಿತ. ಆದುದರಿಂದ ಏಳು, ವಿಜಯವನ್ನು ಸಂಪಾದಿಸು. ಮತ್ತು ಶತ್ರುಗಳನ್ನು ಜಯಿಸಿ ಸಮೃದ್ಧವಾದ ಸಾಮ್ರಾಜ್ಯವನ್ನು ಉಪಭೋಗಿಸು. ಇವರೆಲ್ಲರನ್ನು ನಾನು ಈ ಮೊದಲೇ ಕೊಂದಿರುವೆನು. ಎಲೈ ಸವ್ಯಸಾಚಿಯೇ (ಇನ್ನು ಮುಂದೆ ಅವರಿಗುಂಟಾಗುವ ಮರಣದ ದೃಶ್ಯಕ್ಕೆ) ನೀನು ನಿಮಿತ್ತಮಾತ್ರನಾಗು.

ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ
ಕರ್ಣಂ ತಥಾಽನ್ಯಾನಪಿ ಯೋಧವೀರಾನ್ ॥
ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ
ಯುಧ್ಯಸ್ವ ಜೇತಾಽಸಿ ರಣೇ ಸಪತ್ನಾನ್ ॥ ೩೪ ॥

ದ್ರೋಣನೂ ಭೀಷ್ಮನೂ ಜಯದ್ರಥನೂ ಕರ್ಣನೂ ಮತ್ತುಳಿದ ವೀರಭಟರೂ ನನ್ನಿಂದ ಹತರಾಗಿರುವರು. ಅವರನ್ನು ನೀನು ಕೊಲ್ಲು, ನಿನಗೆ ಮನೋವ್ಯಥೆ ಬೇಡ. ಯುದ್ಧವನ್ನು ಮಾಡು. ರಣದಲ್ಲಿ ನೀನು ಶತ್ರುಗಳನ್ನು ಜಯಿಸುವೆ.

ಸಂಜಯ ಉವಾಚ—

ಏತಚ್ಛ್ರುತ್ವಾ ವಚನಂ ಕೇಶವಸ್ಯ
ಕೃತಾಂಜಲಿರ್ವೇಪಮಾನಃ ಕಿರೀಟೀ ॥
ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ
ಸಗದ್ಗದಂ ಭೀತಭೀತಃ ಪ್ರಣಮ್ಯ ॥ ೩೫ ॥

ಸಂಜಯನು ಅಂದದ್ದು—ಅರ್ಜುನನು ಶ್ರೀಕೇಶವನ ಮಾತನ್ನು ಕೇಳಿ ಕೈಜೋಡಿಸಿ ನಡುಗುತ್ತ ಶ್ರೀಕೃಷ್ಣನನ್ನು ನಮಸ್ಕರಿಸಿ ಗದ್ಗದಕಂಠದಿಂದ ಅಂಜುತ್ತ ಅಂಜುತ್ತ ಹೀಗೆ ಪುನಃ ನುಡಿದನು.

ಅರ್ಜುನ ಉವಾಚ—

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ಪ್ರಹೃಷ್ಯತ್ಯನುರಜ್ಯತೇ ಚ ॥**
**ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ ।**
**ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ ॥ ೩೬ ॥**

ಎಲೈ ಹೃಷೀಕೇಶನೇ, ನಿನ್ನ ಸಂಕೀರ್ತನೆಯನ್ನು ಮಾಡಿ ಜಗತ್ತೆಲ್ಲ ಸಂತೋಷವನ್ನು ಪಡೆಯುವದು, ಮತ್ತು ಅದರಲ್ಲೇ ಆನಂದವುಳ್ಳದ್ದಾಗಿರುವದು. ರಾಕ್ಷಸರು ಭಯದಿಂದ ದಿಕ್ಕುಪಾಲಾಗಿ ಓಡಿಹೋಗುತ್ತಿರುವರು. ಸಿದ್ಧಪುರುಷರ ಸಮೂಹಗಳು ನಿನ್ನನ್ನು ನಮಸ್ಕರಿಸುವವು. ಇದೆಲ್ಲವೂ ಯೋಗ್ಯವೇ ಸರಿ.

**ಕಸ್ಮಾಚ್ಚ ತೇ ನ ನಮೇರನ್ಮಹಾತ್ಮನ್**
**ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ॥**
**ಅನಂತ ದೇವೇಶ ಜಗನ್ನಿವಾಸ**
**ತ್ವಮಕ್ಷರಂ ಸದಸತ್ತತ್ಪರಂ ಯತ್ ॥ ೩೭ ॥**

ಎಲೈ ಮಹಾತ್ಮನೇ, **ಬ್ರಹ್ಮದೇವನಿಗಾದರೂ ನೀನೇ ಆದಿಕಾರಣನಾಗಿರುವೆ.** ಅವನಿಗಿಂತಲೂ ಶ್ರೇಷ್ಠನಾಗಿರುವೆ. ಇಂಥ ನಿನ್ನನ್ನು ಅವರೆಲ್ಲರೂ ಯಾಕೆ ವಂದಿಸಬಾರದು? ಎಲೈ ಅನಂತನೇ, ಎಲೈ ದೇವಾದಿದೇವನೇ, ಎಲೈ ಜಗನ್ನಿವಾಸ, ಸದಸತ್ತುಗಳು ನೀನೇ, ಇವೆರಡನ್ನೂ ಮೀರಿದ ಅಕ್ಷರನೂ ನೀನೇ ಆಗಿರುವೆ.

**ಈ ಶ್ಲೋಕದಲ್ಲಿ ಸತ್ ಅಸತ್ ಎಂಬ ಪದಗಳಿಗೆ ಕ್ಷರ ಅಕ್ಷರವೆಂದೂ ಅಥವಾ ವ್ಯಕ್ತ ಅವ್ಯಕ್ತವೆಂದೂ ಅರ್ಥಮಾಡುವದುಂಟು. ವ್ಯಕ್ತ ಅವ್ಯಕ್ತವೆಂದು ಹೇಗೆ ಅರ್ಥವಾಗಬಹುದೆಂಬದು ನಮಗೆ ತಿಳಿಯುವದಿಲ್ಲ. ಗೀತೆಯ**

ವಿಶಿಷ್ಟ ಪಾರಿಭಾಷಿಕ ಅರ್ಥದಲ್ಲಿ ಕ್ಷರ ಅಕ್ಷರವೆಂದು ಹೇಳಬಹುದು. ಆದರೂ ಅದು ಅಷ್ಟು ಸರಿಯಲ್ಲ. ಏಕೆಂದರೆ ಕ್ಷರಾಕ್ಷರ ಶಬ್ದಗಳು ಗೀತೆಯಲ್ಲಿ ಮೂಲಸ್ವಭಾವವಾಚಕಗಳಾಗಿ ಉಪಯೋಗಿಸಲ್ಪಟ್ಟಿವೆ. ಬ್ರಹ್ಮ ಪುರುಷೋತ್ತಮರಿಬ್ಬರೇ ಪರಮ ಅಕ್ಷರರು. ಮತ್ತುಳಿದ ಜೀವಭೂತಗಳೆಲ್ಲರೂ ಕ್ಷರರು (೧೫-೧೬). ಇಂಥ ಕ್ಷರರಾದರೂ ನಿತ್ಯಸತ್ವಸ್ಥ ಸ್ಥಿತಿಯನ್ನು ಪಡೆದು ಬ್ರಾಹ್ಮೀಸ್ಥಿತಿ ಬ್ರಹ್ಮನಿರ್ವಾಣಗಳನ್ನು ಅವರು ಸೇರಬಹುದು. ಹೀಗೆ ನಾಶವಿಲ್ಲದ ಹಾಗು ನಾಶವಂತವೆಂಬ ಅರ್ಥವು ಸತ್ ಅಸತ್ ಶಬ್ದಗಳಿಗೆ ಗೀತೆಯಲ್ಲಿ ಇರುವದಿಲ್ಲ. **ಸತ್ ಎಂದರೆ ದೈವೀ ಸಂಪತ್ತುಳ್ಳ ಜೀವಿತವೆಂದೂ ಅಸತ್ ಎಂದರೆ ಆಸುರೀ ಸಂಪತ್ತುಳ್ಳ ಜೀವಿತವೆಂದೂ** ಗೀತೆಯಲ್ಲಿ ಉದ್ದಿಷ್ಟವಿರುವದು.

**ತ್ವಮಾದಿದೇವಃ ಪುರುಷಃ ಪುರಾಣ**
**ಸ್ತ್ವಮಸ್ಯ ವಿಶ್ವಸ್ಯ ಪರಂ ನಿದಾನಂ ॥**
**ವೇತ್ತಾಽಸಿ ವೇದ್ಯಂ ಚ ಪರಂ ಚ ಧಾಮ**
**ತ್ವಯಾ ತತಂ ವಿಶ್ವಮನಂತರೂಪ** ॥ ೩೮ ॥

ನೀನೇ ಆದಿದೇವನು. ನೀನೇ ಪುರಾತನ ಪುರುಷನು. ಈ ಜಗತ್ತಿಗೆ ಪರಮ ಆಧಾರನೂ ನೀನೇ. ತಿಳಿದುಕೊಳ್ಳುವವನೂ ತಿಳಿಯಬೇಕಾದವನೂ ನೀನೇ. ಎಲೈ ಅನಂತರೂಪನೇ, ನೀನೇ ಈ ವಿಶ್ವವನ್ನು ವಿಸ್ತರಿಸಿರುವೆ.

**ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ**
**ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ॥**
**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ**
**ಪುನಶ್ಚ ಭೂಯೋಽಪಿ ನಮೋ ನಮಸ್ತೇ** ॥ ೩೯ ॥

ವಾಯುವೂ ಯಮನೂ ಅಗ್ನಿಯೂ ವರುಣನೂ ಚಂದ್ರನೂ ಪ್ರಜಾಪತಿಯೂ ಪ್ರಪಿತಾಮಹನೂ ನೀನೇ. ನಿನಗೆ ಸಾವಿರ ನಮಸ್ಕಾರಗಳು. **ಪುನಃ ಪುನಃ ನಿನಗೆ ನಮಸ್ಕಾರವು.**

**ನಮಃ ಪುರಸ್ತಾದಥ ಪೃಷ್ಠತಸ್ತೇ**
**ನಮೋಸ್ತು ತೇ ಸರ್ವತ ಏವ ಸರ್ವ ||**
**ಅನಂತವೀರ್ಯಾಮಿತವಿಕ್ರಮಸ್ತ್ವಂ**
**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ** || ೪೦ ||

ನಿನಗೆ ಮುಂದಿನಿಂದ ನಮಸ್ಕಾರವು, ಹಿಂದಿನಿಂದ ನಮಸ್ಕಾರವು. ನಿನಗೆ ಎಲ್ಲ ಕಡೆಯಿಂದಲೂ ನಮಸ್ಕಾರವಿರಲಿ. ನಿನ್ನ ವೀರ್ಯಕ್ಕೆ ಅಂತವಿಲ್ಲ. ನಿನ್ನ ಪರಾಕ್ರಮಕ್ಕೆ ಎಣೆಯಿಲ್ಲ. ನೀನೇ ಎಲ್ಲವನ್ನೂ ಸಾಧಿಸುವಿಯಾದುದರಿಂದ ಎಲ್ಲವೂ ನೀನೇ ಆಗಿರುವೆ.

**ಸಖೇತಿ ಮತ್ವಾ ಪ್ರಸಭಂ ಯದುಕ್ತಂ**
**ಹೇ ಕೃಷ್ಣ ಹೇ ಯಾದವ ಹೇ ಸಖೇತಿ ||**
**ಅಜಾನತಾ ಮಹಿಮಾನಂ ತವೇದಂ**
**ಮಯಾ ಪ್ರಮಾದಾತ್ಪ್ರಣಯೇನ ವಾಪಿ** || ೪೧ ||

ನಿನ್ನ ಇಂಥ ಮಹಿಮೆಯನ್ನರಿಯದೆ ನನ್ನ ಸ್ನೇಹಿತನೆಂದೇ ಬಗೆದು ಎಲೈ ಕೃಷ್ಣ, ಎಲೈ ಯಾದವ, ಎಲೈ ಮಿತ್ರಾ ಎಂದು ಪ್ರೇಮದಿಂದಾಗಲಿ ಪ್ರಮಾದದಿಂದಾಗಲಿ ನಿನ್ನನ್ನು ಮರ್ಯಾದೆ ಮೀರಿ ಸಂಬೋಧಿಸಿರುವೆನು.

**ಯಚ್ಚಾವಹಾಸಾರ್ಥಮಸತ್ಕೃತೋಽಸಿ**
**ವಿಹಾರಶಯ್ಯಾಸನಭೋಜನೇಷು ||**
**ಏಕೋಽಥವಾಪ್ಯಚ್ಯುತ ತತ್ಸಮಕ್ಷಂ**
**ತತ್ ಕ್ಷಾಮಯೇ ತ್ವಾಮಹಮಪ್ರಮೇಯಂ** || ೪೨ ||

ಮತ್ತು ಆಹಾರವಿಹಾರಗಳಲ್ಲಿ ತೊಡಗಿರುವಾಗ ಮಲಗಿರುವಾಗ ಅಥವಾ ಕುಳಿತಿರುವಾಗ ಎಲೈ ಅಚ್ಯುತನೇ, ಒಬ್ಬನೇ ಇದ್ದಾಗ ಇಲ್ಲವೆ ನಾಲ್ಕು ಜನರಲ್ಲಿದ್ದಾಗ ನಾನು ಹಾಸ್ಯವಿನೋದಾರ್ಥವಾಗಿ ಅಪಮಾನ ಮಾಡಿರುವದನ್ನೆಲ್ಲ ನೀನು ಕ್ಷಮಿಸಬೇಕೆಂದು ಅಪ್ರಮೇಯನಾದ ನಿನ್ನನ್ನು ಈಗ ನಾನು ಬೇಡಿಕೊಳ್ಳುವೆನು.

ಪಿತಾಸಿ ಲೋಕಸ್ಯ ಚರಾಚರಸ್ಯ
ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ॥
ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ
ಲೋಕತ್ರಯೇಽಪ್ಯಪ್ರತಿಮಪ್ರಭಾವಃ ॥ ೪೩ ॥

ನೀನೇ ಚರಾಚರ ಸೃಷ್ಟಿಗೆಲ್ಲ ಪಿತನು, ಪೂಜ್ಯನು, ಪರಮಶ್ರೇಷ್ಠನಾದ ಗುರುವು. ಈ ಮೂರು ಲೋಕಗಳಲ್ಲಿ ನಿನಗೆ ಸಮಾನರಿಲ್ಲ. ಎಲೈ ಮಹಾ ಮಹಿಮನೇ, ಇನ್ನು ನಿನಗಿಂತ ಅಧಿಕರು ಇರುವದು ಹೇಗೆ? ನಿನ್ನ ಪ್ರಭಾವಕ್ಕೆ ಎಣೆಯಿಲ್ಲ.

ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ
ಪ್ರಸಾದಯೇ ತ್ವಾಮಹಮೀಶಮೀಡ್ಯಂ ॥
ಪಿತೇವ ಪುತ್ರಸ್ಯ ಸಖೇವ ಸಖ್ಯುಃ
ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಂ ॥ ೪೪ ॥

ಇದಕ್ಕಾಗಿ ನಿನಗೆ ಸಾಷ್ಟಾಂಗ ನಮಸ್ಕರಿಸಿ, ಈಶ್ವರನಾದ ನಿನ್ನನ್ನು ಪ್ರಸನ್ನನಾಗೆಂದು ಬೇಡಿಕೊಳ್ಳುತಲಿರುವೆನು. ತಂದೆಯು ಬಾಲಕನ ತಪ್ಪುಗಳನ್ನು ಗೆಳೆಯನು ಗೆಳೆಯನ ಪ್ರಮಾದಗಳನ್ನು ಪ್ರಿಯನು ತನ್ನ ಪ್ರಿಯಳ ಅಪರಾಧಗಳನ್ನು ಕ್ಷಮಿಸುವಂತೆ ನನ್ನ ಅಪರಾಧಗಳನ್ನು ನೀನು ಕ್ಷಮಿಸಬೇಕು.

ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ
ಭಯೇನ ಚ ಪ್ರವ್ಯಥಿತಂ ಮನೋ ಮೇ ॥
ತದೇವ ಮೇ ದರ್ಶಯ ದೇವ ರೂಪಂ
ಪ್ರಸೀದ ದೇವೇಶ ಜಗನ್ನಿವಾಸ ॥ ೪೫ ॥

ಹಿಂದೆ ಎಂದೆಂದೂ ನೋಡದ ನಿನ್ನ ರೂಪವನ್ನು ನೋಡಿ ನಾನು ಹರ್ಷಭರಿತನಾಗಿರುವೆನು. ಆದರೆ ನನ್ನ ಮನಸ್ಸು ವ್ಯಥೆಗೊಂಡಿರುವದು. ದೇವಾದಿದೇವನೇ, ಜಗನ್ನಿವಾಸನೇ ಪ್ರಸನ್ನನಾಗು ಮತ್ತು ನಿನ್ನ ಮೊದಲಿನ ಆ ಸ್ವರೂಪವನ್ನು ನನಗೆ ತೋರಿಸು.

ಕಿರೀಟಿನಂ ಗದಿನಂ ಚಕ್ರಹಸ್ತ
ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ॥
ತೇನೈವ ರೂಪೇಣ ಚತುರ್ಭುಜೇನ
ಸಹಸ್ರಬಾಹೋ ಭವ ವಿಶ್ವಮೂರ್ತೇ ॥ ೪೬ ॥

ಹೇ ಸಹಸ್ರ ಬಾಹುಗಳುಳ್ಳ ವಿಶ್ವಮೂರ್ತಿಯೇ, ಕಿರೀಟವನ್ನೂ ಗದೆಯನ್ನೂ ಚಕ್ರವನ್ನೂ ಧರಿಸಿರುವ ನಿನ್ನ ರೂಪವನ್ನು ನಾನು ನೋಡ ಬಯಸುವೆನು. ಆ ಚತುರ್ಭುಜ ರೂಪವನ್ನು ನೀನು ಧರಿಸು.

ಶ್ರೀಭಗವಾನ್ ಉವಾಚ—

ಮಯಾ ಪ್ರಸನ್ನೇನ ತವಾರ್ಜುನೇದಂ
ರೂಪಂ ಪರಂ ದರ್ಶಿತಮಾತ್ಮಯೋಗಾತ್ ॥
ತೇಜೋಮಯಂ ವಿಶ್ವಮನಂತಮಾದ್ಯಂ
ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಂ ॥ ೪೭ ॥

ಅರ್ಜುನನೇ, ನಿನ್ನ ಹೊರತು ಮತ್ತಾರ ಕಣ್ಣಿಗೂ ಇದುವರೆಗೆ ಬೀಳದೆ ಇದ್ದ, ತೇಜೋಮಯವಾದ, ಆದಿಅಂತಗಳಿಲ್ಲದ ವಿಶ್ವಸ್ವರೂಪವೆನಿಸುವ ನನ್ನ ಪರಮರೂಪವನ್ನು ಪ್ರಸನ್ನನಾಗಿ ಆತ್ಮಯೋಗದಿಂದ ನಿನಗೆ ತೋರಿಸಿರುವೆನು.

ನ ವೇದಯಜ್ಞಾಧ್ಯಯನೈರ್ನ ದಾನೈ
ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ॥
ಏವಂ ರೂಪಃ ಶಕ್ಯ ಅಹಂ ನೃಲೋಕೇ
ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥ ೪೮ ॥

ವೇದ, ಯಜ್ಞ, ಅಧ್ಯಯನ, ದಾನ, ಕರ್ಮ, ಉಗ್ರತಪ ಇವೇ ಮುಂತಾದವುಗಳಿಂದ ಈ ನರಲೋಕದಲ್ಲಿ, ಎಲೈ ಪಾರ್ಥಾ, ಈ ನನ್ನ ರೂಪವನ್ನು ಕಾಣುವದು ನಿನ್ನ ಹೊರತು ಇನ್ನಾರಿಗೂ ಶಕ್ಯವಲ್ಲ.

**ಮಾ ತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಂ ॥**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ**
**ತದೇವ ಮೇ ರೂಪಮಿದಂ ಪ್ರಪಶ್ಯ ॥ ೪೯ ॥**

ನನ್ನ ಈ ಘೋರವಾದ ರೂಪವನ್ನು ನೋಡಿ ನೀನು ವ್ಯಥಿತನಾಗ ಬೇಡ. ಭೀತಿಯನ್ನು ತೊರೆದು ಶಾಂತಚಿತ್ತನಾಗಿ ಪುನಃ ನನ್ನ ಆ ಮೊದಲಿನ ರೂಪವನ್ನೇ ನೋಡುವವನಾಗು.

ಸಂಜಯ ಉವಾಚ—

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ ॥**
**ಆಶ್ವಾಸಯಾಮಾಸ ಚ ಭೀತಮೇನಂ**
**ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥ ೫೦ ॥**

ವಾಸುದೇವನು ಅರ್ಜುನನಿಗೆ ಹೀಗೆ ನುಡಿದು ತನ್ನ ಮೊದಲಿನ ರೂಪ. ವನ್ನು ಮರಳಿ ತೋರಿಸಿದನು; ಪುನಃ ತನ್ನ ಸೌಮ್ಯರೂಪವನ್ನು ತಾಳಿ ಭಯಭೀತನಾದ ಅರ್ಜುನನಿಗೆ ಸಮಾಧಾನವನ್ನುಂಟುಮಾಡಿದನು.

ಅರ್ಜುನ ಉವಾಚ—

**ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥ ೫೧ ॥**

ಎಲೈ ಜನಾರ್ದನನೇ, ನಿನ್ನ ಸೌಮ್ಯವಾದ ಮಾನುಷರೂಪವನ್ನು ಈಗ ನೋಡಿ ನಾನು ಸಚೇತನನೂ ಶಾಂತಚಿತ್ತನೂ ಆದೆನು.

ಶ್ರೀಭಗವಾನ್ ಉವಾಚ—

**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥ ೫೨ ॥**

ನೀನೀಗ ನೋಡಿದಂಥ ನನ್ನ ರೂಪವನ್ನು ಕಾಣುವದು ದುಸ್ಸಾಧ್ಯವಾಗಿದೆ ಈ ರೂಪವನ್ನು ದೇವತೆಗಳು ಸಹ ನಿತ್ಯದಲ್ಲಿ ನೋಡಬಯಸುವರು.

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥ ೫೩ ॥**

ನೀನು ಯಾವ ವಿಧವಾದ ನನ್ನ ದರ್ಶನವನ್ನು ಪಡೆದಿಯೋ ಆ ವಿಧದ ದರ್ಶನವನ್ನು ವೇದಗಳಿಂದಾಗಲಿ ತಪಸ್ಸುಗಳಿಂದಾಗಲಿ ದಾನಗಳಿಂದಾಗಲಿ ಯಜ್ಞಗಳಿಂದಾಗಲಿ ಪಡೆಯುವದು ಶಕ್ಯವಲ್ಲ.

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ ೫೪ ॥**

ಆದರೆ ಎಲೈ ಅರ್ಜುನನೇ, ಈ ಪ್ರಕಾರದ ನನ್ನ ದರ್ಶನವನ್ನು **ಅನನ್ಯವಾದ ಭಕ್ತಿಯಿಂದ ಪಡೆಯುವದು** ಶಕ್ಯವಾಗಿದೆ. ಎಲೈ ಪರಂತಪನೇ ಹೀಗೆ ನನ್ನ ರೂಪವನ್ನು ಕಂಡು, ತಿಳಿದು, ತತ್ವವನ್ನರಿತು ನನ್ನನ್ನು ಪ್ರವೇಶಿಸಲೂ ಬಹುದು.

ಅರ್ಜುನ ಉವಾಚ—

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥ ೫೫ ॥**

ಇಂಥ ಅವನ ಅನನ್ಯಭಕ್ತಿಯು ಭಾವಹೀನವಾದ ಆಚಾರದಲ್ಲಿಲ್ಲ; ವಿಚಾರದಲ್ಲಿಲ್ಲ; ಗುಡಿದೇಗುಲಗಳ ದರ್ಶನದಲ್ಲಿಲ್ಲ; ಸ್ನಾನಪಾನಗಳಲ್ಲಿಲ್ಲ; ತೀರ್ಥಯಾತ್ರೆಗಳಲ್ಲಿಲ್ಲ; ಮಡಿಮೈಲಿಗೆಗಳಲ್ಲಿಲ್ಲ; ಆದರೆ **ಅವನ ವಿಷಯದ ನಿಸ್ಸೀಮಭಾವದಲ್ಲಿಯೂ ಆ ಭಾವಕ್ಕಾಗಿ ಮಾಡಿದ ಆತ್ಮಸಮರ್ಪಣೆಯಲ್ಲಿಯೂ ಇರುವದು.**

ಎಲೈ ಪಾಂಡವನೇ, ನನಗಾಗಿ ಕರ್ಮಗಳನ್ನು ಕೈಕೊಳ್ಳುವವನೂ ನಾನೇ ಶ್ರೇಷ್ಠನೆಂದು ಭಾವಿಸುವವನೂ ಸಂಗವನ್ನು ಬಿಟ್ಟವನೂ ಎಲ್ಲ ಭೂತಗಳಲ್ಲಿ ವೈರವಿಲ್ಲದವನೂ ಆದ ಭಕ್ತನು ನನ್ನನ್ನು ಸೇರುವನು.

**ಹನ್ನೊಂದನೆಯ ಅಧ್ಯಾಯವು ಸಮಾಪ್ತವು.**

ಓಂ

# ಹನ್ನೆರಡನೆಯ ಅಧ್ಯಾಯವು



ಅರ್ಜುನ ಉವಾಚ—

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥ ೧ ॥**

ಪುರುಷೋತ್ತಮ ಶ್ರೀಕೃಷ್ಣನೇ ಸೃಷ್ಟಿಗೆ ಆದಿದೈವತವೆಂದೂ ಆತನ ಉಪಾಸನೆಯು ಸರ್ವ ಜೀವರಿಗೆ ಕರ್ತವ್ಯವೆಂದೂ ಹಿಂದಿನ ಮೂರು ಅಧ್ಯಾಯಗಳಿಂದ ಅರ್ಜುನನು ಮನಗಂಡಿರುವನು. ಆದರೆ ಶ್ರೀಕೃಷ್ಣನಿಗೆ ಅವ್ಯಕ್ತ ಮತ್ತು ವ್ಯಕ್ತ ಎಂಬ ಎರಡು ರೂಪಗಳಿರುವವು. ಅವ್ಯಕ್ತಸ್ವರೂಪ ವನ್ನು ೨-೨೫ರಲ್ಲಿ ವರ್ಣಿಸಿದೆ. ಈ ಅವ್ಯಕ್ತ ತತ್ವವು ವ್ಯಕ್ತಸ್ವರೂಪವನ್ನು ತಳೆದು ಶ್ರೀಕೃಷ್ಣನೆನಿಸುವದು. **ಜೀವನಿಗೆ ಉಪಾಸನೆಯು ಕರ್ತವ್ಯ ವಾಗಿದೆ. ಉಪಾಸನೆಯು ಭಕ್ತಿಯಿಂದ ಸಾಧಿಸುವದು. ಯೋಗ ಭಾವವು ಭಕ್ತಿಯ ಮೂಲವು.** ಆದುದರಿಂದ ಸತತವೂ ಯೋಗಯುಕ್ತ ನಾದ ಭಕ್ತನು ಶ್ರೀಕೃಷ್ಣಸ್ವರೂಪವನ್ನು ಆರಾಧಿಸಬಹುದು. ಇಲ್ಲವೆ ಅಕ್ಷರವೂ ಅವ್ಯಕ್ತವೂ ಆದ ಅವನ ನಿರ್ಗುಣಸ್ವರೂಪವನ್ನು ಆರಾಧಿಸ ಬಹುದು. ಈ ಎರಡು ವಿಧದ ಭಕ್ತರಲ್ಲಿ ಯೋಗವನ್ನು ವಿಶೇಷವಾಗಿ ಅರಿತವರು ಯಾರೆಂದು ಅರ್ಜುನನು ಪ್ರಶ್ನೆ ಮಾಡುವನು.

ಶ್ರೀಭಗವಾನುವಾಚ—

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥ ೨ ॥**

ನಿತ್ಯವೂ ಬುದ್ಧಿಯೋಗಯುಕ್ತರಾಗಿ ತಮ್ಮ ಮನಸ್ಸನ್ನೂ ಆತ್ಮವನ್ನೂ ಪುರುಷೋತ್ತಮ ಶ್ರೀಕೃಷ್ಣನಲ್ಲಿಟ್ಟು ಅವನನ್ನು ಪರಮಶ್ರದ್ಧೆಯಿಂದ ಆರಾಧಿಸುವವರು ಅಧಿಕರು. ಇದೇ ಶ್ರೀಕೃಷ್ಣನ ಮತ.

ಜೀವರಿಂದ ಸಲ್ಲುವ ಉಪಾಸನೆಯನ್ನು ಸ್ವೀಕರಿಸುವ ದೀಕ್ಷೆಯನ್ನು ವಹಿಸಿ ಪುರುಷೋತ್ತಮ ಶ್ರೀಕೃಷ್ಣನು ಅಧಿಯಜ್ಞನಾಗಿರುವನು. ಆದುದರಿಂದ ಅವನಲ್ಲಿ ಭಕ್ತಿಭಾವವನ್ನಿಟ್ಟು ಶ್ರದ್ಧೆಯಿಂದ ನಡೆಯುವುದರಲ್ಲಿ ಉತ್ತಮ ಯೋಗಸಾಧನೆಯುಂಟು. ಅವ್ಯಕ್ತನು ಶ್ರೇಷ್ಠನೋ ಅಥವಾ ಪುರುಷೋತ್ತಮನು ಶ್ರೇಷ್ಠನೋ ಎಂಬ ವಿಚಾರವು ಜೀವನಿಗೆ ಕರ್ತವ್ಯವಲ್ಲ.

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಂ ॥ ೩ ॥**

**ಸನ್ನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।**
**ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ॥ ೪ ॥**

ಮನುಷ್ಯನು ಅವ್ಯಕ್ತನನ್ನು ಆರಾಧಿಸಲುದ್ಯುಕ್ತನಾಗುವನೆಂದು ಭಾವಿಸುವ. ಆಗಲೂ ಅವನಿಗೆ ಉಪಾಸನೆಯು ಕರ್ತವ್ಯವಾಗಿದೆ. ಈ ಉಪಾಸನೆಯನ್ನು ಇಂದ್ರಿಯ ನಿಗ್ರಹದಿಂದಲೂ ಸರ್ವತ್ರ ಸಮಬುದ್ಧಿಯಿಂದಲೂ ಸರ್ವಭೂತ ಹಿತಾಸಕ್ತಿಯಿಂದಲೂ ಸಾಧಿಸಬೇಕು. ಹೀಗಿರುವಾಗ ತಾನು ಮಾಡುವ ಉಪಾಸನೆಗೆ ಅರ್ಹರು ಯಾರು? ಅವ್ಯಕ್ತನೋ ಪುರುಷೋತ್ತಮನೋ ಎಂಬ ವಿಚಾರವು ಗೌಣವಾಗಿದೆ. ಇದಲ್ಲದೆ ಯಜ್ಞವೂ ಉಪಾಸನೆಯೂ ಸೃಷ್ಟಿಯಲ್ಲಿ ಎಲ್ಲಿಯೇ ಸಂಭವಿಸಲಿ, ಅವು ಶ್ರೀಕೃಷ್ಣ ಪುರುಷೋತ್ತಮನನ್ನೇ ಸೇರಬೇಕೆಂಬುದು ಸೃಷ್ಟಿಯ ನಿಯಮವು ಅವು ಅವ್ಯಕ್ತನನ್ನು ಸೇರಲಾರವು. ಅವ್ಯಕ್ತನೇ ಪುರುಷೋತ್ತಮನೂ ಅಧಿಯಜ್ಞನೂ ಆಗಿ ಈ ಸೃಷ್ಟಿಯನ್ನು ಹುಟ್ಟಿಸಿದನು. **ಜೀವರಿಗೆ ಪುರುಷೋತ್ತಮನೊಡನೆ ಪ್ರತ್ಯಕ್ಷ ಸಂಬಂಧವು ಇದ್ದಂತೆ ಅವ್ಯಕ್ತನೊಡನೆ ಇರುವದಿಲ್ಲ.** ಪುರುಷೋತ್ತಮನೆಂದರೆ ಶ್ರೀಕೃಷ್ಣನು. ಆದುಕಾರಣ ಅವ್ಯಕ್ತವನ್ನು ಆರಾಧಿಸುವ ಭಕ್ತನಿಗೆ ಪ್ರಾಪ್ತನಾಗುವವನು ಶ್ರೀಕೃಷ್ಣನೇ.

**ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಂ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ ೫ ॥**

ಆದುದರಿಂದ ಅವ್ಯಕ್ತವನ್ನು ಉಪಾಸಿಸುವದೂ ಅದರಲ್ಲಿ ಆಸಕ್ತಿಯನ್ನಿಡುವದೂ ಜೀವನಿಗೆ ಹೆಚ್ಚು ಕ್ಲೇಶಮಯವು. ಈ ಸೃಷ್ಟಿಯೊಳಗಿನ ಎಲ್ಲ ಭೂತಗಳಿಗೆ ಶ್ರೀಕೃಷ್ಣನು ಪರಾತ್ಪರ ಸಾಧ್ಯವಾಗಿದ್ದಾನೆ. ಆತನನ್ನು ಮೀರಿದ ಆತನ ಅವ್ಯಕ್ತಸ್ವರೂಪವನ್ನು ಹಟದಿಂದ ಪ್ರಾಪ್ತಮಾಡಿಕೊಳ್ಳುವದು ಜೀವನಿಗೆ ಅಶಕ್ಯವು. ಅಶಕ್ಯವಾದುದನ್ನು ಸಾಧಿಸುವ ಪ್ರಯತ್ನವು ವಿಫಲವಾಗದಿರದು. ಪ್ರಯತ್ನವು ವಿಫಲವಾಗಲು ಕ್ಲೇಶವು ತಪ್ಪದು. ಇದೂ ಅಲ್ಲದೆ ದೇಹಧಾರಿಯಾದ ಜೀವನಿಗೆ ನಿಜವಾದ ಅವ್ಯಕ್ತವನ್ನು ಊಹಿಸಲಸಾಧ್ಯವು. ಇಷ್ಟದೇವತೆಯ ಕಲ್ಪನೆಯು ಇಲ್ಲದಿದ್ದರೆ ಅದನ್ನು ಆರಾಧಿಸುವದು ಹೇಗೆ? ಆದುದರಿಂದ ಅವ್ಯಕ್ತಸ್ವರೂಪವನ್ನು ಸಾಧಿಸುವ ಪ್ರಯತ್ನದಿಂದ ಜೀವನಿಗೆ ಕ್ಲೇಶವು ಸಂಭವಿಸುವದು.

**ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥ ೬ ॥**

ಪುರುಷೋತ್ತಮನಿಗಾಗಿ ಯಜ್ಞವನ್ನು ಮಾಡುವ ಅಧಿಕಾರಿಯು ಜೀವಭೂತನೇ (೨–೪೭). ಇವನು ಮಾಡುವ ಯಜ್ಞವು ಕರ್ಮದಿಂದಲೇ ಉತ್ಪನ್ನವಾಗುವದು (೩–೧೪). ಆದುದರಿಂದ ಈತನು ಈಶ್ವರನಿಗಾಗಿ ಮಾಡುವ ಉಪಾಸನೆಯು ಕರ್ಮರೂಪವಾಗಿದೆ. ಈ ತನ್ನ ಕರ್ಮವನ್ನು ಯಜ್ಞವಾಗಿ ಸಾರ್ಥಕಗೊಳಿಸಲು ಅದನ್ನು ಕೌಶಲದಿಂದ ಮಾಡಬೇಕು. ಈ ಕೌಶಲವು—ಗೀತೆಯ ಮತದಂತೆ—ಕರ್ಮದಲ್ಲಿ ಅಥವಾ ಪ್ರಯತ್ನದಲ್ಲಿಲ್ಲ. ಆ ಕರ್ಮವನ್ನು ಮಾಡುವವನ ಬುದ್ಧಿಯಲ್ಲಿದೆ. **ಮನಸ್ಸನ್ನೂ ಬುದ್ಧಿಯನ್ನೂ ಯೋಗಯುಕ್ತವಾಗಿ ಮಾಡುವದಕ್ಕೇ ಕರ್ಮಕೌಶಲವೆಂದು ಹೆಸರು.** ಅವುಗಳನ್ನು ಯೋಗಯುಕ್ತವಾಗಿ ಮಾಡುವ ಬಗೆ ಹೇಗೆ ಎಂದರೆ, ಅವುಗಳನ್ನು ಪುರುಷೋತ್ತಮ ಶ್ರೀಕೃಷ್ಣನಿಗೆ ಅನನ್ಯಭಾವದಿಂದ ಸಮರ್ಪಿಸುವದು. ಈ ಯೋಗಯುಕ್ತ ಸ್ಥಿತಿಯಲ್ಲಿ ಮಾಡಿದ ಕರ್ಮಗಳೆಲ್ಲ ಯಜ್ಞವಾಗಿ ಪುರುಷೋತ್ತಮ ಶ್ರೀಕೃಷ್ಣನಿಗೆ ಸೇರುವವು. ಯೋಗಯುಕ್ತ

ಸ್ಥಿತಿಯು ಸ್ವಭಾವದಲ್ಲಿ ದೃಢವಾಗಿ ನೆಲಸಿದರೆ ಅದಕ್ಕೆ "ಸನ್ನ್ಯಸ್ತವೃತ್ತಿ" ಯೆಂದು ಹೆಸರು (೩-೩೦). **ಇಂಥ ವೃತ್ತಿಯಿಂದ ಬುದ್ಧಿಯನ್ನೂ ಮನಸ್ಸನ್ನೂ ಕರ್ಮಗಳನ್ನೂ ಪುರುಷೋತ್ತಮ ಶ್ರೀಕೃಷ್ಣನಿಗೆ ಅರ್ಪಿಸುವದೇ ಅನನ್ಯಭಾವದಿಂದ ಅವನಲ್ಲಿ ಯೋಗಯುಕ್ತನಾಗುವದು.** ಇಂತು ಪುರುಷೋತ್ತಮನು ಶ್ರೀಕೃಷ್ಣನನ್ನೇ ಧ್ಯಾನಿಸುತ್ತ ತಮ್ಮ ಕರ್ಮಗಳಿಂದ ಅವನ ಉಪಾಸನೆಯನ್ನು ಸಾಧಿಸುವವರ ಚೇತಸ್ಸು ನಿತಾಂತವಾಗಿ ಅವನಲ್ಲಿಯೇ ತೊಡಗಿರುವದು

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಂ ॥ ೭ ॥**

ಮೃತ್ಯುಮಯವಾದ ಸಂಸಾರಸಾಗರದಲ್ಲಿ ಮುಳುಗದಂತೆ ಅವರನ್ನು ಶ್ರೀಕೃಷ್ಣನು ಕ್ಷಿಪ್ರದಲ್ಲಿ ರಕ್ಷಿಸುವನು.

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ ೮ ॥**

ಮೃತ್ಯುಭಯ ನಿವಾರಣೆಗಾಗಿಯೂ ನಿನ್ನ ಉಪಾಸನೆಯ ಸಾಫಲ್ಯಕ್ಕಾಗಿಯೂ ನಿನ್ನ ಮನಸಿನ ಆಸಕ್ತಿಯನ್ನು ನೀನು ನನಗೆ ಅರ್ಪಿಸು. ನಿನ್ನ ಬುದ್ಧಿಯನ್ನು ನನ್ನಲ್ಲಿಯೇ ಇರಿಸು. ಹೀಗೆ ಮಾಡಿದರೆ ಇನ್ನುಮುಂದೆ ನೀನು ನನ್ನಲ್ಲಿಯೇ ವಾಸಿಸುವದರಲ್ಲಿ ಸಂದೇಹವಿಲ್ಲ. (ಇದೇ ಶ್ರೀಕೃಷ್ಣನಿಗಾಗಿ ಬದುಕುವ ರೀತಿಯು).

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಂ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥ ೯ ॥**

ಇಂಥ ನಿಶ್ಚಲವಾದ ಸಾಧನೆಯು ನಿನಗೆ ಆರಂಭದಲ್ಲಿಯೇ ಒಂದು ವೇಳೆ ಸಾಧಿಸಲಾರದು. ಹಾಗಾದರೆ ನನ್ನನ್ನು ಪಡೆಯುವ ಅಭ್ಯಾಸವನ್ನು ನೀನು ಎಡೆಬಿಡದೆ ಮಾಡು. ಮತ್ತು ನನ್ನನ್ನು ಪ್ರಾಪ್ತಮಾಡಿಕೊಳ್ಳುವ

ಅಭಿಲಾಷೆಯನ್ನು ಪ್ರಬಲವಾಗಿ ಹಿಡಿ. ಇದು ಗೀತೆಯ ಅಭ್ಯಾಸ **ಯೋಗವು.**

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ಸಿದ್ಧಿಮವಾಪ್ಸ್ಯಸಿ ॥ ೧೦ ॥**

ಬುದ್ಧಿಯಿಂದಲೂ ಮನಸ್ಸಿನಿಂದಲೂ ಇಷ್ಟು ದೃಢವಾದ ಅಭ್ಯಾಸ ವಾದರೂ ನಿನಗೆ ಒಂದುವೇಳೆ ಸಾಧಿಸದಿದ್ದರೆ ನೀನು ಮಾಡಲುದ್ಯುಕ್ತ ನಾಗುವ ಕರ್ಮಗಳೆಲ್ಲವನ್ನೂ ನನಗಾಗಿ ಮಾಡು. ಹೀಗೆ ನನಗಾಗಿ ಕರ್ಮಗಳನ್ನು ಮಾಡುವದರಿಂದ ಸಿದ್ಧಿಯನ್ನು ಪಡೆಯುವೆ.

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ ೧೧ ॥**

ಇದನ್ನು ಮಾಡುವದೂ ನಿನ್ನಿಂದಾಗದಿದ್ದರೆ ನನ್ನಲ್ಲಿ ಯೋಗವನ್ನಾದರೂ ಆಚರಿಸುವ ಪ್ರಯತ್ನವನ್ನು ಮಾಡು. ನಿನ್ನ ಸಂಕಲ್ಪಪೂರ್ವಕವಾಗಿ ನೀನೇ ಕರ್ಮವನ್ನು ಮಾಡಿ ಫಲವನ್ನು ಮಾತ್ರ ನನಗೆ ಅರ್ಪಿಸು. ಇದಕ್ಕಾಗಿ ಆತ್ಮವಂತನಾಗು ಅಂದರೆ ನಿನ್ನ ಮನೋಬುದ್ಧಿಗಳನ್ನು ನನ್ನ ಕಡೆಗೆ ತಿರುಗಿಸುವ ಪ್ರಯತ್ನವನ್ನು ಮಾಡು.

**ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಂ ॥ ೧೨ ॥**

ಮೇಲೆ ಹೇಳಿದ ಫಲತ್ಯಾಗವೇ ಯೋಗದ ನಿಜವಾದ ಕನಿಷ್ಠಸ್ವರೂಪ ವೆಂದು ತಿಳಿಯಬೇಕು. ಇದಕ್ಕೂ ಕೆಳಗೆ ಕೇವಲ ಶ್ರದ್ಧೆಯಿಂದ ನಡೆಯ ಬಹುದು. **ಇಂಥ ಶ್ರದ್ಧಾಪೂರ್ವಕವಾದ ಆಚರಣೆಯಲ್ಲಿಯೂ ತರಗತಿ ಗಳಿರುವವು.** ಕೆಲವರು ಈಶ್ವರನಿರುವನೆಂಬ ಶ್ರದ್ಧೆಯಿಂದ ಆತನು ಯಾರು ಏಕೆಂಬದನ್ನರಿಯದೆ **(೧೮-೫೫)** ಅವನಿಗಾಗಿ ಅಭ್ಯಾಸವನ್ನು ಅಂದರೆ ತಾಂತ್ರಿಕ ಕರ್ಮಗಳನ್ನು ಮಾಡುವರು. ಕೆಲವರು ಇಂಥ ಕರ್ಮಗಳಿಗಾ ಧಾರವಾದ ಜ್ಞಾನವನ್ನು ಜಿಜ್ಞಾಸೆಯಿಂದ ಸೂಕ್ಷ್ಮವಾಗಿ ಅರಿಯಲು

ಯತ್ನಿಸುವರು. ಇದು ಅಭ್ಯಾಸಕ್ಕಿಂತಲೂ ಶ್ರೇಷ್ಠವು. ಇನ್ನೂ ಕೆಲವರು ಇಂಥ ಪ್ರಯತ್ನದಿಂದ ಅರಿತ ಜ್ಞಾನವನ್ನೇ ಧ್ಯಾನಮಾಡುವರು. ಇದು ಜ್ಞಾನಕ್ಕಿಂತಲೂ ಶ್ರೇಷ್ಠವು. ಇವೆಲ್ಲ ನನಗಾಗಿ ಮಾಡಿದ ಕನಿಷ್ಠಪಕ್ಷದ ಉಪಾಸನೆಗಳೆನಿಸುವವು. ಹೀಗೆ ಯೋಗ್ಯ ಮಾರ್ಗದಿಂದಲೂ ಕ್ರಮದಿಂದಲೂ ಧ್ಯಾನಪರರಾದವರು ಯೋಗಸೀಮೆಯನ್ನು ಪ್ರವೇಶಿಸಿ ನನಗಾಗಿ ಫಲತ್ಯಾಗವನ್ನು ಮಾಡುವ ಮಟ್ಟಿಗೆ ಬರುವರು. ಈ ಫಲತ್ಯಾಗವು ಧ್ಯಾನಕ್ಕಿಂತ ಶ್ರೇಷ್ಠವು ಇಂಥ ಕರ್ಮಫಲತ್ಯಾಗದಿಂದ ಸಾಧಿಸುವ ಶಾಂತಿಯು ಶ್ರೇಷ್ಠವಾದುದು. **ಅದು ಧ್ಯಾನದಿಂದ ಲಭಿಸದು.**

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥ ೧೩ ॥**

ಈ ಬಗೆಯ ಶಾಂತಿಯಿಂದ ಮನುಷ್ಯನ ಸ್ವಭಾವದಲ್ಲಿ ಮೂಡುವ ಲಕ್ಷಣಗಳನ್ನು ಶ್ರೀಕೃಷ್ಣನು ವರ್ಣಿಸುತ್ತಾನೆ. ಯಾರಲ್ಲಿಯೂ ದ್ವೇಷವಿಲ್ಲದಿರುವವನು, ಸರ್ವಭೂತಗಳ ಮಿತ್ರನು, ಕರುಣೆಯುಳ್ಳವನು, ಮಮತ್ವವೂ ಅಹಂಕಾರವೂ ಇಲ್ಲದಿರುವವನು, ಸುಖದುಃಖಗಳಲ್ಲಿ ಸಮಾನ ಬುದ್ಧಿಯುಳ್ಳವನು, ಕ್ಷಮಾವಂತನು,

**ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ**
**ಮೇ ಪ್ರಿಯಃ ॥ ೧೪ ॥**

ಸದಾ ಸಂತುಷ್ಟನು, ಬುದ್ಧಿಯೋಗಯುಕ್ತನು, ಸಂಯಮಿಯು, ದೃಢನಿಶ್ಚಯವುಳ್ಳವನು, ತನ್ನ ಮನಸ್ಸನ್ನೂ ಬುದ್ಧಿಯನ್ನೂ ನನಗೆ ಅರ್ಪಿಸಿದವನೂ ಆದ ಭಕ್ತನು ನನಗೆ ಪ್ರಿಯನು.

**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ**
**ಪ್ರಿಯಃ ॥ ೧೫ ॥**

ಯಾವನಿಂದ ಇತರರಿಗೆ ತೊಂದರೆಯಿಲ್ಲವೋ ಯಾವನಿಗೆ ಇತರರಿಂದ ತೊಂದರೆಯಾಗುವದಿಲ್ಲವೋ ಹಾಗೆಯೇ ಯಾವನು ಹರ್ಷ-ಶೋಕ-ಉದ್ವೇಗ ಗಳಿಂದ ಮುಕ್ತನೋ ಅಂಥ ಭಕ್ತನು ನನಗೆ ಪ್ರಿಯನು.

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥ ೧೬ ॥**

ನಿರಪೇಕ್ಷನೂ ಶುಚಿರ್ಭೂತನೂ ದಕ್ಷನೆಂದರೆ ಕರ್ತವ್ಯವನ್ನು ಆಲಸ್ಯ ವಿಲ್ಲದೆ ಮಾಡುವವನೂ (ಫಲದ ವಿಷಯದಲ್ಲಿ) ಉದಾಸೀನನೂ ವ್ಯಥೆ ಯಿಲ್ಲದವನೂ ಕರ್ಮಾಚರಣೆಯಲ್ಲಿ ಅಹಂಕಾರಭಾವವನ್ನು ತೊರೆದವನೂ ಆದ ನನ್ನ ಭಕ್ತನು ನನಗೆ ಪ್ರಿಯನು.

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥ ೧೭ ॥**

ಯಾವುದರಲ್ಲಿಯೂ ಹರ್ಷವನ್ನು ತಾಳದೆ ಹಾಗು ದ್ವೇಷಪಡದೆ, ಶೋಕವನ್ನೂ ಆಶೆಯನ್ನೂ ಮಾಡದೆ ಯಾವನು ತನ್ನ ಕರ್ಮಗಳ ಶುಭಾ ಶುಭಫಲಗಳ ವಿಷಯವಾಗಿ ನಿಶ್ಚಿಂತನಾಗಿರುವನು ಅಂಥ ಭಕ್ತನು ನನಗೆ ಪ್ರಿಯನು.

**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ॥ ೧೮ ॥**

ಶತ್ರು-ಮಿತ್ರರು, ಮಾನಾಪಮಾನಗಳು, ಶೀತೋಷ್ಣಗಳು, ಸುಖ ದುಃಖಗಳು ಇವುಗಳಲ್ಲೆಲ್ಲ ಯಾವನ ಬುದ್ಧಿಯು ಸಮವಿರುವದೋ ಮತ್ತು ಯಾವನು ಎಲ್ಲದರಲ್ಲಿ ಸಂಗವನ್ನು ವರ್ಜಿಸಿರುವನೋ

**ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನ ಚಿತ್ ।**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ ॥ ೧೯ ॥**

ಯಾವನಿಗೆ ನಿಂದೆಯೂ ಸ್ತುತಿಯೂ ಸಮಾನವಾಗಿರುವವೋ ಯಾವನು ಮಿತಭಾಷಿಯೂ ಯದೃಚ್ಛೆಯಿಂದುಂಟಾದ ಲಾಭದಲ್ಲಿ ಸಂತು

ಷ್ಟನೂ ಸ್ಥಿರಚಿತ್ತವುಳ್ಳವನೂ ಆಗಿರುವನೋ ಮತ್ತು ಯಾವನು ಕರ್ಮದ ಫಲವನ್ನು ಆಶ್ರಯಿಸುವದಿಲ್ಲವೋ ಅಂಥ ಭಕ್ತಿವಂತ ಪುರುಷನು ನನಗೆ ಪ್ರಿಯನಾಗುವನು.

ಯೇ ತು ಧರ್ಮಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।
ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥ ೨೦ ॥

ಮೇಲೆ ಹೇಳಿದ ಲಕ್ಷಣಗಳಲ್ಲಿ ಶಾಂತಿಯೊಂದೇ ಅಲ್ಲದೆ ಪುರುಷೋತ್ತಮನು ಶ್ರೀಕೃಷ್ಣನಲ್ಲಿ ಭಕ್ತಿಯೂ ಸಮಾವೇಶವಾಗಿದೆ. ಭಗವದ್ಗೀತೆಯಲ್ಲಿ ನಿರೂಪಿಸಿದ ಧರ್ಮಕ್ಕೆ ಈ ಶಾಂತಿಭಕ್ತಿಗಳೆರಡೂ ಮುಖ್ಯ ಲಕ್ಷಣಗಳಾಗಿವೆ. ಇವು ಅಮೃತಪ್ರಾಯವಾದುವು. ಶಾಂತಿಯಿಂದಲೂ ಭಕ್ತಿಯಿಂದಲೂ ಕೂಡಿದ ಈ ಧರ್ಮೋಪದೇಶವನ್ನು ಅನುಸರಿಸಿ ಯಾವನು ನನ್ನ ಉಪಾಸನೆಯನ್ನು ಗೈಯುವನೋ ಅಂಥ ಶ್ರದ್ಧಾವಂತನೂ ನನ್ನನ್ನು ಅನುಸರಿಸುವವನೂ ಆದ ಭಕ್ತನು ನನಗೆ ಅತ್ಯಂತ ಪ್ರಿಯನು.

ಹನ್ನೆರಡನೆಯ ಅಧ್ಯಾಯವು ಸಮಾಪ್ತವು.

———

ಓಂ

# ಹದಿಮೂರನೆಯ ಅಧ್ಯಾಯವು

**ಅವತರಣಿಕೆ—**

ಮೇಲೆ ಮೇಲೆ ನೋಡಲಾಗಿ ೧೩ನೆಯ ಅಧ್ಯಾಯದೊಳಗಿನ ನಿರೂಪಣೆಗೂ ೧೨ನೆಯ ಅಧ್ಯಾಯದೊಳಗಿನ ವಿಷಯಕ್ಕೂ ಅನುಬಂಧವಿದ್ದಂತೆ ಕಾಣುವದಿಲ್ಲ. ಆದುದರಿಂದ ೧೩ನೆಯ ಅಧ್ಯಾಯದಲ್ಲಿ ವಿವರಿಸಿದ ವಿಷಯದ ಕಡೆಗೆ ಶ್ರೀಕೃಷ್ಣನು ಏಕೆ ತಿರುಗಿದನೆಂಬುವದು ಸ್ಪಷ್ಟವಾಗುವದಿಲ್ಲ. ಆದರೂ ೭ನೆಯ ಅಧ್ಯಾಯದಿಂದ ಸಾಗಿಬಂದ ವಿವರಣೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ೧೩ನೆಯ ಅಧ್ಯಾಯದ ವಿಷಯದ ಸಂಬಂಧವು ನಮಗೆ ವಿಶದವಾಗುವದು.

೭ನೆಯ ಅಧ್ಯಾಯದಿಂದ ಜ್ಞಾನವಿಜ್ಞಾನವನ್ನು ಕುರಿತು ಶ್ರೀಕೃಷ್ಣನು ಹೇಳಲಾರಂಭಿಸಿದನು. ವಿಜ್ಞಾನವೆಂದರೆ ಸೃಷ್ಟಿಯನ್ನುಂಟು ಮಾಡಿದ ಪರಮೇಶ್ವರನ ವಿಷಯವಾಗಿ ಆತ್ಮನ ಅನುಭವಕ್ಕೆ ಬರುವ ಅಥವಾ ಆತ್ಮನು ಗ್ರಹಿಸುವ ಸಂಗತಿಗಳು. ಜ್ಞಾನವೆಂದರೆ ಬುದ್ಧಿಗ್ರಾಹ್ಯವಾದ ಸೃಷ್ಟ್ಯಂತರ್ಗತ ವಸ್ತುಗಳ ವಿಚಾರ. ೭ನೆಯ ೮ನೆಯ ಅಧ್ಯಾಯಗಳಲ್ಲಿ ಈ ವಿಷಯಗಳೆರಡನ್ನೂ ಬೆರಿಸಿ ಹೇಳಿದೆ.

೯ನೆಯ ಅಧ್ಯಾಯದಲ್ಲಿ ವಿಜ್ಞಾನದ ವಿಷಯವನ್ನೇ ಹೆಚ್ಚಾಗಿ ವಿವರಿಸಿದೆ. ೧೦-೧೧-೧೨ ಈ ಅಧ್ಯಾಯಗಳು ವಿಜ್ಞಾನವನ್ನು ಕುರಿತು ಅರ್ಜುನನು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿ ಅವನನ್ನು ಸಮಾಧಾನಪಡಿಸಲಿಕ್ಕೆ ಹೇಳಲ್ಪಟ್ಟಿವೆ. ೧೨ನೆಯ ಅಧ್ಯಾಯದ ಕೊನೆಗೆ ಅರ್ಜುನನ ಪ್ರಶ್ನೆಗಳಿಗೆಲ್ಲ ಸಮಾಧಾನವನ್ನು ಹೇಳಿ ಮುಗಿಸಿದ್ದಾಯಿತು. ಇನ್ನು ಶ್ರೀಕೃಷ್ಣನು ತನ್ನಿಚ್ಛೆಯಂತೆ ವಿಷಯದ ಮುಂದಿನ ಭಾಗವನ್ನು ನಿರೂಪಿಸಲಾರಂಭಿಸುವನು. ಸಾಮಾನ್ಯ ಶಬ್ದಗಳನ್ನೇ ಉಪಯೋಗಿಸಿ ಗೀತಾ ವಿಶಿಷ್ಟ

ಸರಣಿಯಿಂದ ಜ್ಞಾನವನ್ನು ಕುರಿತು ಈ ವರೆಗೆ ವಿವರಿಸಿದೆ. ಅದರಲ್ಲಿ ವೇದಾಂತದ ಕಲ್ಪನೆಗಳು ಸಾಕಷ್ಟು ಬಂದಿದ್ದರೂ ಪರಿಭಾಷೆಯು ತಕ್ಕಷ್ಟು ಬಂದಿಲ್ಲ. ಜೀವನು ಶ್ರೀಕೃಷ್ಣನಿಗಾಗಿ ಯಜ್ಞವನ್ನು ಮಾಡುವವನು, ಶ್ರೀಕೃಷ್ಣನು ಆ ಯಜ್ಞಗಳನ್ನು ಪಡೆದು ಸುಖಿಸುವವನು ಎಂಬ ಕಲ್ಪನೆಗಳು ಹೇಳಲ್ಪಟ್ಟಿರುವವು. ಆದರೆ ವೇದಾಂತದ ಪರಿಭಾಷೆಯಲ್ಲಿ ಕ್ಷೇತ್ರ ಕ್ಷೇತ್ರಜ್ಞವೆಂಬ ಶಬ್ದಗಳು ಈ ಕಲ್ಪನೆಗಳನ್ನೇ ಅನ್ವಯಿಸಬೇಕೆಂದು ಹೇಳಿರುವದಿಲ್ಲ. ಹಾಗೆಯೇ ಜೀವನಿಗೆ ಆಧ್ಯಾತ್ಮಮಯ ಜೀವಿತವೇ ಶ್ರೇಯಪ್ರದವೆಂದೂ ಈ ಜೀವಿತಕ್ಕೆ ಶ್ರೀಕೃಷ್ಣ ಪುರುಷೋತ್ತಮನೇ ಗುರಿಯೆಂದೂ ಹೇಳಿದೆ. ಆದರೆ ವೇದಾಂತದಲ್ಲಿ ಊಹಿಸಲ್ಪಟ್ಟ ಜ್ಞಾನವೆಂಬ ಸಾಧನೆಯೂ ಜ್ಞೇಯವೆಂಬ ಸಾಧ್ಯವೂ ಈ ಕಲ್ಪನೆಗಳನ್ನೇ ಅನ್ವಯಿಸಬೇಕೆಂದು ಹೇಳಿಲ್ಲ. ಆದುದರಿಂದ ೧೩ನೆಯ ಅಧ್ಯಾಯದಲ್ಲಿ ಗೀತಾವಿಶಿಷ್ಟ ಸಿದ್ಧಾಂತಗಳನ್ನು ವೇದಾಂತಶಾಸ್ತ್ರದ ಪಾರಿಭಾಷಿಕ ಶಬ್ದಗಳಲ್ಲಿ ವಿವರಿಸಿದೆ. ಇದರಿಂದ ಗೀತೆಯ ತತ್ವಗಳಿಗೂ ವೇದಾಂತ ತತ್ವಗಳಿಗೂ ಇರುವ ವ್ಯತ್ಯಾಸವು ಸ್ಪಷ್ಟವಾಗಿ ಕಾಣುವದು. ಇದೂ ಅಲ್ಲದೆ, ಗೀತೆಯ ಸಿದ್ಧಾಂತಗಳನ್ನು ಬಹು ಸೂಕ್ಷ್ಮವಾದ ಶಾಸ್ತ್ರೀಯ ಪದ್ಧತಿಯಿಂದ ಪೃಥಕ್ಕರಿಸಿ ಈ ಅಧ್ಯಾಯದೊಳಗಿನ ವಿವರಣೆಯನ್ನು ಮಾಡಿದೆ. ಆ ಶಾಸ್ತ್ರೀಯ ಪದ್ಧತಿಯನ್ನು ಗ್ರಹಿಸದಿದ್ದರೆ ಈ ವಿವರಣೆಯು ಕ್ಲಿಷ್ಟವಾಗಿಯೂ ದುರ್ಬೋಧವಾಗಿಯೂ ನಿಲ್ಲುವದರಿಂದ ಅದನ್ನು ಇಲ್ಲಿ ವಿಶದ ಮಾಡುವೆವು.

ತಾನು ಯಜ್ಞವನ್ನು ಸಾಧಿಸುವದಕ್ಕಾಗಿ ಉಂಟುಮಾಡಿದ ಸೃಷ್ಟಿಯಲ್ಲಿ ನಿರಂತರವೂ ನಡೆಯಬೇಕಾದ ಸಮಷ್ಟಿರೂಪ ಕರ್ಮಕ್ಕೆ 'ಚೋದನಾ' ಲಕ್ಷಣಗಳನ್ನು (Motive causes) (೧೮-೧೮) ತನ್ನ ಸಂಕಲ್ಪದಿಂದ ಪುರುಷೋತ್ತಮನು ಈ ಪ್ರಕಾರ ನಿರ್ಧರಿಸುವನು. ಪರಮೇಶ್ವರನ ಅಂಶನಾಗಿಯೂ ಅಪಕ್ರಾಂತಿಯಿಂದ (Involution) ಸೃಷ್ಟಿಯಲ್ಲಿ, ಜೀವಭೂತನಾಗಿಯೂ ಸಂಭವಿಸಿದ ಜೀವನು "ಪರಿಜ್ಞಾತೃ" (ತಿಳಿಯುವವನು) ವಾಗುವನು. ಸೃಷ್ಟಿಯನ್ನುಂಟುಮಾಡಿದ ಪುರುಷೋತ್ತಮನು "ಜ್ಞೇಯ" ನಾಗುವನು. "ಪರಿಜ್ಞಾತೃ"ವಾದ ಜೀವನು ವಿಧ್ಯುಕ್ತವಾದ ಸಾಧನೆಗಳಿಂದಲೂ ಪ್ರಯತ್ನಗಳಿಂದಲೂ ಜ್ಞೇಯವನ್ನು ಪ್ರಾಪ್ತಮಾಡಿಕೊಳ್ಳುವನು

ಈ ಸಾಧನೆಗಳಿಗೆ "ಜ್ಞಾನ" ವೆಂದು ಹೆಸರು. ಈ ರೀತಿಯಾಗಿ ಸೃಷ್ಟಿ ಕಾರ್ಯಕ್ಕೆ ಚೋದನಾತ್ರಯರೂಪವಾದ ಜೀವಭೂತ ಪರಿಜ್ಞಾತೃವನ್ನೂ (ಇವನಿಗೆ ಸವಿಕಾರಕ್ಷೇತ್ರವೆಂದೂ ಹೆಸರು) ಅವನ ನಿಯತಜ್ಞಾನವನ್ನೂ ಜ್ಞೇಯವನ್ನೂ ಕುರಿತು ಸಂಕ್ಷೇಪವಾಗಿ ಈ ಅಧ್ಯಾಯದಲ್ಲಿ ನಿರೂಪಿಸಿದೆ. ಇದೇ ಸಂದರ್ಭದಲ್ಲಿ ಕ್ಷೇತ್ರದೊಳಗಿನ ಕರ್ಮಸಂಗ್ರಹರೂಪವಾದ ಪುರುಷಾಕೃತಿಗಳ ವಿಷಯವಾಗಿಯೂ ವಿಮರ್ಶಿಸಿದೆ. ಇಷ್ಟೇ ಅಲ್ಲದೆ, ಕ್ಷೇತ್ರನಿಗೂ ಅವನನ್ನುಂಟುಮಾಡಿದ ಕ್ಷೇತ್ರಜ್ಞನಿಗೂ ಇರುವ ಸಂಬಂಧವನ್ನೂ ಈ ಅಧ್ಯಾಯದಲ್ಲೇ ಹೇಳಿ ಸಮಾರೋಪಣೆಯನ್ನು ಮಾಡಿದೆ. (ಕಾಪಿಲ) ಸಾಂಖ್ಯಮಾರ್ಗಕ್ಕೆ ಸಮ್ಮತವಾದ ಕರ್ಮದ ವ್ಯುತ್ಪತ್ತಿ ತತ್ವಗಳು—ಎಂದರೆ ಕರ್ಮಚೋದನೆ ಕರ್ಮಸಂಗ್ರಹಗಳು—ತನಗೆ ಮಾನ್ಯವಾಗಿವೆಯೆಂದು ಶ್ರೀಕೃಷ್ಣನು ಮುಂದೆ (೧೮–೧೮) ಹೇಳಿದ್ದಾನೆ. ಈ ಶಾಸ್ತ್ರೀಯ ತತ್ವಗಳನ್ನನುಸರಿಸಿ ೧೩ನೆಯ ಅಧ್ಯಾಯದೊಳಗಿನ ವಿಷಯ ನಿರೂಪಣೆಯು ನಡೆದಿದೆ.

ಶ್ರೀಭಗವಾನ್ ಉವಾಚ—

**ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ ೧ ॥**

ಮನುಷ್ಯದೇಹಕ್ಕೆ ಕ್ಷೇತ್ರವೆಂಬ ಹೆಸರು; ಅಂದರೆ ಸಜೀವ ದೇಹವೆಂದೇ ತಿಳಿಯಬೇಕು. **ಸಜೀವವೆಂದರೆ ಚೋದನಾ ಲಕ್ಷಣಗಳ ವ್ಯಾಪಾರವು ಯಾವುದರಲ್ಲಿ ಸಂಭವಿಸುವದೋ ಮತ್ತು ಯಾವುದು ಭಗವಂತನ ಪರಾ ಮತ್ತು ಅಪರಾ ಪ್ರಕೃತಿಗಳಿಂದ ಕೂಡಿ ಇದೆಯೋ ಅಂಥ ದೇಹವೆಂಬರ್ಥ.** ಮಾನವ ದೇಹವನ್ನು ಇಲ್ಲಿ ದೃಷ್ಟಾಂತಕ್ಕಾಗಿ ಉಲ್ಲೇಖಿಸಿದೆ. ಈ ತತ್ವವು ಸೃಷ್ಟಿಯೊಳಗಿನ ಎಲ್ಲ ಸ್ಥಾವರ ಜಂಗಮ ವಸ್ತುಗಳಿಗೂ ಮುಂದೆ (೧೩–೨೬) ಅನ್ವಯಿಸಲ್ಪಡುವದು.

ಈ ಕ್ಷೇತ್ರ (ಶರೀರ) ವನ್ನು ತಿಳಿಯುವವನು **ಕ್ಷೇತ್ರಜ್ಞನು.** ತಿಳಿಯುವವನೆಂದರೆ ಜಡಶರೀರದಲ್ಲಿ ಸಾಕ್ಷಿಯಾಗಿದ್ದು ಆ ಶರೀರವನ್ನೇ ತಿಳಿಯುವವನೆಂದರ್ಥವಲ್ಲ. ದೇಹಧಾರಿಯಾದ ಜೀವಭೂತ ಆತ್ಮನಿಗೆ ತನ್ನ ಶರೀರದ

ವಿಷಯವಾಗಿ ಸ್ವಲ್ಪ ಮಟ್ಟಿಗೆ ತಿಳಿಯುವದೆಂಬ ಬಗ್ಗೆ ವಾದವಿಲ್ಲ. ಆದರೆ ತನ್ನ ಶರೀರ ವಿಷಯವಾದ ಅನೇಕ ಸಂಗತಿಗಳು ಈ ಜೀವನಿಗೆ ತಿಳಿದಿರುವ ದಿಲ್ಲವೆಂಬುವದೂ ಅಷ್ಟೇ ನಿಜವಾದ ಮಾತು. ಇಂಥ ದೇಹಧಾರಿಯಾದ ಆತ್ಮನು ತನ್ನ ಆ ದೇಹದೊಳಗಿದ್ದು ಸಾಕ್ಷಿಯಾದ ಮಾತ್ರಕ್ಕೆ ಆ ಶರೀರ ವನ್ನು ಅರಿತವನೆಂದು ಹೇಳಲಾಗದು. ಇಷ್ಟೇ ಅಲ್ಲದೆ, ಅರಿಯುವದೆಂದರೆ ಕೇವಲ ಲೌಕಿಕ ರೀತಿಯಾಗಿ ತಿಳಿಯುವದೆಂದರ್ಥವಲ್ಲ. ಈ ದೇಹಧಾರಿ ಯಾದವನಿಗೆ ತನ್ನ ಪೂರ್ವ-ಜನ್ಮದ ಜ್ಞಾನವು ಎಳ್ಳಷ್ಟೂ ಇರುವದಿಲ್ಲ. ತನ್ನ ಭೂತ, ಭವಿಷ್ಯ ಮತ್ತು ವರ್ತಮಾನ ವಿಷಯವಾಗಿಯೂ ಇವನಿಗೆ ಸಾದ್ಯಂತ ಅರಿವು ಖಂಡಿತವಾಗಿ ಇರುವದಿಲ್ಲ. ಆದುದರಿಂದ ಇಂಥವನನ್ನೇ ತನ್ನ ಶರೀರಕ್ಕೆ "ವೇತ್ತ"ನೆಂದು ತಿಳಿಯುವದರಲ್ಲಿ ಅರ್ಥವಿಲ್ಲ. ಆದರೆ ಈ ದೇಹದ ಮತ್ತು ದೇಹಧಾರಿಯ ವಿಷಯವಾಗಿ ಇಂಥ ಸಾದ್ಯಂತವೂ ಸಂಪೂರ್ಣವೂ ಆದ ಅರಿವು ಪುರುಷೋತ್ತಮ ಶ್ರೀಕೃಷ್ಣನಿಗೆ ಉಂಟೆಂಬದು ನಿರ್ವಿವಾದವು (೪-೫; ೭-೨೬). **ಶ್ರೀಕೃಷ್ಣನು ಅರ್ಜುನನಿಗೆ ಆಜನ್ಮ ಸಖನೂ ಸಹವಾಸಿಯೂ ಆದಂತೆ ಸೃಷ್ಟಿಯ ಆದಿಯಿಂದ ಅಂತ್ಯದ ವರೆಗೂ ಉತ್ಪನ್ನವಾದ ಅಥವಾ ಉಂಟಾಗುವ ಒಂದೊಂದು ದೇಹದಲ್ಲಿ ಕ್ಷೇತ್ರಜ್ಞನಾಗಿಯೂ ದೇಹಧಾರಿಯ ಸಹವಾಸಿಯಾಗಿಯೂ ಅವನು ಇದ್ದೇ ಇರುವನು.** ಇದಕ್ಕಾಗಿ ಈತನೇ ಒಂದೊಂದು ಕ್ಷೇತ್ರವನ್ನೂ ನಿಜ ವಾಗಿ ಅರಿತವನೆಂದು ಹೇಳಬೇಕು.

ದೇಹಧಾರಿಯಾದ ಜೀವನು ಮತ್ತೊಂದು ದೃಷ್ಟಿಯಿಂದಲೂ ಶ್ರೀಕೃಷ್ಣ ಪುರುಷೋತ್ತಮನಿಗೆ ಕ್ಷೇತ್ರನಾಗಿದ್ದಾನೆ. ಕ್ಷೇತ್ರದಿಂದ ಒಡೆಯನಿಗೆ ಏನಾದರೂ ಫಲನಿಷ್ಪತ್ತಿಯಾಗುವದು. ಪುರುಷೋತ್ತಮನಿಗೆ ಬೇಕಾದ ಯಜ್ಞವನ್ನು ಬಿತ್ತಿ ಬೆಳೆಯುವ ಕ್ಷೇತ್ರನೆಂದರೆ ಜೀವಭೂತನೇ ಸರಿ. ಇದ ಕ್ಕಾಗಿ ಜೀವಭೂತನಿಗೆ "ಕ್ಷೇತ್ರ"ನೆಂಬ ಹೆಸರು ಸಾರ್ಥಕವಾಗಿದೆ. ಕ್ಷೇತ್ರ ಕ್ಷೇತ್ರಜ್ಞರ ಸಂಬಂಧವನ್ನು ತಾತ್ವಿಕವಾಗಿಯೂ ಸೂಕ್ಷ್ಮದೃಷ್ಟಿಯಿಂದಲೂ ಈ ಬಗೆಯಾಗಿ ತಿಳಿದರೆ ಮಾತ್ರ ಈ ಶ್ಲೋಕವು ಸರಿಯಾಗಿ ತಿಳಿದಂತಾಗು ವದು.

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥ ೨ ॥**

ದೇಹಧಾರಿಯಾದ ಮತ್ತು ಕರ್ಮಚೋದನಾ ಲಕ್ಷಣದಿಂದ ಕೂಡಿದ ಎಲ್ಲ ಜೀವಭೂತರ ಶರೀರಗಳಲ್ಲಿ ಅಂದರೆ ಕ್ಷೇತ್ರಗಳಲ್ಲಿ ವಾಸಮಾಡುವ ಕ್ಷೇತ್ರಜ್ಞನಾದರೂ ಪುರುಷೋತ್ತಮ ಶ್ರೀಕೃಷ್ಣನೇ ಎಂದು ಅರ್ಜುನನು ಗ್ರಹಿಸಬೇಕು. ಇಷ್ಟೇ ಅಲ್ಲ, ಕ್ಷೇತ್ರ ಕ್ಷೇತ್ರಜ್ಞರ ಸಂಬಂಧವಾಗಿ ಇಲ್ಲಿ ಹೇಳಿರುವ ಜ್ಞಾನವೇ (ನಿಜವಾದ) ಜ್ಞಾನವು. ಈ ಜ್ಞಾನವು ಸಂಪೂರ್ಣವಾಗಿ ಗಮನಕ್ಕೆ ಬಂದರೆ ಸೃಷ್ಟಿಯ ಗೂಢವು ಬುದ್ಧಿಗೆ ಸ್ಫುಟವಾಗುವದೆಂದು ಶ್ರೀಕೃಷ್ಣನ ಮತವು.

**ತತ್ ಕ್ಷೇತ್ರಂ ಯಚ್ಚ ಯಾದೃಕ್ ಚ ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥ ೩ ॥**

ಈ ಕ್ಷೇತ್ರವೆಂದರೇನು? ಇದು ಹೇಗಿರುವದು? ಅದರ ವಿಕಾರಗಳು ಯಾವವು? ಇದು ಎಲ್ಲಿಂದ ಬಂದಿತು? ಮತ್ತು ಕ್ಷೇತ್ರಜ್ಞನು ಯಾರು ಅವನ ಶಕ್ತಿಯ ಅಳವು ಯಾವುದು? ಈ ವಿಷಯವಾಗಿ ನಾನು ಸಂಕ್ಷೇಪವಾಗಿ ಹೇಳುವದನ್ನು ಕೇಳು.

**ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥ ೪ ॥**

ಈ ವಿಷಯವನ್ನು ಋಷಿಗಳು ಪರಿಪರಿಯಾಗಿ ಹಾಡಿರುವರು. ಬೇರೆ ಬೇರೆ ವೇದಗಳು ವಿವಿಧವಾಗಿ ವರ್ಣಿಸಿರುವವು. ತರ್ಕಮಾರ್ಗದಿಂದ ಸಿದ್ಧವಾದ ಬ್ರಹ್ಮಸೂತ್ರದ ಉಕ್ತಿಗಳಲ್ಲಿಯೂ ಇದೇ ವರ್ಣಿಸಲ್ಪಟ್ಟಿದೆ.

ಸೃಷ್ಟಿಯು ಶ್ರೀಕೃಷ್ಣಪುರುಷೋತ್ತಮನ ಕೈಗಾರಿಕೆಯಾದುದರಿಂದ ಆತನು ಕ್ಷೇತ್ರಕ್ಷೇತ್ರಜ್ಞರ ಸಂಬಂಧದಲ್ಲಿ ಸಾದ್ಯಂತವಾಗಿ ಇಲ್ಲಿ ಹೇಳುವ ವಿಚಾರಗಳು ಪ್ರತ್ಯಕ್ಷವೂ ಅಧಿಕಾರಯುಕ್ತವೂ ಆಗಿವೆ. ಆದುದರಿಂದ

ಬ್ರಹ್ಮಸೂತ್ರಾದಿಗಳಿಗೂ ಈ ವಿಚಾರಗಳಿಗೂ ವ್ಯತ್ಯಾಸವು ಕಂಡುಬಂದಲ್ಲಿ ಈ ವಿಚಾರಗಳೇ ವಿಶ್ವಸನೀಯವೆಂದು ತಿಳಿಯಬೇಕು. ಬ್ರಹ್ಮಸೂತ್ರಗಳ ಉಲ್ಲೇಖದಿಂದ ವಿಷಯದ ಗಹನತೆಯೂ ಮನುಷ್ಯ ಜೀವಿತಕ್ಕೆ ಅದರ ಮಹತ್ವವೂ ಸೂಚಿತವಾಗುವವು.

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ ॥೫॥**

ಈ ಶ್ಲೋಕಗಲ್ಲಿ ಸವಿಕಾರ ಕ್ಷೇತ್ರದ ವರ್ಣನೆಯುಂಟು. ಸವಿಕಾರ ಕ್ಷೇತ್ರವೆಂದರೆ, ವ್ಯಷ್ಟಿ ಜೀವಭೂತನು ಅಥವಾ ಕ್ಷೇತ್ರವೆಂದು ಮೇಲೆ ಹೇಳಿದ ಶರೀರವು. ಈ ಕ್ಷೇತ್ರದಲ್ಲಿ ಹಿಂದೆ ಹೇಳಿದಂತೆ (೭-೪-೫) ಪರಮೇಶ್ವರನ ಪರಾ ಮತ್ತು ಅಪರಾಯೋನಿಗಳು ಅಥವಾ ಪ್ರಕೃತಿಗಳು ಸಮಾವೇಶವಾಗಿವೆ. ಅಪರಾ ಪ್ರಕೃತಿಯಲ್ಲಿ ಪಂಚಮಹಾಭೂತಗಳೂ ಬುದ್ಧಿ, ಅಹಂಕಾರ, ಮನಸ್ಸು, ಹತ್ತು ಇಂದ್ರಿಯಗಳು ಮತ್ತು ಇವುಗಳ ಐದು ವಿಷಯಗಳು ಬರುವವು. ಈ ತತ್ವಗಳನ್ನು ಬಿಟ್ಟರೆ ಈ ಶ್ಲೋಕದೊಳಗೆ ಅವ್ಯಕ್ತ ತತ್ವವು ಮಾತ್ರ ಉಳಿಯುವದು. ಅವ್ಯಕ್ತವೆಂದರೆ ಪರಮೇಶ್ವರನ ಪರಾ ಪ್ರಕೃತಿಯು.

ಈ ಪರಾಪ್ರಕೃತಿಯಿಂದ ಸೃಷ್ಟಿಯೊಳಗಿನ ಎಲ್ಲ ಜೀವಭೂತಗಳನ್ನು ಪರಮಾತ್ಮನು ತನ್ನಲ್ಲಿ ಧರಿಸುವನು (೭-೫), ಎಂದರೆ ಜೀವಭೂತನಲ್ಲಿನ ಅಷ್ಟಧಾ ಪ್ರಕೃತಿಯನ್ನು ಬಿಟ್ಟರೆ ಅವನ ಪುರುಷಸ್ವಭಾವವೇ ಈ ಅವ್ಯಕ್ತ ತತ್ವವೆಂದು ತಿಳಿಯಬೇಕು. ಈ ವಿಷಯವಾಗಿ ಬೇರೆಡೆಗಳಲ್ಲಿ ಉಲ್ಲೇಖಗಳಿವೆ. ''ನನ್ನ ಅವ್ಯಕ್ತ ಸ್ವರೂಪದಿಂದ (ಅಖಿಲ ಜಗತ್ತು) ತುಂಬಿರುವದು''(೯-೪). ''ಜೀವಭೂತನು ನನ್ನ ಅಂಶನಾಗಿರುವನು'' (೧೫-೭). ''ಬ್ರಹ್ಮನು ತನ್ನ ಅವ್ಯಕ್ತ ಸ್ಥಿತಿಯಿಂದಲೇ ಪ್ರಜೆಗಳನ್ನೂ ಸೃಷ್ಟಿಯನ್ನೂ ಉಂಟುಮಾಡುವನು'' (೮-೧೮). ಜೀವಭೂತನ ಆತ್ಮಸ್ವಭಾವವು ಪರಮೇಶ್ವರನ ಅಂಶವು ಅಥವಾ ಆತನ ಅವ್ಯಕ್ತ ಸ್ವರೂಪವು.

ಅವ್ಯಕ್ತವೆಂದರೆ ಅಷ್ಟಧಾಪ್ರಕೃತಿಯನ್ನು ಮೀರಿದ ಒಂದು ಸೂಕ್ಷ್ಮ ಪ್ರಕೃತಿಯೆಂದು ಕೆಲವರು ಹೇಳುವದುಂಟು. ಇಲ್ಲಿ **ವರ್ಣಿಸಿದ**

"ಕ್ಷೇತ್ರವು" ಸವಿಕಾರಿಯೆಂದು ಖಂಡಿತವಾಗಿ ಹೇಳಿರುವದರಿಂದಲೂ ಆತ್ಮ ಸ್ವಭಾವವು ಎಂದೆಂದಿಗೂ ವಿಕಾರರಹಿತವೆಂದು ಊಹಿಸಲ್ಪಡುವದರಿಂದಲೂ ಅವ್ಯಕ್ತವೆಂಬ ಪದದಿಂದ ಆತ್ಮ ತತ್ವವು ನಿರ್ದಿಷ್ಟವಾಗಿರುವದು ಅಶಕ್ಯವೆಂಬ ಕಲ್ಪನೆಯು ಉಂಟಾದುದರಿಂದಲೂ ಪ್ರಕೃತಿಯ ಸೂಕ್ಷ್ಮ ರೂಪವನ್ನು ಹೀಗೆ ಅವರು ಊಹಿಸಬೇಕಾಗುವದು; ಮತ್ತು ಅದು ಸಯುಕ್ತಿಕವಾಗಿ ಕಾಣಬೇಕೆಂದು ಅದಕ್ಕೆ ಅತಿಸೂಕ್ಷ್ಮವೆಂದೂ ಮೂಲಭೂತವೆಂದೂ ಹೆಸರಿಡುವರು. ಆದರೆ ಈ ಶ್ಲೋಕದೊಳಗೆ ಅಷ್ಟಧಾ ಪ್ರಕೃತಿಯ ತತ್ವಗಳೆಲ್ಲವನ್ನೂ ಶೇಖರಿಸಿರುವದರಿಂದ ಇಲ್ಲಿ ಸೂಕ್ಷ್ಮಕ್ಕಿಂತಲೂ ಸೂಕ್ಷ್ಮವಾದ ಅಪರಾಕೃತಿಯನ್ನೇ ಹೇಳಿದೆಯೆಂಬ ವಿಷಯದಲ್ಲಿ ವಾದವಿರಬಾರದು. ಇಷ್ಟೇ ಅಲ್ಲದೆ, ಅಪರಾಪ್ರಕೃತಿಗಿಂತ ಸೂಕ್ಷ್ಮವಾದ ಆದರೆ ಪರಾಪ್ರಕೃತಿಗಿಂತ ಸ್ಥೂಲವಾದ ಮತ್ತೊಂದು ಸೂಕ್ಷ್ಮಪ್ರಕೃತಿಯನ್ನು ಕುರಿತು ಗೀತೆಯಲ್ಲಂತೂ ಉಲ್ಲೇಖವಿಲ್ಲ. ಗೀತೆಯಲ್ಲಿ ಹೇಳಿದ ಪರಾಪ್ರಕೃತಿಯನ್ನೇ ಈ ಸೂಕ್ಷ್ಮಪ್ರಕೃತಿಯೆಂದು ಹೇಳಬಹುದು. ಆದರೆ ಪ್ರಕೃತಿಯೆಂಬ ಶಬ್ದವು ಗೀತೆಯಲ್ಲಿ ಭಾವಸೂಚಕವಾಗಿರುವದು, ವಸ್ತುವಾಚಕವಲ್ಲ.

ಆತ್ಮವು ವಿಕಾರರಹಿತವೆಂಬ ತತ್ವವನ್ನು ಗೀತೆಯು ಒಪ್ಪಿದರೂ ಪುರುಷನಿಗೆ ಸುಖದುಃಖಭಾವನೆಗಳು ಒದಗುವವೆಂದು ಅದು ಹೇಳುವದು. ಬ್ರಹ್ಮನೂ ಜೀವಭೂತನೂ ಗೀತೆಯಲ್ಲಿ ಹೇಗೆ ಪುರುಷೋತ್ತಮನ ಪ್ರಕೃತಿ ರೂಪರಾಗುವರೆಂಬದನ್ನು ನಾವು ವಿಶದ ಮಾಡಿರುವೆವು. ಈ ಶ್ಲೋಕದಲ್ಲಿ ಜೀವಭೂತನ ಜೀವಸ್ವರೂಪ(ಭಾವ)ವನ್ನೇ ಹೇಳಿದೆ. ಈ ಜೀವಸ್ವಭಾವವು ಅಷ್ಟಧಾಪ್ರಕೃತಿಯಲ್ಲಿ ಸಮಾವೇಶವಾಗಿರುವದೆಂದು ಗೀತೆಯಲ್ಲಿ ಉಲ್ಲೇಖವಿಲ್ಲ. ಎಂದ ಮೇಲೆ, ಪ್ರಕೃತಿ ತತ್ವದಲ್ಲಿ ಮೊದಲೇ ಇಲ್ಲದ ಒಂದು ಹೊಸ ತತ್ವವು ಅದು ಎಷ್ಟು ಸೂಕ್ಷ್ಮವಾದರೂ ಅದರಲ್ಲಿ ಹೇಗೆ ಸಂಭವಿಸಬಹುದೆಂಬದು ನಮಗೆ ಊಹಿಸಲಾಗುವದಿಲ್ಲ. ಆದರೆ ಈ ಆಪತ್ತುಗಳೆಲ್ಲ ಇತರ ವೇದಾಂತಕ್ಕೆ ಉಂಟು; ಗೀತೆಗೆ ಇರುವದಿಲ್ಲ. ಜೀವನೂ ಬ್ರಹ್ಮನೂ ಪುರುಷೋತ್ತಮನಿಗೆ ಪ್ರಕೃತಿರೂಪರು. ಅವರಿಬ್ಬರೂ ಅವನ ಅಂಶಭೂತರು. ಅವರ ಪುರುಷ ಸ್ವಭಾವವೇ ಅವನಿಗೆ ಪ್ರಕೃತಿಯಾಗಿರುವದು. ಈ ವಿಷಯಗಳೆಲ್ಲ ಗೀತೆಯಲ್ಲಿ ನಿಸ್ಸಂದಿಗ್ಧವಾಗಿವೆ.

**ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।**
**ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥ ೬ ॥**

ಮೇಲೆ ಹೇಳಿದ ತತ್ವಗಳಿಂದಲೇ ಜೀವಭೂತಸ್ವಭಾವದ ರಚನೆಯು ಪೂರ್ಣವಾಗುವದಿಲ್ಲ. ಸಾಮುಗ್ರಿಗಳು ಸಿದ್ಧವಾದರೂ ಅವುಗಳನ್ನು ಸಯುಕ್ತಿಕವಾಗಿಯೂ ವಿಶಿಷ್ಟ ಪದ್ಧತಿಯಿಂದಲೂ ಉಪಯೋಗವಾಡದಿದ್ದರೆ ಅಡಿಗೆಯಾಗದು. ಹಾಗೆಯೇ ಜೀವಭೂತನಿಗೆ ಮೂಲಭೂತವಾದ ತತ್ವಗಳೆಲ್ಲವನ್ನೂ ಪರಮೇಶ್ವರನು ವಿಶಿಷ್ಟ ಪದ್ಧತಿಯಿಂದ ಉಪಯೋಗಿಸುವನು. ಅದು ಹೇಗೆಂಬದನ್ನು ಈ ಶ್ಲೋಕದಲ್ಲಿ ಹೇಳಿದೆ. ಪರಾ ಮತ್ತು ಅಪರಾ ಪ್ರಕೃತಿಗಳೊಂದಿಗೆ ಇಚ್ಛಾ ದ್ವೇಷ ಸುಖದುಃಖಗಳೆಂಬ ಭಾವನಾಶಕ್ತಿಗಳೂ ಇವುಗಳ ಮತ್ತು ಪ್ರಕೃತಿ ತತ್ವಗಳ ಸಂಘಾತವೂ ಇವೆಲ್ಲವುಗಳು ಒಟ್ಟುಗೂಡಿದ ಬಳಿಕ ಅವುಗಳಿಗೆ ಗತಿಗೊಡುವ ಚೇತನಾಶಕ್ತಿಯೂ ಮತ್ತು ಇಂಥ ಚೇತನಾಶಕ್ತಿಯಲ್ಲಿ ನೆಲಸಿರುವ ಅವ್ಯಾಹತವಾದ ಅನಿರುದ್ಧತೆ (ಧೃತಿ)ಯೂ ಇವು ಆ ಪದ್ಧತಿಯ ಅಪರಿಹಾರ್ಯ ತತ್ವಗಳಾಗಿವೆ. ಇಷ್ಟು ತತ್ವಗಳ **ಪರಿಪಾಕವು ಸವಿಕಾರ ಕ್ಷೇತ್ರವು** ಅಥವಾ ವ್ಯಷ್ಟಿರೂಪ ಜೀವಭೂತವು ಎನಿಸುವದು. ಈ ಜೀವಭೂತನಿಗೆ ಕರ್ಮಚೋದನಾತ್ರಯದೊಳಗೆ "ಪರಿಜ್ಞಾತೃ" ವೆಂಬ ಹೆಸರು.

**ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಂ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥ ೭ ॥**

**ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿ ದುಃಖದೋಷಾನುದರ್ಶನಂ ॥ ೮ ॥**

**ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥ ೯ ॥**

**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥ ೧೦ ॥**

**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ವಜ್ಞಾನಾರ್ಥದರ್ಶನಮ್ ।**
**ಏತಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥ ೧೧ ॥**

ಅಭಿಮಾನ ಅಥವಾ ದಂಭವಿಲ್ಲದಿರುವಿಕೆ, ಅಹಿಂಸೆ, ಕ್ಷಮೆ, ಸರಲತೆ, ಗುರುಸೇವೆ, ಶುಚಿರ್ಭೂತತೆ, ಸ್ಥೈರ್ಯ, ಮನೋನಿಗ್ರಹ, ಇಂದ್ರಿಯ ವಿಷಯಗಳಲ್ಲಿ ವಿರಕ್ತಿ, ಅಹಂಕಾರವಿಲ್ಲದಿರುವಿಕೆ, ಜನ್ಮ ಮೃತ್ಯುಜರಾ ವ್ಯಾಧಿ ಮೊದಲಾದ ದುಃಖಗಳಿಗೆ ಕಾರಣವೇನೆಂಬದರ ಸತ್ಯವಾದ ಜ್ಞಾನ ವಿರುವಿಕೆ, ಇಷ್ಟಾನಿಷ್ಟಪ್ರಾಪ್ತಿಯಲ್ಲಿ ಚಿತ್ತದ ಸಮಾಧಾನ, ನನ್ನಲ್ಲಿ ಅವ್ಯಭಿ ಚಾರಿಣಿಯಾದ ಭಕ್ತಿ, ಈ ಭಕ್ತಿಯನ್ನು ಸುಲಭವಾಗಿ ಸಾಧಿಸಲಿಕ್ಕೆ ಬೇಕಾ ಗುವ ಏಕಾಂತವಾಸ ಅಥವಾ ಸಾಮಾನ್ಯ ಜನರಲ್ಲಿ ಸೇರಲು ಇಷ್ಟವಿಲ್ಲ ದಿರುವಿಕೆ, ಗೀತಾಶಾಸ್ತ್ರದಲ್ಲಿ ಗುಹ್ಯತಮವೆಂದು ಉಪದೇಶಿಸಿದ ಅಧ್ಯಾತ್ಮ ಜ್ಞಾನದ ನಿರಂತರ ಜಾಗ್ರತೆ ಮತ್ತು ಅದೇ ಶಾಸ್ತ್ರದೊಳಗಿನ ತತ್ವಗಳ ನಿಜ ವಾದ ಅರ್ಥಬೋಧ, ಇವುಗಳಿಗೆಲ್ಲ ಜ್ಞಾನವೆಂದು ಹೇಳಬೇಕು. **ಇಲ್ಲಿ ಜ್ಞಾನ ವೆಂದರೆ "ಚೋದನಾತ್ರಯ"ದಲ್ಲಿ ಹೇಳಿದ ತತ್ವವು;** ಎಂದರೆ ಪರಿಜ್ಞಾತನು ಜ್ಞೇಯವನ್ನು ಪ್ರಾಪ್ತಮಾಡಿಕೊಳ್ಳುವದಕ್ಕಾಗಿ ಅನುಸರಿಸಬೇಕಾದ ಸಾಧನೆಯ ಮಾರ್ಗವೇ ಈ ಜ್ಞಾನವೆಂಬದು; ಇದಲ್ಲದುದು ಅಜ್ಞಾನವು.

ಇಲ್ಲಿ ವರ್ಣಿಸಿದ ಗುಣಗಳೊಳಗೆ ಶ್ರೀಕೃಷ್ಣನಲ್ಲಿ 'ಅವ್ಯಭಿಚಾರಿಣಿ' ಯಾದ ಭಕ್ತಿಯು ಸಾಧ್ಯವಾಗಿದ್ದು ಆ ಭಕ್ತಿಯ ಸಾಧನಾರ್ಥವಾಗಿ ತದಿ ತರ ಗುಣಗಳೆಲ್ಲ ಹೇಳಲ್ಪಟ್ಟಿರುವವೆಂಬದನ್ನು ಲಕ್ಷ್ಯದಲ್ಲಿಡಬೇಕು. ಏಕೆಂದರೆ ಮತ್ತಾವುದಕ್ಕಾದರೂ ಹೆಚ್ಚು ಮಹತ್ವವನ್ನು ಕೊಡಹೋದರೆ ಭಕ್ತಿಯು ವ್ಯಭಿಚಾರದೋಷಕ್ಕೊಳಪಡುವದು.

**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಞಾತ್ವಾಽಮೃತಮಶ್ನುತೇ ।**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ ೧೨ ॥**

**ಜ್ಞೇಯವೆಂದರೆ ಜೀವಭೂತಗಳ ಜೀವಿತದ ಗುರಿಯು.** ಈ ಜ್ಞೇಯವನ್ನು ಸರಿಯಾಗಿ ತಿಳಿದರೆ ಅಮೃತಪದವನ್ನು ದೊರಕಿಸಬಹುದು. ಈ ಜ್ಞೇಯದ ವಿಷಯವಾಗಿ ಶ್ರೀಕೃಷ್ಣನು ಹೀಗೆ ಹೇಳುವನು. ಅದು

ಆದಿರಹಿತವಾದದ್ದು; ಬ್ರಹ್ಮನಿಗಿಂತ ಆಚೆಗೆ ಇರುವಂಥದು. ಸತ್ ಹಾಗು ಅಸತ್ ಪದಗಳು ಜ್ಞೇಯ ಸಂಬಂಧವಾದ ಜೀವಸ ಭಾವವನ್ನು ಸೂಚಿಸುವದರಿಂದ ಈ ಜ್ಞೇಯವನ್ನು ಸತ್ ಎಂದಾಗಲಿ ಅಸತ್ ಎಂದಾಗಲಿ ಹೇಳಲಾಗದು.

**ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಂ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥೧೩॥**

ಈ ಜ್ಞೇಯಕ್ಕೆ ಕೈ, ಕಾಲು, ಕಣ್ಣು, ತಲೆ ಮತ್ತು ಕಿವಿಗಳು ಈ ಸೃಷ್ಟಿಯಲ್ಲಿ ಎಲ್ಲಿ ನೋಡಿದರಲ್ಲಿಯವೆ. ಜಗತ್ತಿನಲ್ಲಿ ಉಂಟಾದ ಎಲ್ಲ ಇಂದ್ರಿಯಗಳೂ ಇದರವೇ ಎಂದೂ ಅಥವಾ ಇಂದ್ರಿಯಗಳಿಲ್ಲದೆಯೇ ಇಂದ್ರಿಯಗಳ ಸರ್ವ ವ್ಯವಹಾರಗಳನ್ನು ಈ ಜ್ಞೇಯವು ಸರ್ವತ್ರವೂ ಮಾಡಬಲ್ಲದು ಎಂದೂ ಇದಕ್ಕರ್ಥವಾಗಬಹುದು. ಈ ಜ್ಞೇಯವು ತನ್ನ ಒಂದು ಅಂಶಮಾತ್ರದಿಂದ ಸರ್ವ ಸೃಷ್ಟಿಯನ್ನು ವ್ಯಾಪಿಸಿ ಆದರ ಹೊರಗೂ ಉಳಿದಿರುವದು (೧೦-೪೨).

**ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ ।**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥೧೪॥**

ಎಲ್ಲೆಲ್ಲಿಯೂ ತುಂಬಿರುವ ಈ ಜ್ಞೇಯದಲ್ಲಿ ಆದರ ಒಂದು ಅಂಶಮಾತ್ರದಿಂದುಂಟಾದ ಜೀವ ಸೃಷ್ಟಿಯೊಳಗೆ, ಇಂದ್ರಿಯಗಳ ಗುಣಗಳು ಭಾಸವಾದರೂ ಈ ಜ್ಞೇಯವು ಮಾತ್ರ ಇಂದ್ರಿಯರಹಿತವಾಗಿರುವದು. ಸೃಷ್ಟಿಯಲ್ಲಿ ಇಂದ್ರಿಯಗುಣಗಳ ಆಭಾಸವು ಆದರಲ್ಲಿ ಸಂಭವಿಸಿದರೂ ಅವೆಲ್ಲವುಗಳ ವಿಷಯವಾಗಿ ಆದು ಅನಾಸಕ್ತವಾಗಿಯೂ ಉದಾಸೀನವಾಗಿಯೂ ಇರುವದು. ಹಾಗೆಯೇ ಆದು ನಿರ್ಗುಣವು. ಆದರೂ ತನ್ನ ಅಂಶಭೂತವಾದ ಜೀವಸೃಷ್ಟಿಯಲ್ಲಿ ಗುಣಗಳನ್ನು ಉಪಭೋಗಿಸುವದು ಅದೇ ಆಗಿದೆ.

**ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥೧೫॥**

ಜೀವಭೂತರ ಒಳಗೂ ತಾನಿರುವದು; ಅವರ ಹೊರಗಾದರೂ ಇರುವದು. ಅದು ಚರವೆನಿಸುವದು; ಅಚರವು ಕೂಡ ಅದೇ ಆಗಿದೆ. ಅದು ಊಹಿಸಲಸಾಧ್ಯವಾದಷ್ಟು ಸೂಕ್ಷ್ಮವಾಗಿದೆ. ಅದು ಜೀವಭೂತನಿಂದ ಬಹುದೂರವಾಗಿದೆ. ಏಕೆಂದರೆ ಜೀವಭೂತನ ವಿಕಾರಗಳೂ ದೋಷಗಳೂ ಅದನ್ನು ಸೋಂಕುವದಿಲ್ಲ. ಆದರೂ ಜೀವಭೂತನ ಅಂತರಂಗದಲ್ಲಿಯೂ ಅದು ತುಂಬಿಕೊಂಡಿದೆ.

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ।**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥ ೧೬ ॥**

ಅದು ಅವಿಭಕ್ತವೂ ಅಖಂಡವೂ ಆದುದು. ಆದರೆ ಭೂತಮಾತ್ರಗಳಲ್ಲಿ ವಿಭಕ್ತ ಸ್ಥಿತಿಯಲ್ಲಿಯೂ ಇರಬಲ್ಲದು. ಅದು ಭೂತಗಳಿಗೆಲ್ಲ ಭರ್ತೃ (ಯಜಮಾನ)ವೆನಿಸುವದು. ಎಲ್ಲ ಭೂತಗಳನ್ನು ಸೃಜಿಸುವದೂ ಸಂಹರಿಸುವದೂ ಅದೇ ಆಗಿದೆ.

**ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ॥೧೭॥**

ಅದು ತೇಜವನ್ನು ಮೀರಿದ ತೇಜವೆಂದೂ ಅಂಧಕಾರವನ್ನು ದಾಟಿರುವದೆಂದೂ ಹೇಳುವರು. ಜ್ಞಾನವೆಂಬದು ಅದೇ, ಜ್ಞೇಯವಾದರೂ ಅದೇ; ಮತ್ತು ಜ್ಞಾನಗಮ್ಯವಾದುದು ಎಂದರೆ ಜ್ಞಾನದಿಂದ ಗ್ರಹಿಸತಕ್ಕುದಾದರೂ ಅದೇ ಆಗಿದೆ. ಸರ್ವರ ಹೃದಯದಲ್ಲಿಯೂ ಅದೇ ಅಧಿಷ್ಠಿತವಾಗಿದೆ.

**ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ ೧೮ ॥**

ಹೀಗೆ ಸೃಷ್ಟ್ಯುತ್ಪತ್ತಿ ಕರ್ಮಕ್ಕೆ ಚೋದನಾಲಕ್ಷಣರೂಪವಾದ ಕ್ಷೇತ್ರವ (ಪರಿಜ್ಞಾತೃವ) ನ್ನೂ ಜ್ಞಾನ ಮತ್ತು ಜ್ಞೇಯಗಳನ್ನೂ ಕುರಿತು ಸಂಕ್ಷೇಪವಾಗಿ ಹೇಳಿದ್ದಾಯಿತು. ಈ ಚೋದನಾಲಕ್ಷಣಗಳಿಗೆ ಭಕ್ತಿಯು

ಆಡಿಗಲ್ಲಾಗಿದೆ. ಆದುದರಿಂದ ಈ ವಿಷಯಗಳೆಲ್ಲವನ್ನೂ ಸಂಪೂರ್ಣವಾಗಿ ಬಲ್ಲವನಾದ ನನ್ನ ಭಕ್ತನು ಸೃಷ್ಟಿಯನ್ನು ಉಂಟುಮಾಡುವದರಲ್ಲಿ ಇರುವ ನನ್ನ ಭಾವವನ್ನು ಅಥವಾ ಉದ್ದೇಶವನ್ನು ಸೇರುವನು. ಜೀವಭೂತನಿಂದ ಪ್ರಾಪ್ತವಾದ ಯಜ್ಞವನ್ನೂ ಪ್ರಭುತ್ವವನ್ನೂ ಉಪಭೋಗಿಸುವದೇ ಈ ಸೃಷ್ಟಿಯೊಳಗಿನ ಅವನ ಭಾವವಾಗಿದೆ (೫-೨೯, ೯-೨೪). ಈ ಭಾವವನ್ನು ಸೇರುವನೆಂದರೆ ಆ ಭಾವಗಳನ್ನು ಅರ್ಪಿಸುವನು ಎಂಬರ್ಥ.

**ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ ೧೯ ॥**

**ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥ ೨೦ ॥**

**ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ಗುಣಾನ್ ।**
**ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥ ೨೧ ॥**

ಹಿಂದೆ ಹೇಳಿದಂತೆ ಕ್ಷೇತ್ರದಲ್ಲಿ ವಿಕಾರಗಳು ಹೇಗೆ ಉದ್ಭವಿಸುವ ವೆಂಬದನ್ನು ಈ ಮೂರು ಶ್ಲೋಕಗಳಲ್ಲಿ ವಿವರಿಸಿದೆ. **ಕ್ಷೇತ್ರವು ಪುರುಷ ಮತ್ತು ಪ್ರಕೃತಿ ಎಂಬ ಎರಡು ತತ್ವಗಳಿಂದ ಕೂಡಿರುವದು.** ಈ ಎರಡು ತತ್ವಗಳೂ ಅನಾದಿಸಿದ್ಧವಾಗಿವೆ. ಅಂದರೆ ಪರಮಾತ್ಮನೇ ಮೊದಲಾಗಿ ಸೃಷ್ಟಿಯಲ್ಲುಂಟಾದ ಅತಿ ಕ್ಷುದ್ರ ಕ್ಷೇತ್ರದ ವರೆಗೆ ಈ ತತ್ವಗಳು ಸರ್ವತ್ರ ಸಂಭವಿಸುವವು. ಕ್ಷೇತ್ರ ವಿಷಯವಾಗಿ ವಿವರಿಸುವಾಗ ಹಿಂದೆ ಪ್ರಕೃತಿ ತತ್ವವನ್ನುಳಿದು ಪುರುಷತತ್ವವನ್ನು ಅವ್ಯಕ್ತವೆಂದು ಉಲ್ಲೇಖಿಸಿದೆ. ಈ ಎರಡು ತತ್ವಗಳ ಹೊರತು ಮೂರನೆಯ ಒಂದು ತತ್ವವು ಗೀತೆಯ ಮತದಂತೆ ಕ್ಷೇತ್ರದಲ್ಲಿ ಇರುವದಿಲ್ಲ. ಆದರಲ್ಲಿ ಅತಿ ಸೂಕ್ಷ್ಮವಾದ ಪ್ರಕೃತಿಗೆ ಅವಕಾಶವಿಲ್ಲ.

ಪ್ರಕೃತಿಯ ಗುಣಗಳಿಂದ ಸೃಷ್ಟಿಯಲ್ಲಿ ವಿಕಾರಗಳು ಉಂಟಾಗುವವು (೩-೩೪) ಪ್ರಕೃತಿಯೆಂದರೆ ಪ್ರಧಾನವಾಗಿ ಇಂದ್ರಿಯಸ್ವಭಾವವೇ.

ಇಂದ್ರಿಯಗಳ ಮತ್ತು ಅವುಗಳ ವಿಷಯಗಳ ಪರಸ್ಪರ ಸಂಘಾತದಿಂದ ಈ ವಿಕಾರಗಳು ಉತ್ಪನ್ನವಾಗಿ ಗುಣಗಳಿಂದ ವೃದ್ಧಿಪಡುವವು(೧೫-೨).

ಕಾರಣ (Cause) ಮತ್ತು ಕಾರ್ಯ (effect) ಗಳು ಪ್ರಕೃತಿಯಿಂದ ಸಂಭವಿಸುವವು. ಈ ಕಾರ್ಯಕಾರಣ ಪರಂಪರೆಯಿಂದ ಫಲಿತವಾಗುವ ಸುಖದುಃಖಗಳ ಬೋಕ್ತೃತ್ವಕ್ಕಾಗಿ ಅದೇ ಕ್ಷೇತ್ರದಲ್ಲಿ ಪುರುಷನು ನಿಯೋಜಿತನಾಗಿದ್ದಾನೆ.

ಪ್ರಕೃತಿಯು ತನ್ನ ಗುಣವಿಶೇಷಗಳಿಂದ ಉಂಟುಮಾಡುವ ಕಾರ್ಯಕಾರಣ ಪರಂಪರೆಯನ್ನು ಅನುಭವಿಸುವಾಗ ಆ ಪ್ರಕೃತಿಯಲ್ಲಿ ಸ್ಥಿತನಾದ ಪುರುಷನಿಗೆ ಅದರ ತ್ರಿವಿಧ ಗುಣಗಳ ವಿಷಯದಲ್ಲಿ ಪ್ರೇಮ ಅಥವಾ ದ್ವೇಷವೆಂಬ ವಿಕಾರಗಳು ಅಂಟಿಗೊಳ್ಳುವವು; ಮತ್ತು ಗುಣಗಳಲ್ಲಿ ಅವನು ಆಸಕ್ತನಾಗುವದರಿಂದ ಅವನಿಗೆ ಸತ್ ಅಥವಾ ಅಸತ್ ಯೋನಿಯಲ್ಲಿ ಪುನರ್ಜನ್ಮಗಳು ಉಂಟಾಗುವವು. ಇಲ್ಲಿ ಗಮನಿಸಬೇಕಾದ ಸಂಗತಿಯೇನೆಂದರೆ **ಸತ್ ಮತ್ತು ಅಸತ್ ಎಂಬ ಶಬ್ದಗಳು ಯೋನಿಗಳ ವಿಷಯವಾಗಿ ಹೇಳಲ್ಪಟ್ಟಿವೆ. ಸತ್ ಎಂದರೆ ಅವಿನಾಶಿಯು, ಅಸತ್ ಎಂದರೆ ವಿನಾಶಿಯು ಎಂಬ ಅರ್ಥವು ಉದ್ದಿಷ್ಟವಿಲ್ಲ.** ಗೀತೆಯಲ್ಲಿ ಸತ್ ಶಬ್ದವು ದೈವೀಭಾವವನ್ನೂ ಅಸತ್ ಶಬ್ದವು ಆಸುರ ಭಾವವನ್ನೂ ತೋರಿಸಲಿಕ್ಕೆ ಆಗಾಗ ಉಪಯೋಗಿಸಲ್ಪಟ್ಟಿವೆ. ಸತ್ ಯೋನಿಯಲ್ಲಿ ಅಂದರೆ ದೈವೀ ಸಂಪತ್ತಿನಲ್ಲಿ ಮತ್ತು ಅಸತ್ ಯೋನಿಯಲ್ಲಿ ಎಂದರೆ ಆಸುರ ಸಂಪತ್ತಿನಲ್ಲಿ ಜನ್ಮ ಸಂಭವಿಸುವದೆಂಬುವದೇ ಇದಕ್ಕೆ ಅರ್ಥ. ಒಂದರಿಂದ ಸುಖವೂ ಮತ್ತೊಂದರಿಂದ ದುಃಖವೂ ಪ್ರಾಪ್ತವಾಗುವ ಬಗೆಯು ಮುಂದೆ (೧೬ನೆಯ ಅಧ್ಯಾಯದಲ್ಲಿ) ವರ್ಣಿಸಿದೆ. ಸತ್ ಎಂಬ ಶಬ್ದಕ್ಕೆ ಗೀತೆಯಲ್ಲಿ ಪುರುಷೋತ್ತಮ ಶ್ರೀಕೃಷ್ಣನಲ್ಲಿ ಆಸಕ್ತಿಯೆಂದೂ ಅಸತ್ ಎಂಬ ಶಬ್ದಕ್ಕೆ ಆಸಕ್ತಿಯಿಲ್ಲದಿರುವಿಕೆಯೆಂದೂ ಅರ್ಥ ಮಾಡಿದೆ.

**ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ಪುರುಷಃ ಪರಃ ॥ ೨೨ ॥**

ಈ ಶ್ಲೋಕವು ಕ್ಷೇತ್ರದೊಳಗಿನ ಪುರುಷನನ್ನು ಸಂಬಂಧಿಸಿಲ್ಲ. ಆದರೆ ಕ್ಷೇತ್ರಜ್ಞನನ್ನು ಅಂದರೆ ಪುರುಷೋತ್ತಮ ಶ್ರೀಕೃಷ್ಣನನ್ನು ಸಂಬಂಧಿಸಿರುವದು. ಏಕೆಂದರೆ ಇದರಲ್ಲಿ ಪುರುಷನ ಗುಣಗಳ ವಿಷಯದ ಆಸಕ್ತಿಯ ಉಲ್ಲೇಖವಿಲ್ಲ; ಹಾಗು ಅವನ ಸದಸದ್ಯೋನಿಗಳ ಬಂಧನದ ಉಲ್ಲೇಖವಿಲ್ಲ. ಇಷ್ಟೇ ಅಲ್ಲದೆ ಕ್ಷೇತ್ರದೊಳಗಿನ ಪುರುಷನನ್ನು ಈಶ್ವರ ನೆಂದು ಹೇಳಿರುವದುಂಟು (೧೫-೮). ಆದರೆ ಈ ಶ್ಲೋಕದಲ್ಲಿ ಮಹೇಶ್ವರ ನನ್ನು ಲಕ್ಷಿಸಿ ಹೇಳಿದೆ. ಗೀತೆಯಲ್ಲಿ ಶ್ರೀಕೃಷ್ಣಪುರುಷೋತ್ತಮನನ್ನೇ ಹಲವು ಸಾರೆ ಮಹೇಶ್ವರನೆಂದು ಹೇಳಿದೆ. ಆದುದರಿಂದ ಈ ಶ್ಲೋಕದಲ್ಲಿ ಹೇಳಿದ ವಿಷಯವು ಪ್ರಕೃತಿಯ ಬಲಿಗೆ ಸಿಲುಕುವ ಜೀವಪುರುಷನನ್ನು ಸಂಬಂಧಿಸಿಲ್ಲ; ಆದರೆ ಕ್ಷೇತ್ರದಲ್ಲಿದ್ದು ಅಲ್ಲಿ ಸಲ್ಲುವ ಯಜ್ಞಭಾವವನ್ನು ಸ್ವೀಕರಿಸುವ ಅಧಿಯಜ್ಞನಾದ ಕ್ಷೇತ್ರಜ್ಞನನ್ನು ಸಂಬಂಧಿಸಿರುವದು (೮-೪). ಯಾವುದೊಂದು ಕ್ಷೇತ್ರದಲ್ಲಿ ನಡೆಯುವ ಪುರುಷಪ್ರಕೃತಿಯ ಸಂಸಾರ ರೂಪವಾದ ಕಾರ್ಯಕಾರಣ ಪರಂಪರೆಯ ವಿಷಯದಲ್ಲಿ ಕ್ಷೇತ್ರಜ್ಞನಿಡುವ ವಿವಿಧ ಭಾವಗಳನ್ನು ಈ ಶ್ಲೋಕದಲ್ಲಿ ಹೇಳಿದೆ. ಅದು ಹೇಗೆಂದರೆ— ಕರ್ತೃವಾದ ಪುರುಷನಲ್ಲಿ ಯೋಗಭಾವವಿಲ್ಲದಿದ್ದರೆ ಪುರುಷೋತ್ತಮನು ಆ ಕ್ಷೇತ್ರದಲ್ಲಿ ಇದ್ದರೂ ಅಲ್ಲಿ ನಡೆಯುವ ಕಾರ್ಯವಿಷಯದಲ್ಲಿ ಕೇವಲ ಉಪದ್ರಷ್ಟನಾಗುವನು. ಅದೇ ಕಾರ್ಯವು ಯೋಗಭಾವರಹಿತವಾಗಿದ್ದರೂ ನ್ಯಾಯವಾದುದು ಎಂದರೆ ತನ್ನ ಸೃಷ್ಟಿಯೊಳಗಿನ ಉದ್ದೇಶಕ್ಕೆ ಪೋಷಕ ವಾದುದಾದರೆ, ಅದನ್ನು ತಾನು ಅನುಮತಿಸುವನು. ಹೀಗೆ ಪೋಷಕವಾಗಿ ಇದ್ದು ಕರ್ತೃವಿನಲ್ಲಿ ಸಾಕಷ್ಟು ಯೋಗಭಾವವೂ ಇದ್ದರೆ ತಾನು ಆ ಕಾರ್ಯವನ್ನು ಪ್ರೋತ್ಸಾಹಿಸುವನು. ಕಾರ್ಯವು ಯುಕ್ತವಾಗಿದ್ದು ಕರ್ತೃವೂ ಯೋಗಯುಕ್ತನಾದರೆ ಆ ಕಾರ್ಯಕ್ಕೆ ತಾನೇ ಭೋಕ್ತೃವಾಗು ವನು. ಹೀಗೆ ಎಲ್ಲ ಕ್ಷೇತ್ರಗಳಲ್ಲಿಯೂ ನಡೆಯುವ ಎಲ್ಲ ಕರ್ಮಗಳಿಗೂ ಈತನೇ ಮಹೇಶ್ವರನಾಗಿರುವನು.

ಮೇಲೆ ವಿವರಿಸಿದ ಅವನ ಭಾವಗಳಿಗೆ ನಾವು ಸೂಚಿಸಿದ ವಿವಿಧ ಕಾರಣಗಳನ್ನು– ಅರ್ಥವು ಸುಲಭವಾಗಿ ಬೋಧವಾಗಬೇಕೆಂದು–ನಾವು ಕಲ್ಪಿಸಿ ಹೇಳಿರುವೆವು. ಕಾರಣವು ಏನೇ ಇರಲಿ, ಕ್ಷೇತ್ರಜ್ಞನ ನಾನಾ

ಭಾವಗಳನ್ನು ಈ ರೀತಿಯಾಗಿ ತಿಳಿದರೆ, ಈ ಶ್ಲೋಕದ ಅರ್ಥವು ವಿಶದವಾಗು ವದೇನೋ ನಿಜ. ಪುರುಷ ಪ್ರಕೃತಿಯುಕ್ತವಾದ ಕ್ಷೇತ್ರದಲ್ಲಿ ವಾಸ ಮಾಡುವ ಈ ಮಹೇಶ್ವರನನ್ನು ಪರಮಾತ್ಮನೆಂದೂ ಹೇಳುವರು. **ಪ್ರಕೃತಿಗೆ ಸಹವಾಸಿಯಾಗಿ ದೇಹದಲ್ಲಿದ್ದುಕೊಂಡು ಆ ಪ್ರಕೃತಿಯ ಗುಣಗಳಲ್ಲಿ ಸಿಲುಕುವ ಪುರುಷನಿಂದ ಈ ಪುರುಷೋತ್ತಮನು ಪ್ರತ್ಯೇಕನಾದವನು. ಆದರೂ ಅದೇ ದೇಹದಲ್ಲಿ ಆ ದೇಹಿಯಂತೆಯೇ ಇರುವವನೂ ಶ್ರೇಷ್ಠನೂ ಆದ ಇವನು ಪರಮಪುರುಷನೆನಿಸುವನು.**

**ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ |**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ || ೨೩ ||**

ಪುರುಷನೆಂದರೆ ಯಾರು, ಪ್ರಕೃತಿಗೂ ಅದರ ಗುಣಗಳಿಗೂ ಮತ್ತು ಇವನಿಗೂ ಇರುವ ಸಂಬಂಧವೇನು, ಈ ವಿಷಯಗಳನ್ನು ಮೇಲೆ ಹೇಳಿದಂತೆ ತಿಳಿದವನು ಗುಣಗಳಲ್ಲಿ ವರ್ತಿಸುತ್ತಿದ್ದರೂ ಅವುಗಳಿಂದುಂಟಾಗುವ ಜನ್ಮಬಂಧನದಿಂದ ಮುಕ್ತನಾಗುವನು. ಏಕೆಂದರೆ ಪುರುಷೋತ್ತಮನ ವಿಷಯದಲ್ಲಿ ತನಗಿರಬೇಕಾದ ನಿಯತಭಾವವು ಯಾವುದು, ತನಗೆ ಆತನೇ ಹೇಗೆ ಜ್ಞೇಯನಾದವನು, ಜ್ಞಾನವೇ ತನಗೆ ಕರ್ತವ್ಯವು ಹೇಗೆ, ಈ ಸಂಗತಿಗಳನ್ನು ಅವನು ಪೂರ್ಣವಾಗಿ ಗ್ರಹಿಸಿರುವನು. ಅವನ ವರ್ತನವು ಬಾಹ್ಯ ದೃಷ್ಟಿಗೆ ಹೇಗಿದ್ದರೂ ಅವನು ತಾನು ತಿಳಿದ ತತ್ವಗಳನ್ನು ಮೀರಲಾರನಾದುದರಿಂದ ಅವನಿಗೆ ದುಃಖಮಯ ಜನ್ಮವೂ ಸಂಸಾರವೂ ಸಂಭವಿಸಲಾರವು.

**ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ |**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ || ೨೪ ||**

ಕೆಲವರು ಧ್ಯಾನಪರರಾಗಿ ತಮ್ಮ ಆತ್ಮಸ್ಫೂರ್ತಿಯಿಂದ ಆತ್ಮನ ಅಂದರೆ ಕ್ಷೇತ್ರಜ್ಞನ ಸಾಕ್ಷಾತ್ಕಾರವನ್ನು ತಮ್ಮ ಆತ್ಮದಲ್ಲೇ ಪಡೆಯುವರು (೫-೨೪). ಕೆಲವರು ಜ್ಞಾನದಿಂದ ತಮ್ಮ ಸಂದೇಹಗಳನ್ನು ಪರಿಹರಿಸಿಕೊಂಡು ಈ ಕ್ಷೇತ್ರಜ್ಞನನ್ನು ತಿಳಿಯುವರು (೫-೨೫). ಇನ್ನು

ಕೆಲವರು ಈ ಕ್ಷೇತ್ರಜ್ಞನನ್ನೇ ಅಧಿಯಜ್ಞನೆಂದು ಭಾವಿಸಿ ತಮ್ಮ ಕರ್ಮ ಗಳನ್ನೆಲ್ಲ ಅವನಿಗೆ ಸಮರ್ಪಿಸುವರು; ಹೀಗೆ ಕರ್ಮಯೋಗವನ್ನಾಚರಿಸಿ ಅವನನ್ನು ಅರಿಯುವರು (೫-೨೬).

**ಅನ್ಯೇ ತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ।**
**ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ ೨೫ ॥**

ಅನೇಕರಿಗೆ ಈ ಕ್ಷೇತ್ರಜ್ಞನನ್ನು ಈ ರೀತಿಯಾಗಿ ತತ್ವತಃ ಗ್ರಹಿಸ ಲಾಗುವದಿಲ್ಲ. ಅವರು ಅನ್ಯರಿಂದ ಕೇಳಿಕೊಂಡು ಅವನನ್ನು ಭಕ್ತಿಭಾವ ದಿಂದ ಭಜಿಸುವರು. ಹೀಗೆ ಭಗವದ್ಗುಣಶ್ರವಣ ಲಾಲಸೆಯುಳ್ಳಂಥವರ ಭಕ್ತಿಯನ್ನೂ ಉಪಾಸನೆಯನ್ನೂ ಸ್ವೀಕರಿಸಿ ಈ ಅಧಿಯಜ್ಞನು ಅವರನ್ನೂ ಮೃತ್ಯುವಿನಿಂದ ರಕ್ಷಿಸುವನು. **ಈ ಕ್ಷೇತ್ರಜ್ಞನ ವಿಷಯವಾದ ಜ್ಞಾನವು ಜೀವರಿಗೆ ಯಾವ ಬಗೆಯಿಂದಲೇ ಪ್ರಾಪ್ತವಾಗಲಿ ಅವನಲ್ಲಿ ಅವರಿಗೆ ಶ್ರದ್ಧೆಯಾಗಲಿ, ಭಕ್ತಿಯಾಗಲಿ, ಯೋಗವಾಗಲಿ ನಿರ್ದೋಷವಾಗಿಯೂ ಉತ್ಕಟವಾಗಿಯೂ ಇದ್ದರೆ ಸಾಕು. ಅವರಿಗೆ ಮುಕ್ತಿಯನ್ನು ಕೊಡುವ ಭಾರವನ್ನು ಅವನು ತಾನೇ ವಹಿಸುವನು.**

**ಯಾವತ್ಸಂಜಾಯತೇ ಕಿಂಚಿತ್ಸತ್ವಂ ಸ್ಥಾವರಜಂಗಮಮ್ ।**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ ॥ ೨೬ ॥**

ಸೃಷ್ಟಿಯೊಳಗುಂಟಾದ ವಸ್ತುವು ಎಷ್ಟೇ ಅಲ್ಪವಾಗಿರಲಿ-ಅದು ಸ್ಥಾವರವೇ ಆಗಲಿ ಜಂಗಮವೇ ಆಗಲಿ— ಕ್ಷೇತ್ರ (ಪ್ರಕೃತಿ + ಪುರುಷ) ಮತ್ತು ಕ್ಷೇತ್ರಜ್ಞರ ಸಂಯೋಗದಿಂದ ಅದು ಉತ್ಪನ್ನವಾಗಿರುವದು ಎಂಬು ದನ್ನು ಅರ್ಜುನನು ತಿಳಿಯಬೇಕು. ಎಂದರೆ ಕ್ಷೇತ್ರವು ಪುರುಷ ಪ್ರಕೃತಿ ಗಳಿಂದ ಯುಕ್ತವಾಗಿದ್ದು ತನ್ನ ಸ್ವಭಾವಕ್ಕನುರೂಪವಾದ ಯಜ್ಞವನ್ನು ಆತ್ಮೀಯತೆಯಿಂದ ಪುರುಷೋತ್ತಮನಿಗೆ ಸಲ್ಲಿಸುವದಕ್ಕಾಗಿಯೂ ಕ್ಷೇತ್ರ ಜ್ಞನು ಅದರ ಆ ಯಜ್ಞಭಾವವನ್ನು ಸ್ವೀಕರಿಸುವದಕ್ಕಾಗಿಯೂ ಇರುವ ರೆಂದು ತಿಳಿಯಬೇಕು.

**ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ ।**
**ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ ೨೭ ॥**

ಅರ್ಜುನನ ಕಣ್ಣಿಗೆ ಅಂದರೆ ಚರ್ಮಚಕ್ಷುವಿಗೆ ಕೆಲವು ವಸ್ತುಗಳು ವಿನಾಶಿಗಳಾಗಿಯೂ ಇನ್ನು ಕೆಲವು ಅವಿನಾಶಿಗಳಾಗಿಯೂ ಕಾಣಿಸ ಬಹುದು. ಆದರೆ ಹೀಗೆ ಅವಿನಾಶಿಯೆಂದು ನಾವು ಯಾವುದನ್ನು ಭಾವಿಸು ವೆವೋ ಅದರಲ್ಲಿ ಕ್ಷೇತ್ರಜ್ಞನಿರುವನೆಂಬುದರಲ್ಲಿ ಮನಸಿಗೆ ಸಂಶಯವು ತೋರುವದಿಲ್ಲ. ಏಕೆಂದರೆ ಶರೀರದಲ್ಲಿ ಸಾಕ್ಷಿಯಾಗಿರುವ ತತ್ವವೇ ಕ್ಷೇತ್ರಜ್ಞ ನೆಂದು ಬಗೆಯುವದರಿಂದಲೂ ಕೇವಲ ವಿರೋಧಾಭಾಸ ಮಾತ್ರದಿಂದಲೇ ಅದು ಶಾಶ್ವತವೆಂಬ ಕಲ್ಪನೆಯು ನೆಲಸಿರುವದರಿಂದಲೂ ಈ ವಿಷಯದಲ್ಲಿ ಮನಸ್ಸು ಸಂದೇಹಪಡುವದಿಲ್ಲ. ಆದರೆ ಅರ್ಜುನನು ಗ್ರಹಿಸಬೇಕಾದುದೇ ನೆಂದರೆ ಅವಿನಾಶಿಯಾದುದರಲ್ಲಂತೂ ಕ್ಷೇತ್ರಜ್ಞನು ಇದ್ದೇ ಇರುವನು; ಇಷ್ಟೇ ಅಲ್ಲದೆ, ಯಾವುದನ್ನು ಅರ್ಜುನನು ವಿನಾಶಿಯೆಂದು ಹೇಳುವನೋ ಅದರಲ್ಲಿಯೂ ಕ್ಷೇತ್ರಜ್ಞನು (ಅಂದರೆ ಪುರುಷೋತ್ತಮನು) ಅಷ್ಟೇ ಖಂಡಿತ ವಾಗಿ ಇರುವನು. ಅದಲ್ಲದೆ ಸೃಷ್ಟವಾದ ಪ್ರತಿಯೊಂದು ಅತ್ಯಲ್ಪ ವಸ್ತು ವಿನ ಪ್ರತಿಯೊಂದು ಪರಿಸ್ಥಿಯಲ್ಲಿಯೂ ಕ್ಷೇತ್ರಜ್ಞನು ತಪ್ಪದೆ ಯಾವಾಗಲೂ ಇರುವನು. ಅವನು ಇರುವನು ಮತ್ತು ಇಲ್ಲ ಎಂದು ಹೇಳುವದೇ ಅನ ವಶ್ಯವು. ಅವನು ಸರ್ವತ್ರವೂ ಸಮಾನರೀತಿಯಿಂದಲೂ ಸರ್ವಕಾಲ ದಲ್ಲಿಯೂ ಪ್ರತ್ಯಕ್ಷವಾಗಿ ಇರುವನು. ಶ್ರೀಕೃಷ್ಣನ ಮತವೇನೆಂದರೆ, ಕ್ಷೇತ್ರಜ್ಞನನ್ನು ಕುರಿತು ಈ ರೀತಿಯಾಗಿ ತಿಳಿಯುವವರೇ ನಿಜವನ್ನು ಬಲ್ಲ ವರು. ಕ್ಷೇತ್ರಜ್ಞನ ಈ ಸತ್ಯ ಸ್ವಭಾವಕ್ಕೆ ವಿಸಂಗತವಾದ ಕಲ್ಪನೆಗಳು ಪ್ರಚಲಿತ ವೇದಾಂತದಲ್ಲಿ ಎಷ್ಟಿದ್ದರೂ ಅವುಗಳೆಲ್ಲ ಅವಾಸ್ತವಗಳೆಂದು ತಿಳಿಯ ಬೇಕು.

**ಸಮಂ ಪಶ್ಯನ್ಹಿ ಸರ್ವತ್ರ ಸಮವಸ್ಥಿತಮೀಶ್ವರಂ ।**
**ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಂ ॥೨೮॥**

ಪುರುಷೋತ್ತಮನು ಎಂದರೆ ಕ್ಷೇತ್ರಜ್ಞನು ಸರ್ವತ್ರವಿರುವನೆಂದು ಯಾವನ ಬುದ್ಧಿಯು ಗ್ರಹಿಸಿರುವದೋ–ಇದನ್ನು ಬುದ್ಧಿಯಿಂದಲೇ ಗ್ರಹಿಸಬೇಕಲ್ಲದೆ ಚರ್ಮ ಚಕ್ಷುವಿನಿಂದಲ್ಲ–ಅವನ ದೃಷ್ಟಿಯು ಸರ್ವತ್ರವೂ ಸಮವಾಗುವದು ಸತ್ಯವು. ಎಂದರೆ ಇಂಥವನು ವಸ್ತುವು ವಿನಾಶಿಯಾಗಲಿ

ಅವಿನಾಶಿಯಾಗಲಿ ಆದನ್ನು ಸಮಾನವಾಗಿ ನೋಡುವನು. ಉದಾಹರಣ ಕ್ಕಾಗಿ ಮೊದಲು ತೆಗೆದುಕೊಂಡ ಶರೀರದ ವಿಷಯವಾಗಿಯೇ ನೋಡುವ. ಇದರೊಳಗಿನ ಅವಿನಾಶಿಯಾದ ತತ್ವವು ಶ್ರೇಷ್ಠವೆಂದೂ ವಿನಾಶಿಯಾದ ತತ್ವವು ಕನಿಷ್ಠವೆಂದೂ ಅವನು ಒಪ್ಪಲಾರನು. ವಿನಾಶಿಯಾದ ತತ್ವಕ್ಕೆ ಸೇರಿದ **ಇಂದ್ರಿಯ ಸ್ವಭಾವವನ್ನು** ಸಾಯಬಡಿಯಲಿಕ್ಕೆ ಅವನು ಯತ್ನಿಸಲಾರನು. ಅದನ್ನು ಹಾಗೆ ಘಾತಿಸಕೂಡದೆಂದು ಗೀತೆಯಲ್ಲಾ ದರೂ ಉಪದೇಶಿಸಲ್ಪಟ್ಟಿದೆ(೬-೫). ಹಿಂದೆ ಇದೇ ಮತವನ್ನು ಜೀವನ ಸ್ವಹಿತ ವನ್ನನುಲಕ್ಷಿಸಿ ಹೇಳಿದೆ. ಮತ್ತು ಈ ಶ್ಲೋಕದಲ್ಲಿ ಆ ಸಿದ್ಧಾಂತದ ಉಪ ಪತ್ತಿಯನ್ನೇ ಕ್ಷೇತ್ರಜ್ಞನ ವಿಷಯದ ತತ್ವದೃಷ್ಟಿ ಯಿಂದ ಬೋಧಿಸಿದೆ. ಈ ತತ್ವವು ದೇಹಧಾರಿಯಾದ ಮನುಷ್ಯನಿಗೆ ಬಹಳ ಮಹತ್ವದ್ದಾಗಿದೆ. ಅದನ್ನು ತಿಳಿದು ಅದರಂತೆ ವರ್ತಿಸಿದರೆ ಮನುಷ್ಯನಿಗೆ ಪರಮಗತಿಯು ಸಾಧಿಸುವ ದೆಂದ ಮೇಲೆ ಅದರ ಮಹತ್ವವೆಷ್ಟೆಂಬುದನ್ನು ತಿಳಿಯಬಹುದು.

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥ ೨೯ ॥**

ಪುರುಷ ಪ್ರಕೃತಿಗಳೆರಡೂ ಕ್ಷೇತ್ರಜ್ಞನು ಉತ್ಪನ್ನಮಾಡಿರುವ ಕ್ಷೇತ್ರದ ತಾತ್ವಿಕ ಘಟಕಗಳಾಗಿವೆ. ಕಾರ್ಯಕಾರಣೋತ್ಪಾದನಕ್ಕಾಗಿ ಪ್ರಕೃತಿಯೂ, ಅದರ ಸಹವಾಸದಲ್ಲಿದ್ದುಕೊಂಡು ಸುಖದುಃಖಗಳನ್ನು ಉಪ ಭೋಗಿಸುವದಕ್ಕಾಗಿ ಪುರುಷನೂ ನಿಯೋಜಿಸಲ್ಪಟ್ಟಿರುವರೆಂದು ಈ ಮೊದಲೇ ಹೇಳಿದೆ- ಪುರುಷನ ಭೋಕ್ತೃತ್ವ ಸ್ವಭಾವವು ಇದಕ್ಕಾಗಿ ಎಷ್ಟು ಯೋಗ್ಯವೋ ಅಷ್ಟೇ ಪ್ರಕೃತಿಯ ಕರ್ಮಕರ್ತೃತ್ವಸ್ವಭಾವವಾದರೂ ಯೋಗ್ಯವಾಗಿದೆ. ಈ ದೃಷ್ಟಿಯಿಂದ ಕರ್ಮಕರ್ತೃತ್ವದ ಹೊಣೆಯು ಕೇವಲ ಪ್ರಕೃತಿಯದೆಂದೂ ಅದು ಪುರುಷನನ್ನು ಸಂಬಂಧಿಸಿಲ್ಲವೆಂದೂ ಗ್ರಹಿಸು ವವನು ಪುರುಷನು ಅಕರ್ತನೆಂಬುದನ್ನು ಸಹಜವಾಗಿ ತಿಳಿಯುವನು.

ಗೀತೆಯ ಮತದಂತೆ ಕ್ಷೇತ್ರದಲ್ಲಿ ದೇಹಿಯು ಕ್ಷೇತ್ರಜ್ಞನು ಎಂಬ ಇಬ್ಬರು ಪುರುಷರಿರುವರು. ಇವರಲ್ಲಿ ಪುರುಷೋತ್ತಮನೇ ಪುರುಷ ಪ್ರಕೃತಿಗಳ ಸ್ವಭಾವವನ್ನು ತನ್ನ ಸೃಷ್ಟಿಕಾರ್ಯಕ್ಕಾಗಿ ಏರ್ಪಡಿಸಿರುವ

ನಾದುದರಿಂದ ಅವುಗಳ ಕಾರ್ಯಕ್ಕಾದರೂ ಅವನೇ ಹೊಣೆಯಾಗಿರುವನು. ಅವನ ಇಚ್ಛೆಯಿಂದಲೇ ಪ್ರಕೃತಿಯು ತನ್ನ ಆಟವನ್ನು ನಡೆಯಿಸುವದು. ಆದುದರಿಂದ ಒಂದು ಸಾರೆ ಅದು ಕಾರ್ಯಕ್ಷಮವಾದ ಮೇಲೆ ಅದರ ಆಟವು ಮುಂದುವರಿಯುವದಕ್ಕೆ ದೇಹಿಯು ಅಂದರೆ ಕ್ಷೇತ್ರಸ್ಥ ಪುರುಷನ ಪ್ರೇರಣೆಯು ಬೇಕಾಗುವದಿಲ್ಲ. ಅವನು ಕೇವಲ ಉದಾಸೀನನಾದರೂ (೫-೧೩) ಅವನ ಪ್ರಕೃತಿಯ ಆಟವು ಪುರುಷೋತ್ತಮನ ಇಚ್ಛೆಯಿಂದ ನಡೆ ಯುವದು. **ಇದನ್ನು ತಿಳಿದರೆ ದೇಹಿಯು ಹೇಗೆ ಮತ್ತು ಏಕೆ ಅಕರ್ತ ನೆಂಬುದು ಸ್ಪಷ್ಟವಾಗುವದು.**

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥ ೩೦ ॥**

ಇದು ವರೆಗೆ ವ್ಯಷ್ಟಿರೂಪನಾದ ಜೀವಭೂತನನ್ನೂ ಅವನ ಪುರುಷ ಪ್ರಕೃತಿ ಸ್ವಭಾವವನ್ನೂ ಕುರಿತು ವಿವೇಚನೆಯಾಯಿತು. ಇನ್ನು ವ್ಯಷ್ಟಿಗೂ ಸಮಷ್ಟಿರೂಪನಾದ ಪುರುಷೋತ್ತಮನಿಗೂ ಇರುವ ಸಂಬಂಧವನ್ನು ಶ್ರೀ ಕೃಷ್ಣನು ಹೇಳುತ್ತಾನೆ.

ಪೃಥಗ್ಭಾವದಿಂದ ಯುಕ್ತರಾದ ಅಸಂಖ್ಯ ಜೀವಗಳು ಪರಮೇಶ್ವರನ ಘಟಕಾವಯವಗಳಾಗಿ ಸೃಷ್ಟಿಯಲ್ಲಿ ಎಲ್ಲೆಲ್ಲಿಯೂ ಹೇಗೆ ಸಂಭವಿಸುವ ವೆಂಬದನ್ನು ಗ್ರಹಿಸಬೇಕು. ಕ್ಷೇತ್ರಜ್ಞನು ಅಂದರೆ ಪುರುಷೋತ್ತಮನು ಎಲ್ಲ ವಸ್ತುಗಳಲ್ಲಿಯೂ ಇರುವನು. ಆದರೂ ಈ ವಸ್ತುಗಳ ಪ್ರತ್ಯೇಕತ್ವಕ್ಕೆ (Individuality)ಅವನು ಕುಂದು ತರುವದಿಲ್ಲ. ಒಂದೇ ಕೇಂದ್ರಕ್ಕೊಳಗಾಗಿ ಆ ಕೇಂದ್ರದಿಂದ ಸಂಘಟಿತವಾಗುವದರಿಂದ ಅವೆಲ್ಲವುಗಳಲ್ಲಿಯೂ ಏಕತ್ವ ಭಾವವು ಶಕ್ಯವಾಗುವದು. ಅವುಗಳ ವ್ಯಕ್ತಿಸ್ವಾತಂತ್ರ್ಯಕ್ಕಾಗಲಿ ವ್ಯವ ಸಾಯಕ್ಕಾಗಲಿ ಸ್ವಲ್ಪವಾದರೂ ಅಡ್ಡಿಯನ್ನು ತಾರದೆ ಪರಮೇಶ್ವರನು ಸರ್ವಭೂತಗಳನ್ನು ತನ್ನಲ್ಲಿ ಹೇಗೆ ಧರಿಸುವನೆಂಬದನ್ನು ಈ ಮೊದಲೇ (೯-೬) ಹೇಳಿದೆ. ಕೇಂದ್ರಸ್ಥನಾದ ಪುರುಷೋತ್ತಮನಿಗೆ ಈ ಸೃಷ್ಟಿಯ ಏಕತ್ವದ ಮರೆವು ಎಂದಿಗೂ ಆಗುವದಿಲ್ಲೆಂದು ಹೇಳಬೇಕಾಗಿಲ್ಲ. ಆದರೆ ಈ ಏಕತ್ವವು ಸಿದ್ಧವಾಗುವದಕ್ಕೆ ಸಾಧನವಾದ ಜೀವವ್ಯಕ್ತಿಗೆ ಮಾತ್ರ ತನ್ನ

ಸಾಮಾಸಿಕತ್ವದ ನೆಸಹು ಉಳಿಯುವದು ಕಷ್ಟವು. ಪುರುಷೋತ್ತಮ ನಿಂದ ಸಿದ್ಧವಾಗುವ ಈ ಸೃಷ್ಟಿಯ ಏಕತ್ವವನ್ನೂ ಆ ಏಕತ್ವದಲ್ಲಿ ತಾನು ಅಂಶಭಾಗಿಯಾಗುವದನ್ನೂ ಇವನು ಮರೆಯುವನು. ಈ ವಿಸ್ಮೃತಿಯಿಂದ ಸೃಷ್ಟಿನಿಯಮವಾನುಸಾರವಾಗಿ ಜೀವನಿಗೆ ಆತ್ಯಂತಿಕ ಹಾನಿಯುಂಟಾಗುವ ದೆಂದು ಗೀತೆಯು ಸಾರಿ ಹೇಳುವದು. ಆದುದರಿಂದ ತನ್ನ ಘಟಕತ್ವವನ್ನೂ ಪುರುಷೋತ್ತಮನಿಂದ ಸಿದ್ಧವಾಗುವ ಸೃಷ್ಟಿಯ ಏಕತ್ವವನ್ನೂ ಸಂಪೂರ್ಣ ವಾಗಿ ತಿಳಿದಿರುವವನು ಬ್ರಹ್ಮನ ವಿಷಯವಾಗಿ ಪೂರ್ಣ ಜ್ಞಾನವನ್ನು ಪಡೆ ಯುವನು. ಈ ಜ್ಞಾನದಿಂದ ಬ್ರಹ್ಮನನ್ನು ಪ್ರಾಪ್ತ ಮಾಡಿಕೊಳ್ಳುವ ಪಾತ್ರತೆಯು ಅವನಲ್ಲಿ ಬರುವದು.

ಸೃಷ್ಟಿಯು ಪರಮೇಶ್ವರನಿಂದ ವ್ಯಾಪ್ತವಾಗಿದ್ದು ಅವನೇ ಆದರ ಏಕತ್ವಕ್ಕೆ ಕಾರಣನೆಂದು ಮೇಲೆ ಹೇಳಿದೆ. ಆದರೆ ಅವನ ಮರ್ಯಾದೆಯೂ ಅಧಿಕಾರವೂ ಸೃಷ್ಟಿಯ ಒಳಗೆ ಮಾತ್ರವಲ್ಲದೆ ಆದರ ಹೊರಗೂ ನಡೆಯು ವದು. ಏಕೆಂದರೆ, ತನ್ನ ಒಂದು ಅಂಶಮಾತ್ರದಿಂದ ಸೃಷ್ಟಿಯನ್ನುಂಟು ಮಾಡಿ ಅವನು ಅನಂತನಾಗಿ ಸೃಷ್ಟಿಯ ಹೊರಗೆ ಉಳಿದಿರುವನು. ಸೃಷ್ಟಿ ಯಲ್ಲಿ ಸಮಾವಿಷ್ಟವಾದ ಆತನ ಅಂಶವನ್ನೇ ಗೀತೆಯಲ್ಲಿ ಬ್ರಹ್ಮನೆಂದು ಹೇಳಿದೆ. **ಗೀತೆಯಲ್ಲಿ ಈ ಬ್ರಹ್ಮನು ಪರಮೇಶ್ವರ ನಿರ್ಮಿತನೂ ಅವ ನಿಂದ ಬೇರೆಯಾದವನೂ ಸೃಷ್ಟಿಗೆ ಮೂಲನೂ ಆದ ಕೂಟಸ್ಥ ವ್ಯಕ್ತಿಯು.** ಸೃಷ್ಟಿಯ ವ್ಯಾಪ್ತಿಯು ಎಲ್ಲಿಯ ವರೆಗೆ ಇರುವದೋ ಅಲ್ಲಿಯ ವರೆಗೆ ಬ್ರಹ್ಮನ ಮರ್ಯಾದೆಯು. ಸೃಷ್ಟಿಯ ಹೊರಗೆ ಗೀತೆಯಲ್ಲಿ ಬ್ರಹ್ಮ ನಿಗೆ ಸ್ಥಾನವನ್ನು ಕಲ್ಪಿಸಿರುವದಿಲ್ಲ. ಗೀತೆಯಲ್ಲಿ ಹೇಳಿರುವ ಬ್ರಹ್ಮನು ಇವನೊಬ್ಬನೇ. ಈ ಬ್ರಹ್ಮನನ್ನು ಮೀರಿದ **ಪರಬ್ರಹ್ಮನ** ಕಲ್ಪನೆಯು ಗೀತೆ ಯಲ್ಲಿಲ್ಲ.

ಬ್ರಹ್ಮನ ಆಚೆಗೆ ಇರುವವನು ಪರಮೇಶ್ವರನು; ಪರಮಾತ್ಮನು ಅಥವಾ ಪುರುಷೋತ್ತಮನಾದ ಶ್ರೀಕೃಷ್ಣನು. ಈ ಬ್ರಹ್ಮನು ಇರುವದು ಪುರುಷೋತ್ತಮನಿಗೆ ಯಜ್ಞವನ್ನು ಸಮರ್ಪಿಸುವದಕ್ಕಾಗಿಯೇ. ಹೀಗೆ ಸೃಷ್ಟಿಯಲ್ಲೆಲ್ಲೆಲ್ಲಿಯೂ ತುಂಬಿದ ಬ್ರಹ್ಮನ ಪೂರ್ಣಜ್ಞಾನವು ಯಾವನಿಗೆ ಆಗುವದೋ ಅವನು ಸೃಷ್ಟಿಯೊಳಗಿನ ಬ್ರಹ್ಮನ ಉದ್ದೇಶವನ್ನು ಅರಿತು ತಾನೂ

ಆ ಬ್ರಹ್ಮ ನಿರ್ಮಿತ ಸೃಷ್ಟಿಯ ಘಟಕನಾದುದರಿಂದ ತನ್ನ ಆಯುಷ್ಯವನ್ನು ಆ ಬ್ರಹ್ಮನ ಉದ್ದೇಶದ ಸಾಫಲ್ಯಕ್ಕಾಗಿ ಕಳೆಯುವನು. ಎಂದರೆ, ಯಜ್ಞಪ್ರತಿಷ್ಠಿತನಾಗುವನು (೩-೧೫). ಹೀಗೆ ಮಾಡುವದರಿಂದ ತನ್ನ ಶಕ್ತ್ಯನುಸಾರವಾಗಿ ಅವನು ಬ್ರಹ್ಮನೊಂದಿಗೆ ಸಮರಸನಾಗಿ ತನ್ನಲ್ಲಿಯೇ ಬ್ರಹ್ಮಸ್ವಭಾವದ ಪೂರ್ಣ ಅನುಭವವನ್ನು ಪಡೆಯುವನು. ಆದುದರಿಂದ ಅವನಿಗೆ ಬ್ರಹ್ಮಪ್ರಾಪ್ತಿಯಾಗುವದೆಂದು ಹೇಳಿದುದು. **ಜೀವನೇ ಬ್ರಹ್ಮನಾಗುವನೆಂದೂ ಅವನ ಹೊರಗೆ ಬ್ರಹ್ಮನು ಉಳಿಯುವದಿಲ್ಲವೆಂದೂ ಅಥವಾ ಉಪ್ಪಿನ ರೂಪನಾದ ಜೀವನು ಬ್ರಹ್ಮರೂಪ ಮಹಾಸಾಗರವನ್ನು ಹುಡುಕಹೋಗಿ ಅದರಲ್ಲಿಯೇ ಕರಗಿ ಹೋಗುವನೆಂದೂ ಇದಕ್ಕೆ ಅರ್ಥವಲ್ಲ.**

**ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯಮವ್ಯಯಃ ।**
**ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥ ೩೧ ॥**

ಮೇಲಿನ ಶ್ಲೋಕದಲ್ಲಿ ಹೇಳಿದಂತೆ ಬ್ರಹ್ಮಪದವನ್ನು ಪಡೆದರೂ ಜೀವಾತ್ಮನಿಗೆ ತನ್ನ ಧ್ಯೇಯನಾದ ಪುರುಷೋತ್ತಮನ ವಿಷಯದಲ್ಲಿ ಕರ್ತವ್ಯವು ಇದ್ದೇ ಇರುವದು. ಆ ಪರಮಾತ್ಮನ ಸಂಬಂಧವಾಗಿ ಈ ಶ್ಲೋಕದಲ್ಲಿ ಹೇಳಿದೆ.

ಪರಮಾತ್ಮನಿಗೆ ಆದಿಯಿಲ್ಲ; ಬ್ರಹ್ಮನಿಗೆ ಆದಿಯುಂಟು. ಪರಮೇಶ್ವರನು ನಿರ್ಗುಣನು; ಬ್ರಹ್ಮನು ಸಗುಣನು. ಆದುದರಿಂದ ಇವನೇ ಎಲ್ಲ ಆತ್ಮಗಳನ್ನು ಮೀರಿದಂಥ ಪರಮಾತ್ಮನು. ಬ್ರಹ್ಮ ಮೊದಲಾದ ಸಕಲ (ಸಂ-)ಭೂತ ವ್ಯಕ್ತಿಗಳಿಗೂ ಇವನೇ ಮಹೇಶ್ವರನೆನಿಸುವನು. ಮಹೇಶ್ವರನಾದುದರಿಂದ ಅವನ ಇಚ್ಛೆಗಾಗಲಿ ಸಂಕಲ್ಪಕ್ಕಾಗಲಿ ಸೃಷ್ಟಿಯಲ್ಲಿ ಆತಂಕವೂ ವಿರೋಧವೂ ಇರುವದಿಲ್ಲ. ಆದುದರಿಂದ ಈತನು ಅವ್ಯಯನೆನಿಸುವನು. ಇಷ್ಟು ನಿರಂಕುಶವಾದ ಅಧಿಕಾರದಿಂದ ಯುಕ್ತನಾದ ಸೃಷ್ಟಿಯ ಒಡೆಯನು ಒಂದೊಂದು ಜೀವದ ಶರೀರದಲ್ಲಿಯೂ ಸಹವಾಸಿಯಾಗಿ ಇರುವನು. ಆ ಶರೀರಕ್ಕೆ ಪ್ರಭುವಾದ ಜೀವನ ಪುರುಷಪ್ರಕೃತಿಗಳ ವ್ಯವಹಾರದಲ್ಲಿ ಕೈ ಹಾಕುವದಿಲ್ಲ. ಅಲ್ಲಿ ತಾನು ಕೇವಲ ಅಕರ್ತನಾಗಿ ವಾಸಿಸುವನು; ಮತ್ತು

ಅಲ್ಲಿ ನಡೆಯುವ ಎಲ್ಲ ಸಂಗತಿಗಳ ವಿಷಯದಲ್ಲಿ ಉದಾಸೀನ ಭಾವವನ್ನು ತಳೆದು ನಿರ್ಲಿಪ್ತನಾಗಿ ಇರುವನು.

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ**
**ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ ॥೩೨॥**

ತನ್ನ ಅಧಿಕಾರವೂ ವ್ಯಾಪ್ತಿಯೂ ಎಲ್ಲ ಕಡೆಯಲ್ಲಿ ಇದ್ದರೂ ಪುರುಷೋತ್ತಮನು ತಾನು ಹೇಗೆ ಅಕರ್ತನಾಗಿರುವನೆಂಬದನ್ನು ಇಲ್ಲಿ ಹೇಳಿದೆ. ಆಕಾಶವು ಎಲ್ಲೆಲ್ಲಿಯೂ ಹಬ್ಬಿಕೊಂಡಿದ್ದು ಅತ್ಯಂತ ಸೂಕ್ಷ್ಮವಾದುದರಿಂದ ಮತ್ತಾವ ವಸ್ತುವಿನ ವ್ಯಾಪಾರಕ್ಕೂ ಅಡ್ಡಿಯಾಗದಿರುವಂತೆ ಪರಮಾತ್ಮನು ಎಲ್ಲ ದೇಹಗಳನ್ನು ವ್ಯಾಪಿಸಿದ್ದರೂ ಆ ದೇಹದೊಳಗೆ ನಡೆಯುವ ವ್ಯಾಪಾರಗಳಿಂದ ತಾನು ನಿರ್ಲಿಪ್ತನಾಗಿರುವನು.

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥೩೩॥**

ಒಬ್ಬನೇ ಸೂರ್ಯನು ಅಖಿಲಜಗತ್ತನ್ನು ಬೆಳಗುವಂತೆ ಕ್ಷೇತ್ರಜ್ಞನು ಎಲ್ಲ ಕ್ಷೇತ್ರಗಳನ್ನೂ ಬೆಳಗುವನು.

**ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ ।**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಂ ॥೩೪॥**

ಪುರುಷ ಪ್ರಕೃತಿಯುಕ್ತವಾದ ಕ್ಷೇತ್ರ, ಹಾಗು ಪುರುಷೋತ್ತಮರೂಪನಾದ ಕ್ಷೇತ್ರಜ್ಞ ಇವರೊಳಗಿರುವ ಅಂತರವನ್ನು ಗೀತೆಯಲ್ಲಿ ವಿವರಿಸಿದಂತೆ ಜ್ಞಾನಚಕ್ಷುವಿನಿಂದ ಗಮನಿಸಬೇಕು. ಹೀಗೆ ಜ್ಞಾನಚಕ್ಷುವಿನಿಂದ ತಿಳಿಯದಿದ್ದರೆ ಪುರುಷಪ್ರಕೃತಿಗಳು ಸಾಪೇಕ್ಷವಾಗಿ ಪರಮೇಶ್ವರನಿಂದ ಏಕೆ ಉಂಟುಮಾಡಲ್ಪಟ್ಟವೆಂಬದು ಲಕ್ಷ್ಯಕ್ಕೆ ಬಾರದು. ಕೇವಲ ಚರ್ಮಚಕ್ಷುವಿನಿಂದ ನೋಡಿದರೆ ಜಡಸ್ವಭಾವವೇ ಪ್ರಕೃತಿಯೆಂದೂ ಚಿತ್ಸ್ವಭಾವವೇ ಪುರುಷನೆಂದೂ ಕಾಣಿಸುವದಲ್ಲದೆ, ಆ ದೃಶ್ಯವನ್ನು ಆಧಾರವಾಗಿಟ್ಟುಕೊಂಡು ಒಂದು ಭವ್ಯವಾದ ತತ್ವಜ್ಞಾನವನ್ನು ಅದರಿಂದಲೇ

ರಚಿಸಬಹುದು. ಆದರೆ ಹೀಗೆ ಮಾಡುವದರಿಂದ ಸೃಷ್ಟಿಯ ಗೂಢವನ್ನು ನಿಶ್ಶೇಷವಾಗಿ ತಿಳಿಯುವದು ಅಸಾಧ್ಯವು.

**ಭೂತಪ್ರಕೃತಿ ಎಂದರೇನು (೮-೩-೪)? ಅದರಿಂದ ಮುಕ್ತ ನಾಗುವದು ಹೇಗೆ? ಎಂಬದನ್ನು ತಿಳಿಯುವದಕ್ಕಾದರೂ ಜ್ಞಾನ ದೃಷ್ಟಿಯು ಅವಶ್ಯವು.** ಎಂದರೆ, ಈ ಮೊದಲು ಬೋಧಿಸಿದಂತೆ ಭೂತ ಪ್ರಕೃತಿಯು ಪುರುಷನಿಗೆ ತಟ್ಟಿದ ಯಾವುದೋ ಒಂದು ಅನಾಹೂತವಾದ ಉಪಾಧಿಯಲ್ಲ ಅಥವಾ ರೋಗವಲ್ಲ. ಅದು ಅವನಿಗೆ ಪರಮೇಶ್ವರನಿಂದ ಪ್ರಾಪ್ತವಾದ ಶುಭಪ್ರಾಯವಾದ ವರವಾಗಿದೆ. ಭೂತಪ್ರಕೃತಿಯ ವಿಕಾಸವು ಬ್ರಹ್ಮನು ಮೊದಲುಗೊಂಡು ಅತಿಕ್ಷುದ್ರವಾದ ಕ್ಷೇತ್ರದ ವರೆಗೂ ಹರಡಿ ಕೊಂಡಿದೆ ಈ ವಿಕಾಸವು ಸೃಷ್ಟಿಯನ್ನುಂಟುಮಾಡಿದ ಪುರುಷೋತ್ತಮನ ಕಾರ್ಯಸಿದ್ಧಿಗೋಸುಗ ಆಗಿದೆ. ವಿಪರೀತವಾಗಿ ಪರಿಣಮಿಸದೆ ಆ ಕಾರ್ಯ ಸಿದ್ಧಿಗಾಗಿಯೇ ಈ ಪ್ರಕೃತಿಯ ವಿಸ್ತಾರವು ಎಷ್ಟು ಹೆಚ್ಚಿದರೂ ಅದರಿಂದ ಬಂಧನವು ಉಂಟಾಗುವದೆಂಬ ಭಯವಿಲ್ಲ. ಭೂತಪ್ರಕೃತಿಯಿಂದ ಪಡೆಯ ಬೇಕಾದ ಮುಕ್ತಿಯು ಇಂಥ ಬಂಧನಮುಕ್ತಿಯೇ ಸರಿ. **ಜೀವಭೂತನು ಮುಕ್ತನಾಗುವದೆಂದರೆ ಭೂತಪ್ರಕೃತಿಯಿಂದ ಓಡಿಹೋಗುವದಲ್ಲ. ಆದರೆ ಅದರಲ್ಲಿಯೇ ನಿಸ್ಸೀಮವಾಗಿ ವ್ಯವಹರಿಸಿ, ಗೀತೆಯಲ್ಲಿ ಹೇಳಿದ ಹಾಗೆ ಅದರ ಬಂಧನಕಾರಕ ಪರಿಣಾಮದಿಂದ ನಿರಂತರವೂ ಮುಕ್ತ ನಾಗಿರುವದು.** ಭಗವದ್ಗೀತೆಯ ಉಪದೇಶದಂತೆ ಜ್ಞಾನಚಕ್ಷುವಿನಿಂದ ನಿರೀಕ್ಷಿಸುವವರಿಗೆ ಈ ವಿಷಯಗಳು ಬೋಧವಾಗದೆ ಇರಲಾರವು; ಮತ್ತು ಇದನ್ನು ತಿಳಿದವರು ಪರಮಗತಿಯನ್ನು ಪಡೆಯುವರು.

**ಹದಿಮೂರನೆಯ ಅಧ್ಯಾಯವು ಸಮಾಪ್ತವು.**

————

ಓಂ

# ಹದಿನಾಲ್ಕನೆಯ ಅಧ್ಯಾಯವು

ಶ್ರೀಭಗವಾನ್ ಉವಾಚ—

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಂ ।**
**ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥ ೧ ॥**

ಹದಿಮೂರನೆಯ ಅಧ್ಯಾಯದಲ್ಲಿ ಕ್ಷೇತ್ರವನ್ನೂ ಕ್ಷೇತ್ರಜ್ಞನನ್ನೂ ಕುರಿತು ಸಂಪೂರ್ಣವಾಗಿ ವಿವೇಚಿಸಿದುದಾಯಿತು. ಕ್ಷೇತ್ರಸ್ಥ ಪುರುಷನು ಸುಖಕ್ಕೆಳಸಿ ತನ್ನ ಪ್ರಕೃತಿಯು ಹರಡಿದ ಗುಣಗಳೆಂಬ ಬಲೆಯಲ್ಲಿ ಹೇಗೆ ಬೀಳುವನೆಂಬದನ್ನೂ ಅವನಿಗೆ ಅದರಿಂದ ಸದಸದ್ಯೋನಿಗಳು ಹೇಗೆ ಪ್ರಾಪ್ತವಾಗುವವೆಂಬದನ್ನೂ ತಿಳುಹಿದುದಾಯಿತು. ಇನ್ನು ಈ ಅಧ್ಯಾಯದಲ್ಲಿ ಪ್ರಕೃತಿಯ ಗುಣಗಳು ಯಾವವು, ಅವುಗಳ ಆಟದ ಪ್ರಕಾರವೇನು ಈ ಮೊದಲಾದ ಸಂಗತಿಗಳು ಸವಿಸ್ತಾರವಾಗಿ ಹೇಳಲ್ಪಡುವವು. ಈ ನಡೆದಿರುವ ಜ್ಞಾನವಿಜ್ಞಾನ ನಿರೂಪಣದಲ್ಲಿ ಈ ವಿವರಣವೆಲ್ಲ ಜ್ಞಾನವಿಭಾಗಕ್ಕೆ ಸೇರಿದೆ. ಇಲ್ಲಿ ಜ್ಞಾನವೆಂದರೆ ಅರ್ಜುನನು ಈ ವರೆಗೆ ಅರಿತ ಸರ್ವಸಾಧಾರಣ ಜ್ಞಾನವಲ್ಲ. ಇದರ ಮಹತ್ವವು ಬಹಳ ಹೆಚ್ಚಿನದಾಗಿದೆ. ಮಿಗಿಲಾದ ಮತ್ತು ಉತ್ತಮವಾದ ಈ ಜ್ಞಾನವನ್ನು ಸಂಪಾದಿಸಿ ಮುನಿಗಳೆಲ್ಲರೂ ಪರಮಸಿದ್ಧಿಯನ್ನೈದಿರುವರು.

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥ ೨ ॥**

**ಈ ಜ್ಞಾನವೇ ಸೃಷ್ಟಿಗೆ ಧರ್ಮವಾಗಿದೆ.** ಪುರುಷೋತ್ತಮ ಶ್ರೀಕೃಷ್ಣನೇ ಈ ಸೃಷ್ಟಿಯನ್ನುಂಟುಮಾಡಿರುವದರಿಂದ ಸೃಷ್ಟಿಯಲ್ಲಿ ಧರ್ಮ

ವಾದುದು ಅವನ ಧರ್ಮವೆಂದೇ ಎನಿಸುವದು. **ಈ ಧರ್ಮವನ್ನು ಆಚರಿಸುವವರು ಕೊನೆಗೆ ಶ್ರೀಕೃಷ್ಣನಲ್ಲಿ ಸಹಧರ್ಮವನ್ನು ಪಡೆಯುವರು.** ಹೀಗೆ ಅವನ ಸಹಧರ್ಮವನ್ನು ಸಾಧಿಸುವದರಿಂದ ಈ ಸೃಷ್ಟಿಸಂಸಾರದಲ್ಲಿ ಅವರಿಗೆ ಪುನರ್ಜನ್ಮದ ಬಾಧೆಯು ತಟ್ಟದು. ಮತ್ತು ಮರಣಸಮಯದಲ್ಲಿ ದುಃಖವು ಆಗಲಾರದು. ಇಲ್ಲಿ ಗಮನಿಸಬೇಕಾದುದು ಏನೆಂದರೆ, ದುಃಖವು ಆಗದಿದ್ದರೂ ಅವರಿಗೆ ಮರಣದ ಸಂಭವವುಂಟು. ಆದರೆ ಇಂಥವರಿಗೆ ಜನ್ಮವಿಲ್ಲದಿದ್ದ ಬಳಿಕ ಮರಣವೆಲ್ಲಿಯದು? ಇದಕ್ಕಾಗಿ ಬಂಧನಮುಕ್ತವಾದ ಪುನರ್ಜನ್ಮವು ತಪ್ಪಿದನಂತರವೂ ಪರಮೇಶ್ವರನ ಕಾರ್ಯಸಿದ್ಧಿಗಾಗಿ ಮುಕ್ತ ಜೀವನಿಗೆ ಸೃಷ್ಟಿಯಲ್ಲಿ ದುಃಖವಿಲ್ಲದ ಜನ್ಮಗಳು ಪ್ರಾಪ್ತವಾಗುವ ಸಂಭವವುಂಟು. ಇಂಥಕಾರಣಕ್ಕಾಗಿ ಜನ್ಮವೆತ್ತುವದು ಅನವಶ್ಯವೆಂದು ಆಗ್ರಹಪೂರ್ವಕವಾಗಿ ಸರ್ವತ್ರವೂ ಪ್ರತಿಪಾದಿಸಲ್ಪಡುವದು. ಆದರೆ ಈ ಶ್ಲೋಕದಲ್ಲಿಯೂ ಅನ್ಯತ್ರವೂ ಗೀತೆಯ ಮತವು ಹಾಗಿದ್ದಂತೆ ತೋರುವದಿಲ್ಲ. ಇದಲ್ಲದೆ ಮುಕ್ತನಾದ ಜೀವನಿಗೆ ಜನ್ಮ ಮರಣದ ಭಯವು ಯಾಕೆ ತೋರಬೇಕೆಂಬುವದೇ ನಮಗೆ ತಿಳಿಯದ ಮಾತು. ಗೀತೆಯಲ್ಲಿ ಅಭಯವು—ಮುಕ್ತನಿಗೆ ಮಾತ್ರವಲ್ಲ—ದೈವೀಸಂಪತ್ತಿನ ಸಾಧಾರಣ ಮನುಷ್ಯನಿಗೂ ಮುಖ್ಯ ಲಕ್ಷಣವೆಂದು ಹೇಳಿದೆ. ಯಾವ ಜನ್ಮದಲ್ಲಿ ಜೀವನು ಮುಕ್ತಿಯನ್ನು ಸಾಧಿಸುವನೋ ಆ ಜನ್ಮದ ಮೃತ್ಯುವನ್ನನುಲಕ್ಷಿಸಿಯೇ ಇಲ್ಲಿ ಉಲ್ಲೇಖವಿರುವದೆಂದು ಅರ್ಥ ಮಾಡಬಹುದು. ಆದರೆ ಹೀಗೆ ಅರ್ಥ ಮಾಡಲಿಕ್ಕೆ ಈ ಶ್ಲೋಕದಲ್ಲಿ ಆಧಾರವಿದ್ದಂತೆ ಕಾಣಿಸುವದಿಲ್ಲ.

ಈ ಶ್ಲೋಕದೊಳಗಿನ ಸರ್ಗ ಹಾಗು ಪ್ರಲಯವೆಂಬ ಶಬ್ದಗಳನ್ನು ಶ್ರೀಕೃಷ್ಣನಲ್ಲಿ ಸಹಧರ್ಮವನ್ನು ಪಡೆದ ವ್ಯಕ್ತಿಯನ್ನನುಲಕ್ಷಿಸಿ ಉಪಯೋಗಿಸಿದೆ. ಹೀಗಿದ್ದರೂ ಅವುಗಳಿಗೆ ಕೆಲವರು ಸೃಷ್ಟಿಯ ಉತ್ಪತ್ತಿ ಮತ್ತು ಪ್ರಲಯಗಳೆಂದು ಅರ್ಥಮಾಡುವರು. ಯಾವನು ಸೃಷ್ಟಿಯ ಆದಿಯಲ್ಲಿ ಹುಟ್ಟುವದಿಲ್ಲವೋ ಅವನಿಗೆ— ದುಃಖವಿರಹಿತವಾದರೂ— ಪ್ರಲಯದ ಸ್ವಪ್ನವು ಯಾಕೆ ಬೀಳಬೇಕೆಂಬದು ನಮಗೆ ಊಹಿಸಲಿಕ್ಕಾಗುವದಿಲ್ಲ. ಇದೂ ಅಲ್ಲದೆ ಸೃಷ್ಟಿಯಲ್ಲಿ ಹುಟ್ಟಿ ಕರ್ಮದ ನಿಬಿಡವಾದ ಜಾಲದಲ್ಲಿ ಸಿಲುಕಿದ ಜೀವವನ್ನು ಕುರಿತು ಬೋಧಿಸುವಾಗ ಆ ಸೃಷ್ಟಿಯ ಆದಿಅಂತಗಳನ್ನು

ಮೇಲಿನ ಸಂಗತಿಗಳನ್ನು ಶ್ರೀಕೃಷ್ಣನು ಅರ್ಜುನನಿಗೆ ಹೇಳುವನೆಂಬುದು ನಮಗೆ ಸರಿದೋರುವದಿಲ್ಲ. ಸಜೀವ ಸ್ಥಿತಿಯಲ್ಲಿಯೇ ಸಹಧರ್ಮವನ್ನು ಸಾಧಿಸಿದ ಜೀವವನ್ನು ಕುರಿತು ಇಲ್ಲಿ ಹೇಳಿರುವದರಿಂದ **ಸರ್ಗವೆಂದರೆ ಅವನಿಗೆ ಕರ್ಮಬಂಧನದಿಂದ ಪ್ರಾಪ್ತವಾಗುವ ಜನ್ಮಪರಂಪರೆಯೆಂದೂ ಪ್ರಲಯವೆಂದರೆ ಆ ಜನ್ಮಗಳ ಅಂತಕಾಲಕ್ಕೊದಗುವ ಮರಣವೆಂದೂ** ಉದ್ದಿಷ್ಟವಿದ್ದಂತೆ ನಮಗೆ ತೋರುವದು. ಜೀವನು ವರ್ತಮಾನದ ಕರ್ಮ ಬಂಧನದಿಂದ ಮುಕ್ತನಾದರೂ ತತ್ಕ್ಷಣವೇ ಅವನಿಗೆ ಪುನರ್ಜನ್ಮದಿಂದ ಮುಕ್ತಿದೊರೆಯುವದಿಲ್ಲ. ಮುಂದೆ ಅನೇಕ ಜನ್ಮಗಳಲ್ಲಿ ತನ್ನ ಸಿದ್ಧತೆಯನ್ನು ಮಾಡಿಕೊಂಡು (೬-೪೫) ತದನಂತರದಲ್ಲಿ ಕೊನೆಯ ಮುಕ್ತಿಯನ್ನು ಅವನು ಪಡೆಯುವನೆಂದು ಗೀತೆಯಲ್ಲಿ ಹೇಳಿದೆ ಆದುದರಿಂದ ಕರ್ಮಬಂಧನದಿಂದ ವಿಮುಕ್ತನಾದವನಿಗಾದರೂ (ಮುಕ್ತನಿಗಾದರೂ) ಜನ್ಮಮರಣಗಳು ಕೆಲ ಕಾಲ ತಪ್ಪುವದಿಲ್ಲ. ಇಷ್ಟೇ ಅಲ್ಲ. ಈ ಜನ್ಮಮರಣಗಳನ್ನು ಎದುರಿಸಿ ತಾನು ಅವುಗಳನ್ನು ಜಯಿಸಿ ನಿರ್ಭಯನಾಗಿರುವದನ್ನು ತೋರಿಸಬೇಕಾಗುವದು. ಇಂಥ ಜನ್ಮಮರಣಗಳ ಉಲ್ಲೇಖವೇ ಈ ಶ್ಲೋಕದಲ್ಲಿ ಬಂದಿದೆಯೆಂದು ನಮ್ಮ ನಂಬುಗೆ.

**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಂ ।**
**ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥ ೩ ॥**

ಶ್ರೀ ಕೃಷ್ಣಪುರುಷೋತ್ತಮನು ತನ್ನ ಎರಡು ವಿಧವಾದ ಯೋನಿಗಳನ್ನು ಏಳನೆಯ ಅಧ್ಯಾಯದಲ್ಲಿ ಹೇಳಿರುವನು. ಅವೆರಡು ಯೋನಿಗಳೊಳಗೆ ಪರಾಯೋನಿಯು ಬ್ರಹ್ಮಸಂಜ್ಞಿತವೆಂದು ನಾವು ತೋರಿಸಿರುವೆವು. ಇಲ್ಲಿ ಮಹತ್‌ಬ್ರಹ್ಮವು ತನ್ನ ಯೋನಿಯಾಗಿದೆಯೆಂದು ಶ್ರೀಕೃಷ್ಣನು ಹೇಳುತ್ತಾನೆ. ಒಂದಾಗಿ, ಅಪರಾ ಮತ್ತು ಪರಾಯೋನಿಗಳಲ್ಲದ ಮತ್ತೊಂದು ಯೋನಿಯನ್ನು ಊಹಿಸಬೇಕು. ಇಲ್ಲವಾದರೆ ಈ ಪರಾ ಮತ್ತು ಅಪರಾ ಯೋನಿಗಳನ್ನು ಮಹತ್ ಬ್ರಹ್ಮವೆಂದು ಹೇಳಿರಬೇಕು. ಇವುಗಳಲ್ಲಿ ಪರಾ ಯೋನಿಯನ್ನೇ ಬ್ರಹ್ಮ ಎಂದು ಹೇಳುವರು; ಮತ್ತು ಅಪರಾಯೋನಿಯು ಕನಿಷ್ಠವಾಗಿದ್ದು ಪರಾಯೋನಿಯಲ್ಲಿ ಅಂತರ್ಭೂತವಾಗುವದರಿಂದ **ಪರಾ**

**ಮತ್ತು ಅಪರಾ ಈ ಎರಡು ಯೋನಿಗಳನ್ನೂ ಒಂದಾಗಿ ಎಣಿಸಿದರೆ ಅವುಗಳಿಗೆ ಮಹತ್‌ಬ್ರಹ್ಮವೆಂಬ ಹೆಸರು ಸಾರ್ಥಕವಾಗಿದೆ.** ಈ ಯೋನಿಯಲ್ಲಿ ಶ್ರೀಕೃಷ್ಣನು ತಾನು ಗರ್ಭವಿಡುವನೆಂದು ಹೇಳುವದಕ್ಕೆ ಅರ್ಥವೇನಿರಬಹುದು? ಯೋನಿಯೂ ತತ್ಸಂಬಂಧವಾದ ಗರ್ಭಧಾರಣದ ಪ್ರಕಾರವೂ ಇಲ್ಲಿ ಸಂಭವಿಸುವದು ಶಕ್ಯವಲ್ಲ. ನಮಗೆ ತೋರುವದೇನೆಂದರೆ, ಬ್ರಹ್ಮನನ್ನು ತನ್ನಲ್ಲಿ ಸಂಕಲ್ಪದಿಂದ ಹುಟ್ಟಿಸಿ ಅವನಲ್ಲಿ ಸೃಷ್ಟ್ಯುತ್ಪತ್ತಿ ಕಾರ್ಯದ ಪ್ರೇರಣೆಯನ್ನು ತಾನೇ ಮಾಡಿರುವನೆಂಬುದನ್ನು ತನ್ನ ಯೋನಿಯಲ್ಲಿ ತಾನೇ ಗರ್ಭಧರಿಸಿದನೆಂದು ಆಲಂಕಾರಿಕ ಭಾಷೆಯಲ್ಲಿ ಶ್ರೀಕೃಷ್ಣನು ಹೇಳುವನು. ಆತನ ಪ್ರೇರಣೆಯಿಂದಲೇ ಮುಂದೆ ಬ್ರಹ್ಮನ ಹೊಟ್ಟೆಯಲ್ಲಿ ಸೃಷ್ಟಿಯೊಳಗಿನ ಎಲ್ಲ ಸ್ಥಾವರ ಜಂಗಮ ವಸ್ತುಗಳೂ ಜನಿಸುವವು ಮತ್ತು ಸೃಷ್ಟಿಚಕ್ರವು ತಿರುಗತೊಡಗುವದು.

**ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ।**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥೪॥**

ಸೃಷ್ಟಿಯೊಳಗೆ ಪ್ರತ್ಯಕ್ಷವಾದ ಯೋನಿಗಳೊಳಗಿಂದ ಹುಟ್ಟುವ ಮೂರ್ತಿಗಳೆಲ್ಲ ಬ್ರಹ್ಮನಲ್ಲಿ ಅಂದರೆ ಪರಮೇಶ್ವರನ ಯೋನಿಯಲ್ಲಿ ಉಂಟಾಗುವವು. ಅವುಗಳ ಉತ್ಪತ್ತಿಗಾಗಿ ಸಂಕಲ್ಪವನ್ನು ಮಾಡಿದವನು ಬ್ರಹ್ಮನಲ್ಲ, ಪುರುಷೋತ್ತಮನು. ಇನ್ನೂ ಅಲ್ಲದೆ ಆ ಮೂರ್ತಿಗಳು ಹುಟ್ಟುವದು ಬ್ರಹ್ಮನಿಗಾಗಿ ಅಲ್ಲ; ಪುರುಷೋತ್ತಮನ ಕಾರ್ಯಕ್ಕಾಗಿ; ಆದುದರಿಂದ ಆವನು ಅವುಗಳಿಗೆ ನಿಜವಾಗಿಯೂ ಜನ್ಮದಾತನಾದ ಪಿತನು.

**ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಂ ॥೫॥**

ಸತ್ವ ರಜ ತಮೋಗುಣಗಳು ಪ್ರಕೃತಿಯಿಂದ ಹುಟ್ಟಿದ್ದು, ಸವಿಕಾರ ಕ್ಷೇತ್ರವೆನಿಸುವ ಶರೀರದಲ್ಲಿ ವಾಸವಾಗಿರುವ ಅವ್ಯಯನೆಂದು ಹೇಳಲ್ಪಡುವ ಪುರುಷನನ್ನು ಬಂಧಿಸುವವು. ಆತ್ಮಸ್ವಭಾವವು ಅವ್ಯಯವಾದರೂ ಜೀವ

ಪುರುಷನು ಬಾಧಿಸಲ್ಪಡುವನೆಂಬದು ಗೀತೆಯ ಮತವು. ಆತ್ಮವು ಅವಿಕಾರ್ಯರೂಪವಾದುದರಿಂದ ಅದಕ್ಕೆ ಉಪಾಧಿ ಇಲ್ಲವೆಂಬುವ ವೇದಾಂತಿಗಳು ಇದನ್ನು ಲಕ್ಷಿಸಬೇಕು.

**ತತ್ರ ಸತ್ತ್ವಂ ನಿರ್ಮಲತ್ವಾತ್ಪ್ರಕಾಶಕಮನಾಮಯಂ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥ ೬ ॥**

ಇವುಗಳಲ್ಲಿ ನಿರ್ಮಲವೂ ಜ್ಞಾನವೃದ್ಧಿಕರವೂ ದುಃಖರಹಿತವೂ ಆದ ಸತ್ವಗುಣವು ಪುರುಷನನ್ನು ಸುಖದ ಮತ್ತು ಜ್ಞಾನದ ಆಸಕ್ತಿಯಿಂದ ಬಂಧಿಸುವದು.

**ರಜೋ ರಾಗಾತ್ಮಕಂ ವಿದ್ಧಿ ತೃಷಾಸಂಗಸಮುದ್ಭವಂ ।**
**ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಂ ॥ ೭ ॥**

ರಜೋಗುಣದ ಸ್ವಭಾವವು ಪ್ರೇಮರೂಪವಾಗಿದೆ. ತೃಷ್ಣೆಯಿಂದಲೂ ಆಸಕ್ತಿಯಿಂದಲೂ ಹುಟ್ಟಿದ ರಜೋಗುಣವು ದೇಹದೊಳಗಿರುವ ಪುರುಷನನ್ನು ಕರ್ಮಪ್ರವೃತ್ತಿಯಿಂದಲೂ ಆಸಕ್ತಿಯಿಂದಲೂ ಬಂಧಿಸುವದು.

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಂ ।**
**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥ ೮ ॥**

ತಮೋಗುಣವು ಅಜ್ಞಾನದಿಂದುಂಟಾಗುವದು. ಅದರಿಂದ ಪುರುಷನು ಮೋಹಿತನಾಗುವನು. ಪ್ರಮಾದ, ಆಲಸ್ಯ, ನಿದ್ರೆ ಇವುಗಳಿಂದ ತಮೋಗುಣವು ಪುರುಷನನ್ನು ಬಂಧಿಸುವದು.

**ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥ ೯ ॥**

ಸತ್ವಗುಣವು ಸುಖವನ್ನೂ ರಜೋಗುಣವು ಕರ್ಮಪ್ರವೃತ್ತಿಯನ್ನೂ ತಮೋಗುಣವು ಜ್ಞಾನವನ್ನು ಕವಿದು ಪ್ರಮಾದವನ್ನೂ ಉಂಟುಮಾಡುವವು.

**ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।**
**ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ॥ ೧೦ ॥**

ರಜ ಹಾಗು ತಮೋಗುಣಗಳನ್ನು ಹತ್ತಿಕ್ಕಿ ಸತ್ವಗುಣವು ಮೇಲೆ ಬರುವದು. ಅದೇ ರೀತಿಯಾಗಿ ಸತ್ವ ಮತ್ತು ತಮೋಗುಣಗಳನ್ನು ತಗ್ಗಿಸಿ ರಜೋಗುಣವೂ ಮತ್ತು ಸತ್ವರಜಗಳನ್ನು ತಗ್ಗಿಸಿ ತಮೋಗುಣವೂ ಮೇಲಕ್ಕೆ ಬರುವವು.

ಗುಣಗಳ ತಗ್ಗುವಿಕೆ ಹೆಚ್ಚುವಿಕೆಗಳಿಗೆ ಕಾಲಾವಧಿಯನ್ನಾಗಲಿ ಕಾರಣವನ್ನಾಗಲಿ ಈ ಶ್ಲೋಕದಲ್ಲಿ ಹೇಳಿರುವದಿಲ್ಲ. ಇವು ಆ ಗುಣಗಳ ಸ್ವಭಾವಕ್ಕೆ ಸಹಜಸಿದ್ಧವಾಗಿರುವದರಿಂದಲೇ ಹೇಳಿರುವದಿಲ್ಲವೆಂದು ತೋರುವದು.

**ಸರ್ವದ್ವಾರೇಷು ದೇಹೇಸ್ಮಿನ್ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ ॥ ೧೧ ॥**

ದೇಹದೊಳಗಿನ ಎಲ್ಲ ಕರ್ಮದ್ವಾರಗಳಿಂದ ಅಂದರೆ ಬುದ್ಧಿ, ಅಹಂಕಾರ,ಮನಸ್ಸು ಇಂದ್ರಿಯಗಳಿಂದ ಸಾತ್ವಿಕ ಜ್ಞಾನವು (೧೩-೭,೧೧) ಪ್ರಕಟವಾದಾಗ ಸತ್ವಗುಣವು ವೃದ್ಧಿಯಾಗಿದೆಯೆಂದು ತಿಳಿಯಬೇಕು.

**ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ॥ ೧೨ ॥**

ಲೋಭವೂ ಕರ್ಮಮಾಡುವ ಆತುರತೆಯೂ ಅತೃಪ್ತಿಯೂ ಫಲಾಸಕ್ತಿಯೂ ಪ್ರಕಟವಾದಾಗ ರಜೋಗುಣವು ವೃದ್ಧಿಯಾಗಿರುತ್ತದೆ.

**ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ ॥ ೧೩ ॥**

ಅಜ್ಞಾನವೂ ಕರ್ಮದಿಂದ ಪರಾಙ್ಮುಖತೆಯೂ ಪ್ರಮಾದವೂ ಭ್ರಾಂತಿಯೂ ಪ್ರಕಟವಾದಾಗ ತಮೋಗುಣದ ವೃದ್ಧಿಯಾಗಿರುತ್ತದೆ.

**ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾನಮಲಾನ್ಪ್ರತಿಪದ್ಯತೇ ॥ ೧೪ ॥**

ದೇಹಧಾರಿಯಾದವನಿಗೆ ಸತ್ವಗುಣದ ಉತ್ಕರ್ಷಕಾಲದಲ್ಲಿ ಮರಣವು ಪ್ರಾಪ್ತವಾದರೆ ಆವನು ಉತ್ತಮರಾದ ಜ್ಞಾನಿಗಳು ಹೋಗುವ ಲೋಕಕ್ಕೆ ಹೋಗುವನು. ಮರಣೋತ್ತರವೂ ಜೀವಾತ್ಮನ ವ್ಯಕ್ತಿತ್ವವು ನಿಲ್ಲುವ ದೆಂಬು ಈ ಶ್ಲೋಕದಿಂದ ಸ್ಪಷ್ಟವಾಗಿ ಕಾಣಿಸುವದು. ಮರಣ ಸಮಯ ದಲ್ಲಿ ದೇಹವನ್ನು ಬಿಟ್ಟ ಚಿತಾಸ್ವಭಾವವು ಪರಮಾತ್ಮನ ಅಖಂಡ ಚಿತಾ ಸ್ವಭಾವದಲ್ಲಿ ಲೀನವಾಗುವದೆಂದು ಕೆಲವರು ವೇದಾಂತಿಗಳು ಆಗ್ರಹದಿಂದ ಪ್ರತಿಪಾದಿಸುವದುಂಟು. ಆದರೆ ಈ ಮತವು ಗೀತೆಗೆ ಸಮ್ಮತವಿದ್ದಂತೆ ತೋರುವದಿಲ್ಲ.

**ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ।೧೫॥**

ರಜೋಗುಣದ ಉತ್ಕರ್ಷಕಾಲದಲ್ಲಿ ಮೃತ್ಯುವು ಬಂದರೆ ಮನುಷ್ಯನು ಕರ್ಮಾಸಕ್ತಿ ತುಂಬಿರುವವರಲ್ಲಿ ಜನ್ಮವೆತ್ತುವನು. ಹಾಗೆಯೇ ತಮೋ ಗುಣದ ಉತ್ಕರ್ಷಕಾಲದಲ್ಲಿ ಮರಣವು ಬಂದರೆ ಅವನು ಮೂಢ ಯೋನಿ ಗಳಲ್ಲಿ ಹುಟ್ಟುವನು.

ಸವಿಕಾರ ಕ್ಷೇತ್ರದೊಳಗಿನ ಪುರುಷನಿಗೆ ಪ್ರಕೃತಿಯ ಗುಣಗಳ ದೆಸೆ ಯಿಂದ ಪ್ರಾಪ್ತವಾಗುವ ಬಂಧನದ ಬಗ್ಗೆಯೂ ಆ ಬಂಧನಕ್ಕಾಗಿ ಅವನಿಗೆ ಪ್ರಾಪ್ತವಾಗುವ ಸತ್ ಮತ್ತು ಅಸತ್ ಯೋನಿಗಳ ವಿಷಯವಾಗಿಯೂ ೧೩ನೆಯ ಅಧ್ಯಾಯದಲ್ಲಿ ಉಲ್ಲೇಖವು ಬಂದಿರುವದು. ಈ ಎರಡು ಶ್ಲೋಕ ಗಳಲ್ಲಿ ಅದೇ ವಿಷಯವಾಗಿ ತಾತ್ವಿಕ ವಿವೇಚನೆಯು ನಡೆದಿದೆ.

**ಕರ್ಮಣಃ ಸುಕೃತಸ್ಯಾಹುಃ ಸಾತ್ವಿಕಂ ನಿರ್ಮಲಂ ಫಲಂ ।**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಂ ॥ ೧೬ ॥**

ಸತ್ಕರ್ಮಕ್ಕೆ ಬರುವ ಫಲವು ಸಾತ್ವಿಕವಾಗಿಯೂ ನಿರ್ಮಲವಾಗಿಯೂ ಇರುವದು. ರಾಜಸ ಕರ್ಮಕ್ಕೆ ದುಃಖನೇ ಫಲ. ತಾಮಸ ಕರ್ಮಕ್ಕೆ ಅಜ್ಞಾನವೇ ಫಲ.

**ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥೧೭॥**

ಸತ್ವಗುಣದಿಂದ ಜ್ಞಾನವೂ ರಜೋಗುಣದಿಂದ ಲೋಭವೂ ತಮೋ ಗುಣದಿಂದ ಪ್ರಮಾದ, ಮೋಹ ಮತ್ತು ಅಜ್ಞಾನಗಳೂ ಉಂಟಾಗುವವು.

**ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥೧೮॥**

ಸತ್ವಸ್ಥನಾದವನ ಗತಿಯು ಊರ್ಧ್ವವಾಗಿರುವದು. ರಾಜಸನಿಗೆ ಪ್ರಗತಿಯಿಲ್ಲದೆ ಅವನು ಮಧ್ಯದಲ್ಲಿ ಉಳಿಯುವನು; ಮತ್ತು ಹೀನ ಗುಣಿಯಾದ ತಾಮಸನು ಅಧೋಗತಿಗೆ ಜಾರುವನು.

ಈ ಶ್ಲೋಕದ ಅರ್ಥವನ್ನು ಸ್ಥಲವಾಚಕ ಹಾಗು ದಿಗ್ವಾಚಕವಾಗಿ ತಿಳಿದರೆ ಅರ್ಥಹಾನಿಯಾಗುವದೆಂದು ನಮಗೆ ತೋರುವದು. ಜೀವಾತ್ಮನಿಗೆ ಬ್ರಹ್ಮನ ಸೃಷ್ಟಿಯಲ್ಲಿ ತನ್ನ ಪಾಪಪುಣ್ಯಗಳ ಭಾರವನ್ನು ಹೊತ್ತುಕೊಂಡು ಅವ್ಯಾಹತವಾಗಿ ಮಾಡಬೇಕಾಗುವ ಸಂಸಾರದೊಳಗೆ, ಅವನಿಗಾಗುವ ಭಾವ ಮೂಲಕ **ಪ್ರಗತಿಯನ್ನೂ ಅಥವಾ ಪರಾಗತಿಯನ್ನೂ** ಕುರಿತು ಇಲ್ಲಿ ಹೇಳಿದೆಯೆಂದು ನಮ್ಮ ನಂಬುಗೆ. ಈ ಸಂಸಾರದ ಅಂತ್ಯದಲ್ಲಿ ತಾನು ಸೇರಬೇಕಾದ ಧ್ಯೇಯವನ್ನು ಅನುಲಕ್ಷಿಸಿ ಜೀವನು ತನ್ನ ಗುಣಾಧೀನತೆಗಾಗಿ ಆ ಧ್ಯೇಯವನ್ನು ಸಮೀಪಿಸುವದನ್ನೂ ಇಲ್ಲವೆ ಆ ಧ್ಯೇಯದಿಂದ ದೂರ ಸರಿಯುವದನ್ನೂ ಇಲ್ಲಿ ಹೇಳಿದೆ ಆ ಧ್ಯೇಯವನ್ನು ಸಮೀಪಿಸುವ ಶಕ್ತಿಯನ್ನು ತನ್ನ ಪ್ರಯತ್ನದಿಂದ ತನ್ನಲ್ಲಿ ಅಲ್ಪಾಂಶದಿಂದಾದರೂ ವೃದ್ಧಿಪಡಿಸಿಕೊಂಡರೆ, ಮನುಷ್ಯನು ಊರ್ಧ್ವಗತಿಯನ್ನು ಸಾಧಿಸುವನೆಂದು ಗೀತೆಯು ಬಗೆಯುವದು. ಈ ಧ್ಯೇಯವನ್ನು ಕಣ್ಣೆದುರಿಗೆ ಮಾಡಿ ಕೇವಲ ಸತ್ಕರ್ಮಗಳನ್ನೇ ಮಾಡುತ್ತ ತನಗೆ ಚ್ಯುತಿಯುಂಟಾಗದಂತೆ ಮಾಡಿಕೊಳ್ಳುವದು ಜೀವನಿಗೆ ಶಕ್ಯವಾಗಿದೆಯೆಂದು ಗೀತೆಯು ಭಾವಿಸುವದು. ಇದಕ್ಕೆ ಮಧ್ಯಮಸ್ಥಿತಿಯಲ್ಲಿರುವದು ಎಂದು ಹೆಸರು. ಕೇವಲ ಸ್ವಾರ್ಥದಿಂದಲೂ ಪರಹಿತವನ್ನು ದುರ್ಲಕ್ಷ್ಯಮಾಡುವ ನಾಶಕಾರಕ

ತಾಮಸ ವೃತ್ತಿಯಿಂದಲೂ ಜೀವನಿಗೆ ಅಕಲ್ಯಾಣವಾಗುವದು. ಅವನು ಸೃಷ್ಟಿಯೊಳಗಿನ ತನ್ನ ನಿಯತ ಧ್ಯೇಯದಿಂದ ಹೆಚ್ಚು ಹೆಚ್ಚು ಚ್ಯುತ ನಾಗುವ ಕಾರಣ ಇದನ್ನು ಅಧೋಗತಿಯೆಂದು ಹೇಳಿದೆ.

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ ।**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಧಿಗಚ್ಛತಿ ॥ ೧೯ ॥**

ಜೀವನ ಆಧ್ಯಾತ್ಮಿಕ ಪಾತ್ರತೆಯಾಗಲಿ ಪ್ರಗತಿಯಾಗಲಿ ಸತ್ವರಜಸ್ತ ಮೋಗುಣಗಳನ್ನು ಅವಲಂಬಿಸಿರುವವು. ಈ ವಿಷಯದ ಬಗ್ಗೆ ಗೀತೆಯಲ್ಲಿ ಸಂಪೂರ್ಣ ವಿವೇಚನೆಯು ಬಂದಿದೆ. ಪ್ರಕೃತಿಯ ಗುಣಗಳಿಂದ ಕ್ಷೇತ್ರದಲ್ಲಿ ಎಲ್ಲ ಕ್ರಿಯೆಗಳು ನಡೆಯುವವು. ಕರ್ಮಗಳಿಗೆ ಗುಣಗಳೇ ನಿಜವಾದ ಕಾರಣ. ಈ ಗುಣಗಳೇ ಪುರುಷನ ಬಂಧನಕ್ಕೆ ಕಾರಣವಾಗುವವು. ಇದನ್ನು ತಿಳಿದು ಕೊಂಡು, ಈ ಗುಣಗಳಿಗೆ ಮನಸೋಲದೆ ಅವುಗಳ ವಿಷಯದಲ್ಲಿ ಇಚ್ಛಾ-ದ್ವೇಷಗಳನ್ನು ತೊರೆದು ಪುರುಷನು ಬಂಧಮುಕ್ತನಾಗುತ್ತಾನೆ. **ತ್ರಿಗುಣ ಗಳಲ್ಲಿಟ್ಟ ಈ ಬಗೆಯ ಸಮದೃಷ್ಟಿಗೆ ತ್ರಿಗುಣಗಳನ್ನು ದಾಟುವದೆಂದು ಹೆಸರು.** ಈ ಸಮದೃಷ್ಟಿಯನ್ನು ಸಾಧಿಸಲಿಕ್ಕೆ ಈ ಮೊದಲು ಹೇಳಿದಂತೆ ತ್ರಿಗುಣಗಳನ್ನು ಮೀರಿದ ಪುರುಷೋತ್ತಮನನ್ನು ತಿಳಿಯಬೇಕು. ಆತನನ್ನು ತಿಳಿದವನು ಸೃಷ್ಟಿಯೊಳಗಿನ ಆತನ ಭಾವವನ್ನು ಅರಿತು, ಅದನ್ನು ಖಂಡಿತ ವಾಗಿ ಸಲ್ಲಿಸುವನು ಎಂದರೆ ಅವನ ಯಜ್ಞಭೋಕ್ತೃತ್ವ ಹಾಗು ಪ್ರಭುತ್ವ ವನ್ನು ಸಲ್ಲಿಸುವನು.

**ಗುಣಾನೇತಾನತೀತ್ಯ ತ್ರೀನ್ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥ ೨೦ ॥**

ಹೀಗಾದಾಗ ಮನುಷ್ಯನು ತನ್ನ ದೇಹದಲ್ಲಿಯೇ ಉದ್ಭವಿಸುವ ಸತ್ವ ರಜತಮೋಗುಣಗಳ ವಿಕಾರಗಳನ್ನು ದಾಟಿ, ಜನ್ಮ ಮೃತ್ಯು ಜರಾ ದುಃಖ ಗಳಿಂದ ಮುಕ್ತನಾಗುವನಲ್ಲದೆ ಅಮೃತತತ್ವವನ್ನೂ ಅನುಭವಿಸುವನು. ಇದಕ್ಕರ್ಥವೇನೆಂದರೆ, ಜೀವನು ಹೋರಾಡಬೇಕಾಗುವದು ಗುಣಗಳ ತತ್ವದೊಂದಿಗೆ ಅಲ್ಲ; ಆದರೆ ತನ್ನ ದೇಹದಲ್ಲಿಯೇ ಪ್ರಕಟವಾದ ಆ ಗುಣ

ಗಳ ವೃತ್ತಿಗಳೊಂದಿಗೆ. ಗುಣಗಳನ್ನು ಜಯಿಸುವದೆಂದರೆ ಅವುಗಳನ್ನು ನಿರ್ಮೂಲವಾಗಿ ಉಚ್ಛೇದಿಸುವದೆಂದು ಅರ್ಥವಲ್ಲ. ಗುಣಗಳನ್ನು ದಾಟಿದರೂ ಶರೀರದಲ್ಲಿ ನಡೆಯುವ ಅವುಗಳ ವ್ಯಾಪಾರಗಳು ನಡೆಯುತ್ತಲೇ ಇರುವವು ಎಂಬುದನ್ನು ಮರೆಯಕೂಡದು. ಶರೀರದೊಳಗೆ ಪ್ರಕಟವಾಗುವ ಅವುಗಳ ಸ್ವರೂಪವನ್ನು ಕುರಿತು ಅದರಲ್ಲಿ ವಾಸಮಾಡುವ ಜೀವಪುರುಷನು ನಿಸ್ಪೃಹನಾಗಿಯೂ ನಿರ್ವಿಕಾರಿಯಾಗಿಯೂ ಇರಬೇಕು. ಹೀಗಾದರೆ ಜನ್ಮ ಮೃತ್ಯು ಜರಾ ಮುಂತಾದವು ಅವನ ದುಃಖಕ್ಕಾಗಲಿ ಸುಖಕ್ಕಾಗಲಿ ಕಾರಣಗಳಾಗುವದಿಲ್ಲ. ಮತ್ತು ಯಾವ ಸ್ಥಿತಿಯಲ್ಲಿದ್ದರೂ ಅಮೃತತ್ವವನ್ನು ಅವನು ಅನುಭೋಗಿಸುತ್ತಲೇ ಇರುವನು(೨-೧೫).

ಅರ್ಜುನ ಉವಾಚ—

**ಕೈರ್ಲಿಂಗೈಸ್ತ್ರೀನ್ಗುಣಾನೇತಾನತೀತೋ ಭವತಿ ಪ್ರಭೋ ।**
**ಕಿಮಾಚಾರಃ ಕಥಂ ಚೈತಾಂಸ್ತ್ರೀನ್ಗುಣಾನತಿವರ್ತತೇ ॥ ೨೧ ॥**

ಹೀಗೆ ಗುಣಗಳನ್ನು ದಾಟಿದವನನ್ನು ಹೇಗೆ ಗುರುತಿಸಬೇಕು ? ಅವನ ಆಚರಣೆಯು ಹೇಗಿರುವದು? ಅವನು ಮೂರು ಗುಣಗಳನ್ನು ಹೇಗೆ ದಾಟುವನು ? ಎಂದು ಅರ್ಜುನನು ಪ್ರಶ್ನೆಮಾಡುತ್ತಾನೆ.

ಶ್ರೀಭಗವಾನುವಾಚ—

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥ ೨೨ ॥**

ಇಂಥ ಮನುಷ್ಯನನ್ನು ಗುರುತಿಸುವದಕ್ಕೆ ಅವನ ಮನಃಸ್ಥಿತಿಯನ್ನು ನೋಡಬೇಕು. ಅವನಲ್ಲಿ ಸತ್ವಗುಣವೇ ಬೆಳೆಯಲಿ ರಾಜಸವೇ ಬೆಳೆಯಲಿ ತಾಮಸವೇ ಬೆಳೆಯಲಿ ಅವನು ಪ್ರಾಪ್ತವಾದ ಯಾವ ಗುಣವನ್ನೂ ದ್ವೇಷಿಸುವದಿಲ್ಲ. ಅಥವಾ ಅದರಿಂದ ತಾನು ನಿವೃತ್ತನಾಗಬೇಕೆಂಬ ಇಚ್ಛೆಯನ್ನೂ ಹಿಡಿಯುವದಿಲ್ಲ. ಎಂದರೆ, ಅಹಂಕಾರವನ್ನು ಬಿಟ್ಟು ಪುರುಷೋತ್ತಮಾರ್ಪಣ ಬುದ್ಧಿಯಿಂದ ಆ ಗುಣದ ಫಲವನ್ನು ಧೈರ್ಯದಿಂದಲೂ ಶಾಂತಿಯಿಂದಲೂ

ಸಹಿಸುವಾಗ ಅವನ ಮನಸಿನ ಸಮಾಧಾನ ವೃತ್ತಿಯು ಚಲಿಸುವದಿಲ್ಲ ಎಂಬುದೇ ಇದಕ್ಕೆ ಅರ್ಥ.

**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ।**
**ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥ ೨೩ ॥**

ಇಚ್ಛಾ-ದ್ವೇಷಗಳ ವಿಷಯದಲ್ಲಿ ಅವನು ಯಾವ ಪರಿಸ್ಥಿತಿಯಲ್ಲೂ ಉದಾಸೀನನಾಗಿರಬಲ್ಲನು, ಮತ್ತು ಗುಣಗಳ ದೆಸೆಯಿಂದ ಅವನ ಸಮಾಧಾನವೃತ್ತಿಯು ಭಂಗಪಡುವದಿಲ್ಲ. ತನ್ನಲ್ಲಿ ನಡೆಯುವ ಸ್ವಭಾವ ವ್ಯವಹಾರಗಳೆಲ್ಲವನ್ನೂ ಕೇವಲ ಪರಸ್ಪರವಾಗಿ ನಡೆದ ಗುಣಗಳ ಹೋರಾಟವೆಂದು ಬಗೆದು ಅವುಗಳನ್ನು ಲಕ್ಷಿಸದೆ ತಾನು ಪುರುಷೋತ್ತಮನಲ್ಲಿ ಸ್ಥಿರಬುದ್ಧಿಯನ್ನು ಇಟ್ಟಿರುವನು.

**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ।**
**ತುಲ್ಯಪ್ರಿಯಾ ಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥ ೨೪ ॥**

ಈ ರೀತಿಯಾಗಿ ಸುಖದಲ್ಲಿಯೂ ದುಃಖದಲ್ಲಿಯೂ ಯಾವನ ಮನಸ್ಸಿನ ಸಮಾಧಾನವು ಚಲಿಸುವದಿಲ್ಲವೋ, ಮಣ್ಣನ್ನೂ ಬಂಗಾರವನ್ನೂ ಯಾವನು ಸಮನಾಗಿ ನೋಡುವನೋ, ಪ್ರಿಯವನ್ನೂ ಅಪ್ರಿಯವನ್ನೂ ಸಮನಾಗಿ ಭಾವಿಸುವ ಧೈರ್ಯವು ಯಾವನಲ್ಲಿದೆಯೋ ಮತ್ತು ನಿಂದೆಯೂ ಸ್ತುತಿಯೂ ಯಾವನಿಗೆ ಸಮಾನವೋ,

**ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ।**
**ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥ ೨೫ ॥**

ಹಾಗೆಯೇ ಮಾನಾಪಮಾನಗಳನ್ನೂ ಮಿತ್ರಶತ್ರುಗಳನ್ನೂ ಯಾವನು ಸಮನಾಗಿ ನೋಡುವನೋ ತಾನು ಅಂಗೀಕರಿಸಿದ ಎಲ್ಲ ಕಾರ್ಯಗಳಲ್ಲಿ ಅಹಂಕಾರ ಮೂಲಕವಾದ ಕರ್ತೃತ್ವ ಬುದ್ಧಿಯನ್ನು ಯಾವನು ತಾಳುವಬಲ್ಲವೋ ಅಂಥವನನ್ನು ಗುಣಾತೀತನೆಂದು ಹೇಳುವರು.

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥ ೨೬ ॥**

ಮೇಲೆ ಹೇಳಿದ ಗುಣಗಳೆಲ್ಲವನ್ನೂ ಸಾಧಿಸುವ ಉತ್ತಮ ಉಪಾಯ ವೆಂದರೆ ಪುರುಷೋತ್ತಮ ಶ್ರೀಕೃಷ್ಣನಲ್ಲಿ ಭಕ್ತಿಯೇ ಸರಿ. ಮತ್ತಾವ ವಿಷಯದೊಳಗಿನ ತನ್ನ ಪ್ರೀತಿಯೂ ಅದನ್ನು ಸೋಂಕದಂಥ ನಿಷ್ಠೆಯಿಂದ ನನ್ನಲ್ಲಿ ಭಕ್ತಿಯೋಗವನ್ನು ಯಾವನು ಆಚರಿಸುವನೋ **ಅವನೇ ಗುಣ ಗಳನ್ನು ದಾಟಿದವನು.** ಅವನೇ ಬ್ರಾಹ್ಮೀ ಸ್ಥಿತಿಯನ್ನು ಪಡೆಯಲು ಯೋಗ್ಯನು.

**ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥ ೨೭ ॥**

ಬ್ರಹ್ಮಭೂತನಾದನಂತರ ಮುಂದೆ ಯಾವ ಸಂಪೂರ್ಣ ಬ್ರಹ್ಮನಲ್ಲಿ ಇವನು ಪ್ರವಿಷ್ಟನಾಗುವನೋ ಆ ಬ್ರಹ್ಮನಲ್ಲಿ ಪುರುಷೋತ್ತಮ ಶ್ರೀ ಕೃಷ್ಣನು ನಿರಂತರವೂ ಅಧಿಷ್ಠಿತನಾಗಿರುವನು. ಆ ಬ್ರಹ್ಮನು ತನ್ನ ಪ್ರಜೆಗ ಳನ್ನೊಡಗೂಡಿ ನಿತ್ಯವೂ ಯಜ್ಞವನ್ನು ಮಾಡಿ ಈ ಪುರುಷೋತ್ತಮನಿಗೆ ಅದನ್ನು ಸಮರ್ಪಿಸುತ್ತಿರುವನು. ಇದೇ ಅವನಿಗೆ ಶಾಶ್ವತ ಧರ್ಮವಾಗಿದೆ. ಈ ಧರ್ಮವನ್ನು ಪರಿಪಾಲಿಸುತ್ತ ಅವನು ನಿರಂತರವೂ ಪರಮ ಆನಂದ ವನ್ನು ಅನುಭವಿಸುತ್ತಲಿರುವನು.

ಕರ್ಮಬಂಧದಿಂದ ಮುಕ್ತನಾದ ಜೀವನಿಗೆ ಭಗವದ್ಗೀತೆಯಲ್ಲಿ ಮೂರುವಿಧದ ಅಂತಿಮಗತಿಗಳು ಹೇಳಲ್ಪಟ್ಟಿವೆ. ಅವುಗಳ ಏಕ ವಾಕ್ಯತೆ ಯನ್ನು ಈ ಶ್ಲೋಕದಲ್ಲಿ ಮಾಡಿದೆ.

ಜೀವನು ಪುರುಷೋತ್ತಮ ಶ್ರೀಕೃಷ್ಣನಲ್ಲಿಗೆ ಬರುವನೆಂದೂ ಬ್ರಹ್ಮ ನನ್ನು ಸೇರುವನೆಂದೂ ಅಥವಾ ಪುರುಷೋತ್ತಮನ ಭಾವವನ್ನು ಸೇರುವ ನೆಂದೂ ಹೇಳಿದೆ. ಸೃಷ್ಟಿಯೊಳಗಿನ ಜೀವಭೂತರೆಲ್ಲರೂ ಬ್ರಹ್ಮನಲ್ಲಿ ಸಮಾ ವಿಷ್ಟರಾಗಿರುವರು. ಬ್ರಹ್ಮನ ಯಜ್ಞಭಾವವೇ ಎಲ್ಲ ಜೀವಗಳಿಗೆ ನಿಯತ ವಾಗಿದೆ. ಬ್ರಹ್ಮನ ಯಜ್ಞಭಾವಕ್ಕೆ ಶ್ರೀಕೃಷ್ಣಪುರುಷೋತ್ತಮನು ಹೇತು

ವಾಗಿರುವನು. ಅವನ ಆತ್ಯಂತಿಕ ಆನಂದವು ತಾನು ಕೈಕೊಂಡು ನೆರವೇರಿಸುವ ಯಜ್ಞಧರ್ಮದ ಪರಿಣಾಮವು. ಆದುಕಾರಣ ಯಾವನು ಭಕ್ತಿಭಾವದಿಂದ ಪುರುಷೋತ್ತಮನಿಗೆ ಯಜ್ಞಾರ್ಥವಾಗಿ ಸಂಗವನ್ನೂ ಫಲವನ್ನೂ ಬಿಡುವನೋ ಅವನು ಶ್ರೀಕೃಷ್ಣನ ಭಾವವನ್ನು ಸೇರುವನು. ಹಾಗೆಯೇ ತನ್ನ ಆ ಯಜ್ಞಭಾವವು ಸೃಷ್ಟಿಯಲ್ಲಿ ಎಲ್ಲೆಲ್ಲಿಯೂ ಬ್ರಹ್ಮನಿಂದ ಪ್ರಚುರವಾದ ಯಜ್ಞಕಾರ್ಯಕ್ಕೆ ಹೇಗೆ ಸಬಂಧಿಸಿರುವದು ಎಂಬುವದನ್ನು ತಿಳಿದು ತನ್ನ ಕಾರ್ಯವನ್ನು ಅವನಿಗೆ ಅರ್ಪಿಸಿದವನು ಬ್ರಹ್ಮನನ್ನು ಸೇರುವನು. ಬ್ರಹ್ಮನ ಯಜ್ಞವಾಗಲಿ ಜೀವಭೂತನ ಯಜ್ಞವಾಗಲಿ ಇವೆರಡಕ್ಕೂ ಪುರುಷೋತ್ತಮನಲ್ಲಿನ ಯೋಗಭಾವವೇ ಯಜ್ಞಸಮರ್ಪಣೆಯ ಕಾರ್ಯಪ್ರಸಕ್ತಿಗಿಂತಲೂ ಹೆಚ್ಚಿನ ಹಾಗು ಶಾಶ್ವತ ಸತ್ಯವೆಂದು ತಿಳಿಯುವದೇ ಪುರುಷೋತ್ತಮನನ್ನು ಸೇರುವದೆಂದು ಹೇಳಿದೆ.

ಆದುದರಿಂದ, ಈ ಮೂರು ವಿಧದ ಅಂತಿಮಗತಿಗಳೂ ಜೀವನಿಗೆ ಸಮನಾಗಿ ಉಪಯುಕ್ತವಾಗಿರುವವು. ಪುರುಷೋತ್ತಮನ ಭಾವವನ್ನು ಸೇರಿದವನು ಕೃತಕೃತ್ಯನಾಗುವನು. ಬ್ರಹ್ಮನನ್ನು ಸೇರಿದವನು ಪ್ರಜಾಧರ್ಮಪರಿಪೂರ್ಣನು. ಮತ್ತು ಪುರುಷೋತ್ತಮನನ್ನು ಸೇರಿದವನು ನಿಸ್ಸೀಮವಾದಂಥ ಸ್ಥಿತಪ್ರಜ್ಞನು. ಇವನು ಎಲ್ಲ ಯೋಗಿಗಳಲ್ಲಿಯೂ ಶ್ರೇಷ್ಠನೆನಿಸುವ ಯೋಗಿಯು. ಇವುಗಳಲ್ಲಿ ಯಾವ ಒಂದು ಗತಿಯನ್ನು ಸಾಧಿಸಿದರೂ ಇಹಪರಗಳಲ್ಲಿ ಮುಕ್ತಿಯು ಖಂಡಿತವಾಗಿ ಕೈಗೂಡುವದು.

**ಹದಿನಾಲ್ಕನೆಯ ಅಧ್ಯಾಯವು ಸಮಾಪ್ತವು.**

---

ಓಂ

# ಹದಿನೈದನೆಯ ಅಧ್ಯಾಯವು



**ಅವತರಣಿಕೆ—**

ಏಳನೆಯ ಅಧ್ಯಾಯಗಲ್ಲಿ ಆರಂಭವಾದ ಜ್ಞಾನವಿಜ್ಞಾನದ ನಿರೂಪಣೆಯು ಹದಿನಾಲ್ಕನೆಯ ಅಧ್ಯಾಯದಲ್ಲಿ ಮುಗಿಯಿತು. ಇನ್ನು ಈವರೆಗೆ ಹದಿನಾಲ್ಕು ಅಧ್ಯಾಯಗಳಲ್ಲಿ ಅರ್ಜುನನಿಗೆ ಬೋಧಿಸಿದ ಅಧ್ಯಾತ್ಮವೆಂಬ ಗೂಢಜ್ಞಾನದ ಸಾರವನ್ನು— ಇದಕ್ಕೇ ಬುದ್ಧಿಯೋಗವೆಂದು ಹೆಸರಿಟ್ಟದ್ದು— ಸಂಕ್ಷೇಪವಾಗಿ ಈ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಹೇಳುವನು. ಆದುದರಿಂದ ಈ ಮೊದಲು ಹೇಳಿದ ಮುಖ್ಯ ಮುಖ್ಯ ತತ್ವಗಳ ಉಲ್ಲೇಖವು ಇದರಲ್ಲಿ ಬರುವದು.

ಪುರುಷೋತ್ತಮನು ಉಂಟುಮಾಡಿದ ಸೃಷ್ಟಿಯು ಒಂದು ಅಶ್ವತ್ಥವೃಕ್ಷದಂತಿದೆ. ಅಶ್ವತ್ಥವೃಕ್ಷದ ಮುಖ್ಯ ಲಕ್ಷಣವೇನೆಂದರೆ, ಅದಕ್ಕಿರುವ ನಿಜವಾದ ಮತ್ತು ಆಗಂತುಕ ಬೇರುಗಳು. ನಿಜವಾದ ಬೇರುಗಳಿಂದ ಬೆಳೆದ ಅಶ್ವತ್ಥವೃಕ್ಷದ ಕೊಂಬೆಗಳಿಂದಿಳಿದ ಬೀಳಿಲುಗಳು ನೆಲದ ಸಂಪರ್ಕವಾದೊಡನೆಯೇ ಪುನಃ ವೃಕ್ಷರೂಪವಾಗಿ ಬೆಳೆಯುವವು. ಈ ಹೊಸ ಪ್ರಾದುರ್ಭಾವಕ್ಕೂ ಮೂಲ ಅಶ್ವತ್ಥವೃಕ್ಷಕ್ಕೂ ಸಂಬಂಧವು ಉಳಿಯುವದಿಲ್ಲ.

ಈ ಸಂಗತಿಗಳೆಲ್ಲ ಸೃಷ್ಟಿಯ ವಿಷಯದಲ್ಲಿ ಸಹ ನಿಜವಾಗಿರುವದರಿಂದ ಸೃಷ್ಟಿಗೆ ಕೊಟ್ಟ ಅಶ್ವತ್ಥವೃಕ್ಷದ ಉಪಮೆಯು ಬಹಳ ಮಾರ್ಮಿಕವೂ ಯಥಾರ್ಥವೂ ಆಗಿದೆ.

ಮೂಲ ಪುರುಷೋತ್ತಮನಿಂದ ಬ್ರಹ್ಮನೂ ಬ್ರಹ್ಮನಿಂದ ಕರ್ಮವೂ ಉತ್ಪನ್ನವಾಗುವವು. ಈ ಕರ್ಮತತ್ವದಿಂದಲೇ ಅಸತ್ ಎಂಬ ಶಬ್ದದಿಂದ ಸಂಬೋಧಿಸಿದ ಕರ್ಮರೂಪವಾದ ಬೀಳಿಲುಗಳು ಮನುಷ್ಯಲೋಕದಲ್ಲಿ

ಜೀವಭೂತನೆಂಬ ಶಾಖೆಯಿಂದ ಹೊರಟು ಮುಂದಕ್ಕೆ ತಮ್ಮಂಥ ಅಸಂಖ್ಯ ಆವೃತ್ತಿಗಳನ್ನು ನಿರ್ಮಾಣಮಾಡುವವು. ಈ ಅಸತ್ ಕರ್ಮಗಳ ಸಂಸಾರದ ಮತ್ತು ಸಂತತಿಯ ವೃದ್ಧಿಯು ಪರಮಾತ್ಮನ ಸೃಷ್ಟಿಕಾರ್ಯದ ಹೇತುವಿಗೆ ನಿಷ್ಕಾರಣವಾಗಿಯೂ ನಿರರ್ಥಕವಾಗಿಯೂ ಇರುವದರಿಂದ ಇವು ಆಗಂತುಕಗಳಾಗಿವೆ. ಹೀಗೆ ಅಶ್ವತ್ಥವೃಕ್ಷಕ್ಕೂ ಸೃಷ್ಟಿಗೂ ಇರುವ ಸಾಮ್ಯವು ಚಿತ್ತಾಕರ್ಷಕವಾಗಿದೆ.

ತತ್ಪೂರ್ವದಲ್ಲಿಯೇ ಅದು ಪವಿತ್ರವೆಂದು ಭಾವಿಸಲ್ಪಟ್ಟಿದ್ದುದು ಭಗವದ್ಗೀತೆಯಲ್ಲಿ ಅಶ್ವತ್ಥವೃಕ್ಷದ ಉಲ್ಲೇಖವು ಬಂದಿರುವದಕ್ಕೆ ಕಾರಣವಲ್ಲ. ಆದರೆ ಆ ಉಲ್ಲೇಖವು ಮೇಲೆ ಹೇಳಿದಂತೆ ಅರ್ಥಪೂರ್ಣವಾಗಿರುವಂತೆ ನಮಗೆ ತೋರುವದು.

ಶ್ರೀಭಗವಾನುವಾಚ—

**ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಂ।**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ ೧॥**

ಅಶ್ವತ್ಥ ವೃಕ್ಷದ ಉಪಮೆಯು ಸೃಷ್ಟಿಗೆ ಹೇಗೆ ಅನುರೂಪವಾಗಿದೆಯೆಂಬುದನ್ನು ಮೇಲೆ ವಿವರಿಸಿರುವೆವು. ಅದೇ ಸಾಮ್ಯವನ್ನು ಬೇರೆ ವಿಷಯದಲ್ಲಿಯೂ ತೋರಿಸಿಕೊಟ್ಟು ಈ ಅಧ್ಯಾಯದೊಳಗಿನ ನಿರೂಪಣೆಯು ಆರಂಭಿಸಲ್ಪಟ್ಟಿದೆ.

ಅಶ್ವತ್ಥವೃಕ್ಷಕ್ಕೆ ಬೇರುಗಳಿದ್ದಂತೆ ಸೃಷ್ಟಿಗಾದರೂ ಉಂಟು; ಅಶ್ವತ್ಥಕ್ಕೆ ಅನೇಕ ಬೇರುಗಳಿವೆ, ಆದರೆ ಸೃಷ್ಟಿಗೆ ಒಂದೇ ಒಂದು. ಇದೂ ಅಲ್ಲದೆ ಅಶ್ವತ್ಥಕ್ಕೆ ಬೇರುಗಳು ಕೆಳಗಿದ್ದು, ಬೊಡ್ಡೆಯು ಮೇಲೆ ಇರುವದು; ಆದರೆ ಸೃಷ್ಟಿಯೆಂಬ ವೃಕ್ಷಕ್ಕೆ ಬೇರು ಮೇಲೆ ಇದ್ದು ಅದರ ಬೊಡ್ಡೆಯು ಕೆಳಗೆ ಇರುವದು. ಮೇಲಿರುವ ಈ ಬೇರು ಪುರುಷೋತ್ತಮನಾದ ಶ್ರೀಕೃಷ್ಣನೇ. ಅವನು ಎಲ್ಲದಕ್ಕಿಂತ ಶ್ರೇಷ್ಠನೆಂಬುದನ್ನು ಸೂಚಿಸುವದಕ್ಕಾಗಿ ಇಲ್ಲಿ ಬೇರು ಮೇಲಿದೆಯೆಂದು ಹೇಳಿದೆ. ಮೇಲೆ ಅಥವಾ ಕೆಳಗೆ ಎಂಬ ಶಬ್ದಗಳು ಇಲ್ಲಿ ದಿಗ್ವಾಚಕಗಳೆಂದು ತಿಳಿಯಬಾರದು. ಅವನಿಗೆ ಕೆಳಗಿರುವ ಬೊಡ್ಡೆಯೇ ಕೂಟಸ್ಥನಾದ ಬ್ರಹ್ಮನು, ಹೀಗೆ ಅಶ್ವತ್ಥವನ್ನು ಹೋಲುವದಾದರೂ ಈ ಸೃಷ್ಟಿರೂಪವೃಕ್ಷವು ಅವ್ಯಯವಾಗಿರುವದು. ಅಧ್ಯಾತ್ಮಶಾಸ್ತ್ರದ ಕೊನೆಯ

ಮೆಟ್ಟೆಂದು ತಿಳಿಯಲ್ಪಟ್ಟಿರುವ ವೇದಗಳು ಈ ಸೃಷ್ಟಿವೃಕ್ಷದ ಕೇವಲ ಎಲೆಗಳಾಗಿವೆ ಎಲೆಗಳನ್ನು ತಿಳಿಸ ಮಾತ್ರಕ್ಕೆ ವೃಕ್ಷಸ್ವರೂಪದ ಕಲ್ಪನೆಯು ಸಂಪೂರ್ಣವಾಗಲಾರದು. ಈ ಶ್ಲೋಕದಲ್ಲಿ ಹೇಳಿದಂತೆ ಸಂಸಾರವೃಕ್ಷದ ಬೇರಿಗೂ ಅದಕ್ಕೆ ಬಹಳ ಈಚೆಗಿರುವ ವೇದಗಳಿಗೂ ಇರುವ ನಿಜವಾದ ಸಂಬಂಧವನ್ನು ಈ ರೀತಿಯಾಗಿ ತಿಳಿದವನೇ ಆತ್ಯಂತಿಕ ಜ್ಞಾನಿಯೆಂದೂ ನಿಜವಾಗಿ ವೇದಗಳನ್ನು ತಿಳಿದವನೆಂದೂ ಹೇಳಬೇಕು.

**ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ**
**ಗುಣಪ್ರವೃದ್ಧಾ ವಿಷಯಪ್ರವಾಲಾಃ॥**
**ಅಧಶ್ಚ ಮೂಲಾನ್ಯನುಸಂತತಾನಿ**
**ಕರ್ಮಾನುಬಂಧೀನಿ ಮನುಷ್ಯಲೋಕೇ॥ ೨ ॥**

ಈ ಬೊಡ್ಡಿಯಿಂದ ಸೃಷ್ಟಿವೃಕ್ಷಕ್ಕೆ ಜೀವಾತ್ಮರೆಂಬ ಶಾಖೆಗಳು ಹೊರಡುವವು. ಈ ಶಾಖೆಗಳು ಕೆಲವು ಮೇಲೂ ಕೆಲವು ಕೆಳಗೂ ಹರಡಿಕೊಳ್ಳುವವು. ಪ್ರಕೃತಿಯ ಗುಣಗಳು ಮತ್ತು ವಿಷಯಗಳು ಇವುಗಳ ವೃದ್ಧಿಗೆ ಕಾರಣವಾಗಿರುವವು. ಈ ಕೊಂಬೆಗಳು ಗುಣವಿಷಯಗಳಿಂದ ಪೋಷಿಸಲ್ಪಟ್ಟು ಬಲವಾಗಿ ಹಬ್ಬಿಕೊಳ್ಳುವವು. ಗುಣ ಮತ್ತು ವಿಷಯಗಳಿಂದ ಉಂಟಾದ ಈ ಶಾಖೆಗಳ ಕರ್ಮಪ್ರಪಂಚದೊಳಗಿನ ಗತಿಯು ಪರಸ್ಪರ ವಿರುದ್ಧವಾದ ದಿಕ್ಕುಗಳಲ್ಲಿ ಸಾಗುವದುಂಟು. ಮೇಲಕ್ಕೆ ಬೆಳೆದ ಶಾಖೆಗಳಿಗೆ ಕರ್ಮಬಂಧನವು ಇಲ್ಲದಿರುವದರಿಂದ ಪುನರುತ್ಪತ್ತಿಯೆಂಬ ಬೀಳಿಲುಗಳು ಇವುಗಳಿಂದ ಹುಟ್ಟುವದಿಲ್ಲ. ಊರ್ಧ್ವಗತಿಯನ್ನು ಅನುಸರಿಸುವ ಸಾತ್ವಿಕರಿಗೆ ಇದೇ ಫಲವೆಂದು ಹೇಳಿದೆ. ಆದರೆ ಅಧೋಗತಿಯನ್ನು ಅವಲಂಬಿಸುವ ಕೊಂಬೆಗಳು ತಮ್ಮ ಕರ್ಮಫಲಾಸಕ್ತಿಯಿಂದ ಬಿಗಿಯಲ್ಪಟ್ಟು, ಈ ಅಶ್ವತ್ಥವೃಕ್ಷಕ್ಕೆ ವಿಕರ್ಮರೂಪವಾದ ಆಗಂತುಕ ಬೀಳಿಲುಗಳನ್ನು ಉಂಟುಮಾಡುವವು. ಮುಂದೆ ಈ ಬೀಳಿಲುಗಳಿಂದ ಕರ್ಮಪ್ರಪಂಚವು ಆಗಂತುಕವಾಗಿಯೇ ನಡೆದು ಅದರಲ್ಲಿ ಸಿಲುಕಿದ ಜೀವರು ಬಂಧಿಸಲ್ಪಡುವರು. ಇವರ ಕರ್ಮಸಂಸಾರವು ಆಗಂತುಕಗಳಾದ ಅಶ್ವತ್ಥವೃಕ್ಷಗಳಂತೆ ಮನುಷ್ಯಲೋಕದಲ್ಲಿ ಹಬ್ಬಿಕೊಳ್ಳುವದು.

ನ ರೂಪಮಸ್ಯೇಹ ತಥೋಪಲಭ್ಯತೇ
ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ॥
ಅಶ್ವತ್ಥಮೇನಂ ಸುವಿರೂಢಮೂಲ
ಮಸಂಗಶಸ್ತ್ರೇಣ ದೃಢೇನ ಛಿತ್ವಾ ॥೩॥

ಮನುಷ್ಯಲೋಕದಲ್ಲಿ ಅಸಂಖ್ಯವಾಗಿಯೂ ನಿಬಿಡವಾಗಿಯೂ ಬೆಳೆಯುವ ಈ ಆಗಂತುಕ ವೃಕ್ಷಸಮುದಾಯದಲ್ಲಿ ಮೇಲೆ ಸೃಷ್ಟಿಗೆ ಕಾರಣವೆಂದೂ ಏಕರೂಪವಾದುದೆಂದೂ ಹೇಳಿದ ಮೂಲದ ಕುರುಹಾದರೂ ಇರುವದಿಲ್ಲ. ಈ ಹುಸಿಯಾದ ವೃಕ್ಷಗಳ ಕಾಡಿನಲ್ಲಿ ಆದಿಮೂಲನ ಆದಿಯೂ ಇರುವದಿಲ್ಲ, ಅಂತವೂ ಇರುವದಿಲ್ಲ. ಈ ರೀತಿಯಾಗಿ ಅನಾಹೂತವಾದ ಬೇರುಗಳಿಂದ ಬಹು ಆಳವಾಗಿಯೂ ಬಲವಾಗಿಯೂ ಅಧೋಗತಿಯಿಂದಲೂ ಬೆಳೆದ ಆಗಂತುಕ ಅಶ್ವತ್ಥವೃಕ್ಷಗಳ ಅಡವಿಯನ್ನು ಅರ್ಜುನನು ದೃಢನಿಶ್ಚಯದಿಂದ ಕಡಿದುಹಾಕಬೇಕು. ಹೀಗೆ ಕಡಿಯುವದಕ್ಕೆ ಅಸಂಗವೆಂಬ ಶಸ್ತ್ರವನ್ನು ಅವನು ಉಪಯೋಗಿಸಬೇಕು. ಏಕೆಂದರೆ ಇತರ ಶಸ್ತ್ರಗಳು ಈ ಕೆಲಸಕ್ಕೆ ನಿರುಪಯುಕ್ತವಾದವು.

ತತಃ ಪದಂ ತತ್ಪರಿಮಾರ್ಗಿತವ್ಯಂ
ಯಸ್ಮಿನ್ಗತಾ ನ ನಿವರ್ತಂತಿ ಭೂಯಃ ॥
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ
ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥೪॥

ಮೇಲಿನ ಶ್ಲೋಕದಲ್ಲಿ ಅಧಃಶಾಖೆಗಳಿಂದ ಹುಟ್ಟಿದ ಮಿಥ್ಯಾಕರ್ಮಪ್ರಪಂಚವನ್ನು ಕುರಿತು ಅವನ ಕರ್ತವ್ಯವನ್ನು ಅರ್ಜುನನಿಗೆ ತಿಳುಹುವಾಗ ಅದಕ್ಕೆ ಅಡವಿಯ ರೂಪಕವನ್ನು ಕೊಟ್ಟಿದೆ. ಈ ಶ್ಲೋಕದಲ್ಲಿ ಊರ್ಧ್ವಶಾಖೆಗಳ ವಿಷಯವಾಗಿ ಹೇಳಿದೆಯಾದ್ದರಿಂದ ಈ ಉಪಮೆಯು ಇಲ್ಲಿ ಅನುರೂಪವಾಗುವದಿಲ್ಲ. ಊರ್ಧ್ವಶಾಖೆಯನ್ನು ಅವಲಂಬಿಸಿದರೆ ಅರ್ಜುನನೊಬ್ಬ ಪ್ರವಾಸಿಯಾಗುವನೆಂದೂ ಆ ಶಾಖೆಯೇ ಅವನು ನಡೆಯಬೇಕಾದ ಮಾರ್ಗವೆಂದೂ ರೂಪಕವನ್ನು ಹೇಳಿದೆ.

ಮಾರ್ಗವೆಂಬ ರೂಪಕವು ಇಲ್ಲಿ ಹೊಸದಾಗಿ ಬಂದಿಲ್ಲ. ಎಂಟನೆಯ ಅಧ್ಯಾಯದಲ್ಲಿ ಶುಕ್ಲಮಾರ್ಗವೆಂದೂ ಹದಿಮೂರನೆಯ ಅಧ್ಯಾಯದಲ್ಲಿ ಊರ್ಧ್ವಮಾರ್ಗವೆಂದೂ ಉಲ್ಲೇಖಿಸಿರುವದು ಇದೇ ಮಾರ್ಗವನ್ನು ಸಂಬಂಧಿಸಿದೆ. ಈ ಮಾರ್ಗವು ಯಾವುದೆಂಬುದನ್ನು ಹದಿನಾರನೆಯ ಅಧ್ಯಾಯದೊಳಗೆ ಬಂದ ದೈವೀಸಂಪತ್ತಿನ ವರ್ಣನೆಯಿಂದ ಊಹಿಸಬಹುದು. ಆದುದರಿಂದ ಇಲ್ಲಿ ಬಂದು ಮಾರ್ಗವನ್ನು ದೂರಾನ್ವಯದಿಂದ ಸೂಚಿಸಿದ್ದರೂ ಅದು ಯಾವುದೆಂಬ ಬಗ್ಗೆ ಸಂದೇಹವಿಲ್ಲೆಂದು ನಮಗೆ ತೋರುವದು.

ಯಾವ ಮಾರ್ಗವನ್ನು ಹಿಡಿದರೆ ತನ್ನ ಕರ್ಮಗಳ ಅನುಬಂಧದಿಂದ ಪುನರ್ಜನ್ಮಗಳು ತನಗೆ ಸಂಭವಿಸಲಾರವೋ ಆ ಮಾರ್ಗದಿಂದ ಅರ್ಜುನನು ನಡೆಯಬೇಕು.

ಈ ಮಾರ್ಗವನ್ನನುಸರಿಸುವಾಗ ಅರ್ಜುನನು ತನ್ನ ಮನಸ್ಸಿನಲ್ಲಿ ಪರಮಪದವನ್ನು ಸಂಧಿಸುವ ಹವ್ಯಾಸವನ್ನೇ ಹಿಡಿದು "ಯಾವ ಆದಿಮೂಲನೂ ಪುರಾಣಪುರುಷನೂ ಆದ ಪುರುಷೋತ್ತಮನಿಂದ ಈ ಸೃಷ್ಟಿರೂಪವಾದ ಪ್ರವೃತ್ತಿಧರ್ಮವು ಪ್ರಚುರವಾಯಿತೋ ಅವನಿಗೆ ನಾನು ಶರಣು ಹೊಗುವೆನು" ಎಂದು ಮನಸ್ಸಿನಲ್ಲಿ ಪ್ರಾರ್ಥಿಸುತ್ತಿರಬೇಕು.

**ನಿರ್ಮಾನಮೋಹಾ ಜಿತಸಂಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ||**
**ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ-**
**ರ್ಗಚ್ಛಂತಿ ಮೂಢಾಃ ಪದಮವ್ಯಯಂ ತತ್ || ೫ ||**

ಈ ಪರಮ ಪದವನ್ನೇ ಹದಿಮೂರನೆಯ ಅಧ್ಯಾಯದಲ್ಲಿ ಜ್ಞೇಯವೆಂದು ವರ್ಣಿಸಿದ್ದು. ಈ ಜ್ಞೇಯವನ್ನು ಪಡೆಯಲಿಕ್ಕೆ ಜ್ಞಾನವು ಮಾರ್ಗವಾಗಿದೆ. ಜ್ಞಾನವನ್ನು ಅದೇ ಅಧ್ಯಾಯದಲ್ಲಿ ವರ್ಣಿಸಿದೆ (೧೩-೭-೧೦). ಅದನ್ನೇ ಇಲ್ಲಿ ಪುನಃ ಸೂಚಿಸಿದೆ.

ಅರ್ಜುನನು ಈ ಊರ್ಧ್ವಮಾರ್ಗದಿಂದ ಹೋಗುವಾಗ ನಿರಭಿಮಾನ, ನಿರ್ಮೋಹ, ನಿಸ್ಸಂಗ, ತನ್ನ ಅಧ್ಯಾತ್ಮ ಸ್ವಭಾವದ ನಿತ್ಯನಿರಂತರ ಧ್ಯಾನ, ಕಾಮದಿಂದ ನಿವೃತ್ತಿ, ಸುಖದುಃಖವೆಂಬ ದ್ವಂದ್ವಗಳ ತ್ಯಾಗ ಇವೇ ಮೊದ ಲಾದ ಗುಣಗಳನ್ನು ಆಶ್ರಯಿಸಬೇಕು. ಹೀಗೆ ಮಾಡುವದರಿಂದ ಅವನ ಮೋಹವು ನಷ್ಟವಾಗಿ ಅವನು ಆ ಅವ್ಯಯವಾದ ಪದವನ್ನು ಸೇರುವ ನೆಂಬುದರಲ್ಲಿ ಸಂದೇಹವಿಲ್ಲ.

**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥೬॥**

ತಮ್ಮ ಕರ್ಮಗಳ ಬಂಧನದಿಂದ ಮುಕ್ತಿಯನ್ನು ಸಂಪಾದಿಸಿ ಈ ಪರಮಪದವನ್ನು ಸೇರುವ ಪ್ರಯತ್ನವನ್ನು ಜೀವಭೂತರು ವಿವಿಧಭೂಮಿಕೆ ಗಳನ್ನನುಸರಿಸಿ ಮಾಡುವರೆಂದು ಗೀತೆಯಲ್ಲಿ ಹಲವು ಸಾರೆ ಹೇಳಿದೆ. ಕೆಲ ವರು ತಮ್ಮ ಆತ್ಮಸ್ವಭಾವದ ಉತ್ಕರ್ಷೆಯನ್ನು ಸಾಧಿಸುವರು. ಹಲವರು ತಮ್ಮ ಬುದ್ಧಿಯ ವಿಕಾಸದಿಂದ ಜ್ಞಾನವನ್ನು ಪಡೆದು ವಿಮುಕ್ತರಾಗು ವರು. ಇನ್ನೂ ಕೆಲವರು ತಮ್ಮ ಮನಃಸ್ವಭಾವವನ್ನು ನಿಯಂತ್ರಿಸಿ ಅದರ ವಿಕಾರಗಳನ್ನು ಜಯಿಸುವರು. ಮತ್ತೂ ಕೆಲವರು ತಮ್ಮ ಪ್ರಾಣಮಯ ಶರೀರದಿಂದ ತಪಶ್ಚರ್ಯವನ್ನಾಚರಿಸಿ ಕೊನೆಯ ಸಾಧ್ಯವನ್ನು ಸಂಪಾದಿಸು ವರು. ಇವರೆಲ್ಲರೂ ಬ್ರಹ್ಮನನ್ನು ಸೇರುವದರಲ್ಲಿ ಸಂದೇಹವಿಲ್ಲ. ಆದರೆ ಅವರ ಪ್ರಯತ್ನಗಳು ಭಿನ್ನ ಭಿನ್ನವಾಗಿರುವದರಿಂದ ಪುರುಷೋತ್ತಮನಾದ ಶ್ರೀಕೃಷ್ಣನ ದೃಷ್ಟಿಯಿಂದ ಅವರ ಯೋಗ್ಯತೆಗಳು ಭಿನ್ನವಾಗುವವು. ಅಧ್ಯಾ ತ್ಮಕನಿಗೆ ಅಗ್ನಿಯೆಂದೂ ಬೌದ್ಧಿಕನಿಗೆ ಜ್ಯೋತಿಯೆಂದೂ ಮಾನಸಿಕನಿಗೆ ಅಹ (ದಿವಸ) ವೆಂದೂ ಶಾರೀರಕನಿಗೆ ಶುಕ್ಲನೆಂದೂ ಉಪಮೆಗಳನ್ನು ಕೊಟ್ಟಿದೆ (೮-೨೪). ಅದನ್ನೇ ಅನುಸರಿಸಿ ಈ ಶ್ಲೋಕದ ಅರ್ಥವನ್ನು ಮಾಡಬೇಕೆಂದು ನಮಗೆ ತೋರುವದು.

ಮುಕ್ತರಾದ ಜೀವರು ಪರಮ ಪದವನ್ನು ಸೇರುವಾಗ ಅವರ ಪ್ರಯತ್ನದೊಳಗಿನ ಹೆಚ್ಚುಕಡಿಮೆಯನ್ನು ಅಲ್ಲಿ ಎಣಿಸುವದಿಲ್ಲ. ಮುಕ್ತಿ

ಯನ್ನು ಕೊಡುವ ವಿಷಯದಲ್ಲಿ ಎಲ್ಲರೂ ಸಮಾನರೆಂದೇ ಎಣಿಸಲ್ಪಡು ವರು. ಆದರೂ ಜೀವಪುರುಷೋತ್ತಮರ ಪರಸ್ಪರ ಪ್ರೇಮಭಾವದ ಉತ್ಕಟತೆಯಲ್ಲಿ ಈ ಜೀವರೆಲ್ಲ ಸರಿಸಮಾನವಾಗಿರುವರೆಂದು ಹೇಳಲಾಗದು. ಈ ವಿಷಯದಲ್ಲಿ ಅವರಲ್ಲಿರುವ ಭೇದವನ್ನು ತೋರಿಸುವದಕ್ಕಾಗಿ ಅವರ ಆತ್ಮಸ್ಥಿತಿಯನ್ನುದ್ದೇಶಿಸಿ ಬೇರೆ ಬೇರೆ ಹೆಸರುಗಳನ್ನು ಕಲ್ಪಿಸಿದೆ. ಈ ಶ್ಲೋಕದಲ್ಲಿ ಸೂರ್ಯ, ಶಶಾಂಕ ಮತ್ತು ಪಾವಕವೆಂಬ ಪದಗಳು ಅಗ್ನಿ, ಜ್ಯೋತಿ ಮತ್ತು ಶುಕ್ಲವೆಂಬ ಪದಗಳಿಗೆ ( ೮–೨೪ ) ಸಮಾನಾರ್ಥಕವಾಗಿ ವೆಯೆಂದು ನಮಗೆ ತೋರುವದು. ಏಕೆಂದರೆ ಈ ಪದವನ್ನು ಸೇರಿದರೆ ಜೀವ ರಿಗೆ ಪುನರ್ಜನ್ಮವು ತಪ್ಪಿಹೋಗುವದೆಂದು ಒಡನೆಯೆ ಹೇಳಿದೆ. ಎಂಟನೆಯ ಅಧ್ಯಾಯದಲ್ಲಾದರೂ ಇದೇ ಅರ್ಥವನ್ನು ಹೇಳಿದೆಯೆಂಬದನ್ನು ಗಮನಿಸ ಬೇಕು.

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಃ ಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ ೭ ॥**

ಸೂರ್ಯ, ಚಂದ್ರ ಅಗ್ನಿ ಎಂಬ ಅವಸ್ಥೆಗಳಲ್ಲಿರುವ ಯಾವ ಜೀವರು ಪುನರ್ಜನ್ಮವನ್ನು ತಪ್ಪಿಸಿ ಮೋಕ್ಷವನ್ನು ದೊರಕಿಸುವರೆಂದು ಮೇಲೆ ಹೇಳಿ ದೆಯೋ ಅವರ ಉತ್ಪತ್ತಿ ಸ್ಥಿತಿಗಳನ್ನು ಕುರಿತು ಇಲ್ಲಿ ಹೇಳಲಾರಂಭಿಸಿದೆ.

ಈ ಜೀವಭೂತನು ಆದಿಯಲ್ಲಿ ಪುರುಷೋತ್ತಮನ ಅಂಶನು. ಬ್ರಹ್ಮ ನಿಂದ ಸೃಷ್ಟಿಕಾರ್ಯಕ್ಕಾಗಿ ಅವನ ಉತ್ಪತ್ತಿಯಾಯಿತು. ಹೀಗೆ ಉತ್ಪನ್ನ ನಾದ ಜೀವನು ಜೀವಲೋಕದಲ್ಲಿ ಜೀವಭೂತನಾಗಿ ಪ್ರಕಟನಾಗಿರುವನು. ಜೀವಭೂತನಾಗಿರುವದೆಂದರೆ ಅವನ ಮೂಲ ಅಕ್ಷರಸ್ವಭಾವವು ಬದಲಾಗಿ ಅವನಲ್ಲಿ ಕ್ಷರಸ್ವಭಾವವು ಬರುವದು. ಈ ಪಲ್ಲಟವು ಜೀವನಲ್ಲಿರುವ ಯಾವ ಕುಂದಿನಿಂದಲೂ ಉಂಟಾಗುವದಿಲ್ಲ. ಅದಕ್ಕೆ ಕೇವಲ ಈಶ್ವರೇಚ್ಛೆಯೇ ಕಾರಣವಾಗುವದು. ಅಕ್ಷರ ಸ್ವಭಾವದಲ್ಲಿ ಅವನ ನಿಯತ ( ಅಧ್ಯಾತ್ಮ ) ಭಾವಕ್ಕೆ ಭಂಗವು ಇರುವದಿಲ್ಲ. ಕ್ಷರಸ್ವಭಾವದಲ್ಲಿ ನಿಯತ ಅಧ್ಯಾತ್ಮ ಭಾವವನ್ನು ನೀಗಿಕೊಳ್ಳುವದಕ್ಕೆ ಅನುಕೂಲತೆಗಳುಂಟು. ಈ ವಿಷಯವೆಲ್ಲ ವನ್ನೂ ಗೀತೆಯಲ್ಲಿ ಅನೇಕ ಕಡೆಯಲ್ಲಿ ಧಾರಾಳವಾಗಿ ವಿವೇಚಿಸಿದೆ.

ಒಂದುಬಾರಿ ಸೃಷ್ಟಿಯಲ್ಲಿ ಪ್ರಕಟನಾದ ಜೀವಭೂತನು ಸನಾತನ ನಾಗಿರುವನು. ಅವನ ಪುರುಷಸ್ವಭಾವವೂ ಸನಾತನವಾಗಿರುವದು; ಅಂದರೆ ಸೃಷ್ಟಿಯು ಇರುವವರೆಗೆ ಬ್ರಹ್ಮ ಪುರುಷೋತ್ತಮರೆಂಬ ವ್ಯಕ್ತಿಗಳು ಸನಾತನವಾಗಿರುವಂತೆ ಜೀವಭೂತನಾದರೂ ಸೃಷ್ಟಿಯು ಆದಿಯಿಂದ ಅಂತ್ಯದ ವರೆಗೆ ಸ್ಥಿರವಾಗಿರುವನು.

ಹೀಗೆ ಪ್ರಕಟನಾದ ಜೀವಭೂತ ಪುರುಷನು ತನ್ನ ಪ್ರಕೃತಿ ಸ್ವಭಾವ ದಿಂದ ಮನಸ್ಸು ಮೊದಲಾದ ಆರು ಇಂದ್ರಿಯಗಳನ್ನು ಉಂಟುಮಾಡಿ ಕೊಳ್ಳುವನು. ಆದರಿಂದ ಇವನಿಗೆ ಮನಸ್ಸು ಶರೀರಗಳೆಂಬ ಅಧಿಷ್ಠಾನ ಗಳು ಪ್ರಾಪ್ತವಾಗುವವು.

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥ ೮ ॥**

ಈ ಜೀವಭೂತನು ಸ್ಥೂಲದೇಹದಲ್ಲಿ ಹುಟ್ಟುವಾಗಲೂ ಆ ದೇಹ ದಿಂದ ಅಗಲುವಾಗಲೂ ತನ್ನ ಮನಸ್ಸು ಮತ್ತು ಇಂದ್ರಿಯಗಳಿಗೆ ತಾನೇ ಈಶ್ವರನೆಂದರೆ ಒಡೆಯನಾದುದರಿಂದ ಅವುಗಳನ್ನು ಸಾರರೂಪವಾಗಿ ತನ್ನ ಸಂಗಡ ತೆಗೆದುಕೊಂಡು ಹೋಗುವನು. ವಾಯುವು ಗಂಧವನ್ನು ತನ್ನೊ ಡನೆ ಸರ್ವತ್ರ ಒಯ್ಯುವಂತೆ, ಈ ಜೀವಭೂತನು ತನ್ನ ಇಂದ್ರಿಯ ಸ್ವಭಾ ವದ ಸಾರವನ್ನು ತನ್ನೊಡನೆ ಒಯ್ಯುವನು.

**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ ೯ ॥**

ಆದರೆ ದೇಹದಲ್ಲಿರುವಾಗ ಅವನು ತನ್ನ ಮನಃಸ್ವಭಾವದಲ್ಲಿದ್ದು ಕೇವಲ ಮನೋಮಯವೃತ್ತಿಯಿಂದ ಶಬ್ದ ಸ್ಪರ್ಶ ರೂಪ ರಸ ಗಂಧ ಇವೇ ಮೊದಲಾದ ವಿಷಯಗಳನ್ನು ತನ್ನ ಇಂದ್ರಿಯಗಳ ಸಹಾಯದಿಂದ ಆಸ್ವಾದಿ ಸುವದರಲ್ಲಿ ಮಗ್ನನಾಗುವನು.

**ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಂ।**
**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥ ೧೦ ॥**

ಶರೀರವನ್ನು ಬಿಟ್ಟು ಶರೀರಕ್ಕೆ ಹೋಗುವದೂ ಒಂದೇ ಶರೀರದಲ್ಲಿರುವದೂ ಹಾಗೆಯೇ ತನ್ನ ಪ್ರಕೃತಿಯ ಗುಣಗಳೊಂದಿಗೆ ಉಂಟಾಗುವ ಸಹವಾಸವೂ ಅವುಗಳ ಸೇವನೆಯೂ ಅವನಲ್ಲಿ ಸಂಭವಿಸುವದು ಅಪರಿಹಾರ್ಯವೆಂಬ ತತ್ವವನ್ನು ಗೀತೆಯು ಹೇಳುವದು. ಏಕೆಂದರೆ ಈ ಕರ್ಮಗಳನ್ನೆಸಗುವ ಸಾಧನಗಳನ್ನೂ ಅಧಿಕಾರವನ್ನೂ ಪರಮೇಶ್ವರನು ಜೀವಭೂತನಿಗೇ ಕೊಟ್ಟಿರುವನು. ಈ ವ್ಯವಹಾರಗಳೆಲ್ಲ ಅವನಲ್ಲಿ ನಡೆದ ಮಾತ್ರಕ್ಕೆ ಜೀವಭೂತನು ಅವುಗಳಿಗಾಗಿ ಹೊಣೆಗಾರನಾಗುವದಿಲ್ಲ. ಅಥವಾ ಅವುಗಳಿಂದೊದಗುವ ದೋಷಕ್ಕೂ ಪಾತ್ರನಾಗುವದಿಲ್ಲ. ಆದರೆ ಗೀತೆಯ ತತ್ವವೇನೆಂದರೆ, ಜೀವಭೂತನು ಈ ತನ್ನ ಸಾಧನಗಳಿಂದಲೂ ಸಾಮರ್ಥ್ಯದಿಂದಲೂ ಹುಟ್ಟಿಸುವ ಫಲಕ್ಕೆ ಮಾತ್ರ ಅವನು ಬಾಧ್ಯಸ್ಥನಲ್ಲ. ಅವುಗಳನ್ನು ಪಡೆಯುವ ಮತ್ತು ಉಪಭೋಗಿಸುವ ಸ್ವಾಮಿತ್ವವು ಅವನನ್ನು ಹುಟ್ಟಿಸಿದ ಪುರುಷೋತ್ತಮನನ್ನು ಸೇರಿದೆ ತನ್ನ ಇಂದ್ರಿಯ ಕರ್ಮಗಳ ಫಲವನ್ನು ಈ ಪುರುಷೋತ್ತಮನಿಗೆ ಅರ್ಪಿಸುವವನನ್ನೂ ಮತ್ತು ಅದರಲ್ಲಿ ತಿಲಮಾತ್ರವೂ ಆಸಕ್ತಿಯನ್ನು ಇಡದವನನ್ನೂ ವಿಷಯಗಳ ಸಂಸಾರವು ಎಂದಿಗೂ ಬಾಧಿಸುವದಿಲ್ಲ; ಎಂದರೆ, ಕ್ಷೇತ್ರಜ್ಞನೂ ಅಧಿಯಜ್ಞನೂ ಆಗಿ ತನ್ನ ಶರೀರದಲ್ಲಿ ತನ್ನೊಡನೆ ವಾಸವಾಗಿರುವ ಪುರುಷೋತ್ತಮನೇ ನಿಜವಾದ ಭೋಕ್ತೃವು. ಕ್ಷೇತ್ರದೊಳಗಿರುವ ಪುರುಷನಲ್ಲ. ಈ ತತ್ವವನ್ನು ಗೀತೆಯಲ್ಲಿ ಹೀಗೆ ವಿಶದಮಾಡಿರುವದನ್ನು ಜ್ಞಾನಚಕ್ಷುವಿನಿಂದ ತಿಳಿಯುವವರಿಗೆ ತಾವು ಶರೀರದಿಂದ ಮಾಡುವ ಎಲ್ಲ ವ್ಯವಹಾರಗಳನ್ನು ಮಾಡುವವನೂ ಮಾಡಿಸುವವನೂ ಪುರುಷೋತ್ತಮನೇ ಎಂಬ ಅರಿವು ಉಂಟಾಗುವದು; ಆದರೆ ವಿಷಯಾಂಧರಿಗೆ ಅದು ತಿಳಿಯಲಾರದು.

**ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಂ ।**
**ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥ ೧೧ ॥**

ಈ ತತ್ವಗಳನ್ನು ಜ್ಞಾನಚಕ್ಷುವಿನಿಂದ ತಿಳಿದರೂ ಅವುಗಳನ್ನು ಆಚರಿಸುವದಕ್ಕೆ ಯೋಗಬುದ್ಧಿಯು ಅವಶ್ಯವಾಗಿದೆ. ಯೋಗವೆಂದರೆ ಪುರುಷೋತ್ತಮನಲ್ಲಿಟ್ಟ ಆಸಕ್ತಿಯೇ (೭-೧) ಈ ಆಸಕ್ತಿಯು ಯಾರಲ್ಲಿ ಎಷ್ಟು

ಮಟ್ಟಿಗೆ ಇರುವದೋ ಅವರಿಗೆ ಅಷ್ಟು ಮಟ್ಟಿಗೆ ಜ್ಞಾನದೃಷ್ಟಿಯು ಸಫಲ ವಾಗುವದು; ಹಾಗು ಸತ್ಯವು ಅನುಭವಕ್ಕೆ ಬರುವದು. ಹೀಗೆ ಯೋಗ ಯುಕ್ತನಾಗಿ ಪ್ರಯತ್ನಪಡುವವನು ತನ್ನ ಶರೀರದಲ್ಲಿಯೇ ತನಗೆ ಸಹವಾಸಿ ಯಾಗಿರುವ ಪುರುಷೋತ್ತಮನನ್ನು ಪೂರ್ಣವಾಗಿ ಅರಿತಿರುವನು. ಜ್ಞಾನ ಚಕ್ಷುವಿನಿಂದ ಸತ್ಯಸಿದ್ಧಾಂತಗಳನ್ನು ದೂರದಲ್ಲಿ ತಿಳಿಯುವದು ಶಕ್ಯವಾ ಗಿದೆ; ಆದರೆ ಪುರುಷೋತ್ತಮನಲ್ಲಿ ಆಸಕ್ತಿಯು —ಯೋಗವು— ಇಲ್ಲದಿದ್ದರೆ ಪ್ರಗತಿಯಾಗದು. ಏಕೆಂದರೆ, ಇಂಥ ಯೋಗದಿಂದ ಮನುಷ್ಯನ ವಿಷಯು ಮೂಲಕ ವ್ಯವಹಾರಗಳು ತಿಳಿಯಾಗಿ ಶುದ್ಧವಾಗುವವು. ಮನಸ್ಸಿನಿಂದ ಉದ್ಭವಿಸಿದ ವಿಪರೀತ ಆಘಾತಗಳು ಬುದ್ಧಿಯ ಮೇಲೆ ಬೀಳದಾಗುವವು. ಬುದ್ಧಿಯು ಆತ್ಮಾಭಿಮುಖವಾಗುವದು. ಅಂದರೆ ಅದಕ್ಕೆ ಚೇತಸ್ ಸ್ವರೂಪವು ಪ್ರಾಪ್ತವಾಗುವದು. ಆತ್ಮವು ಸ್ವಭಾವತಃ ಪುರುಷೋತ್ತಮನ ಕಡೆಗೆ ಒಲೆಯುವನು. ಪುರುಷೋತ್ತಮನೇ ಅದಕ್ಕೆ ವಿಷಯುವಾಗಿದ್ದಾನೆ. ಆದುದರಿಂದ ಯಾವನ ಬುದ್ಧಿಯು ಆತ್ಮಾಭಿಮುಖವಾಗಿ ಏಕಾಗ್ರವಾಗು ವದೋ ಅವನಿಗೆ ಜ್ಞಾನಚಕ್ಷುವೂ ಅದರ ಹಿಂದಿನಿಂದ ಯೋಗವೂ ನಿರಾ ತಂಕವಾಯೂ ಸಂಪೂರ್ಣವಾಗಿಯೂ ಸಾಧಿಸುವವು. ಆದರೆ ಬುದ್ಧಿಯು ಏಕಾಗ್ರವಾಗದಿದ್ದರೆ -ಚೇತಸ್ ಆಗದಿದ್ದರೆ- ಜ್ಞಾನಚಕ್ಷುವಿನ ದೃಶ್ಯವು ಕಾಣಿಸಿದರೂ ಅದು ಆಚರಣೆಯಲ್ಲಿ ಬರುವದಿಲ್ಲ; ಮತ್ತು ಮಾಡಿದ ಪ್ರಯ ತ್ನಗಳೆಲ್ಲವೂ ವಿಫಲವಾಗುವವು.

**ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ ॥ ೧೨ ॥**

ಗೀತೆಯ ತತ್ವಜ್ಞಾನದಲ್ಲಿ ಜೀವನು ಪುರುಷೋತ್ತಮನನ್ನು ತಿಳಿ ಯುವ ವಿಷಯುವನ್ನೇ ಗುರಿಯಾಗಿ ಹೇಳಿದೆ. ಜೀವನು ತನ್ನನ್ನು ತಾನೇ ತಿಳಿಯುವ ವಿಷಯುವಾಗಿ ಹೇಳಿರುವದಿಲ್ಲ. ಪುರುಷೋತ್ತಮನು ಎಲ್ಲ ಸ್ಥಾವರ ಜಂಗಮ ವಸ್ತುಗಳಲ್ಲಿರುವನೆಂದು ಹೇಳಿದೆ ಮಾನವ ಶರೀರ ದಲ್ಲಿಯೂ ತನ್ನ ಹೇತುಸಿದ್ಧ್ಯರ್ಥವಾಗಿ ಆತನು ಇರುವನು. ಇದೂ ಲ್ಲದೆ ಅಖಿಲ ಜಗತ್ತನ್ನು ಪ್ರಕಾಶಿತವಾಗಿ ಮಾಡುವ ತೇಜವೂ ಇದ

ರಂತೆಯೇ ಚಂದ್ರನ ಮತ್ತು ಅಗ್ನಿಯ ತೇಜವೂ ಅವನಿಂದಲೇ ಉತ್ಪನ್ನವಾಗಿ ರುವವು. ಎಂದರೆ, ಇವುಗಳಲ್ಲೆಲ್ಲ ಆತನು ಇರುವದರಿಂದಲೇ ಅವುಗಳಿಗೆ ಪ್ರಕಾಶವನ್ನು ಉಂಟುಮಾಡುವ ಸಾಮರ್ಥ್ಯವು ಬರುವದು. ಈ ಶ್ಲೋಕ ದಲ್ಲಿ ಸೂರ್ಯಚಂದ್ರರನ್ನು ಕುರಿತು ಉತ್ಪ್ರೇಕ್ಷೆಯು ಇಲ್ಲವೆಂದು ಹೇಳುವದು ಅವಶ್ಯವಾಗಿದೆ

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ**
**ರಸಾತ್ಮಕಃ ॥ ೧೩ ॥**

ಪೃಥ್ವಿಯಲ್ಲೆಲ್ಲಿಯೂ ತುಂಬಿಕೊಂಡಿದ್ದು ನನ್ನ ಚೇತನ(ಓಜ)ಶಕ್ತಿ ಯಿಂದ ಎಲ್ಲ ಭೂತಗಳನ್ನೂ ಧಾರಣ ಮಾಡುವೆನು. ಸರ್ವ ಔಷಧಿಗಳನ್ನು ಅಂದರೆ ವನಸ್ಪತಿಗಳನ್ನು ರಸಾತ್ಮಕಸೋಮನೆನಿಸಿ ಪೋಷಿಸುವೆನು.

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥ ೧೪ ॥**

ನಾನು ವೈಶ್ವಾನರನೆಂಬ ಅಗ್ನಿಯೆನಿಸಿ ಎಲ್ಲ ಪ್ರಾಣಿಗಳಲ್ಲಿಯೂ ಇರು ವೆನು; ಮತ್ತು ಅಲ್ಲಿ ಪ್ರಾಣ ಮತ್ತು ಅಪಾನವಾಯುಗಳಿಂದ ಯುಕ್ತನಾಗಿ ನಾಲ್ಕು ವಿಧದ ಅನ್ನವನ್ನು ಪಚನ ಮಾಡುವೆನು. ಹೀಗೆ ಮಾಡುವದ ರಿಂದ ಪೃಥ್ವಿಯ ಮೇಲಿರುವ ಪ್ರಾಣಿಗಳ ಪೋಷಣೆಯಾಗುವದು.

**ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ॥**
**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾಂತಕೃದ್ವೇದವಿದೇವ ಚಾಹಂ ॥ ೧೫ ॥**

ಪ್ರಾಣಿಗಳನ್ನು ಪೋಷಿಸುವ ಕಾರ್ಯಕ್ಕಷ್ಟೇ ಅಲ್ಲ, ಅವುಗಳಲ್ಲಿ ಸಂಭವಿಸುವ ಎಲ್ಲ ಸಂಗತಿಗಳಿಗೂ ನಾನೇ ಕಾರಣನಾಗಿರುವೆನು. ಎಲ್ಲರ ಹೃದಯದಲ್ಲಿ ನಾನೇ ಅಧಿಷ್ಠಿತನಾಗಿದ್ದು ಅವರಲ್ಲಿ ಪ್ರಕಟವಾಗುವ ಜ್ಞಾನ

ಅಜ್ಞಾನಗಳಿಗೂ ಸ್ಮೃತಿ ವಿಸ್ಮೃತಿಗಳಿಗೂ ನಾನೇ ಕಾರಣನಾಗಿರುವೆನು. ಎಂದರೆ, ತನ್ನಲ್ಲಿ ನೆಲೆಸಿರುವ ಐಶ್ವರ್ಯ ಮತ್ತು ಪ್ರಭಾವ ಇವುಗಳಿಗೂ ಪ್ರಾಣಿಗಳ ಕ್ಷುದ್ರತೆಗೂ ಅವುಗಳಲ್ಲಿ ಉಂಟಾಗಿರುವ ವ್ಯಾಮೋಹ ಹಾಗು ಪುರುಷೋತ್ತಮನ ವಿಷಯದ ವಿಸ್ಮೃತಿ ಇವುಗಳಿಗೂ ಅವನೇ ಕಾರಣ ನಾಗಿರುವನು. ಈ ಕುಂದುಗಳಿಗಾಗಿ ಜೀವನು ಹೊಣೆಗಾರನಲ್ಲ. ಆದರೆ ತನ್ನ ಈ ನಿಯತಸ್ಥಿತಿಯಲ್ಲಿಯೇ ಇದ್ದುಕೊಂಡು ಪುರುಷೋತ್ತಮನು ಸೃಷ್ಟಿಯಲ್ಲಿ ನೆಸಿಸಿದ ಭಾವದೊಂದಿಗೆ ಸಮರಸನಾಗಿ, 'ತಾನು, ತನ್ನದು' ಎಂಬ ಕಾಮವನ್ನು ಎಂದರೆ ಇಚ್ಛಾದ್ವೇಷಗಳನ್ನು ಬಿಟ್ಟು ನಡೆದರೆ, ಎಲ್ಲ ಭಯಗಳಿಂದಲೂ ಅವನು ಮುಕ್ತನಾಗುವನೆಂದು ಶ್ರೀಕೃಷ್ಣನು ಗೀತೆಯಲ್ಲಿ ಖಂಡಿತವಾಗಿ ಅಭಯವನ್ನು ಹೇಳಿರುವನು.

ಪ್ರಾಣಿಗಳಲ್ಲಿ ಜ್ಞಾನ ವಿಸ್ಮೃತಿಗಳನ್ನುಂಟುಮಾಡಿರುವ ಮತ್ತೊಂದು ಪ್ರಸೇಯವು ಯಾವುದೆಂದರೆ ವೇದಗಳಿಗೆಲ್ಲ ಶ್ರೀಕೃಷ್ಣನೇ ವಿಷಯ ವಾಗಿದ್ದು ಅವುಗಳಿಂದ ತಿಳಿಯಬೇಕಾದ ತತ್ವವಾದರೂ ಪುರುಷೋತ್ತಮ ಶ್ರೀಕೃಷ್ಣನೇ. ಆದರೂ ವೇದಾಂತವನ್ನು ನಿರ್ಮಿಸಿದವನೂ ಜೀವಸ್ವರೂಪ ನಾಗಿ ವೇದಗಳನ್ನು ತಿಳಿಯಲು ಯತ್ನಿಸುವವನೂ ಶ್ರೀಕೃಷ್ಣನೇ ಸರಿ. ಸರ್ವಜ್ಞನಾದ ತನ್ನಲ್ಲಿಯೇ ತಾನು ಈ ಬಗೆಯ ಜ್ಞಾನ ವಿಸ್ಮೃತಿಗಳನ್ನು ಸೃಷ್ಟಿಕಾರ್ಯಕ್ಕಾಗಿ ಉಂಟುಮಾಡಿರುವನು.

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೧೬ ॥**

ತನ್ನ ಪ್ರಭಾವದ ಹೆಚ್ಚುಕಡಿಮೆಯನ್ನು ಸೃಷ್ಟಿಯಲ್ಲಿ ತಾನು ಯಾವ ರಚನಾಕೌಶಲ್ಯದಿಂದ ಸಾಧಿಸುವನೆಂಬದನ್ನು ಇಲ್ಲಿ ಹೇಳಿದೆ. ಪರಮೇಶ್ವ ರನು ಉಂಟುಮಾಡಿದ ಈ ಸೃಷ್ಟಿಯಲ್ಲಿ ಇಬ್ಬರು ಪುರುಷರು ಅಂತರ್ಭೂತ ರಾಗಿರುವರು. ಇವರಿಬ್ಬರಲ್ಲಿ ಸೃಷ್ಟಿಯನ್ನು ನಿರ್ಮಿಸುವ ಕಾರ್ಯಕ್ಕೆ ಸಂಪೂರ್ಣ ಕಾರಣನಾಗುವ ಕೂಟಸ್ಥಬ್ರಹ್ಮನು ಮೊದಲನೆಯ ಪುರುಷನು. ಇವನ ಭಾಗವು ನಿಯತವಾಗಿದೆ. ಪುರುಷೋತ್ತಮನಿಗಾಗಿ ಯಜ್ಞಮಾಡು

ವದು ಆತನ ನಿಯತಭಾವವು. ಈ ತನ್ನ ನಿಯತಭಾವದಿಂದ ಅವನಿಗೆ ಚ್ಯುತಿಯು ಎಂದೆಂದಿಗೂ ಉಂಟಾಗದು. ಆದುದರಿಂದಲೇ ಅವನನ್ನು ಅಕ್ಷರನೆಂದು ಹೇಳಿದೆ. ಈ ಬ್ರಹ್ಮನಲ್ಲಿ ಇರುವವನೂ ಅವನ ಅಂಶ ಭೂತನೂ ಆದ ಜೀವನೇ ಎರಡನೆಯ ಪುರುಷನು. ಇವನ ಸ್ವಭಾವವಾದರೂ ಬ್ರಹ್ಮನ ಸ್ವಭಾವದಂತೆಯೇ ನಿಯತವಾಗಿದೆ; ಎಂದರೆ, ಪರಮಾತ್ಮನಿಗಾಗಿ ಯಜ್ಞಮಾಡುವದೇ ಆ ಭಾವವು. ಆದರೆ ತನ್ನ ನಿಯತಯಜ್ಞಭಾವವನ್ನು ಕಾದುಕೊಳ್ಳುವದು ಕಷ್ಟಸಾಧ್ಯವಾಗಿಯೂ ಅದನ್ನು ಕಳೆದುಕೊಳ್ಳುವದು ಬಹಳ ಸುಕರವಾಗಿಯೂ ಇರುವಂತೆ ಇವನ ಪ್ರಕೃತಿಸ್ವಭಾವವು ರಚಿಸಲ್ಪಟ್ಟಿದೆ. ಆದುದರಿಂದ ತನ್ನ ನಿಯತಭಾವವನ್ನು ಇವನು ಬಹು ಸುಲಭವಾಗಿ ಮರೆಯುವನು. ಈ ಕಾರಣಕ್ಕಾಗಿ ಬ್ರಹ್ಮಾಂತರ್ಗತನಾದರೂ ಇವನ ಪುರುಷ ಸ್ವಭಾವವು ಬ್ರಹ್ಮನ ಸ್ವಭಾವದಿಂದ ಪ್ರತ್ಯೇಕವಾಗಿದ್ದು ಇವನಿಗೆ ಕ್ಷರನೆಂದು ಹೆಸರು.

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ೧೭ ॥**

ಮೇಲೆ ಹೇಳಿದ ಇಬ್ಬರು ಪುರುಷರಲ್ಲದೆ ಮತ್ತೊಬ್ಬ ಪುರುಷನಿರುವನು. ಅವನನ್ನು ಉತ್ತಮ ಪುರುಷನೆಂದು ಹೇಳುವರು, ಮತ್ತು ಪರಮಾತ್ಮನೆಂದೂ ಹೇಳುವರು. ಬ್ರಹ್ಮನಿಂದ ಉತ್ಪನ್ನವಾದ ಸೃಷ್ಟಿಯೆಲ್ಲವನ್ನೂ ಸಮಗ್ರವಾಗಿ ಇವನು ಆಕ್ರಮಿಸಿ ನಿಂತು ಆ ಸೃಷ್ಟಿಯ ರಕ್ಷಣವನ್ನೂ ಇವನೇ ಮಾಡುವನು. ಈ ಸೃಷ್ಟಿಗೆ ಈತನೇ ಒಡೆಯನು- ಈಶ್ವರನು- ಪ್ರಭುವು; ಮತ್ತು ಈ ಸೃಷ್ಟಿಯ ಮೇಲೆ ಅವನ ಅಧಿಕಾರವು ಅಪ್ರತಿಬಂಧವಾಗಿರುವದು. ಈತನು ಸೃಷ್ಟಿಯ ಒಳಗೂ ಹೊರಗೂ ಕೂಡಿಯೇ ಹಬ್ಬಿಕೊಂಡಿರುವನು. ಅವನ ಮೂಲವನ್ನಾಗಲಿ ವ್ಯಾಪ್ತಿಯನ್ನಾಗಲಿ ಅರಿತವನು ಮತ್ತಾವನೂ ಇಲ್ಲ. ಪರಮಾತ್ಮನೆಂದೂ ಕ್ಷೇತ್ರಜ್ಞನೆಂದೂ ಅವ್ಯಕ್ತನೆಂದೂ ಯಾವನನ್ನು ಗೀತೆಯಲ್ಲಿ ಹೇಳಿದೆಯೋ ಅವನೇ ಈ ಪುರುಷೋತ್ತಮನು.

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ॥ ೧೮ ॥**

ಈತನು ಈ ಸೃಷ್ಟಿಯೊಳಗಿನ ಕ್ಷರಪುರುಷನಿಗಿಂತಲೂ ಶ್ರೇಷ್ಠನು. ಅಲ್ಲದೆ ಈ ಸೃಷ್ಟಿಯೊಳಗೆ ಕೂಟಸ್ಥನೆಂದೂ ಅಕ್ಷರನೆಂದೂ ಹೇಳಲ್ಪಡುವ ಪುರುಷನಿಗಿಂತಲೂ ಶ್ರೇಷ್ಠನಾಗಿದ್ದಾನೆ. ಆದುದರಿಂದ ಈತನು **ಈ ಜಗತ್ತಿನಲ್ಲಿಯೂ ವೇದಗಳಲ್ಲಿಯೂ ಪುರುಷೋತ್ತಮನೆಂದು ಅನ್ವರ್ಥಕವಾಗಿ ಕರೆಯಲ್ಪಡುವನು.** ಇವನು ಪುರುಷನಾದುದರಿಂದ ಸುಖಕ್ಕೂ ಭೋಕ್ತೃತ್ವಕ್ಕೂ ಹೇತುವಾಗಿದ್ದಾನೆ. ಸೃಷ್ಟಿಯಲ್ಲಿ ಅಖಿಲಜೀವರಿಂದಲೂ ಉತ್ಪನ್ನವಾಗುವ ಮತ್ತು ಬ್ರಹ್ಮನ ಮುಖಾಂತರವಾಗಿ ತನಗೆ ಸಲ್ಲುವ ಯಜ್ಞ ಹಾಗು ತಪೋಭಾವಗಳೆಲ್ಲವನ್ನೂ ಉಪಭೋಗಿಸಿ ಸುಖಿಸುವವನು ಈತನೇ. ಈ ಉದ್ದೇಶದಿಂದ ಮೊದಲು ಅವನು ಸೃಷ್ಟಿಯನ್ನು ಸೃಜಿಸಿದನು. ಆದುದರಿಂದ ಅವನ ಇತರ ಯಾವ ಗುಣಧರ್ಮಕ್ಕಿಂತಲೂ ಅವನ ಪುರುಷಸ್ವಭಾವದ ಮಹತ್ವವು ಹೆಚ್ಚಾಗಿದೆ. ಹೀಗಿರುವದರಿಂದಲೇ ಪುರುಷೋತ್ತಮನೆಂಬ ಅವನ ಹೆಸರು ಅವನಿಗೆ ಪ್ರಿಯವಾಗಿದೆ.

**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ ।**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ ೧೯ ॥**

ಪುರುಷೋತ್ತಮನೆಂಬ ಹೆಸರಿನ ಸಾರ್ಥಕತೆಯನ್ನು ಈ ರೀತಿಯಾಗಿ ಯಾವನು ತಿಳಿಯುವನೋ ಮತ್ತು ಆತನನ್ನು ಪುರುಷೋತ್ತಮನೆಂದು ಬಗೆಯುವನೋ ಅವನು ಆತನ ಸ್ವಭಾವವನ್ನೂ ಗುಣಧರ್ಮಗಳನ್ನೂ ಸಂಪೂರ್ಣವಾಗಿ ತಿಳಿದಿರುವನೆಂಬುದಕ್ಕೆ ಸಂದೇಹವಿಲ್ಲ. ಇಂಥವನು ತಿಳಿಯಬೇಕಾದುದೆಲ್ಲವನ್ನೂ ತಿಳಿದವನೇ ಸರಿ; ಮತ್ತು ಹೀಗೆ ಅರಿತವನಾದುದರಿಂದ ಅವನಿಗೆ ಪುರುಷೋತ್ತಮನ ವಿಷಯದ ತನ್ನ ಕರ್ತವ್ಯವು ಗೊತ್ತಾಗಿರುವದು. ಆ ಕರ್ತವ್ಯವನ್ನು ನೆರವೇರಿಸುವದಕ್ಕಾಗಿ ಅವನು ತನ್ನ ಭಾವಸರ್ವಸ್ವದಿಂದ ಪುರುಷೋತ್ತಮನನ್ನು ಭಜಿಸುವನು.

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।**
**ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ಕೃತಕೃತ್ಯಶ್ಚ ಭಾರತ ॥ ೨೦ ॥**

ಈ ಮೇಲೆ ಹೇಳಿದ ನಿಷ್ಕರ್ಷೆಯು ಕ್ಷುಲ್ಲಕವಾದುದಲ್ಲ. ಈ ವರೆಗೆ ಭಗವಂತನು ಅರ್ಜುನನಿಗೆ ಹೇಳಿದ ತತ್ವಜ್ಞಾನವೂ ಅದರ ಈ ನಿರ್ಣಯವೂ ಅತ್ಯಂತ ಗುಹ್ಯವಾದ "ಅಧ್ಯಾತ್ಮ" ವೆಂಬ "ಶಾಸ್ತ್ರ"ದ ಸಾದ್ಯಂತ ವಿವರಣೆಯಾಗಿದೆ. ಅರ್ಜುನನ ಪುಣ್ಯದಿಂದಲೇ ಭಗವಂತನು ಅದನ್ನು ಅವನಿಗೆ ವಿವರಿಸಿದನು. ಅದನ್ನು ಯಥಾಯೋಗ್ಯವಾಗಿ ಗಮನಿಸಿ ಅರ್ಜುನನು ಬುದ್ಧಿವಂತನಾಗಬೇಕು; ಮತ್ತು ಅದನ್ನು ಆಚರಿಸಿ ಕೃತಕೃತ್ಯನಾಗಬೇಕು.

**ಹದಿನೈದನೆಯ ಅಧ್ಯಾಯವು ಸಮಾಪ್ತವು.**

———

ಓಂ

# ಹದಿನಾರನೆಯ ಅಧ್ಯಾಯವು

**ಅವತರಣಿಕೆ—**

ಮನುಷ್ಯನಿಗೆ ಜೀವಲೋಕದಲ್ಲಿ ಬಂಧನಗಳು ಹೇಗೆ ಉಂಟಾಗುವವೆಂಬದನ್ನೂ ಅವುಗಳಿಂದ ಅವನು ಹೇಗೆ ಸರ್ವಥಾ ದುಃಖಪರವಶನಾಗುವನೆಂಬದನ್ನೂ ಈ ಬಂಧನಗಳಿಂದ ಅವನು ಮುಕ್ತನಾಗುವದಕ್ಕೆ ಅತ್ಯಂತ ಸುಲಭವಾದ ಮಾರ್ಗವು ಆವುದೆಂಬುದನ್ನೂ ಹೇಳುವದೇ ಭಗವದ್ಗೀತೆಯ ಮುಖ್ಯ ವಿಷಯವಾಗಿದೆ. ಇದಲ್ಲದೆ ಬೇರೆ ವಿಷಯಗಳ ನಿರೂಪಣವಾಗಲಿ ಸ್ಪಷ್ಟೀಕರಣವಾಗಲಿ ಅದರಲ್ಲಿ ಅನುಷಂಗಿಕವಾಗಿ ಬಂದಿರುವವು.

ಬಂಧನದ ಮೂಲವು ಕರ್ಮದಲ್ಲಿರುವದಾದುದರಿಂದ ಕರ್ಮವನ್ನು ಕುರಿತು ವಿಸ್ತಾರವಾಗಿ ಆರಂಭದ ಅಧ್ಯಾಯಗಳಲ್ಲಿ ವಿವರಿಸಬೇಕಾಯಿತು. ಅಲ್ಲಿ ನ್ಯಾಯ್ಯ ಅಥವಾ ನಿಯತಕರ್ಮಗಳಿಂದ ಮುಕ್ತಿಯೂ ಮತ್ತು ವಿಕರ್ಮ ಅಥವಾ ಅಕರ್ಮಗಳಿಂದ ಬಂಧನವೂ ಉಂಟಾಗುವವೆಂಬ ವ್ಯುತ್ಪತ್ತಿಯನ್ನು ಶ್ರೀಕೃಷ್ಣನು ತಿಳುಹಿದನು. ಇಂಥ ಕರ್ಮಗಳನ್ನು ಮಾಡುತ್ತಲಿದ್ದರೆ, ಮನುಷ್ಯನಲ್ಲಿ ಅದರಿಂದ ವೃತ್ತಿಗಳು ನೆಲಸುವವು. ಈ ವೃತ್ತಿಗಳಿಗೇ ಶುಕ್ಲ ಅಥವಾ ಕೃಷ್ಣಮಾರ್ಗಗಳೆಂದೂ ಜ್ಞಾನ ಅಥವಾ ಅಜ್ಞಾನಗಳೆಂದೂ ಊರ್ಧ್ವ ಅಥವಾ ಅಧೋಗತಿಗಳೆಂದೂ ಬೇರೆ ಬೇರೆ ವಿಧವಾಗಿ ಹೆಸರಿಟ್ಟು ಹಲವು ಸಾರೆ ಅವುಗಳನ್ನು ಕುರಿತು ಬೋಧಿಸಿದೆ. ಆದರೆ ಇಂಥ ವೃತ್ತಿಗಳ ಉಗಮವು ಪ್ರಥಮತಃ ಕರ್ಮದಲ್ಲಿ ಇದ್ದರೂ ಮುಂದೆ ಅವುಗಳೇ ಸಂಸ್ಕಾರಗಳಾಗಿ ಪರಿಣಮಿಸುವವು. ಈ ಸಂಸ್ಕಾರಗಳ ಭಾರವನ್ನು ಮನುಷ್ಯನು ಜನ್ಮತಳೆಯುವಾಗ ತನ್ನೊಡನೆ ತೆಗೆದುಕೊಂಡು ಬರು

ವನು. ಈ ರೀತಿಯಾಗಿ ಮನುಷ್ಯನ ಸ್ವಭಾವದಲ್ಲಿ ಸಂಸ್ಕಾರಗಳು ಆ ಜನ್ಮದಿಂದಲೇ ದೃಢವಾಗಿ ಊರಿರುವವು. **ಇದಕ್ಕೆ ಮನುಷ್ಯನ ಸತ್ವವೆಂದು ಹೆಸರು.**

ಹೀಗೆ ಮನುಷ್ಯರಲ್ಲಿ ಬೆಳೆದ ಎರಡು ತರದ ವೃತ್ತಿಗಳನ್ನೂ ಅವು ಮುಕ್ತಿಗೆ ಹೇಗೆ ಸಾಧಕವಾಗಲಿ ಬಾಧಕವಾಗಲಿ ಆಗುವವೆಂಬದನ್ನೂ ಕುರಿತು ಈ ಅಧ್ಯಾಯದಲ್ಲಿ ವಿವರಿಸಿದೆ.

ಶ್ರೀಭಗವಾನುವಾಚ—

**ಅಭಯಂ ಸತ್ತ್ವಸಂಶುದ್ಧಿ ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥೧॥**

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಂ ।**
**ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ**
**ಹ್ರೀರಚಾಪಲಂ ॥ ೨ ॥**

**ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥೩॥**

ಯೋಗಯುಕ್ತವಾದ ಬುದ್ಧಿಯೂ ಇಂಥ ಬುದ್ಧಿಯಿಂದುಂಟಾದ ಜ್ಞಾನವೂ ಇಂಥ ಜ್ಞಾನಾಗ್ನಿಯಲ್ಲಿ ಪಾವಿತ್ರ್ಯವನ್ನು ಪಡೆದ ಸತ್ವವೂ ಇಂಥ ಸತ್ವದಲ್ಲಿ ನೆಲಸಿದ ನಿರ್ಭಯತೆಯೂ ಇವೇ ಮೊದಲಾದ ಗುಣಗಳಿಂದ ಕೂಡಿದ ಮನೋದಾರ್ಢ್ಯದೊಂದಿಗೆ ದಾನವೂ ದಮವೂ ಯಜ್ಞವೂ ಸ್ವಾಧ್ಯಯನವೂ ತಪವೂ ಸರಲತೆಯೂ ಅಹಿಂಸೆಯೂ ಸತ್ಯವೂ ಕ್ರೋಧ ವಿಲ್ಲದಿರುವಿಕೆಯೂ ತ್ಯಾಗಬುದ್ಧಿಯೂ ಶಾಂತಿಯೂ ಕ್ಷುದ್ರದೃಷ್ಟಿಯಿಲ್ಲ ದಿರುವದೂ ಭೂತಗಳಲ್ಲಿ ದಯೆಯೂ ವಿಷಯಾಸಕ್ತಿಯಿಲ್ಲದಿರುವಿಕೆಯೂ ಮೃದುಸ್ವಭಾವವೂ ಲಜ್ಜೆಯೂ ಚಂಚಲತೆಯಿಲ್ಲದಿರುವಿಕೆಯೂ ತೇಜವೂ ಕ್ಷಮೆಯೂ ದೃಢನಿಶ್ಚಯವೂ ಶುಚಿತ್ವವೂ ದ್ರೋಹವೆಣಿಸದಿರುವಿಕೆಯೂ ಅಭಿಮಾನವಿಲ್ಲದಿರುವಿಕೆಯೂ ಇವೇ ಮೊದಲಾದ ಗುಣಗಳು ಮನುಷ್ಯನಾಗಿ ಹುಟ್ಟಿದವನಲ್ಲಿ **ದೈವೀ ಸಂಪತ್ತೆನಿಸುವವು.**

**ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಂ ॥೪॥**

ದಂಭ, ದರ್ಪ, ಅಭಿಮಾನ, ಕ್ರೋಧ, ನಿಷ್ಠುರತೆ, ಅಜ್ಞಾನ, ಇವೇ ಮೊದಲಾದ ಗುಣಗಳು ಮನುಷ್ಯರಲ್ಲಿ **ಆಸುರ ಸಂಪತ್ತೆನಿಸುವವು.**

**ದೈವೀಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।**
**ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿಪಾಂಡವ ॥೫॥**

ದೈವೀ ಸಂಪತ್ತು ಮೋಕ್ಷಪ್ರದವಾಗಿರುವದೆಂದೂ ಆಸುರೀ ಸಂಪತ್ತಿನಿಂದ ಬಂಧನವುಂಟಾಗುವದೆಂದೂ ತಿಳಿಯಬೇಕು. ಅರ್ಜುನನು ದೈವೀ ಸಂಪತ್ತನ್ನು ಪಡೆದು ಹುಟ್ಟಿದವನಾದುದರಿಂದ ಅವನು ವಿಷಾದ ಪಡ ಬಾರದು.

**ದ್ವೌ ಭೂತಸರ್ಗೌ ಲೋಕೇಽಸ್ಮಿನ್ದೈವ ಆಸುರ ಏವ ಚ ।**
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥೬॥**

ಈ ದೃಷ್ಟಿಯಿಂದ ಜಗತ್ತಿನೊಳಗಿನ ಸಮಸ್ತ ಪ್ರಾಣಿಗಳನ್ನು ಎರಡು ಭಾಗಗಳಾಗಿ ಮಾಡಬಹುದು. ಒಂದಕ್ಕೆ ದೈವೀ ಎಂದೂ ಇನ್ನೊಂದಕ್ಕೆ ಆಸುರ ಎಂದೂ ಹೆಸರು. ಗೀತೆಯನ್ನು ಬೋಧಿಸಲಾರಂಭಿಸಿದ ಮೊದಲು ಇದುವರೆಗೆ ದೈವೀ ಸಂಪತ್ತನ್ನು ಕುರಿತು ವಿಸ್ತಾರವಾಗಿ ವಿವರಿಸಿದೆ. ಇನ್ನು ಈಗ ಆಸುರೀ ಸಂಪತ್ತಿನ ವಿಷಯವಾಗಿ ಹೇಳುವದನ್ನು ಅರ್ಜುನನು ಕೇಳ ಬೇಕು.

**ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥೭॥**

ಯಾವ ಕರ್ಮವು ಮಾಡಲು ಯೋಗ್ಯವು, ಯಾವುದು ವರ್ಜಿಸಲು ಯೋಗ್ಯವು ಎಂಬುದನ್ನೂ ಶುಚಿತ್ವ, ಆಚಾರ, ಸತ್ಯ ಇವುಗಳನ್ನೂ ಆಸುರೀ ಸಂಪತ್ತಿನಲ್ಲಿ ಹುಟ್ಟಿದವರು ಅರಿಯರು.

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ।**
**ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಂ ॥ ೮ ॥**

ಈ ಜಗತ್ತೇ ಅಸತ್ಯವು, ಇದಕ್ಕೆ ಆಧಾರವಿಲ್ಲ, ಆಳುವ ಈಶ್ವರನೂ ಇಲ್ಲ; ಪರಸ್ಪರ ಅನಪೇಕ್ಷಿತರಾದ ಮತ್ತು ಸಂಬಂಧವಿಲ್ಲದ ವ್ಯಕ್ತಿಗಳಿಂದುಂಟಾದ ಈ ಜಗತ್ತು ನಮ್ಮ ಕಾಮನೆಗಳನ್ನು ತೃಪ್ತಿಮಾಡಿಕೊಳ್ಳಲಿಕ್ಕಲ್ಲದೆ ಬೇರೆ ಏತಕ್ಕಿರಬಹುದು? ಎಂದು ಅವರು ವಾದಿಸುವರು.

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ।**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ॥ ೯ ॥**

ಆತ್ಮಬುದ್ಧಿಯನ್ನು ಹೋಗಲಾಡಿಸಿಕೊಂಡು, ಅಲ್ಪಬುದ್ಧಿಯನ್ನು ಹಿಡಿದು, ಇಂಥ ಕ್ಷುದ್ರದೃಷ್ಟಿಯನ್ನವಲಂಬಿಸಿದವರು ಈ ಜಗತ್ತಿನ ನಾಶಕ್ಕಾಗಿಯೇ ಭಯಾನಕ ಕರ್ಮಗಳನ್ನು ಮಾಡಲು ಹುಟ್ಟುವರು.

**ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ।**
**ಮೋಹಾದ್ಗೃಹೀತ್ವಾ ಸದ್ಗ್ರಾಹಾನ್ಪ್ರವರ್ತಂತೇಽ**
**ಶುಚಿವ್ರತಾಃ ॥ ೧೦ ॥**

ಎಂದಿಗೂ ತಣಿಯದ ಕಾಮದಿಂದ ಪೀಡಿತರಾಗಿ ದಂಭ ಮಾನ ಮದಗಳಿಗೆ ಇಂಬುಗೊಟ್ಟು ಮೋಹವಶರಾದುದರಿಂದ ದುಷ್ಟಕಲ್ಪನೆಗಳನ್ನು ಅವಚಿಕೊಂಡು ದುಷ್ಟಕರ್ಮಗಳನ್ನೇ ಮಾಡುವದಕ್ಕೆ ಇವರು ಪ್ರವೃತ್ತರಾಗುವರು.

**ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ।**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥ ೧೧ ॥**

**ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ।**
**ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥ-**
**ಸಂಚಯಾನ್ ॥ ೧೨ ॥**

ಆಮರಣ ಅಪರಿಮಿತವಾದ ಚಿಂತೆಯಲ್ಲಿ ಮಗ್ನರಾಗಿ, ಕಾಮೋಪಭೋಗವೇ ಮನುಷ್ಯನ ಪರಮಸಾಧ್ಯವೆಂದು ನೆರೆನಂಬಿ ನಡೆಯುವ ಈ ಜನರು ನೂರಾರು ಆಶೆಗಳೆಂಬ ಪಾಶಗಳಿಂದ ಬದ್ಧರಾಗಿ, ಕಾಮಕ್ರೋಧಾದಿಗಳನ್ನವಲಂಬಿಸಿ, ಕಾಯಭೋಗಕ್ಕೆಂದು ಅನ್ಯಾಯದಿಂದ ದ್ರವ್ಯ ಸಂಚಯವನ್ನು ಮಾಡುವರು.

ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಂ ।
ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಂ ॥ ೧೩ ॥

ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ ।
ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ಸುಖೀ॥ ೧೪ ॥

ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥ ೧೫ ॥

ಅವರ ಆಶೆಗಳಾವವು ಕಾಮಗಳೆಂಥವು ಎಂಬುದನ್ನು ಇಲ್ಲಿ ಹೇಳಿದೆ. ಈ ದಿನ ನಾನು ಇದನ್ನು ಗಳಿಸಿದೆನು. ಇನ್ನು ಮೇಲೆ ನನ್ನ ಇತರ ಮನೋರಥಗಳನ್ನಾದರೂ ನಾನು ದೊರಕಿಸುವೆನು. ಈ ಧನವು ಈ ಹೊತ್ತು ನನ್ನದಾಗಿದೆ. ಇದಕ್ಕಿಂತ ಹೆಚ್ಚಾದ ಧನವು ಇನ್ನು ಮುಂದೆ ನನ್ನದಾಗದಿರದು. ಈ ದಿನ ನಾನು ನನ್ನ ಆ ಶತ್ರುವನ್ನು ಕೊಂದೆನು. ಮತ್ತುಳಿದ ಶತ್ರುಗಳನ್ನಾದರೂ ಇನ್ನು ಮುಂದೆ ಕೊಲ್ಲದೆ ಇರಲಾರೆನು. ನಾನು ಈಶ್ವರನಾಗಿದ್ದೇನೆ. ನಾನು ಭೋಗಿಸುವಂಥವನು, ನಾನು ಸಿದ್ಧನು, ಬಲವಂತನು ಹಾಗು ಸುಖಿಯಾದವನು. ನಾನು ಧನಸಂಪನ್ನನು, ಕುಲಸಂಪನ್ನನು. ನನ್ನಂತೆ ಇನ್ನಾರು ಇರುವರು? ನಾನು ಯಜ್ಞವನ್ನು ಮಾಡುವೆನು, ದಾನಕೊಡುವೆನು; ನಾನು ಸುಖವನ್ನು ಪಡೆಯುವವನು ಎಂಬ ಅಜ್ಞಾನವೃತ್ತಿಯಿಂದ ಮೋಹಿತರಾಗಿ,

ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।
ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥ ೧೬ ॥

ಅನೇಕ ಪ್ರಕಾರದ ಕಲ್ಪನೆಗಳಿಂದ ಭ್ರಮಿತರೂ ಮೋಹದ ಬಲೆಯಲ್ಲಿ ಸಿಲುಕಿದವರೂ ವಿಷಯಾಸಕ್ತರೂ ಆದ ಈ ಆಸುರೀಸಂಪತ್ತಿನ ಜನರು ಅಪವಿತ್ರ ನರಕಕೂಪದಲ್ಲಿ ಬೀಳುತ್ತಾರೆ.

**ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ ।**
**ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಂ ॥ ೧೭ ॥**

ಮೇಲೆ ಹೇಳಿದ ವರ್ಣನೆಯು ಧರ್ಮದ ಕಲ್ಪನೆ ಇಲ್ಲದೆ ನಡೆಯುವ ಆಸುರ ವೃತ್ತಿಯವರದಾಯಿತು. ಆದರೆ ಅವರಂತೆಯೇ ಧರ್ಮದ ವೇಷ ವನ್ನು ಹಾಕಿಕೊಂಡು ಬದುಕುವ ಆಸುರವೃತ್ತಿಯುವರೂ ಇರುವರು. ಅಂಥವರ ವಿಷಯವಾಗಿ ಇನ್ನು ಹೇಳಿದೆ.

ಆತ್ಮ ಪ್ರೌಢಿಯಿಂದಲೂ ಅಹಂಕಾರದಿಂದಲೂ ನಡೆಯುವ, ಧನದ ಮತ್ತು ಅಭಿಮಾನದ ಮದದಿಂದ ತುಂಬಿದ ಈ ಜನರು ದಂಭಕ್ಕಾಗಿಯೇ ಅವಿಧಿಪೂರ್ವಕವಾಗಿ ಅಂದರೆ ಗೀತೆಯಲ್ಲಿ ಯೋಗ್ಯವೆಂದು ಹೇಳಿದ ವಿಧಾನ ವನ್ನು ( ೧೬-೨೧-೨೪ ) ಬಿಟ್ಟು, ಕೇವಲ ಹೆಸರಿಗೆ ಮಾತ್ರ ಯಜ್ಞಗಳನ್ನು ಆಚರಿಸುವರು.

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।**
**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥ ೧೮ ॥**

ಅಹಂಕಾರ, ಬಲ, ದರ್ಪ, ಕಾಮ, ಕ್ರೋಧಾದಿಗಳಿಂದ ಗ್ರಸ್ತ ರಾದ ಇವರು ತಮ್ಮಲ್ಲಿಯೂ ಹಾಗೆಯೇ ಇತರರಲ್ಲಿಯೂ ವಾಸವಾಗಿರುವ ನನ್ನನ್ನು ( ಪುರುಷೋತ್ತಮ ಶ್ರೀಕೃಷ್ಣನನ್ನು ) ಮತ್ಸರದಿಂದ ದ್ವೇಷ ಮಾಡುವರು.

**ತಾನಹಂ ದ್ವಿಷತಃ ಕ್ರೂರಾನ್ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ ೧೯ ॥**

ಹೀಗೆ ದ್ವೇಷಿಸುವವರೂ ಅಶುಭಕಾರ್ಯಗಳನ್ನು ಮಾಡುವವರೂ

ಆದ ಕ್ರೂರ ನರಾಧಮರನ್ನು ನಾನು ಎಂದೆಂದಿಗೂ ಪಾಪ (ಆಸುರ) ಯೋನಿಗಳಲ್ಲಿ ಹಾಕುವೆನು.

**ಗೀತೆಯಲ್ಲಿ ಆಸುರ (ಪಾಪ) ಯೋನಿ ಎಂಬುದಕ್ಕೆ,** ಜನ್ಮವೆತ್ತಿ ಜಗತ್ತಿನ ನಾಶಕ್ಕಾಗಿ ಕ್ರೂರಕರ್ಮಗಳನ್ನು ಗಾಢ ತಾಮಸವೃತ್ತಿಯಿಂದ ಮಾಡಿ ಆಯುಷ್ಯದಲ್ಲೆಲ್ಲ ದುಃಖಭೋಗವನ್ನು ಹಠಾತ್ತಾಗಿ ಗಳಿಸುವವರಿಗೆ ಅನುರೂಪವಾದ ಯೋನಿ ಎಂದು **ಅರ್ಥ ಮಾಡಬೇಕು.** ಪಶುಪಕ್ಷಿಗಳ ಅಥವಾ ಜಾತಿವಿಶಿಷ್ಟ ಚಾಂಡಾಲನ ಅಥವಾ ಹೆಣ್ಣು ಜೀವನದ ಯೋನಿಯೆಂದಲ್ಲ (೯-೩೨)

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್॥ ೨೦ ॥**

ಇಂಥ ಆಸುರ ಯೋನಿಗಳಲ್ಲಿ ಒಂದರ ಹಿಂದೊಂದು ಜನ್ಮವೆತ್ತುವ ಈ ಮೂಢರಿಗೆ ಅವರು ತೋರುವ ಬಾಹ್ಯಾಡಂಬರದ ಧರ್ಮಕ್ಕಾಗಿ ನನ್ನ ಅಂದರೆ ಪುರುಷೋತ್ತಮ ಶ್ರೀಕೃಷ್ಣನ ಪ್ರಾಪ್ತಿಯು ಎಂದಿಗೂ ಆಗುವದಿಲ್ಲ. ಇಷ್ಟೇ ಅಲ್ಲ, ಇದಕ್ಕೆ ಬದಲಾಗಿ ಅವರು ಜನ್ಮಜನ್ಮಕ್ಕೂ ಹೆಚ್ಚುಹೆಚ್ಚು ಅಧೋಗತಿಯನ್ನು ಹೊಂದುವರು.

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್॥ ೨೧॥**

ಮೇಲೆ ವರ್ಣಿಸಿದ ಆಸುರ ಸಂಪತ್ತಿಗೆ ಮೂಲಕಾರಣವಾವುದೆಂಬದನ್ನು ಶ್ರೀಕೃಷ್ಣನು ಇನ್ನು ವಿಶದಮಾಡುವನು.

ಮನುಷ್ಯನ ಸರ್ವಸ್ವದ ನಾಶಕ್ಕೆ ಕಾರಣವಾಗುವ ನರಕದ ಪ್ರವೇಶ ದ್ವಾರಗಳು ಕಾಮ ಕ್ರೋಧ ಲೋಭಗಳೆಂಬ ತ್ರಿವಿಧರೂಪವನ್ನು ಧರಿಸಿರುವವು. ಆದುದರಿಂದ ಈ ಮೂರು ದ್ವಾರಗಳನ್ನು ಬಿಟ್ಟುಬಿಡಬೇಕು.

**ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।**
**ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಂ ॥ ೨೨ ॥**

ಈ ಮೂರು ವಿಧದ ತಮೋದ್ವಾರಗಳನ್ನು ವರ್ಜಿಸಿ ಯಾವನು ಆತ್ಮನ ಕಲ್ಯಾಣವನ್ನು ಕೈಗೂಡಿಸುವ ದೈವೀ ಸಂಪತ್ತನ್ನು ಅವಲಂಬಿಸಿ ಆಚರಿಸು ವನೋ ಅವನು ಪರಮಗತಿಯನ್ನು ಪಡೆಯುವನು.

**ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥ ೨೩ ॥**

ಕಾಮಕ್ರೋಧ ಲೋಭವೆಂಬ ಆಸುರ ಸಂಪತ್ತನ್ನು ಬಿಟ್ಟು ಬಿಡು ವದೂ ಈ ಅಧ್ಯಾಯದ ಆರಂಭದಲ್ಲಿ ವರ್ಣಿಸಿದ ದೈವೀ ಸಂಪತ್ತನ್ನು ಅವ ಲಂಬಿಸುವದೂ ಗೀತೆಯಲ್ಲಿ ಬೋಧಿಸಿದ ಬುದ್ಧಿಯೋಗ ಶಾಸ್ತ್ರದ ಕೊನೆಯ ಸಿದ್ಧಾಂತಗಳಾಗಿವೆ. ಈ ಶಾಸ್ತ್ರ ನಿಷ್ಕರ್ಷೆಯನ್ನು ನಿರಾಕರಿಸಿ ಯಾವನು ತನ್ನ ಕಾಮನೆಗಳನ್ನೇ ಅನುಸರಿಸುವನೋ ಅವನಿಗೆ ಸಿದ್ಧಿಯು ಸಾಧಿ ಸದು, ಸುಖವು ದೊರೆಯದು ಅಥವಾ ಪರಮಗತಿಯೂ ಕೈಗೂ ಡದು.

ಈ ಶ್ಲೋಕದಲ್ಲಿ ಹೇಳಿದ ಶಾಸ್ತ್ರವೆಂಬ ಶಬ್ದಕ್ಕೆ ರೂಢಿಯಲ್ಲಿದ್ದ ಶಾಸ್ತ್ರ ವೆಂದೂ ಅಥವಾ ಶಾಸ್ತ್ರವೆಂದು ಹೆಸರುವಾಸಿಯಾದುದೆಂದೂ ಅರ್ಥವನ್ನು ಮಾಡುವದುಂಟು. ಈ ಅರ್ಥವು ಸರಿಯಾದುದಲ್ಲವೆಂದು ಇಲ್ಲಿ ಹೇಳುವದು ಅವಶ್ಯವಾಗಿದೆ. ಬೇರೆ ಯಾವ ಶಾಸ್ತ್ರಗಳ ಪರವಾಗಿಯೂ ಗೀತೆಯು ಹೊಣೆ ಯನ್ನು ವಹಿಸುವದಿಲ್ಲವೆಂದು ನಮಗೆ ತೋರುವದು. ಮೊದಲಿನ ಹದಿನೈದು ಅಧ್ಯಾಯಗಳಲ್ಲಿ ಯಾವ ಗೀತಾಪಿಷ್ಟವಾದ ಬುದ್ಧಿಯೋಗವನ್ನು ಜ್ಞಾನ ವಿಜ್ಞಾನ ಸಹಿತವಾಗಿ ನಿರೂಪಿಸಿ ಹದಿನೈದನೆಯ ಅಧ್ಯಾಯದ ಅಂತ್ಯದಲ್ಲಿ ಅದಕ್ಕೆ **"ಗುಹ್ಯತಮ ಶಾಸ್ತ್ರ" ವೆಂದು ನಾಮಕರಣವನ್ನು ಮಾಡಿ ದೆಯೋ ಆ ಶಾಸ್ತ್ರವೇ ಇಲ್ಲಿ ಅಭಿಪ್ರೇತವಾಗಿದೆ.** ಈ ಮೇಲೆ ಹೇಳಿದ ಬುದ್ಧಿಯೋಗ ಶಾಸ್ತ್ರದ ನಿಷ್ಕರ್ಷೆಯನ್ನು ಯಾರು ಅನುಸರಿಸುವದಿಲ್ಲವೋ ಅವರು ಕಾಮಾಚರಣೆಯನ್ನು ಮಾಡಿದ ಅಪರಾಧಕ್ಕೆ ಒಳಪಡುವರೆಂದು ಗೀತೆಯು ಇಲ್ಲಿ ಸಾರಿ ಹೇಳುತ್ತಲಿರುವದು. ಆದುದರಿಂದ ಇಲ್ಲಿ ಶಾಸ್ತ್ರ ವೆಂದರೆ ಪರಿಪೂರ್ಣವೂ ನಿರಪೇಕ್ಷವೂ ಆದ ಗೀತಾಶಾಸ್ತ್ರವೆಂದೇ ತಿಳಿಯ ಬೇಕೆಂಬುದು ನಿಸ್ಸಂದೇಹವಾಗಿದೆ.

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ ೨೪ ॥**

ಆದುದರಿಂದ ಗೀತೆಯಲ್ಲಿ ಹೇಳಿದ ಬುದ್ಧಿಯೋಗ ಶಾಸ್ತ್ರವನ್ನೂ ಆ ಶಾಸ್ತ್ರದ ಮೇಲ್ಕಾಣಿಸಿದ ಸಿದ್ಧಾಂತವನ್ನೂ ಅಂತಿಮವೆಂದು ಭಾವಿಸಿ, ಯಾವ ಕಾರ್ಯವನ್ನು ಮಾಡಬೇಕು, ಯಾವುದನ್ನು ಬಿಡಬೇಕು ಎಂಬದನ್ನು ನಿರ್ಣಯಿಸಬೇಕು. ಈ ಪ್ರಕಾರವಾದ ಶಾಸ್ತ್ರನಿರ್ಣಯವನ್ನು ತಿಳಿದು ಅರ್ಜುನನು ಕರ್ಮವನ್ನು ಕೈಕೊಳ್ಳುವದೇ ಯುಕ್ತವು. ಯುದ್ಧಮಾಡುವದನ್ನು ಅವನು ನಿರಾಕರಿಸಿದ್ದು ಅಯೋಗ್ಯವು.

ಹದಿನಾರನೆಯ ಅಧ್ಯಾಯವು ಸಮಾಪ್ತವು

———

ಓಂ

# ಹದಿನೇಳನೆಯ ಅಧ್ಯಾಯವು

**ಅವತರಣಿಕೆ—**

ಕಾಮವಶನಾಗಿ ಮನುಷ್ಯನು ಕರ್ಮಗಳನ್ನು ಮಾಡಕೂಡದು. ಅರ್ಜುನನ ಸಾತ್ವಿಕ ಸ್ವಭಾವಕ್ಕೆ ಇದು ಯಾವಾಗಲೂ ಸಮ್ಮತವು. ಆದರೆ ಈ ಸಾಧಾರಣವಾದ ಸೂತ್ರವೇ ಶ್ರೀಕೃಷ್ಣ ಭಗವಂತನ ಉದಾತ್ತವೂ ಉತ್ತಮೋತ್ತಮವೂ ಆದ ಬುದ್ಧಿಯೋಗಶಾಸ್ತ್ರಕ್ಕೆ ಅಡಿಗಲ್ಲಾಗಿರುವದೆಂಬದು ಅರ್ಜುನನಿಗೆ ಈಗ ತಿಳಿಯಿತು. ಈ ಶಾಸ್ತ್ರದಲ್ಲಿ ಕಾಮವೆಂಬ ಶಬ್ದವು ಅಹಂಕಾರಕ್ಕೆ ಸಮಾನಾರ್ಥಕವಾಗಿರುವದು. ತಾತ್ವಿಕರೀತಿಯಾಗಿ ಕಾಮವನ್ನು ಬಿಡುವದೆಂದರೆ ಅಹಂಕಾರವನ್ನು ಬಿಡುವದೆಂದರ್ಥ; ಮತ್ತು ಹೀಗೆ ಬಿಡುವದು ಕೂಡ ಪರಮಾವಧಿಯ ಉತ್ಕಟತೆಯಿಂದ ಬಿಡಬೇಕು. ಅರ್ಜುನನ ಆಗಿನ ಸ್ಥಿತಿಯಲ್ಲಿ ಹೀಗೆ ಬಿಡುವದು ಅವನಿಗೆ ಬಹುಶಃ ಅಶಕ್ಯವಾಗಿ ತೋರುವದು ಆಶ್ಚರ್ಯವಲ್ಲ. ಏಕೆಂದರೆ ಬುದ್ಧಿಯೋಗಶಾಸ್ತ್ರದ ತತ್ವಗಳು ಅವನ ಬುದ್ಧಿಗೆ ಗೋಚರವಾಗಿದ್ದರೂ ಅವು ಅವನ ಸ್ವಭಾವದಲ್ಲಿ ಅವತರಿಸಲಿಕ್ಕೆ ಇನ್ನೂ ಅವಕಾಶವಿತ್ತು. ಈ ಕಾರಣದಿಂದ ಅವನ ಮನಸ್ಸು ಇನ್ನೂ ಶಂಕೆಗೊಳಗಾಗಿ ಸುಲಭವಾದ ಹಾದಿಯನ್ನು ಹುಡುಕುತ್ತಿತ್ತು.

ಕರ್ಮಕ್ಕಿಂತಲೂ ಬುದ್ಧಿಯೇ ಶ್ರೇಷ್ಠವೆಂದು ಹಿಂದೆ ಶ್ರೀಕೃಷ್ಣನು ಹೇಳಿದುದನ್ನು ಅವನು ಮರೆತಿರಲಿಲ್ಲ. ಸಹಜವಾಗಿಯೇ ಅವನಿಗೆ ತೋರಿದ್ದೇನೆಂದರೆ ಅಹಂಕಾರವನ್ನು ನಿರ್ಮೂಲವಾಗಿ ಬಿಟ್ಟು ಕರ್ಮವನ್ನು ಆಚರಿಸುವದಕ್ಕಿಂತಲೂ ಬುದ್ಧಿಸರ್ವಸ್ವವನ್ನು ಭಗವಂತನಿಗೆ ಅರ್ಪಿಸಿ ಪರಾಕಾಷ್ಠೆಯ ಶ್ರದ್ಧೆಯಿಂದ ನಡೆದರೆ ಪುರುಷೋತ್ತಮ ಶ್ರೀಕೃಷ್ಣನ ಕೃಪೆಯು

ಏಕೆ ಕೈಗೂಡಬಾರದು? ಹೀಗಾಗುವದು ಶಕ್ಯವಾದ ಪಕ್ಷಕ್ಕೆ ಈ ಮಾರ್ಗವೇ ಸುಲಭವೆಂದೂ ಅಲ್ಪಶ್ರಮದ್ದೆಂದೂ ಅವನಿಗೆ ತೋರಿತು. ಈ ಅಧ್ಯಾಯದ ಆರಂಭದಲ್ಲಿ ಅವನು ಶ್ರೀಕೃಷ್ಣನನ್ನು ಕುರಿತು ಮಾಡಿದ ಪ್ರಶ್ನೆಯ ಮರ್ಮವು ಇದೇ.

ಅರ್ಜುನ ಉವಾಚ—

**ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥ ೧ ॥**

ಕರ್ಮವನ್ನು ಬಿಡಬಾರದೆಂಬ ಮಾತು ಅರ್ಜುನನಿಗೆ ಸಮ್ಮತವಾಯಿತು. ಇದೂ ಅಲ್ಲದೆ, ಹೀಗೆ ಮಾಡಿದ ಕರ್ಮಕ್ಕೆ ಭಗವಂತನ ವಿಷಯದ ಪರಮಾವಧಿಯ ಭಕ್ತಿಯೂ ಸೇರಿದರೆ **ಬುದ್ಧಿಯೋಗ ಶಾಸ್ತ್ರದಲ್ಲಿ ಹೇಳಿದ ಕರ್ಮಯೋಗವು** ಸಾಧಿಸುವದೆಂಬದೂ ಅವನಿಗೆ ತಿಳಿಯಿತು. ಇದರಲ್ಲಿ ಭಗವಂತನಲ್ಲಿ ಭಕ್ತಿಯೇ ಮುಖ್ಯವಾದುದರಿಂದ ಆ ಭಕ್ತಿಯನ್ನೇ ಅಖಂಡವಾಗಿ ಸಾಧಿಸುವ ಪ್ರಯತ್ನವನ್ನು ಮಾಡಿ ತಾನು ಏಕೆ ಕೃತಕೃತ್ಯನಾಗಬಾರದು? ಇದು ಶಕ್ಯವಾದ ಪಕ್ಷಕ್ಕೆ ಪ್ರಶ್ನೆಯು ಬಹಳ ಸುಲಭವಾಗುವದು. ಅರ್ಜುನನು ಅನನ್ಯಭಾವದಿಂದ ತನಗಾಗಿ ಮಾಡಿದ ಭಕ್ತಿಯಜ್ಞವನ್ನು ಶ್ರೀಕೃಷ್ಣ ಭಗವಂತನು ಸ್ವೀಕರಿಸಿ ಈಗಾಗಲೇ ಹೇಳಿದ ಕಠಿಣವಾದ ಮತ್ತು ಶ್ರಮಸಾಧ್ಯವಾದ ಶಾಸ್ತ್ರನಿರ್ಬಂಧದಿಂದ ಅವನನ್ನು ಏತಕ್ಕೆ ಬಿಡಿಸಬಾರದು? ಹೀಗೆ ಪ್ರಯತ್ನ ಪಡುವವನ ನಿಷ್ಠೆಯು ಶ್ರೀಕೃಷ್ಣ ಭಗವಂತನಿಗೆ ಯಾವ ಗುಣವುಳ್ಳದ್ದೆಂದು ತೋರುವದು? ಇದು ಸಾತ್ವಿಕವೆಂದು ಅವನು ಒಪ್ಪಿದರೆ ಅರ್ಜುನನ ಧರ್ಮಸಂಕಟವೇ ಹರಿದು ಹೋಗುವದು. ಮತ್ತು ಅವನು ಕರ್ಮಮಾಡಲಿ ಮಾಡದಿರಲಿ ಅದರ ಭಾರವು ಅವನ ಮೇಲೆ ಉಳಿಯುವದಿಲ್ಲ.

ಈ ಶ್ಲೋಕದಲ್ಲಿ ಶಾಸ್ತ್ರವಿಧಿಯೆಂದರೆ ಹದಿನಾರನೆಯ ಅಧ್ಯಾಯದ ೨೩ನೆಯ ಶ್ಲೋಕದಲ್ಲಿ ಹೇಳಿದುದೆಂಬದನ್ನು ಮರೆಯಬಾರದು.

ಶ್ರೀಭಗವಾನುವಾಚ—

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ ೨ ॥**

ಶ್ರದ್ಧೆಯೆಂಬದು ಒಂದು ಸದ್ಗುಣವೇ, ಸಂದೇಹವಿಲ್ಲ; ಮತ್ತು **ತಾತ್ವಿಕವಾಗಿ ಶ್ರದ್ಧೆಯಲ್ಲಿ ಅವಗುಣಗಳಿರಬಾರದೆಂಬುದೂ ಸ್ವಾಭಾವಿಕವು.** ಆದುದರಿಂದಲೇ ತಾನು ಹೇಳಿದ ಬುದ್ಧಿಯೋಗವನ್ನು ಅಲ್ಪಮಟ್ಟಿಗೆ ಆಚರಿಸಿದರೂ ಅದು ಮಹಾಭಯದಿಂದ ರಕ್ಷಿಸುವದೆಂದು ಭಗವಂತನು ಹೇಳಿರುವನು. ಇದೂ ಅಲ್ಲದೆ ವಿಶ್ವಾಸವಿಟ್ಟು ಪ್ರಯತ್ನವನ್ನಾರಂಭಿಸಿದರೆ ಕೊನೆಯ ಮೋಕ್ಷದವರೆಗೆ ಮನುಷ್ಯನು ಹೆಜ್ಜೆಹೆಜ್ಜೆಯಾಗಿ ಪ್ರಗತಿಪರನಾಗುವನೆಂದೂ ಪ್ರಯತ್ನವು ಎಷ್ಟೇ ಅಲ್ಪವಾದರೂ ಅದು ನಿಷ್ಫಲವಾಗದೆ ಅದಕ್ಕೆ ಪ್ರತಿಫಲವು ದೊರೆಯುವದೆಂದೂ ಅರ್ಜುನನಿಗೆ ಈ ಮೊದಲೇ ಹೇಳಿದೆ. ಆದರೆ ಈ ಶ್ರದ್ಧೆಯು ಸಾಧಾರಣ ಮನುಷ್ಯನಲ್ಲಿ ಶುದ್ಧಸ್ವರೂಪದಲ್ಲಿ ಸಂಭವಿಸುವದಿಲ್ಲ. ಅದು ಅವನ ಸ್ವಭಾವದ ಹಾಗು ವೃತ್ತಿಗಳ ಮುಸುಕಿನಲ್ಲಿ ಹುದುಗಿಕೊಂಡಿರುವದರಿಂದ ಅದರ ಸ್ವಾಭಾವಿಕ ಪವಿತ್ರತೆಯು ಅವನಲ್ಲಿ ಅಖಂಡವಾಗಿರುವದಿಲ್ಲ. ಆದುದರಿಂದ ಶ್ರದ್ಧೆಯನ್ನು ಕುರಿತು ವಿಚಾರಮಾಡುವಾಗ ಅದು ಮೂರರೊಳಗೆ ಯಾವುದಾದರೊಂದು ಗುಣದ ಹೊದಿಕೆಯಲ್ಲಿ ಕಾಣಿಸಿಕೊಳ್ಳುವದೆಂಬದನ್ನು ಮರೆಯಬಾರದು.

**ಸತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ**
**ಸ ಏವ ಸಃ ॥ ೩ ॥**

ಮೇಲೆ ಹೇಳಿದಂತೆ ಶ್ರದ್ಧೆಯು ಅವನವನ ಸತ್ವವನ್ನು ಅನುಸರಿಸಿರುವದು. ಮನುಷ್ಯನಲ್ಲಿ ಮೂರು ಗುಣಗಳ ವ್ಯಾಪಾರಗಳು ಹೇಗೆ ನಡೆಯುವವೆಂಬದನ್ನು ೧೪ನೆಯ ಅಧ್ಯಾಯದಲ್ಲಿ ಹೇಳಿದೆ (೧೪–೧೦). ಈ ಮೂರು ಗುಣಗಳ ಉತ್ಕರ್ಷಾಪಕರ್ಷಗಳು ಪರಿವರ್ತನೆಯಿಂದ ನಡೆಯುವವು. ಮತ್ತು ಅವುಗಳಲ್ಲಿ ಒಂದು ಉಚ್ಚವಾದಾಗ ಉಳಿದ ಎರಡು ಗುಣಗಳು ಬಲಹೀನವಾಗಿರುವವು.

ಈ ವಿಷಯದಲ್ಲಿ ಗ್ರಹಿಸಬೇಕಾದ ಮತ್ತೊಂದು ಸಂಗತಿಯೇನೆಂದರೆ, ಒಂದೊಂದು ವ್ಯಕ್ತಿಯಲ್ಲೂ ಈ ಮೂರರೊಳಗೆ ಯಾವದಾದರೊಂದು ಗುಣದ ವರ್ಚಸ್ಸು ಈ ಮೊದಲೇ ಬೆಳೆದು ಬೇರೂರಿರುವದು. ಪ್ರಸಂಗ ವಿಶೇಷದಲ್ಲಿ ನಡೆದಿರುವ ಈ ಮೂರು ಗುಣಗಳ ಹೋರಾಟವು, ಈ ಮೊದಲೇ ಆ ಕ್ಷೇತ್ರದಲ್ಲಿ ಬೇರೂರಿದ ಆಯಾ ಗುಣದ ವರ್ಚಸ್ಸಿಗೆ ಅಧೀನವಾಗಿಯೇ ನಡೆಯುವದು. **ಈ ವರ್ಚಸ್ಸಿಗೇ ಮನುಷ್ಯನ ಸತ್ವವೆಂದು ಹೆಸರು.** ನಾನಾ ವ್ಯಕ್ತಿಗಳಲ್ಲಿ ಒಂದೇ ಗುಣದ ಪ್ರಾಬಲ್ಯವು ಬೆಳೆದಾಗ ಅದರ ಪರಿಣಾಮವು ಒಂದೇ ರೀತಿಯಾಗಿರದೆ ಬೇರೆ ಬೇರೆ ವಿಧವಾಗಿ ಪ್ರಕಟವಾಗುವದಕ್ಕಾದರೂ ಇದೇ ಕಾರಣವಾಗಿದೆ. ಒಂದೊಂದು ವ್ಯಕ್ತಿಯಲ್ಲಿರುವ ಶ್ರದ್ಧೆಯು ಗುಣಾವಗುಣಗಳು ಆ ವ್ಯಕ್ತಿಯ ಸತ್ವವನ್ನವಲಂಬಿಸಿರುವವು. ಮನುಷ್ಯನ ನೈಸರ್ಗಿಕ ಪ್ರವೃತ್ತಿಯು ಪ್ರಾಮುಖ್ಯವಾಗಿ ಅವನಲ್ಲಿ ನೆಲಸಿದ ಸತ್ವದಿಂದ ನಿರ್ಣೀತವಾಗುವದು. ಆದುದರಿಂದ ಅವನ ಕಲ್ಪನೆಗಳು ಅಥವಾ ಭಾವನೆಗಳೆಲ್ಲವೂ ಅವನ ಸತ್ವವನ್ನನುಸರಿಯೇ ಉಂಟಾಗುವವು. ಮನುಷ್ಯನೆಂದರೆ ಇಂಥ ಸತ್ವದ ಅಥವಾ ಶ್ರದ್ಧೆಯ ಆಕಾರಗೊಂಡ ಮೂರ್ತಿಯೆಂದೇ ಹೇಳಬಹುದು. ಮನುಷ್ಯನಲ್ಲಿ ಒಂದಿಲ್ಲೊಂದು ಶ್ರದ್ಧೆಯು ಇದ್ದೇ ಇರುವದು. ಯಾವನ ಶ್ರದ್ಧೆಯು ಹೇಗೆ ಇರುವದೋ ಅದರಂತೆಯೇ ಅವನು ಇರುವನು.

**ಯಜಂತೇ ಸಾತ್ವಿಕಾ ದೇವಾನ್ಯಕ್ಷರಕ್ಷಾಂಸಿ ರಾಜಸಾಃ ।**
**ಪ್ರೇತಾನ್ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥ ೪ ॥**

ಮನುಷ್ಯನಲ್ಲಿರುವ ಶ್ರದ್ಧೆಯಿಂದ ಅವನಿಗಾಗಬೇಕಾದ ಮಹತ್ವದ ಉಪಯೋಗವೇನೆಂದರೆ ಅದರಿಂದ ಅವನ ವೃತ್ತಿಗಳು ಪರಮಾತ್ಮನ ಕಡೆಗೆ ಎಳೆಯಲ್ಪಡಬೇಕು. ವೃತ್ತಿಗಳು ಹೀಗೆ ಪರಮೇಶ್ವರಾಭಿಮುಖವಾಗಿರುವದಕ್ಕೆ ಅವನ ವಿಷಯದ ಪೂಜ್ಯಬುದ್ಧಿಯೂ ಅವನಿಗಾಗಿ ಮಾಡಿದ ಯಜ್ಞಕರ್ಮಗಳೂ ಸಾಕ್ಷಿಯಾಗುವವು. ಆದುದರಿಂದ ಸಾತ್ವಿಕವೃತ್ತಿಯುಳ್ಳವರು ದೇವತೆಗಳನ್ನು ಭಜಿಸುವರು. ಈ ವಿಷಯವಾಗಿ ಹಿಂದೆ (೭–೨೧,೨೩) ವಿವರಿಸಿದೆ. ರಾಜಸಶ್ರದ್ಧೆಯುಳ್ಳವರು ಯಕ್ಷರಾಕ್ಷಸರನ್ನು ಭಜಿಸುವರು; ಮತ್ತು ತಾಮಸಶ್ರದ್ಧೆಯುಳ್ಳವರು ಭೂತಪ್ರೇತಾದಿಗಳನ್ನು ಭಜಿಸುವರು.

**ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋಜನಾಃ।**
**ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥೫॥**

**ಕರ್ಷಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ।**
**ಮಾಂ ಚೈವಾಂತಃಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯಾನ್ ॥೬॥**

ಯಾವ ದೈವತದ ಆರಾಧನೆಯನ್ನಾದರೂ ತಪಃಶಕ್ತಿಯಿಂದಲೇ ಸಾಧಿಸಬೇಕಾಗುವದು. ತಪಃಶಕ್ತಿಯು ಶ್ರದ್ಧೆಗನುಗುಣವಾಗಿ ಸತ್ವ ರಜಸ್ತಮೋಗುಣಗಳೊಳಗೆ ಒಂದಾಗಿ ಪ್ರಕಟವಾಗುವದು. ದಂಭಾಹಂಕಾರಗಳಿಂದಲೂ ಕಾಮ ಮತ್ತು ಆಸಕ್ತಿಗಳ ಆವೇಗದಿಂದಲೂ ಕೂಡಿದವರು ಶಾಸ್ತ್ರಕ್ಕೆ ವಿಹಿತವಲ್ಲದ ಘೋರ ತಪಸ್ಸನ್ನು ಆಚರಿಸುವರು. ಇವರು ಪುರುಷೋತ್ತಮ ಶ್ರೀಕೃಷ್ಣನನ್ನು ಲಕ್ಷಿಸದೆ ಅಚೇತಸರಾಗಿರುವರು, ಅಂದರೆ ಬುದ್ಧಿಯು ಏಕಾಗ್ರತೆಯಿಲ್ಲದೆ ಇರುವರು. ತಮ್ಮ ಶರೀರಮಾತ್ರಕ್ಕೆ ಈಶ್ವರರೂ ಅಧಿಕಾರಿಗಳೂ ಆದುದರಿಂದ ಶರೀರದಲ್ಲಿ ತಮಗಧೀನವಾದ ಭೂತಮಾತ್ರಗಳನ್ನೇ ಅಲ್ಲದೆ ತಮಗೆ ಸಹವಾಸಿಯಾಗಿರುವ ಶ್ರೀಕೃಷ್ಣ ಪುರುಷೋತ್ತಮನನ್ನೂ ಇವರು ಕಷ್ಟಪಡಿಸುವರು. ಶ್ರದ್ಧಾಪೂರ್ವಕನಾಗಿ ಇಂಥವರು ಮಾಡುವ ತಪೋನಿಶ್ಚಯಗಳೆಲ್ಲವೂ ಆಸುರವೆಂದು ಅರ್ಜುನನು ಖಂಡಿತವಾಗಿ ತಿಳಿಯಬೇಕು.

**ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ।**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥೭॥**

ಮೇಲೆ ಹೇಳಿದಂತೆ ಮನುಷ್ಯನ ಸತ್ವವೇ ತ್ರಿಗುಣಗಳ ಅಧೀನದಲ್ಲಿ ಸಿಲುಕಿರುವದು. ಅಂದಮೇಲೆ ಅವನ ಸತ್ವದಿಂದಲೇ ಸಂಭವಿಸುವ ಇತರ ವ್ಯವಹಾರಗಳೆಲ್ಲ ಈ ತ್ರಿಗುಣಗಳಿಂದ ಯುಕ್ತವಾಗಿರುವದು ಸಹಜವಾಗಿದೆ. ಅವನ ಆಹಾರ, ಯಜ್ಞ, ತಪ, ದಾನ ಇವೆಲ್ಲ ಶ್ರದ್ಧೆಯನ್ನನುಸರಿಸಿ ಮೂರು ಬೇರೆ ಬೇರೆ ಸ್ವರೂಪದಲ್ಲಿ ಕಾಣಿಸಿಕೊಳ್ಳುವವು. ಆಹಾರ ವಿಷಯದಲ್ಲಿನ ಮನುಷ್ಯನ ಪ್ರೀತಿಯು ಮೂರು ತರದ್ದಾಗಿದೆ. ಅದರ ಪ್ರಕಾರಗಳನ್ನು ಶ್ರೀಕೃಷ್ಣನು ಇಲ್ಲಿ ಹೇಳುತ್ತಾನೆ.

**ಆಯುಃಸತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ವಿಕಪ್ರಿಯಾಃ ॥ ೮ ॥**

ಆಯುಷ್ಯ, ಸತ್ವಗುಣ, ಬಲ, ಆರೋಗ್ಯ, ಸುಖ, ಪ್ರೀತಿ, ಇವು ಯಾವ ಆಹಾರದಿಂದ ಬೆಳೆಯುವವೋ, ಯಾವದು ರಸಭರಿತವೂ ಸ್ನಿಗ್ಧವೂ ಕಸುವುಳ್ಳದ್ದೂ ಮನೋಹರವೂ ಆಗಿದೆಯೋ ಅಂಥ ಆಹಾರವು ಸಾತ್ವಿಕರಿಗೆ ಪ್ರಿಯವಾಗುವದು.

ಖಾದ್ಯಪದಾರ್ಥಗಳ ಗುಣಧರ್ಮಗಳನ್ನು ತ್ರಿಗುಣಗಳ ಅನುರೋಧದಿಂದ ವರ್ಗೀಕರಿಸುವ ಉದ್ದೇಶವು ಈ ಶ್ಲೋಕಗಳಲ್ಲಿ ಇಲ್ಲ. ಸಾತ್ವಿಕನ ಆಹಾರದಲ್ಲಿಯ ಪ್ರೀತಿಯು ಸಾತ್ವಿಕವಾಗಿರುವದರಿಂದ ಅವನು ಸಹಜವಾಗಿಯೇ ಒಳ್ಳೆಯ ಪೋಷಕವೂ ಹಿತಕರವೂ ಆದ ಆಹಾರವನ್ನು ಬಯಸುವನು. ಅವನ ಸತ್ವಗುಣವು ಅವನ ಆಹಾರ ವಿಷಯದ ಪ್ರೀತಿಯಲ್ಲಿರುವದು. ಪದಾರ್ಥಗಳು ಸಾತ್ವಿಕವಾದ ಮಾತ್ರಕ್ಕೆ ಅವನ್ನು ಗ್ರಹಣಮಾಡುವವನು ಸತ್ವಗುಣಿಯಾಗುವನೆಂದು ಊಹಿಸಕೂಡದು. ಏಕೆಂದರೆ ರಾಜಸ ತಾಮಸರಿಗೆ ಸಾತ್ವಿಕ ಅನ್ನವು ನಿಷಿದ್ಧವಲ್ಲ; ಮತ್ತು ಅದು ಅವರಿಗೆ ರುಚಿಸುವದಿಲ್ಲವೆಂಬಂತೆಯೂ ಇಲ್ಲ.

**ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ ೯ ॥**

ತೀಕ್ಷ್ಣವೂ ಹುಳಿಯೂ ಕಾರವೂ ಉಪ್ಪು ಬಲುಬಿಸಿಯೂ ರುಕ್ಷವೂ ದಾಹಕವೂ ಮತ್ತು ಯಾವುದನ್ನು ಸೇವಿಸುವದರಿಂದ ದುಃಖ ರೋಗಾದಿಗಳು ಸಂಭವಿಸುವವೋ ಅಂಥ ಆಹಾರವು ರಾಜಸ ಸ್ವಭಾವದವರಿಗೆ ಪ್ರಿಯವು.

**ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಂ ॥ ೧೦ ॥**

ತಂಗಳೂ ರಸಹೀನವೂ ಕೆಟ್ಟ ವಾಸನೆಯುಳ್ಳದ್ದೂ ರಾತ್ರಿಕಳೆದು

ಹೋದದ್ದೂ ಉಚ್ಛಿಷ್ಟವೂ ಅಪವಿತ್ರವೂ ಆದ ಆಹಾರವೇ ತಾಮಸರಿಗೆ ಪ್ರಿಯವಾಗುವದು.

**ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ವಿಕಃ ॥ ೧೧ ॥**

ಫಲಾಕಾಂಕ್ಷೆಯನ್ನು ತಳೆಯದೆ, ಯಜಿಸುವದು ಕರ್ತವ್ಯವೆಂದು ಬಗೆದು ವಿಧಿಪೂರ್ವಕವಾಗಿ ಪೂರ್ಣಮನಸ್ಸಿನಿಂದ ಮಾಡಿದ ಯಜ್ಞವು ಸಾತ್ವಿಕವೆನಿಸುವದು.

**ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಂ ॥ ೧೨ ॥**

ಫಲಾಕಾಂಕ್ಷೆಯನ್ನು ತಳೆದು ಇಲ್ಲವೆ ಕೇವಲ ದಂಭಕ್ಕಾಗಿ ಮಾಡಿದ ಯಜ್ಞವು ರಾಜಸವು.

**ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಂ ।**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ ೧೩ ॥**

ಶಾಸ್ತ್ರವಿಧಿಯನ್ನು ಬಿಟ್ಟು (೧೬-೪೨), ಅನ್ನದಾನಮಾಡದೆ ಮಂತ್ರ ವಿಹೀನವಾಗಿಯೂ ದಕ್ಷಿಣೆಯನ್ನು ಕೊಡದೆಯೂ ಮಾಡಿದ ಯಜ್ಞವನ್ನು ಅಂದರೆ ಯಾವ ಯಜ್ಞದಲ್ಲಿ ಶ್ರದ್ಧಾತ್ಯಾಗಗಳು ಎಳ್ಳಷ್ಟಾದರೂ ಇರುವ ದಿಲ್ಲವೋ ಅಂಥ ಯಜ್ಞವನ್ನು ತಾಮಸವೆಂದು ಹೇಳಬೇಕು.

ಈ ಶ್ಲೋಕಗಳ ಅರ್ಥಮಾಡುವಾಗ ಕರ್ತೃಪಿನ ಗುಣವನ್ನು ಕಂಡು ಕೊಳ್ಳುವದಕ್ಕಾಗಿ ಅವನು ಮಾಡುವ ಕರ್ಮದ ಸ್ವರೂಪವನ್ನು ಲಕ್ಷಿಸ ಕೂಡದು; ಆದರೆ ಅವನ ಬುದ್ಧಿಯನ್ನೇ ಅನುಲಕ್ಷಿಸಬೇಕು. ಈ ಶ್ಲೋಕ ಗಳಲ್ಲಿ ಯಜ್ಞವೆಂಬ ಶಬ್ದಕ್ಕೆ ಲೌಕಿಕ ಅರ್ಥವೇ ಉದ್ದಿಷ್ಟವಾಗಿದೆ. ಇಲ್ಲಿ ಇಷ್ಟದೇವತೆಗಾಗಿ ಭಕ್ತನು ಮಾಡಿದ ಯಾವದೇ ಒಂದು ಕರ್ಮವನ್ನುದ್ದೇ ಶಿಸಿ ಯಜ್ಞವೆಂದು ಹೇಳಿದೆ.

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಂ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ ೧೪ ॥**

ದೇವ, ದ್ವಿಜ, ಗುರು ವಿದ್ವಾಂಸರನ್ನು ಪೂಜಿಸುವದು, ಶುಚಿರ್ಭೂತತೆ, ಸರಲತೆ, ಬ್ರಹ್ಮಚರ್ಯ, ಅಹಿಂಸೆ ಇವೇ ಮೊದಲಾದವುಗಳನ್ನು ಆಚರಿಸುವದು ಶಾರೀರಿಕ ತಪವೆನಿಸುವದು.

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ ೧೫ ॥**

ಉದ್ವೇಗವನ್ನುಂಟುಮಾಡದ, ಸತ್ಯವೂ ಹಿತಕರವೂ ಪ್ರಿಯವೂ ಆದ ನುಡಿ, ಸ್ವಾಧ್ಯಾಯದ ಅಭ್ಯಾಸಗಳಿಗಾಗಿ ಓದುವಿಕೆ. ಇವುಗಳಿಗೆ ವಾಙ್ಮಯ ತಪವೆಂದು ಹೆಸರು.

**ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ ೧೬ ॥**

ಮನಸ್ಸಿನ ಪ್ರಸನ್ನತೆ, ಸೌಮ್ಯತೆ, ಮೌನ, ಆತ್ಮಸಂಯಮನ, ಶುದ್ಧಭಾವನೆ ಇವು ಮಾನಸಿಕ ತಪವೆನಿಸುವವು.

**ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ।**
**ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ವಿಕಂ ಪರಿಚಕ್ಷತೇ ॥ ೧೭ ॥**

ಫಲಾಕಾಂಕ್ಷೆಯನ್ನು ಹಿಡಿಯದೆ ಬುದ್ಧಿಯೋಗಯುಕ್ತನಾಗಿ ಪುರುಷೋತ್ತಮನಲ್ಲಿಟ್ಟ ಪರಮ ಶ್ರದ್ಧೆಯಿಂದ ಆಚರಿಸುವ ಈ ತ್ರಿವಿಧತಪಗಳು ಸಾತ್ವಿಕವೆನಿಸುವವು.

**ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ ।**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಂ ॥ ೧೮ ॥**

ಸತ್ಕಾರವನ್ನೂ ಮಾನವನ್ನೂ ಪೂಜೆಯನ್ನೂ ಬಯಸಿ ದಾಂಭಿಕತನದಿಂದ ಆಚರಿಸಿದ ಈ ಮೂರು ತರದ ತಪಸ್ಸು ರಾಜಸವೆನಿಸುವದು. ಅದು ಚಂಚಲವೂ ಅಲ್ಪಕಾಲ ನಿಲ್ಲುವದೂ ಆಗಿದೆ.

**ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಂ ॥ ೧೯ ॥**

ಮೂಢಭಾವದಿಂದ, ತನ್ನನ್ನು ತಾನೇ ಪೀಡಿಸಿಕೊಂಡು ಪರರಿಗೆ ಹಾನಿಯುನ್ನುಂಟುಮಾಡುವದಕ್ಕಾಗಿ ಆಚರಿಸುವ ತಪಸ್ಸನ್ನು ತಾಮಸವೆಂದು ಹೇಳಿದೆ.

**ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ವಿಕಂ ಸ್ಮೃತಂ ॥ ೨೦ ॥**

ದೇಶ ಕಾಲ ಪಾತ್ರ ಇವುಗಳನ್ನು ತಿಳಿದು ದಾನಮಾಡುವದು ತನ್ನ ಕರ್ತವ್ಯವೆಂದು ಭಾವಿಸಿ ತನಗೆ ಉಪಕಾರ ಮಾಡಿರದಂಥವನಿಗೆ ಕೊಡುವ ದಾನವು ಸಾತ್ವಿಕವೆಂದು ತಿಳಿಯಬೇಕು.

**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಂ ॥ ೨೧ ॥**

ಪ್ರತ್ಯುಪಕಾರ ಬುದ್ಧಿಯಿಂದಾಗಲಿ ಫಲಾಪೇಕ್ಷೆಯಿಂದಾಗಲಿ ಸಮಾಧಾನವಿಲ್ಲದ ಮನಸ್ಸಿನಿಂದಾಗಲಿ ಕೊಡುವ ದಾನವು ರಾಜಸವು.

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಂ ॥ ೨೨ ॥**

ದೇಶವನ್ನಾಗಲಿ ಕಾಲವನ್ನಾಗಲಿ ಅರಿಯದೆ ಅಪಾತ್ರರಲ್ಲಿ ಮಾಡಿದ ದಾನವೂ ಸದ್ಭಾವವಿಲ್ಲದೆ ಅವಹೇಲನಕ್ಕಾಗಿ ಕೊಟ್ಟ ದಾನವೂ ತಾಮಸವೆನಿಸುವವು.

**ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥ ೨೩ ॥**

ಓಂ ತತ್ಸತ್ ಎಂಬ ತ್ರಿವಿಧ ಸಂಕಲ್ಪದಿಂದ ಬ್ರಹ್ಮನು ನಿರ್ದೇಶಿಸಲ್ಪಡುವನು. ಪೂರ್ವದಲ್ಲಿ ಈ ಬ್ರಹ್ಮನೇ ಬ್ರಾಹ್ಮಣರನ್ನೂ ವೇದಗಳನ್ನೂ ಯಜ್ಞ (ತತ್ವ) ವನ್ನೂ ( ೩-೧೦ ) ಉಂಟು ಮಾಡಿದನು.

ಮನುಷ್ಯನು ತನ್ನ ಜೀವಮಾನದಲ್ಲಿ ಮಾಡುವ ಎಲ್ಲ ಕರ್ಮಕ್ಕೂ ಅವನ ಸತ್ವವೇ ಉಗಮಸ್ಥಾನವಾಗಿದೆ. ತನ್ನ ಶರೀರರಕ್ಷಣಕ್ಕೂ ಪೋಷಣಕ್ಕೂ ಬೇಕಾಗುವ ಆಹಾರವನ್ನು ಸಾಧಿಸುವದಕ್ಕೆ ಮಾಡಿದ ಕರ್ಮಗಳನ್ನು ಬಿಟ್ಟರೆ ಅವನು ತನ್ನ ಜೀವಿತದಲ್ಲಿ ಮಾಡುವ ಇನ್ನುಳಿದ ಸತ್ಕರ್ಮಗಳೆಲ್ಲವನ್ನೂ ಭಗವದ್ಗೀತೆಯಲ್ಲಿ ಯಜ್ಞ ತಪ ಮತ್ತು ದಾನ ಎಂದು ಮೂರು ಪರಿಯಾಗಿ ವಿಭಾಗಿಸಿರುವರು. ಅದುದರಿಂದ ಆಹಾರ ಯಜ್ಞ ತಪ ದಾನ ಎಂಬವುಗಳನ್ನು ಕುರಿತು ಬೇರೆ ಬೇರೆ ಗುಣಗಳ ಸಂಬಂಧದಿಂದ ಒಂದೊಂದರಲ್ಲುಂಟಾಗುವ ಪ್ರಕಾರಗಳನ್ನು ಇದುವರೆಗೆ ವಿಸ್ತಾರವಾಗಿ ವರ್ಣಿಸಿದೆ.

ಸುಸಂಗತವಾಗಿ ಮೇಲೆ ವಿವರಿಸಿದ ವಿಷಯವು ನಡೆದಾಗ ಈ ಶ್ಲೋಕದಲ್ಲಿ ಅಕಸ್ಮಾತ್ತಾಗಿ ಬಂದ ಬ್ರಹ್ಮವಿಷಯಕ ಉಲ್ಲೇಖವು ಸುಸಂಬದ್ಧವಾಗಿ ತೋರುವದಿಲ್ಲ. ಆದರೂ ಅದು ಏಕೆ ಬಂತೆಂಬದನ್ನು ತಿಳಿಯಬೇಕು. ಇದ್ದಕ್ಕಿದ್ದಂತೆ ಶ್ರೀಕೃಷ್ಣನಿಗೆ ಬ್ರಹ್ಮನು ನೆನಪಿಗೆ ಬಂದದ್ದೇ ಇದಕ್ಕೆ ಕಾರಣವೆಂಬುದು ಸಯುಕ್ತಿಕವಲ್ಲ.

ಬ್ರಹ್ಮನ ಸ್ವಭಾವವು ಅಚಿಂತ್ಯವೆಂದೂ ಅವ್ಯಕ್ತವೆಂದೂ ಅವಿಕಾರ್ಯವೆಂದೂ ನಿರ್ಗುಣವೆಂದೂ ನಿರಾಕಾರನೆಂದೂ ತಿಳಿಯುವದುಂಟು. ಇದು ಸರಿಯಲ್ಲ. ಗೀತೆಯಲ್ಲಿ ಈ ವಿಶೇಷಣಗಳೆಲ್ಲ ಮೂಲ ಆತ್ಮ ತತ್ವಕ್ಕೆ ಹೇಳಿವೆ; ಬ್ರಹ್ಮನಿಗಲ್ಲ. **ಶ್ರೀಕೃಷ್ಣನ ದೃಷ್ಟಿಯಿಂದ ಬ್ರಹ್ಮನ ಕರ್ಮಸ್ವಭಾವವೇ ಹೆಚ್ಚು ಮಹತ್ವದ್ದಾಗಿದೆ.** ಈ ಮತವು ಗೀತೆಯಲ್ಲಿ ಸರ್ವತ್ರವೂ ಹೇಳಲ್ಪಟ್ಟಿದೆ. ಗೀತೆಯ ಉದ್ದೇಶವೇನೆದಂರೆ ಸೃಷ್ಟಿಯಲ್ಲಿ ನಡೆದ ಕರ್ಮಗಳೆಲ್ಲ ನ್ಯಾಯವಾಗಲಿ ತದ್ವಿಪರೀತವಾಗಲಿ, ಬ್ರಹ್ಮನಲ್ಲಿ ಪ್ರವಿಷ್ಟವಾಗಿರುವವು; ಅಥವಾ ಬ್ರಹ್ಮನೇ ಸಕಲ ಕರ್ಮಗಳಿಗೆ ಉಗಮಸ್ಥಾನವೆಂದೂ ನಿಧಿಯೆಂದೂ ಹೇಳಬಹುದು. ಅವನ ಈ ಸ್ವಭಾವವೇ ಬುದ್ಧಿಯೋಗಶಾಸ್ತ್ರದಲ್ಲಿ ಹೆಚ್ಚು ಮಹತ್ವದ್ದೆಂದು ಎಣಿಸಲ್ಪಟ್ಟಿದೆ. ಶ್ರೀಕೃಷ್ಣಭಗವಂತನು ಇಲ್ಲಿ ಬ್ರಹ್ಮನಿಗೆ ರೂಢವಾಗಿ ಬಿದ್ದ ಹೆಸರಿನ ಸರ್ವಸಾಧಾರಣ ಅರ್ಥವನ್ನು ಬುದ್ಧಿಪುರಃಸ್ಸರವಾಗಿ ಅಲ್ಲಗಳೆದು ಆ ಅವನ ಹೆಸರಿಗೆ ಕರ್ಮತತ್ವಪ್ರಶಸ್ತವಾದ ಅರ್ಥವೇ

ಸರಿಯೆಂದೂ ಸಮ್ಮತವೆಂದೂ ತೋರಿಸಿಕೊಡುವನು. ಮನುಷ್ಯನಿಗೆ ಇತಿಕರ್ತವ್ಯವಾದ ನಿಯತ ಕರ್ಮಗಳನ್ನು ಉದಾಹರಿಸಿ ಆ ವಿವಿಧ ಕರ್ಮಗಳ ತಾರತಮ್ಯವನ್ನು ತಿಳಿಸಿಹೇಳುವಾಗ ಈ ಸಂದರ್ಭವು ಬಂದಿರುವದು ಉಚಿತವಾಗಿದೆ. ಈ ಕರ್ಮಗಳ ತಾರತಮ್ಯಗಳನ್ನು ಅವುಗಳಿಗೆ ಸಮಷ್ಟಿ ರೂಪನಾದ ಬ್ರಹ್ಮನಿಂದ ತಿಳಿಯುವದೇ ಉತ್ತಮವಾದುದರಿಂದ ಇಲ್ಲಿ ಬ್ರಹ್ಮನ ವಿಷಯಕವಾದ ಉಲ್ಲೇಖವು ಸಹೇತುಕವಾಗಿ ಬಂದಿರುವದು.

**ಬ್ರಹ್ಮನಿಗಿರುವ 'ಓಂ ತತ್‌ಸತ್' ಎಂಬ ಹೆಸರು ಅವನಲ್ಲಿ ನಡೆಯುವ 'ಸತ್' ಕರ್ಮದರ್ಶಕವಾಗಿದೆ.** ಸತ್ ಕರ್ಮವೆಂದರೆ ಯಜ್ಞ ದಾನ ತಪಾದಿಗಳೆಂದರ್ಥ. ಹೀಗೆ ಗ್ರಹಿಸಿದರೆ ಇಲ್ಲಿ ವಿವರಿಸಲ್ಪಡುತ್ತಿರುವ ವಿಷಯದ ಸಂಬಂಧವು ಸಮಾಧಾನವಾಗುವಂತೆ ತಿಳಿಯುವದು; ಮತ್ತು ಮುಂದೆ ಬರುವ ಶ್ಲೋಕಗಳ ಅರ್ಥವೂ ಚೆನ್ನಾಗಿ ವಿಶದವಾಗುವದು.

**ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ ।**
**ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಂ ॥ ೨೪ ॥**

**ಬ್ರಹ್ಮವಾದಿಗಳೆಂದರೆ,** ಬ್ರಹ್ಮನ ವಿಷಯವಾಗಿ ಗೀತೆಯಲ್ಲಿ ವಿವರಿಸಿದ ಕಲ್ಪನೆಗಳನ್ನು ತ್ಯಜಿಸಿ ಅವನ ಸ್ವಭಾವವು ಬೇರೆ ವಿಧವಾದದ್ದೆಂದು ಬಗೆದು, ಓಂ ತತ್‌ಸತ್ ಎಂಬ ಅವನ ಹೆಸರಿಗೆ ತಮ್ಮ ಅಭಿಪ್ರಾಯಾನುಸಾರವಾದ ಅರ್ಥವನ್ನು ಹೇಳುವವರು ಎಂದರ್ಥ. ಇವರು ಬ್ರಹ್ಮನನ್ನೇ ಪರಮೇಶ್ವರನೆಂದೂ ಅವನಾಚೆಗೆ ಏನೂ ಇಲ್ಲನೆಂದೂ ಬ್ರಹ್ಮನನ್ನೇ ಏಕಮೇವಾದ್ವಿತೀಯನಾದ ಪರಮಾತ್ಮಸ್ವಭಾವವುಳ್ಳವನೆಂದು ತಿಳಿದ ಮಾತ್ರಕ್ಕೆ ಸೃಷ್ಟಿಯಗೂಢವೆಲ್ಲ ಸ್ಪಷ್ಟವಾಗುವದೆಂದೂ ಅತ್ಯಾಗ್ರಹದಿಂದ ಸಾರುವರು. **ಇವರನ್ನು ಬ್ರಹ್ಮವಾದಿಗಳೆಂದು ಇಲ್ಲಿ ಹೇಳುವದರಲ್ಲಿ ಗೀತೆಯು ತನ್ನನ್ನು ಈ ಬ್ರಹ್ಮವಾದಿಗಳಲ್ಲಿ ಸೇರಿಸಿಕೊಳ್ಳುವದಿಲ್ಲವೆಂದೇ ಹೇಳಬೇಕು.** ಏಕೆಂದರೆ ಗೀತೆಯ ತತ್ವಜ್ಞಾನದಲ್ಲಿ ಬ್ರಹ್ಮನು ಆತ್ಯಂತಿಕ ಪರಮವಾದ ವಸ್ತುವಲ್ಲ. ಅವನನ್ನು ಮೀರಿದ ಹಾಗು ಪಡೆದ ಪುರುಷೋತ್ತಮನಿರುವನು. ಈ ಪುರುಷೋತ್ತಮನು ಸೃಷ್ಟಿಯ ಮೇಲೆ ಮಾತ್ರವಲ್ಲದೆ ಬ್ರಹ್ಮನ

ಮೇಲೆ ಸಹಿತ ಅಧಿಕಾರ ನಡೆಸುವನು. ಇನ್ನೂ ಗಮನಿಸತಕ್ಕುದೇನೆಂದರೆ ಈ ಪ್ರಣವ ಸೂತ್ರವು ಗೀತೆಯಲ್ಲಿ ಈ ಸ್ಥಳದಲ್ಲಲ್ಲದೆ ಮತ್ತೆಲ್ಲಿಯೂ ಬಂದಿರುವ ದಿಲ್ಲ; ಮತ್ತು ಇಲ್ಲಾದರೂ ಬ್ರಹ್ಮವಾದಿಗಳ ಅರ್ಥವನ್ನು ನಿರಾಕರಿಸಿ ಬುದ್ಧಿ ಯೋಗ ಪರವಾದ ತನ್ನ ಅರ್ಥವನ್ನೇ ಸಿದ್ಧಮಾಡಿ ತೋರಿಸುವದಕ್ಕಾಗಿ ಅದನ್ನು ಶ್ರೀಕೃಷ್ಣನು ಉಲ್ಲೇಖಿಸಿರುವನು.

ಇಂಥ ಬ್ರಹ್ಮವಾದಿಗಳು ತಮಗೆ ವಿಧಾನೋಕ್ತವಾದ ಯಜ್ಞ, ದಾನ ತಪ ಮೊದಲಾದ ಕರ್ಮಗಳನ್ನು ಮಾಡಲನುವಾದಾಗ ಓಂಕಾರವನ್ನುಚ್ಚ ರಿಸಿ ಆರಂಭಿಸುವರು (೮-೧೩). ಇಂಥವರ ಅಧ್ಯಾತ್ಮ ವಿಚಾರವು ಬ್ರಹ್ಮ ನನ್ನು ಮೀರಿ ಆತನಾಚೆಗಿರುವ ಪುರುಷೋತ್ತಮ ಶ್ರೀಕೃಷ್ಣನನ್ನು ಸಂಧಿ ಸಿದ್ದರೆ ಅದು ಗೀತೆಗೆ ಪೂರ್ಣ ಸಮ್ಮತವಾಗಿದೆ. ಹೀಗಲ್ಲದೆ ಬ್ರಹ್ಮನೇ ಕೊನೆಯ ದೈವತವೆಂದು ಕಲ್ಪಿಸಿದರೆ ಅವರು ಬ್ರಹ್ಮನನ್ನೇ ಸೇರುವರಲ್ಲದೆ ಪುರುಷೋತ್ತಮ ಶ್ರೀಕೃಷ್ಣನನ್ನು ಸೇರಲಾರರೆಂದು ಹಿಂದೆ ನಿಷ್ಕರ್ಷೆಯಾಗಿ ಹೇಳಿದೆ (೮-೧೬). **ಭಗವದ್ಗೀತೆಯಲ್ಲಿ ಬ್ರಹ್ಮನನ್ನು ದೇವತೆಗಳಲ್ಲಿ ಸೇರಿಸಿದೆ. ಪುರುಷೋತ್ತಮ ಶ್ರೀಕೃಷ್ಣನು ಬ್ರಹ್ಮ ಸಹಿತವಾಗಿ ಎಲ್ಲ ದೇವತೆಗಳಿಗೂ ಮೂಲನಾಗಿದ್ದಾನೆ (೧೦-೨).**

**ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥೨೫॥**

'ಓಂ ತತ್ಸತ್' ಎಂಬ ಮಹಾಮಂತ್ರವು ಬ್ರಹ್ಮನನ್ನು ಸೇರುವ ದಕ್ಕಾಗಿ ಪ್ರಯತ್ನಪಡುವವರಿಗೆ ಮಾತ್ರವಲ್ಲದೆ ಮುಕ್ತಿಗಾಗಿ ಪುರುಷೋ ತ್ತಮನನ್ನು ಸೇರಲು ಯತ್ನಿಸುವವರಿಗಾದರೂ ಚೆನ್ನಾಗಿ ಉಪಯುಕ್ತ ವಾಗಿರುವದು. ಆದರೆ ಈ ಮೋಕ್ಷಕಾಂಕ್ಷಿಗಳಾದವರು ಆಸಕ್ತಿಯನ್ನು ಬಿಟ್ಟು ಫಲವನ್ನು ಪುರುಷೋತ್ತಮನ ಚರಣಕ್ಕರ್ಪಿಸಿ ತಾವು ಮಾಡುವ ವಿವಿಧ ಯಜ್ಞ ದಾನ ತಪಗಳನ್ನು ಆಚರಿಸುವರು. **ಹೀಗೆ ತಾವು ಪುರು ಷೋತ್ತಮನಿಗಾಗಿ ಮಾಡಿದ ಕರ್ಮಗಳನ್ನೇ 'ತತ್' ಎಂಬ ಪದದಿಂದ ಅವರು ನಿರ್ದೇಶಿಸುವರು.**

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ ೨೬ ॥**

ಈ ಮೋಕ್ಷಕಾಂಕ್ಷಿಗಳಿಗೆ **'ಸತ್' ಎಂಬ ಪದದಿಂದ ಸತ್‌ಭಾವವಾಗಲಿ ಸಾಧುಭಾವವಾಗಲಿ ಬೋಧವಾಗುವದು;** ಮತ್ತಾವ ಕರ್ಮವಾಗಲಿ ಪ್ರಶಸ್ತವೂ ನ್ಯಾಯವೂ ಆದ ಪಕ್ಷಕ್ಕೆ ಆದನ್ನು ಕೂಡ 'ಸತ್' ಎಂಬುದಾಗಿಯೇ ಅವರು ಹೇಳುವರು.

ಸದ್ಭಾವದಲ್ಲಿ ಸಾಧುಭಾವವೂ ಇರುವದಲ್ಲದೆ ಶ್ರದ್ಧಾಭಕ್ತಿಗಳು ಕೂಡ ಆದರಲ್ಲಿ ಮಿಶ್ರಿತವಾಗಿರುವವು. ಸಾಧುಭಾವದಲ್ಲಿ ಒಳ್ಳೆಯತನವು ಮಾತ್ರವಿರುವದು; ಶ್ರದ್ಧಾಭಕ್ತಿಗಳು ಆದರಲ್ಲಿರುವದಿಲ್ಲ. ಶ್ರದ್ಧಾಭಕ್ತಿಗಳು ಪೂರ್ಣಯೋಗಕ್ಕಿಂತಲೂ ಬಹಳ ಕನಿಷ್ಠ ತರಗತಿಯವಾದುದರಿಂದ 'ತತ್' ಎಂಬ ಪದದಲ್ಲಿ ಅವುಗಳನ್ನು ಸೇರಿಸಲಿಲ್ಲವೆಂಬುದು ಸರಲವಾಗಿದೆ.

**ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ ।**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥ ೨೭ ॥**

ಯಜ್ಞ ದಾನ ತಪಗಳು ಪುರುಷೋತ್ತಮನ ವಿಷಯದ ತೀವ್ರಯೋಗಭಾವದಿಂದ ಉದ್ಭವಿಸಿದರೆ ಅವುಗಳಿಗೆ ತತ್ ಎಂಬ ಹೆಸರು. ಅವುಗಳನ್ನೇ ' ಸತ್ ' ಭಾವದಿಂದ ಎಂದರೆ ಪುರುಷೋತ್ತಮ ಶ್ರೀಕೃಷ್ಣನಲ್ಲಿ ಆಸ್ತಿಕಭಾವವನ್ನಿಟ್ಟು ಆದರೆ ತೀವ್ರಯೋಗಭಾವವಿಲ್ಲದೆ ಮಾಡಿದರೆ ಅವುಗಳಿಗೆ 'ಸತ್' ಎಂಬ ಸಂಜ್ಞೆಯುಂಟು. ಈ ಎರಡು ಸ್ಥಿತಿಗಳು ತಿಲಪ್ರಮಾಣದಲ್ಲಿಯೂ ಸಾಧಿಸದಿದ್ದು ಕೇವಲ ಸಾಧುಭಾವದಿಂದ ಎಂದರೆ ದಾನ ತಪಗಳಿಗಾಗಿ (ಅವುಗಳ ಗೀತಾಶಾಸ್ತ್ರದ ವ್ಯುತ್ಪತ್ತಿಯನ್ನರಿಯದೆ) ಅಂತಃಕರಣಪೂರ್ವಕವಾಗಿ ಪ್ರಯತ್ನ ಪಡಬಹುದು. ಈ ಪ್ರಯತ್ನಗಳು ಅವಿಧಿಪೂರ್ವಕವೂ ಅಜ್ಞಾನಮೂಲಕವೂ ಆಗುವವು. ಆದರೂ ಭಾವಶುದ್ಧತೆಗಾಗಿ ಅವುಗಳಿಗೆ 'ಸತ್' ಎಂಬ ಹೆಸರು ಅನುರೂಪವು. ಹೀಗೆ ಸದ್ಭಾವದಿಂದ ಮಾಡಿದ ಕರ್ಮವು ಸಾಧಿಸಲಿ ಸಾಧಿಸದಿರಲಿ ಪ್ರಯತ್ನಪಟ್ಟವನು ಅದನ್ನು ಮಾಡಿದನೆಂಬ ಕಾರಣಕ್ಕಾಗಿಯೇ ಅದನ್ನು 'ಸತ್' ಎಂದು ಹೇಳಬೇಕು.

ಒಟ್ಟಿಗೆ 'ಸತ್' ಎಂದು ಹೇಳಬೇಕಾದ ಕರ್ಮಗಳ ಮುಖ್ಯ ಲಕ್ಷಣವೇನೆಂದರೆ ಕರ್ತೃವಿನಲ್ಲಿದ್ದ ಶುದ್ಧವೂ ಪವಿತ್ರವೂ ಆದ ಹೇತುವು. ೧೨ನೆಯ ಅಧ್ಯಾಯದೊಳಗಿನ ಭಕ್ತಿಯೋಗದಲ್ಲಿ ೮ನೆಯ ಶ್ಲೋಕದಲ್ಲಿ ಹೇಳಿರುವ ಪೂರ್ಣ ಆಚರಣೆಯು ಇಲ್ಲಿ ವಿವರಿಸಿದಂತೆ, 'ತತ್' ಎಂಬ ಶಬ್ದದಿಂದ ನಿರ್ದಿಷ್ಟವಾಗುವದು; ಮತ್ತು ೯ರಿಂದ ೧೨ನೆಯ ಶ್ಲೋಕದ ವರೆಗೆ ಹೇಳಿದ ಆಚರಣೆಯು 'ಸತ್' ಎಂಬ ಪದದಲ್ಲಿ ಸಮಾವೇಶವಾಗುವ ದೆಂದು ಸ್ಥೂಲವಾಗಿ ಹೇಳಬಹುದು.

ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।
ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥ ೨೮ ॥

ಸದ್‌ಹೇತುವಿನಿಂದ ಮಾಡಿದ ಅತ್ಯಲ್ಪಕರ್ಮವೂ ಬುದ್ಧಿಯೋಗಶಾಸ್ತ್ರ ದಂತೆ ವ್ಯರ್ಥವಾಗುವದಿಲ್ಲ. ಅದು ಕರ್ತೃವಿಗೆ ಅನುರೂಪ ಪ್ರಮಾಣದಲ್ಲಿ ಕಲ್ಯಾಣವನ್ನು ಕೈಗೂಡಿಸುವದೆಂದು ಈ ಮೊದಲು ಅನೇಕ ಸಾರೆ ಹೇಳಿದೆ. ಈ ದೃಷ್ಟಿಯಿಂದಲೇ ಅಲ್ಪ ಪ್ರಯತ್ನಗಳು ಸಹಿತ ಮೇಲಿನ ಶ್ಲೋಕದೊಳಗೆ 'ಸತ್' ಎಂಬ ಪದದಲ್ಲಿ ಸಮಾವಿಷ್ಟವಾಗಿವೆ. ಇನ್ನು ಕೇವಲ ದಾಂಭಿಕ ತನದಿಂದ, ಸದ್ ಹೇತುವಿನ ಅಭಾವವಿದ್ದರೂ ಯಜ್ಞ ದಾನ ತಪಗಳನ್ನು ಕೀರ್ತಿಗಾಗಿ ಮಾಡುವದುಂಟು. ಅವುಗಳಲ್ಲಿ ಶ್ರದ್ಧೆಯು ಎಂದರೆ ಮೇಲೆ ಹೇಳಿದ ಸತ್ ಹೇತುವಿನ ಲವಲೇಶವೂ ಇರುವದಿಲ್ಲ. ಲೌಕಿಕದಲ್ಲಿ ಘನ ವಾದ ಹೆಸರನ್ನು ಪಡೆದಿರುವವೆಂದು ಇಂಥ ಕರ್ಮಗಳನ್ನು ಆಡಂಬರದಿಂದ ಆಚರಿಸಿದರೂ ಅವುಗಳನ್ನು 'ಅಸತ್' ಎಂದೇ ಹೇಳಬೇಕು. ಈ ರೀತಿಯ ಅಸತ್ ಕರ್ಮಗಳನ್ನು ಆಚರಿಸಿದವರಿಗೆ ಇಹಲೋಕವೂ ಇಲ್ಲ ಪರ ಲೋಕವೂ ಇಲ್ಲ.

ಹದಿನೇಳನೆಯ ಅಧ್ಯಾಯವು ಸಮಾಪ್ತವು.

---

ಓಂ

# ಹದಿನೆಂಟನೆಯ ಅಧ್ಯಾಯವು

ಅರ್ಜುನ ಉವಾಚ—

**ಸನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಂ।**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿ ನಿಷೂದನ ॥೧॥**

ಸನ್ಯಾಸವೆಂದರೆ ಕರ್ಮವನ್ನು ಬಿಟ್ಟುಬಿಡುವದಲ್ಲ. ಆದರೂ ಸನ್ಯಾಸದಲ್ಲಿ ಬಿಟ್ಟುಬಿಡಬೇಕಾದ ಅಂಶವು ಇರುವದೇನೋ ನಿಜ. ಸನ್ಯಾಸಿಯು ಹೀಗೆ ಬಿಡಬೇಕಾದುದೇನು ಎಂಬ ವಿಷಯವಾಗಿ ಈವರೆಗೆ ಸಂಪೂರ್ಣವಾಗಿ ಹೇಳಿರುವದೆಲ್ಲವೂ ಅರ್ಜುನನಿಗೆ ಮನವರಿಕೆಯಾಗಿದೆ. ಅವನು ಸನ್ಯಾಸಕ್ಕಾಗಿ ಸಂಕಲ್ಪವನ್ನು ಬಿಡಬೇಕಾಗುವದು; ತನ್ನ ಕರ್ಮದ ಫಲವನ್ನಾದರೂ ಬಿಡಬೇಕಾಗುವದು; ಈ ಅಂಶಗಳೆಲ್ಲ ಅವನಿಗೆ ಚೆನ್ನಾಗಿ ತಿಳಿದಿರುವವು. ಈ ಶ್ಲೋಕದೊಳಗಿನ ಪ್ರಶ್ನವು ಈ ವಿಷಯದ್ದಾಗಿಲ್ಲ. ಅರ್ಜುನನು ಮಾಡಬೇಕೆಂದು ಹೇಳಿದ ಸನ್ಯಾಸದಲ್ಲಿ ವರ್ಜಿಸಬೇಕಾದ ಕ್ರಿಯೆಯನ್ನು ಸನ್ಯಾಸವೆಂದೂ ತ್ಯಾಗವೆಂದೂ ಹಿಂದಿನ ಅಧ್ಯಾಯಗಳೊಳಗೆ ಶ್ರೀಕೃಷ್ಣನು ಹೇಳಿರುವನು. ಈ ಶಬ್ದಗಳನ್ನು ಭೇದವಿಲ್ಲದೆ ಅಲ್ಲಲ್ಲಿ ಪ್ರಯೋಗಿಸಿದ್ದರೂ ಅವುಗಳ ಅರ್ಥದಲ್ಲಿ ಏನಾದರೂ ತಾತ್ವಿಕ ಭೇದವು ಗರ್ಭಿತವಾಗಿರುವದೆಂದು ಅರ್ಜುನನಿಗೆ ತೋರದೆ ಇರಲಿಲ್ಲ. ವಿವರಿಸಬೇಕಾಗಿದ್ದ ವಿಷಯವೆಲ್ಲ ಸಮಾಪ್ತವಾಗುತ್ತ ಬಂದುದರಿಂದ ತನಗೆ ತೋರಿದ ಈ ಒಂದು ಶಂಕೆಯನ್ನು ಸಮಾಧಾನಪಡಿಸಿಕೊಳ್ಳಬೇಕೆಂದು ಸನ್ಯಾಸ ಮತ್ತು ತ್ಯಾಗವೆಂಬ ಶಬ್ದಗಳ ಅರ್ಥದಲ್ಲಿ ತಾತ್ವಿಕ ಭೇದವೇನಾದರೂ ಇದ್ದರೆ ಹೇಳೆಂದು ಅರ್ಜುನನು ಶ್ರೀಕೃಷ್ಣನನ್ನು ಇಲ್ಲಿ ಕೇಳುವನು.

ಶ್ರೀಭಗವಾನುವಾಚ—

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸನ್ಯಾಸಂ ಕವಯೋ ವಿದುಃ।**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥೨॥**

ಶ್ರೀಕೃಷ್ಣನು ಈ ಶ್ಲೋಕದಲ್ಲಿ ಕೊಟ್ಟ ಉತ್ತರದಿಂದ ಮೊದಲು ಕಂಡುಬರುವದೇನೆಂದರೆ ಸನ್ಯಾಸ ಮತ್ತು ತ್ಯಾಗ ಈ ಶಬ್ದಗಳ ಅರ್ಥದಲ್ಲಿ ತಾತ್ವಿಕ ಭೇದವು ನಿಜವಾಗಿಯೂ ಇರುವದು. ಕಾಮ್ಯಕರ್ಮಗಳನ್ನು ಬಿಡುವದನ್ನು ಸನ್ಯಾಸವೆಂದು ತಿಳಿದವರು ಹೇಳುವರು; ತ್ಯಾಗವೆಂದು ಹೇಳರು; ಮತ್ತು ಸಕಲ ಕರ್ಮಗಳ ಫಲವನ್ನು ತ್ಯಜಿಸುವದನ್ನು ಅವರು ತ್ಯಾಗವೆಂದು ಹೇಳುವರು; ಸನ್ಯಾಸವೆಂದು ಹೇಳರು.

ಕಾಮ್ಯಕರ್ಮಗಳೆಂದರೇನೆಂಬುದು ಈ ವರೆಗೆ ನಿಶ್ಚಿತವಾಗಿರುವದಿಲ್ಲ; ಕೆಲವರು ವ್ಯಾವಹಾರಿಕ ಅರ್ಥದ ಕಾಮ್ಯಕರ್ಮಗಳೆಂದೇ ತಿಳಿಯುವರು. ಇನ್ನು ಕೆಲವರು ಮೀಮಾಂಸಕರು ಏರ್ಪಡಿಸಿದ ನಿತ್ಯನೈಮಿತ್ತಿಕ ಕಾಮ್ಯ ಮತ್ತು ನಿಷಿದ್ಧವೆಂಬವುಗಳಲ್ಲಿನ ಕಾಮ್ಯಕರ್ಮಗಳೇ ಅಭಿಪ್ರೇತವಾಗಿವೆ ಎನ್ನುವರು.

ಗೀತಾರಹಸ್ಯಕಾರರು ಈ ವಿಷಯವನ್ನು ಚರ್ಚಿಸಿರುವರು. ಅವರು ಹೇಳುವಂತೆ ಸರ್ವಕರ್ಮಗಳನ್ನು ಕಾಮ್ಯ ಮತ್ತು ನಿಷ್ಕಾಮವೆಂದು ವಿಂಗಡಿಸಿದರೂ ಈ ಶ್ಲೋಕದ ಅರ್ಥವು ವಿಶದವಾಗುವದಿಲ್ಲವೆಂದೇ ಹೇಳಬೇಕಾಗುವದು. ಕಾಮ್ಯಕರ್ಮದೊಳಗಿನ ಫಲಾಸಕ್ತಿಯನ್ನು ಬಿಟ್ಟಬಳಿಕ ಮರಳಿ ಆ ಕಾಮ್ಯಕರ್ಮವನ್ನು ಬಿಡುವದರಲ್ಲಿ ವಿಶೇಷವೇನು ಎಂಬುದನ್ನು ಅವರು ಹೇಳಿರುವದಿಲ್ಲ ಅವರು ಕೊಟ್ಟ ಉದಾಹರಣೆಯನ್ನು ನೋಡುವ. ಕಾಮೇಷ್ಟಿಯೆಂಬ ಕಾಮ್ಯ ಕರ್ಮವನ್ನು ನಿಷ್ಕಾಮಬುದ್ಧಿಯಿಂದ ಮಾಡಿದ್ದಾದರೆ ಅದು ನಿಷ್ಕಾಮಕರ್ಮವೆನಿಸುವದು. ಹೀಗೆ ನಿಷ್ಕಾಮಕರ್ಮವನ್ನು ಮಾಡಿ ಫಲಾಸಕ್ತಿಯನ್ನು ಬಿಡುವದರಲ್ಲಿಯೂ ಇಷ್ಟಿರೂಪವಾದ ಕಾಮ್ಯಕರ್ಮವನ್ನು ಆಮೂಲಾಗ್ರವೇ ಬಿಟ್ಟುಬಿಡುವುದರಲ್ಲಿಯೂ ಇರುವ ತಾತ್ವಿಕ ಭೇದವು ನಮಗೆ ತಿಳಿಯುವದಿಲ್ಲ. ಇದೂ ಅಲ್ಲದೆ ಶ್ರೀಕೃಷ್ಣನು ಈ ಶ್ಲೋಕ

ದಲ್ಲಿ ಹೇಳಿದ ಅರ್ಥವು ಇಷ್ಟು ಸಂದಿಗ್ಧವಿದ್ದಂತೆ ನಮಗೆ ತೋರುವದಿಲ್ಲ. ಮತ್ತು ಮೇಲೆ ಹೇಳಿದ ಅರ್ಥವನ್ನು ಒಪ್ಪಿಕೊಂಡರೆ ರಹಸ್ಯಕಾರರ ದೃಷ್ಟಿಯಿಂದ ತ್ಯಾಗವು ಸನ್ಯಾಸಕ್ಕಿಂತಲೂ ಶ್ರೇಷ್ಠವೆನಿಸದೆ ಇರದು. ಆದರೆ ಗೀತೆಯಲ್ಲಿ ತ್ಯಾಗಕ್ಕಿಂತಲೂ ಸನ್ಯಾಸವೇ ಶ್ರೇಷ್ಠವೆಂಬ ಆಗ್ರಹವು ಕಂಡು ಬರುವದು.

ಕಾಮವೆಂಬದು ಮನುಷ್ಯನ ಇಂದ್ರಿಯ ಸ್ವಭಾವದಲ್ಲಿ ಹುಟ್ಟಿ ಮನಸ್ಸಿನ ಮೂಲಕ ಅವನ ಬುದ್ಧಿಯಲ್ಲಿ ಪ್ರಕಟವಾಗುವದು. ಈ ಕಾಮ್ಯ ಬುದ್ಧಿಗೆ ಇಂದ್ರಿಯ ಸ್ವಭಾವದಲ್ಲಿ ನಡೆಯುವ ವ್ಯವಹಾರಗಳು ಹೊಣೆಯಾಗುವದಿಲ್ಲವೆಂದೂ ಆ ವ್ಯವಹಾರಗಳನ್ನು ಮಾಡುವ ಮನುಷ್ಯನ ಅಹಂಕಾರ ವೃತ್ತಿಯೇ ಇದರ ಹೊಣೆಯನ್ನು ಹೊರಬೇಕೆಂದೂ ಗೀತೆಯಲ್ಲಿ ಪ್ರತಿಪಾದಿಸಲ್ಪಟ್ಟಿರುವದು. **ಕರ್ಮ ಮಾಡುವವನ ಅಹಂಕಾರ ವೃತ್ತಿಯ ಯಥಾಯೋಗ್ಯವಾದ ಸಂಸ್ಕಾರವು– ಅದಕ್ಕೆ ಬುದ್ಧಿಯೋಗವೆಂದು ಹೆಸರಿಟ್ಟು– ಗೀತೆಯಲ್ಲಿ ಉಪದೇಶಿಸಲ್ಪಟ್ಟಿದೆ.** ಕರ್ತೃವಿನಲ್ಲಿರುವ ಅಹಂಕಾರ ವೃತ್ತಿಯ ಪ್ರಮಾಣವನ್ನು ನಿಶ್ಚಯಿಸುವ ಪ್ರಸಂಗಗಳು ಗೀತೆಯಲ್ಲಿ ಎರಡು ಬಗೆಯಾಗಿ ಹೇಳಿವೆ. ಒಂದು, ಅವನು ಯಾವುದಾದರೊಂದು ಕಾರ್ಯವಮಾಡುವದನ್ನು ನಿಶ್ಚಯಿಸುವಾಗ—ಇದಕ್ಕೆ ಸಂಕಲ್ಪವೆಂದು ಹೆಸರು. ಇನ್ನೊಂದು, ಕರ್ಮವನ್ನು ಮಾಡಿ ಮುಗಿಸಿದ ಬಳಿಕ ಸಿದ್ಧವಾದ ಫಲವನ್ನು ವಿನಿಯೋಗಿಸುವಾಗ—ಇದಕ್ಕೆ ಫಲ ಅಥವಾ ಫಲಾಸಕ್ತಿ ಎಂದು ಹೆಸರು. ಗೀತಾಶಾಸ್ತ್ರದಲ್ಲಿ ಹೇಳಲ್ಪಟ್ಟ ಅಹಂಕಾರದ ಪ್ರಮಾದರಹಿತ ಪರಾಕಾಷ್ಠೆಯೆಂದರೆ, ತಾನು ಅಹಂಭಾವದಿಂದ ಕರ್ಮವನ್ನು ಮಾಡಿ ಅದರ ಫಲವನ್ನು ಸಂಘಟಿಸುವನಕವೇ. ಇದಕ್ಕೆ ಕಾರಣವೇನೆಂದರೆ, ಮನುಷ್ಯನನ್ನು ಹುಟ್ಟಿಸಿರುವದು ಕರ್ಮಮಾಡುವದಕ್ಕಾಗಿ. ಕರ್ಮಮಾಡುವ ಸಾಧನವೂ ಅಧಿಕಾರವೂ ಅವನಿಗೆ ಸ್ವಭಾವತಃ ಕೊಡಲ್ಪಟ್ಟಿವೆ. ಈ ಅಧಿಕಾರವನ್ನು ವಿನಿಯೋಗಿಸುವದಕ್ಕೆ ಅಹಂಕಾರವು ಬೇಕಾಗಿರುವದು. ಆದುದರಿಂದ ಅಹಂಕಾರವನ್ನು ಸವಿಕಾರ ಕ್ಷೇತ್ರರಚನೆಯಲ್ಲಿ ಒಂದು ಪ್ರಧಾನ ತತ್ವವಾಗಿ ಇಟ್ಟುಕೊಂಡರು (೧೩-೫). ಆದರೆ ಇದಕ್ಕೂ ಮುಂದೆ ಹೋಗಿ ಅಹಂಕಾರ ತತ್ವವನ್ನು ತನ್ನ ಸ್ವಂತ ಲಾಭಕ್ಕಾಗಿ ಮನುಷ್ಯನು ವಿನಿಯೋಗಿಸಿದರೆ

ಇದೇ ಅಹಂಕಾರವು ದೋಷಯುಕ್ತವಾಗುವದು. ಕರ್ಮದಿಂದ ಫಲಪ್ರಾಪ್ತಿಯಾದ ಮೇಲೆ ಆ ಫಲವನ್ನು ಬಿಟ್ಟುಬಿಡುವದು ಅಥವಾ ಸಂನ್ಯಾಸ ಮಾಡುವದು ಅಹಂಕಾರ ಸ್ವಭಾವಕ್ಕೆ ನಿಯತ-ಉಚಿತ ಧರ್ಮವಾಗಿದೆ. ಹೀಗೆ ಮಾಡಿದರೆ, ಕರ್ತೃವು ಅಂಹಕಾರದೋಷದಿಂದ ಮುಕ್ತನಾಗುವನು. ಫಲವನ್ನು ಬಿಡುವದೆಂದರೆ, ಆ ಫಲದ ಮೇಲೆ ತನಗಿದ್ದ ಅಧಿಕಾರ ವನ್ನು ಬಿಡುವದೆಂದೇ ಅರ್ಥ; ಮತ್ತು ಫಲವನ್ನು ಸಂನ್ಯಾಸಮಾಡುವ ದೆಂದರೆ, ತನ್ನ ಅಧಿಕಾರವನ್ನು ಬಿಡುವದೇ ಅಲ್ಲದೆ ಬುದ್ಧಿಪುರಸ್ಸರವಾಗಿ ಅದನ್ನು ಪರಮೇಶ್ವರನಿಗೆ ಅರ್ಪಿಸುವದೆಂದರ್ಥ. ತ್ಯಾಗ ಮತ್ತು ಸನ್ಯಾಸ ಇವುಗಳೊಳಗೆ ಇಲ್ಲಿ ಹೇಳಿದ ಭೇದವು ಹಲವೆಡೆಯಲ್ಲಿ ಕಂಡು ಬಂದರೂ ಅದು ಗೌಣವಾಗಿರುವದು. ಆ ಭೇದವು ಈ ಶ್ಲೋಕದಲ್ಲಿ ಉದ್ದಿಷ್ಟವಾಗಿಲ್ಲ. ಯಾವ ರೀತಿಯಿಂದಲೇ ಆಗಲಿ ಹೀಗೆ ಕರ್ಮದಿಂದ ಪರಿಣಮಿಸಿದ **ಫಲ ವನ್ನು ಬಿಡುವದಕ್ಕೆ ತ್ಯಾಗವೆಂಬ ವಿಶಿಷ್ಟಸಂಜ್ಞೆಯು,** ಅದಕ್ಕೂ ಸಂನ್ಯಾಸಕ್ಕೂ ಇರುವ ತಾತ್ವಿಕ ಭೇದವನ್ನು ತೋರಿಸುವದಕ್ಕಾಗಿ, ಗೀತೆಯಲ್ಲಿ ಉಪಯೋಗಿಸಲ್ಪಟ್ಟಿದೆ.

ಇಂಥ ತ್ಯಾಗಿಯು ಫಲದ ತ್ಯಾಗ ಮಾಡುವದಕ್ಕಾಗಿ ಸಂಕಲ್ಪದಿಂದ ಫಲಪ್ರಾಪ್ತಿಯ ವರೆಗೂ ತನ್ನ ಅಹಂಕಾರ ಸ್ವಭಾವವನ್ನು ನ್ಯಾಯ ವಾಗಿಯೂ ಯೋಗ್ಯವಾಗಿಯೂ ಉಪಯೋಗಿಸಿರುವನೆಂಬದನ್ನು ಗಮನಿಸ ಬೇಕು. ಆದರೆ ಈ ರೀತಿಯಾಗಿ ಇಲ್ಲಿಯ ವರೆಗೆ ತನ್ನ ಅಹಂಕಾರ ಸ್ವಭಾವ ವನ್ನು ಜಾಗ್ರುತೆಯಿಂದ ಬಳಿಸುವದು ಅವಶ್ಯವಿಲ್ಲ. ಅವನು ತನ್ನ ಅಹಂಕಾರ ವನ್ನು ಸಂಕಲ್ಪದಲ್ಲಿಯೇ ಬಿಟ್ಟುಬಿಡಬಹುದು. **ಹೀಗೆ ಬಿಡುವುದೇ ಕರ್ಮ ಸಂಗವನ್ನು ಬಿಡುವದೆಂದು ಗೀತೆಯಲ್ಲಿ ಹೇಳಿದೆ.** ಇಂಥ ಮನುಷ್ಯನು ತಾನು ಕರ್ಮಗಳನ್ನು ಮಾಡುತ್ತಿದ್ದರೂ "ನಾನು ಯಾವುದನ್ನೂ ಮಾಡುವ ದಿಲ್ಲ" ಎಂದು ಭಾವಿಸುವನು (೫-೮). ಗೀತೆಯಲ್ಲಿ ಹೇಳಿದಂತೆ ಪುರು ಷೋತ್ತಮನ ವಿಷಯದ ಪೂರ್ಣಜಾಗ್ರುತೆ ಇಲ್ಲದಿದ್ದರೆ ಈ ಉಚ್ಚತಮವೂ ಉತ್ಕೃಷ್ಟವೂ ಆದ ಸ್ಥಿತಿಯು ಸಂಭವಿಸುವದಿಲ್ಲ. ಈ ಸ್ಥಿತಿಯಲ್ಲಿ ಅವನು ಫಲವಿಷಯಕವನ್ನೇ ಅಲ್ಲದೆ ಕರ್ಮ ಕರ್ತೃತ್ವ ವಿಷಯಕವಾದ ಅಹಂಕಾರ ವನ್ನು ಕೂಡ ಆಮೂಲಾಗ್ರವಾಗಿ ಬಿಟ್ಟಿರುವದರಿಂದ ಅವನಲ್ಲಿ ಕಾಮವು

ಕೇವಲ ನಿಮೂರ್ಲವಾಗಿರುವದೆಂದು ಗೀತೆಯು ತತ್ವತಃ ತಿಳಿಯುವದು (೧೮-೨೪). **ಹೀಗೆ ಕಾಮವನ್ನೂ ಅಹಂಕಾರವನ್ನೂ ವಿಶೇಷವಾಗಿ ಬಿಡುವದಕ್ಕೆ ಸನ್ಯಾಸವೆಂಬ ವಿಶಿಷ್ಟ ಸಂಜ್ಞೆಯು ಇರುವದು.** ಕಾಮ್ಯ ಕರ್ಮಗಳನ್ನು ಬಿಟ್ಟ ಮನುಷ್ಯನು ಕೂಡ ಸನ್ಯಾಸವನ್ನು ಸಾಧಿಸಲಿಕ್ಕೆ ಕರ್ಮದಿಂದ ಪರಾವೃತ್ತನಾಗುವದಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ.

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥ ೩ ॥**

ವಿದ್ವಾಂಸರು ಕೆಲವರು ಕರ್ಮಮಾಡುವದು ಸ್ವಭಾವತಃ ದೋಷ ಯುಕ್ತವೆಂದು ಬಗೆದು ಅದು ತ್ಯಾಜ್ಯವೆಂದು ಹೇಳುವರು. ಇನ್ನು ಕೆಲ ವರು ಯಜ್ಞ, ದಾನ, ತಪ, ಕರ್ಮ ಇವುಗಳನ್ನು ಬಿಡಕೂಡದೆಂದು ಹೇಳು ವರು.

**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ॥ ೪ ॥**

ಈ ವಿಷಯದಲ್ಲಿ ಶ್ರೀಕೃಷ್ಣನ ನಿರ್ಣಯವನ್ನು ಅರ್ಜುನನು ಕೇಳ ಬೇಕು. ಮನುಷ್ಯನ ವ್ಯವಹಾರಗಳೆಲ್ಲ ಅವನ ಸತ್ವಾನುರೂಪವಾಗಿರು ವವು (೧೭-೨-೩). ಈ ಸತ್ವದ ಗುಣದೋಷಗಳು ಅವನ ಪ್ರಕೃತಿಯ ಗುಣಗಳನ್ನು ಅವಲಂಬಿಸಿರುವವು. ಆದುದರಿಂದ ತ್ಯಾಗವು ತ್ರಿವಿಧವಾಗಿರು ವದು.

**ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥ ೫ ॥**

ಯಜ್ಞ ದಾನ ತಪಗಳನ್ನು ಕುರಿತು ಸ್ವತಂತ್ರವಾಗಿ ವಿಚಾರ ಮಾಡು ವದಾದರೆ ಅವುಗಳನ್ನು ಬಿಡಬಾರದು; ಇಷ್ಟೇ ಅಲ್ಲ, ಮಾಡಲೇಬೇಕೆಂಬದು ಶ್ರೀಕೃಷ್ಣನ ನಿಶ್ಚಿತವಾದ ಮತವು. ಇದಕ್ಕೆ ಮಹತ್ವದ ಕಾರಣವೇನೆಂದರೆ ಅವು ಬುದ್ಧಿವಂತನನ್ನು ನಿರ್ದೋಷನನ್ನಾಗಿ ಮಾಡುವವು (೫-೧೧). ಅವು ಗಳನ್ನು ಬಿಟ್ಟರೆ ಅವನು ಪತಿತನಾಗುವನು.

**ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥೬॥**

ಈ ಕರ್ಮಗಳನ್ನು ಮಾಡುವಾಗಲೂ ಕರ್ತೃತ್ವದ ಅಭಿಮಾನವನ್ನು ಎಂದರೆ ಸಂಗ ಮತ್ತು ಫಲ ಇವೆರಡನ್ನೂ ಬಿಟ್ಟು ಕೇವಲ ಕರ್ತವ್ಯವೆಂದು ಮಾಡಬೇಕು. ಇದೇ ಈ ವಿಷಯದಲ್ಲಿ ಶ್ರೀಕೃಷ್ಣನ ನಿಶ್ಚಿತವೂ ಉತ್ತಮವೂ ಆದ ಮತ. ಹೀಗೆ ಮಾಡುವದರಿಂದ ಮನುಷ್ಯನು ತನ್ನ ಆತ್ಯಂತಿಕ ಶ್ರೇಯವನ್ನು ಸಾಧಿಸುವನು. ಸಂಗವನ್ನೂ ಫಲಾಕಾಂಕ್ಷೆಯನ್ನೂ ಬಿಡದೆ ಈ ಕರ್ಮಗಳನ್ನು ಮಾಡುವದು ಶಕ್ಯವಾಗಿದೆ. ಹಾಗೆ ಮಾಡಿದರೂ ಆ ಕರ್ಮಗಳು ಕನಿಷ್ಠವೇ ಹೊರತು ತ್ಯಾಜ್ಯವಲ್ಲ. ಅಂಥ ಕರ್ಮಗಳಿಂದ ಕೆಲವು ಮಟ್ಟಿಗೆ ಚಿತ್ತಶುದ್ಧಿಯಾಗುವದು ನಿಜ. ಇದೂ ಅಲ್ಲದೆ ಫಲಾಪೇಕ್ಷೆಯಿಂದ ಯಜ್ಞವನ್ನು ಮಾಡುವದೂ ಆದರಿಂದ ಐಹಿಕ ಇಷ್ಟಗಳನ್ನು ಸಫಲ ಮಾಡಿಕೊಳ್ಳುವದೂ ಬ್ರಹ್ಮನು ಪ್ರಜೆಗಳೊಂದಿಗೆ ಉಂಟುಮಾಡಿದ ಕನಿಷ್ಠ ತರಗತಿಯ ಯಜ್ಞತತ್ವವನ್ನು ಅವಲಂಬಿಸಿರುವವು (೩-೧೦-೧೩). **ಯಜ್ಞವಿಷಯಕವಾದ ಗೀತೆಯ ಈ ತತ್ವಗಳನ್ನು ಇಲ್ಲಿ ಮರೆಯಬಾರದು.**

**ನಿಯತಸ್ಯ ತು ಸನ್ನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥೭॥**

ಯಜ್ಞ ದಾನ ತಪಗಳನ್ನು ಉತ್ತಮವಾಗಿ ಹೇಗೆ ಆಚರಿಸಬೇಕೆಂಬದು ಮೇಲೆ ಹೇಳಿದೆ. ಮತ್ತು ಅವುಗಳನ್ನು ಆಚರಿಸದೆ ಬಿಡುವದು ಸರಿಯಲ್ಲವೆಂಬುದಕ್ಕೆ ಕಾರಣಗಳನ್ನು ಇಲ್ಲಿ ಶ್ರೀಕೃಷ್ಣನು ಹೇಳುವನು. ಯಜ್ಞ ದಾನ ತಪಗಳು ಮನುಷ್ಯನಿಗೆ ಇಹಲೋಕದಲ್ಲಿ ನಿಯತ ಕರ್ಮಗಳಾಗಿವೆ. **ನಿಯತವೆಂದರೆ ಪರಮೇಶ್ವರನು ಮನುಷ್ಯನಿಗೆ ನೇಮಿಸಿಕೊಟ್ಟದೆಂದು ತಿಳಿಯಬೇಕು.** ಯಾವುದಾದರೊಂದು ಶಾಸ್ತ್ರದಲ್ಲಿ ಹೇಳಿದುದೆಂದು ಇದಕ್ಕೆ ಗೀತೆಯಲ್ಲಿ ಅರ್ಥವಾಗುವದಿಲ್ಲ. ಜಗತ್ತಿಗೆಲ್ಲ ನಿಯಾಮಕನಾದ ಪರಮೇಶ್ವರನಿಂದ ಮನುಷ್ಯನಿಗಾಗಿ ಏರ್ಪಟ್ಟ ಎಂಬುದೇ ನಿಯತ ಶಬ್ದಕ್ಕೆ ಅರ್ಥ. ಶಾಸ್ತ್ರನಿಯತವೆಂದೇ ಅರ್ಥ ಮಾಡುವದಾದರೆ ಕೇವಲ ಗೀತಾಶಾಸ್ತ್ರ ನಿಯತವೆಂದೇ ತಿಳಿಯಲಿಕ್ಕೆ ಅಡ್ಡಿ ಇಲ್ಲ.

ಯಜ್ಞದಾನ ತಪವೆಂಬ ಕರ್ಮಗಳು ಯಾವ ಸಂದರ್ಭದಿಂದ ನಿಯತ ಕರ್ಮಗಳಾಗುವವೆಂಬ ವಿಚಾರವಾದರೂ ಬೋಧಪರವಾಗುವದೆಂದು ತೋರುವದು. ಗೀತೆಯಲ್ಲಿ ಈ ಶಬ್ದಗಳ ಅರ್ಥಗಳು ನಿಶ್ಚಿತವಾಗಿಯೂ ಬೀಜ ಭೂತವಾಗಿಯೂ ಇರುವವು. ಜಗತ್ತಿನಲ್ಲಿ ಜನಿಸಿದ ಒಂದೊಂದು (ಸಂ) ಭೂತವ್ಯಕ್ತಿಗೂ ಅದರ ಪರಿಸ್ಥಿತಿಯನ್ನನುಸರಿಸಿ ಮೂರು ವಿಧದ ವಿಶಿಷ್ಟ ಸಂಬಂಧಗಳು ಸಂಭವಿಸುವವು. ಆ ವ್ಯಕ್ತಿಗೂ ಪರಮೇಶ್ವರನಿಗೂ ಇರುವ ಸಂಬಂಧವೇ ಮೊದಲನೆಯದು. ಆ ವ್ಯಕ್ತಿಗೂ ತನ್ನಂತೆ ಸೃಷ್ಟಿಯಲ್ಲುಂಟಾದ ಉಳಿದ ಭೂತವ್ಯಕ್ತಿಗಳಿಗೂ ಇರುವ ಸಂಬಂಧವು ಎರಡನೆಯದು. ಆ ವ್ಯಕ್ತಿಗೆ ತನ್ನಲ್ಲಿರುವ ಸಂಬಂಧವು ಮೂರನೆಯದು. ಈ ಸಂಬಂಧಗಳನ್ನನುಲಕ್ಷಿಸಿ ಆ ವ್ಯಕ್ತಿಯಲ್ಲಿ ಸಂಭವಿಸುವ ಮೂರು ಬಗೆಯ ಉತ್ತಮವೂ ತಾತ್ವಿಕವೂ ಆದ ಕರ್ತವ್ಯಗಳಿಗೆ ಯಜ್ಞದಾನ ತಪಗಳೆಂಬ ಹೆಸರುಗಳು ಗೀತೆಯಲ್ಲಿ ಅರ್ಥ ಗರ್ಭಿತವಾಗಿಯೂ ಸಹೇತುಕವಾಗಿಯೂ ಕೊಟ್ಟಿವೆ.

ವ್ಯಕ್ತಿಯು ಪರಮೇಶ್ವರನಿಗಾಗಿ ಮಾಡತಕ್ಕ ಕರ್ತವ್ಯಕ್ಕೆ ಯಜ್ಞ ವೆಂಬ ಹೆಸರು. ಈ ಶಬ್ದದ ಅರ್ಥವೈಶಿಷ್ಟ್ಯವು ಗೀತೆಯಲ್ಲಿ ಕರ್ಮದ ಸ್ವರೂ ಪವನ್ನು ಅವಲಂಬಿಸಿರುವದಿಲ್ಲ. ಆದರೆ ಕರ್ಮ ಮಾಡುವವನ ಭಾವವನ್ನು ಅವಲಂಬಿಸುವದು. ಕರ್ಮವು ಯಾವುದೇ ಇರಲಿ, ಅದನ್ನು ಪುರುಷೋ ತ್ತಮನಿಗಾಗಿ ಮಾಡಿದ್ದೇ ಆದರೆ ಅದು ಯಜ್ಞವೆನಿಸುವದು. ಕರ್ತೃವಿನಲ್ಲಿ ಕರ್ತೃತ್ವದ ಅಭಿಮಾನವಿಲ್ಲದಿರುವದು ಅಥವಾ ಕರ್ಮದ ಫಲವನ್ನು ಬುದ್ಧಿ ಪುರಃಸರವಾಗಿ ಪುರುಷೋತ್ತಮನಿಗೆ ಏಕಭಾವದಿಂದ ಅರ್ಪಿಸುವದು ಇವೇ ಇಂಥ ಯಜ್ಞದ ಲಕ್ಷಣಗಳಾಗಿವೆ. ಪುರುಷೋತ್ತಮನ ವಿಷಯದಲ್ಲಿ ಇಂಥ ಏಕಭಾವವಿಲ್ಲದಾಗ ಬೇರೊಂದು ಒಳ್ಳೆಯ ಭಾವದಿಂದ ಮಾಡಿದ ಯಜ್ಞವೇ ದಾನವೆನಿಸುವದು. ಯಾವದೊಂದು ಕರ್ಮವನ್ನು ಕರ್ತೃತ್ವ ಭಾವದಿಂದ ಅಂದರೆ ಸಂಗಸಹಿತವಾಗಿಯೂ ಸೃಷ್ಟಿಯೊಳಗಿನ ಸಕಲ ಭೂತ ಗಳ ಹಿತವನ್ನು ಅನುಲಕ್ಷಿಸಿಯೂ ಫಲಾಪೇಕ್ಷೆಯಿಲ್ಲದೆ ಮಾಡುವದಕ್ಕೆ ದಾನವೆಂದು ಹೆಸರು. ಪರಮೇಶ್ವರನಲ್ಲಾಗಲಿ ಸರ್ವಭೂತಹಿತದಲ್ಲಾಗಲಿ ಭಾವವನ್ನಿಟ್ಟು ನಡೆಯುವದು ತನ್ನ ಶಕ್ತಿಬಾಹ್ಯವೆಂದು ತೋರಿದರೆ ತನ್ನ

ಲ್ಲಿಯೇ ಲಕ್ಷ್ಯವಿಟ್ಟು ಸದ್ಭಾವದಿಂದ ಸತ್ಕರ್ಮಗಳನ್ನು ಮಾಡುವದಕ್ಕೆ ಆಸ್ಪದವಿರುವದು. ಭಾವವು ಹೀಗೆ ಸ್ವಾರ್ಥಪರವಾದರೂ ಅದು ತ್ಯಾಗ ಯುಕ್ತವಾಗಿರಬೇಕು. ಹೀಗಿದ್ದರೆ,ಕರ್ತೃವಿಗೆ ಹಿತವಾಗದೆ ಇರದು. ಇಂಥ ಅವನ ಆಚರಣೆಗೆ ತಪವೆಂದು ಹೆಸರು.

ಮನುಷ್ಯನು ಮಾಡುವ ಯಜ್ಞ ದಾನ ತಪವೆಂಬ ತ್ರಿವಿಧ ಕರ್ತವ್ಯ ಗಳಿಗೂ ತಪವೇ ತಳಹದಿಯಾಗಿದೆ. ಕೇವಲ ತಪದ ಆಚರಣೆಯು ಕನಿಷ್ಠ ವೆಂಬುದು ನಿಜ. ಆದರೂ ಇದನ್ನು ಮೀರಿದ ಯಜ್ಞ ದಾನಗಳು ಮನು ಷ್ಯನ ತಪಃಶಕ್ತಿಯನ್ನು ಅವಲಂಬಿಸಿರುವವು. ಇಷ್ಟೇ ಅಲ್ಲ; ಮನುಷ್ಯನಲ್ಲಿ ತಪಃಶಕ್ತಿಯು ಬೆಳೆಯುತ್ತ ಹೋದಂತೆ ಅವನಿಗೆ ದಾನ ಮತ್ತು ಯಜ್ಞ ವಿಷಯಕ ಕರ್ತವ್ಯಗಳು ಸ್ಪಷ್ಟವಾಗಿ ಕಾಣಲಾರಂಭಿಸುವವು. ಆದುದರಿಂದ ತಪವೇ ಎಲ್ಲ ಸದಾಚರಣೆಗೆ ಮೂಲವಾಗಿರುವದು. ಉದಾತ್ತ ವಿಚಾರ ಗಳನ್ನು ಅನುಸರಿಸಿ ತಮ್ಮ ಆಚರಣೆಯನ್ನು ನಿರ್ಧರಿಸುವವರು ಆಧುನಿಕ ರಾಗಲಿ ಪುರಾತನರಾಗಲಿ ಈ ತಪೋಬಲದಿಂದ ಪ್ರಾಪ್ತವಾಗುವ ತ್ಯಾಗ ಬುದ್ಧಿಯನ್ನು ಸಾಧಿಸಿಕೊಳ್ಳದಿದ್ದರೆ ತಮ್ಮ ಆಚರಣೆಗೆ ಮೂಲಭೂತವಾದ ತತ್ವವನ್ನು ಅವರು ಗ್ರಹಿಸಲಿಲ್ಲವೆಂದೇ ಹೇಳಬೇಕು. ಮನುಷ್ಯರ ಅಂತಃ ಕರಣದೊಳಗಿನ ತಪೋಬುದ್ಧಿಯು ಬತ್ತಿಹೋದರೆ ಆಧಿಭೌತಿಕ ಸುಖವೇ ಆತ್ಯಂತಿಕ ಸತ್ಯವೆಂಬ ಸಂಬುಗೆಯು ಅವರಲ್ಲಿ ತಲೆದೋರುವದು. ಚಾರ್ವಾಕ ಪಂಥದ ಸ್ವಾರ್ಥಪರತೆಯೇ ಇದಕ್ಕೆ ಉದಾಹರಣೆಯಾಗಿದೆ. ತಪವೂ ತ್ಯಾಗವೂ ಇಲ್ಲದೆ ಸುಖವನ್ನು ಬಯಸುವದೆಂದರೆ ದುಃಖಕ್ಕೆ ಔತಣ ಕೊಟ್ಟಂತೆಯೇ ಸರಿ. ಇದರಿಂದ ಕೊನೆಗೆ ಪ್ರತಿಕ್ರಿಯೆಯು ಉಂಟಾಗಿ ಮನುಷ್ಯನ ಮನಸ್ಸಿನಲ್ಲಿ ತ್ಯಾಗ ತಪಗಳು ಪುನಃ ಅಂಕುರಿಸುವವು. ಆಗ ಸ್ವಾರ್ಥಪರತೆಯು ಶಿಥಿಲವಾಗಿ ಮನುಷ್ಯನು ದೂರದೃಷ್ಟಿಯಿಂದ ಪರೋಪ ಕಾರವನ್ನು ನೆಸೆಯಲಾರಂಭಿಸುವನು, **ಸಾಮಾನ್ಯ ಮನುಷ್ಯನ ಸ್ವಭಾವೋ ನ್ನತಿಗಾದರೂ ತಪ ತ್ಯಾಗ ಇವೇ ಆರಂಭದ ಉಪಾಯಗಳೆಂಬದನ್ನು ವಿಶದ ಮಾಡುವದಕ್ಕೆ ಈ ವಿಚಾರಗಳನ್ನೆಲ್ಲ ಇಲ್ಲಿ ಹೇಳಿರುವೆವು.** ನಿಯತ ಕರ್ಮಗಳನ್ನು ಬಿಟ್ಟುಬಿಡುವದು ಎಂದಿಗೂ ಉಚಿತವಾಗದು.

ಇಷ್ಟೇ ಅಲ್ಲ, ಅವುಗಳನ್ನು ತ್ಯಜಿಸುವದು ಖಂಡಿತವಾಗಿ ಅಪಾಯಕರವು. ಮೋಹಕ್ಕೊಳಗಾಗಿ ಯಾರಾದರೂ ಅವುಗಳನ್ನು ಬಿಟ್ಟರೆ ಅಂಥ ತ್ಯಾಗವು ತಾಮಸವೆನಿಸುವದು.

**ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥ ೮ ॥**

ಯಾವುದೊಂದು ಕರ್ಮವು ಕರ್ತವ್ಯವೋ ಇಲ್ಲವೆ ಅಕರ್ತವ್ಯವೋ ಎಂಬುದನ್ನು ನಿಶ್ಚಯಿಸುವಾಗ ಆ ಕರ್ಮದಿಂದ ಶರೀರಕ್ಕಾಗುವ ಕ್ಲೇಶವನ್ನು ಗಮನಿಸಬಾರದು. ಹಾಗೆ ಗಮನಿಸಿ ಕಾಯಕ್ಲೇಶಭಯದಿಂದ ಕರ್ಮವನ್ನು ಮಾಡದೆ ಬಿಟ್ಟರೆ ಆ ತ್ಯಾಗವು ರಾಜಸವು. ಇಂಥ ತ್ಯಾಗಕ್ಕೆ ಫಲವು ದೊರೆಯದು.

**ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।**
**ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥ ೯ ॥**

ತ್ಯಾಗದ ತಾಮಸ ಮತ್ತು ರಾಜಸ ಪ್ರಕಾರಗಳನ್ನು ಮೇಲೆ ಹೇಳಿದ್ದಾಯಿತು. ಇನ್ನು ಅದರ ಸಾತ್ತ್ವಿಕ ಸ್ವರೂಪವನ್ನು ಶ್ರೀಕೃಷ್ಣನು ಹೇಳುತ್ತಾನೆ. ನಿಯತಕರ್ಮಗಳನ್ನು ಅಂದರೆ ಯಜ್ಞ ದಾನ ತಪಗಳನ್ನು ಕೇವಲ ಕರ್ತವ್ಯವೆಂದು ಸಂಗವನ್ನೂ ಫಲವನ್ನೂ ಬಿಟ್ಟು ಮಾಡುವದೇ ಸಾತ್ತ್ವಿಕ ತ್ಯಾಗವು.

**ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।**
**ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥ ೧೦ ॥**

ಸಾತ್ತ್ವಿಕಕರ್ಮವನ್ನು ಆಚರಿಸುವವನು ಅಪ್ರಿಯವಾದುದನ್ನು ದ್ವೇಷಿಸನು. ಅಥವಾ ಪ್ರಿಯವಾದುದರಲ್ಲಿ ಆಸಕ್ತನಾಗನು. ಇಂಥ ತ್ಯಾಗಿಯು ಸತ್ತ್ವಸಂಪನ್ನನೂ ಸ್ಥಿರಬುದ್ಧಿಯುಳ್ಳವನೂ ಸಂಶಯರಹಿತನೂ ಆಗಿರುವನು. ಹಿಂದೆ (೫–೨೦) ಹೇಳಿದ ಬ್ರಾಹ್ಮೀಸ್ಥಿತನು ಇವನೇ.

**ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ ೧೧ ॥**

ತ್ಯಾಗವೆಂದರೆ ಕರ್ಮ ಮಾಡುವದನ್ನು ಸ್ವರೂಪತಃ ಬಿಡುವದೆಂದು ತಿಳಿಯಬಾರದು. ಏಕೆಂದರೆ, ಮನುಷ್ಯನು ಶರೀರವನ್ನು ತಾಳಿರುವದರಿಂದ ಹೀಗೆ ನಿಶ್ಶೇಷವಾಗಿ ಕರ್ಮತ್ಯಾಗ ಮಾಡುವದು ಅವನಿಗೆ ಶಕ್ಯವಲ್ಲ. ಕರ್ಮ ಫಲ ತ್ಯಾಗ ಮಾಡಿದವನನ್ನೇ ತ್ಯಾಗಿಯೆಂದು ಎಣಿಸಬೇಕು.

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಂ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸನ್ಯಾಸಿನಾಂ ಕ್ವಚಿತ್ ॥ ೧೨ ॥**

ಅತ್ಯಾಗಿಗಳಿಗೆ ಅಂದರೆ ತ್ಯಾಗಬುದ್ಧಿಯನ್ನಾಶ್ರಯಿಸದೆ ಕರ್ಮಗಳನ್ನು ಮಾಡುವವರಿಗೆ ಮರಣಾನಂತರದಲ್ಲಿ ಇಷ್ಟ, ಅನಿಷ್ಟ ಮತ್ತು ಮಿಶ್ರವೆಂಬ ಮೂರುವಿಧವಾದ ಫಲಗಳು ದೊರೆಯುವವು. **ಸಕಾಮ ಕರ್ಮಗಳಿಂದುಟಾಗುವ ಬಂಧನದ ಸ್ವರೂಪವು ಕೊನೆಗೆ ಇದೇ ಆಗಿದೆ.** ಆದರೆ ತ್ಯಾಗ ಬುದ್ಧಿಯಿಂದ ಕರ್ಮಗಳನ್ನು ಸಂನ್ಯಾಸ ಮಾಡುವವರಿಗೆ ಅಂದರೆ ಸಂಗವನ್ನು ಅಥವಾ ಫಲಾಸಕ್ತಿಯನ್ನು ಬಿಟ್ಟು ಕರ್ಮಗಳನ್ನು ಮಾಡುವವರಿಗೆ ಮರಣಾನಂತರದಲ್ಲಿ ಈ ಫಲಗಳು ಉಂಟಾಗವು. ಅವರು ಕರ್ಮ ಬಂಧನದಿಂದ ಮುಕ್ತರಾಗುವರೆಂದು ಹೇಳುವದು ಇದಕ್ಕಾಗಿಯೇ.

ಅರ್ಜುನನು ಈ ಅಧ್ಯಾಯದ ಮೊದಲನೆಯ ಶ್ಲೋಕದಲ್ಲಿ ಕೇಳಿದ ಪ್ರಶ್ನೆಗೆ ಇದು ವರೆಗೆ ಪೂರ್ಣಸಮಾಧಾನವನ್ನು ಹೇಳಿದುದಾಯಿತು. ಅದರ ನಿಷ್ಕರ್ಷೆ ಏನೆಂದರೆ, ಸಂನ್ಯಾಸಕ್ಕೂ ತ್ಯಾಗಕ್ಕೂ ತಾತ್ವಿಕ ವ್ಯತ್ಯಾಸವು ಇರುವದು ನಿಜ. ಆದರೆ ಕರ್ಮಬಂಧನದಿಂದ ಮುಕ್ತನಾಗಬೇಕೆಂದು ಮನುಷ್ಯನು ಮಾಡುವ ಪ್ರಯತ್ನವು ಎರಡರಿಂದಲೂ ಸಮಾನವಾಗಿ ನೆರವೇರುವದು.

**ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।**
**ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ**
**ಸರ್ವಕರ್ಮಣಾಮ್ ॥ ೧೩ ॥**

ಹದಿನೇಳನೆಯ ಅಧ್ಯಾಯದ ಆದಿಯಲ್ಲಿ ಅರ್ಜುನನು ಶ್ರದ್ಧೆಯ ವಿಷಯವಾಗಿ ಕೇಳಿದ ಪ್ರಶ್ನೆಯಿಂದ ತನ್ನ ನಿರೂಪಣೆಯು ಸಮರ್ಪಕವಾಗಲಿಲ್ಲವೆಂದು ಶ್ರೀಕೃಷ್ಣನ ಲಕ್ಷ್ಯಕ್ಕೆ ಬಂದಿತು. ಪ್ರಕೃತಿ ಮತ್ತು ಗುಣಗಳು ಎಲ್ಲ ಕಾರ್ಯಗಳಿಗೂ ಕರ್ತೃತ್ವಕ್ಕೂ ಕಾರಣವಾಗಿರುವವೆಂದು ಹಲವು ಸಾರೆ ಆಗ್ರಹದಿಂದ ಪ್ರತಿಪಾದಿಸಿದ್ದರೂ ಅರ್ಜುನನಿಗೆ ಅವುಗಳ ಪ್ರತ್ಯಕ್ಷ ಕಾರ್ಯಕಾರಣ ಸಂಬಂಧವು ತಿಳಿಯದೆ ಹೋಯಿತು. ಆದುದರಿಂದ **ಗುಣಗಳ ಸಹವಾಸದಿಂದ ಸಂಸ್ಕಾರವು, ಸಂಸ್ಕಾರದಿಂದ ಸತ್ತ್ವವು ಮತ್ತು ಸತ್ತ್ವದಿಂದ ಗುಣ ಪ್ರಧಾನವಾದ ಶ್ರದ್ಧೆಯು** ಬರುವವೆಂದು ತಾತ್ತ್ವಿಕ ವಿವೇಚನೆಯನ್ನು ಮಾಡಿ ಈ ಸತ್ತ್ವಶ್ರದ್ಧೆಗಳು ಮನುಷ್ಯನ ಒಂದೊಂದು ಲೌಕಿಕವೇ ಅಲ್ಲದೆ ಪಾರಮಾರ್ಥಿಕ ವ್ಯವಹಾರದಲ್ಲಿಯೂ ಹೇಗೆ ಹುದುಗಿಕೊಂಡಿರುವವೆಂಬದನ್ನು ವಿಸ್ತಾರವಾಗಿ ಶ್ರೀ ಕೃಷ್ಣನು ಹೇಳಲಾರಂಭಿಸಿದನು.

ಆಹಾರ ಯಜ್ಞ ದಾನ ತಪ ಇವುಗಳ ಈ ವಿವೇಚನೆಯನ್ನು ಮುಗಿಸಿ ವಿಷಯದ ನಿರೂಪಣೆಯನ್ನು ಮುಂದೆ ಸಾಗಿಸುವಷ್ಟರಲ್ಲಿ ಸಂನ್ಯಾಸ ಮತ್ತು ತ್ಯಾಗ ಇವುಗಳಲ್ಲಿ ವ್ಯತ್ಯಾಸವೇನೆಂದು ತನ್ನ ಮನಸ್ಸಿನಲ್ಲಿದ್ದ ಸಂಶಯವನ್ನು ಅರ್ಜುನನು ಕೇಳಿದನು. ಅವನ ಪ್ರಶ್ನೆಗೆ ಸಮಾಧಾನವನ್ನು ಇದುವರೆಗೆ ಹೇಳಿ ನಡುವೆ ನಿಂತಿದ್ದ ತನ್ನ ವಿಷಯದ ಮುಂದಿನ ಭಾಗವನ್ನು ಶ್ರೀಕೃಷ್ಣನು ಈ ಶ್ಲೋಕದಲ್ಲಿ ವಿಸ್ತರಿಸುವನು.

ತಾನು ಚರ್ಚಿಸುತ್ತಲಿರುವ ವಿಷಯದ ಮೂಲಭೂತ ತತ್ತ್ವಗಳನ್ನು ಮೊದಲು ತೋರಿಸಿ ಆಮೇಲೆ ಅದರ ವ್ಯಾವಹಾರಿಕ ಸ್ವರೂಪವನ್ನು ಶಾಸ್ತ್ರೀಯ ಮತ್ತು ತಾತ್ತ್ವಿಕ ದೃಷ್ಟಿಯಿಂದ ಪೃಥಕ್ಕರಿಸಿ ಸಂಗತಿಗಳನ್ನು ತಿಳಿಸಿ ಹೇಳುವ ಪದ್ಧತಿಯು ಸೂಕ್ಷ್ಮ ವಿಚಾರಶೀಲರಾದ ವಾಚಕರಿಗೆ ಗೀತೆಯಲ್ಲಿ ಕಂಡು ಬರುವದು. ಅದನ್ನು ಅನುಸರಿಸಿ ಸಾಂಖ್ಯಶಾಸ್ತ್ರದಲ್ಲಿ ಸಮರ್ಪಕವಾಗಿ ಹೇಳಿದ ಮತ್ತು ತನಗೆ ಸಮ್ಮತವಾಗಿದ್ದ ಕರ್ಮದ ವ್ಯುತ್ಪತ್ತಿ ತತ್ತ್ವಗಳನ್ನು ಇಲ್ಲಿ ಉದಾಹರಿಸಿ ತ್ರಿಗುಣ ವಿಷಯಕ ನಿರೂಪಣೆಯನ್ನು ಶ್ರೀಕೃಷ್ಣನು ಮುಂದುವರಿಸುವನು. ಎಲ್ಲ ಕರ್ಮಗಳ ಸಂಪೂರ್ತಿಗೆ ಐದು ಕಾರಣಗಳು

ಅಗತ್ಯವಾಗಿರುವವು ಸಾಂಖ್ಯಶಾಸ್ತ್ರದ ಈ ಸಿದ್ಧಾಂತವನ್ನು ಅರ್ಜುನನು ಶ್ರೀಕೃಷ್ಣನಿಂದ–ಅದು ಬುದ್ಧಿಯೋಗಶಾಸ್ತ್ರಕ್ಕಾದರೂ ಅನುಗುಣವಾಗಿರುವದರಿಂದ– ಗ್ರಹಿಸಬೇಕು.

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥ ೧೪ ॥**

ಅಧಿಷ್ಠಾನ (ಆಧಾರ), ಹಾಗೆಯೇ ಕರ್ತೃವು, ನಾನಾ ವಿಧದ ಸಾಧನಗಳು, ಕರ್ತೃವು ಮಾಡುವ ನಾನಾ ವಿಧದ ಚಲನವಲನಗಳು, ಇವು ನಾಲ್ಕು. ದೈವವೆಂಬದು ಐದನೆಯದು.

**ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥ ೧೫ ॥**

ಮನುಷ್ಯನು ಆರಂಭಿಸುವ ಎಲ್ಲ ಕರ್ಮಗಳಿಗೂ ಅವು ನ್ಯಾಯ್ಯವಾಗಲಿ, ವಿಪರೀತವಾಗಲಿ, ಕಾಯಿಕವಾಗಲಿ, ವಾಚಿಕವಾಗಲಿ ಮೇಲೆ ಹೇಳಿದ ಐದು ಕಾರಣಗಳೂ ಹೇತುವಾಗಿರುವವು.

ಯಾವ ಕರ್ಮದಿಂದ ಕರ್ತೃವಿನ ಮತ್ತು ಸೃಷ್ಟಿಯ ಶ್ರೇಯಸ್ಸು ಸಾಧಿಸುವದು ಆ ಕರ್ಮವನ್ನು **ನ್ಯಾಯ್ಯಕರ್ಮವೆಂದೂ** ಅದಕ್ಕೆ ಬಾಧಕವಾದ ಕರ್ಮವನ್ನು **ವಿಪರೀತಕರ್ಮವೆಂದೂ** ಇಲ್ಲಿ ತಿಳಿಯಬೇಕು. **ಶಾಸ್ತ್ರವಿಹಿತವಾದ ಅಥವಾ ಶಾಸ್ತ್ರವಿರುದ್ಧವಾದ ಕರ್ಮವೆಂದಲ್ಲ.**

**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥ ೧೬ ॥**

ಮನುಷ್ಯನ ಸಾಧಾರಣ ಪ್ರವೃತ್ತಿಯು ಏನೆಂದರೆ, ಈ ಐದು ಕಾರಣಗಳೊಳಗೆ ಮೊದಲಿನ ನಾಲ್ಕು ಕಾರಣಗಳನ್ನು ಪ್ರತ್ಯಕ್ಷವೆಂದೂ ನಿಜವೆಂದೂ ಭಾವಿಸಿ, ಕೊನೆಯದೂ ಐದನೆಯದೂ ಆದ ದೈವವೆಂಬ ಕಾರಣವನ್ನು ಲೆಕ್ಕಿಸದಿರುವದು ಅಥವಾ ಅದಕ್ಕೆ ಕೇವಲ ಔಪಚಾರಿಕವಾದ ಆದರವನ್ನು ತೋರಿಸುವದು. ಹೀಗೆ ಮಾಡುವಾಗ ಅವನು ತಾನೇ ಎಲ್ಲಕ್ಕೂ ಕರ್ತೃವೆಂಬ ಅಭಿಮಾನವನ್ನು ತಾಳುವನು. ಈ ವಿಷಯದಲ್ಲಿ ಬುದ್ಧಿಯು ಬಲವು

ವಿಪರೀತವೂ ಇಂದ್ರಿಯಾಭಿಮುಖವೂ ಆಗಿರುವದರಿಂದ ದೈವವೆಂಬ ಕಾರಣವು ಅವನಿಗೆ ಕಾಣಿಸುವದೂ ಇಲ್ಲ; ಅವನು ಅದನ್ನು ಭಾವಿಸುವದೂ ಇಲ್ಲ.

**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಽಪಿ ಸ ಇಮಾಲ್ಲೋಕಾನ್ನ ಹಂತಿ ನ ನಿಬಧ್ಯತೇ ॥ ೧೭ ॥**

ಐದನೆಯದಾದ **ದೈವವೆಂಬ ಕಾರಣವು ಕರ್ಮಗಳ ಫಲಾಫಲಗಳನ್ನು ಒದಗಿಸುವದರಲ್ಲಿ ಕೇವಲ ಹತಬಲವೂ ನಿರ್ವೀರ್ಯವೂ ಆಗಿರುವದಿಲ್ಲ.** ಇಷ್ಟೇ ಅಲ್ಲ, ಒಂದೊಂದು ಕರ್ಮಕ್ಕೂ ಸಂಭವಿಸುವ ಫಲವು ಕೇವಲ ಆ ದೈವದ ಇಚ್ಛೆಯಿಂದಲೇ ಸಂಭವಿಸುವದೆಂದು ಗೀತೆಯು ಸಾರಿ ಹೇಳುವದು. ಕರ್ತೃತ್ವದ ಭಾರವು ಅಥವಾ ಫಲವನ್ನು ಕೊಡುವ ಭಾರವು ಕರ್ತೃವಿನ ಮೇಲೆ ಇಲ್ಲವೆಂದೂ ಅದು ದೈವವೆಂಬ ಈ ಕಾರಣದ ಮೇಲೆಯೇ ಇರುವದೆಂದೂ ಗೀತೆಯು ಅಭಿಪ್ರಾಯ ಪಡುವದು. ಕರ್ತೃವಿಗೆ ಗೀತೆಯು ಮಾಡುವ ಉಪದೇಶವೇನಂದರೆ ತಾನು ಮಾಡುವನೆಂಬ ಅಹಂಕಾರ ಭಾವವನ್ನು ಕರ್ತೃವು ಸಂಪೂರ್ಣವಾಗಿ ಬಿಡಬೇಕು. ಕರ್ತೃತ್ವದ ಸಂಗವು ಅಥವಾ ಫಲದ ಆಸಕ್ತಿಯು ಬುದ್ಧಿಗೆ ಸೋಂಕದಂತೆ ಅವನು ಬುದ್ಧಿಯನ್ನು ಅಧ್ಯಾತ್ಮವೃತ್ತಿಯಿಂದ ಏಕಾಗ್ರವಾಗಿ ಮಾಡಬೇಕು. ಹೀಗೆ ಮಾಡಿ, ಅರ್ಜುನನು ಅಲ್ಲಿ ನೆರೆದ ಸೈನಿಕರನ್ನು ಕೊಂದರೂ ಅವನು ಕೊಂದಂತೆ ಆಗುವದಿಲ್ಲ. ಮತ್ತು ಆ ಕರ್ಮದಿಂದ ಅವನಿಗೆ ಬಂಧನವು ಸಂಭವಿಸುವದಿಲ್ಲ. ಏಕೆಂದರೆ ಆ ಕಾರ್ಯಕ್ಕೆ ಅರ್ಜುನನು ನಿಮಿತ್ತಮಾತ್ರನು ( ೧೧-೩೩ ). ಆ ಸಂಹಾರದ ಹೊಣೆಯೆಲ್ಲ ಈ ದೈವವನ್ನೇ ಸೇರುವದು.

**ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥ ೧೮ ॥**

ಕರ್ಮವು ಸಂಭವಿಸಲಿಕ್ಕೆ ಬೇಕಾಗುವ ಕಾರಣ ಪರಂಪರೆಯನ್ನು ತಾತ್ವಿಕ ದೃಷ್ಟಿಯಿಂದ ಪೃಥಕ್ಕರಿಸಿ ನೋಡಿದರೆ ಆ ಕಾರಣಗಳು ಎರಡು ವಿಭಾಗವಾಗಿ ಕಾಣಿಸುವವು. ಒಂದು ವಿಭಾಗವು ಭಾವಮೂಲಕವಾಗಿದ್ದು

ಇದಕ್ಕೆ ಕರ್ಮಚೋದನೆ (Motive Cause) ಯೆಂಬ ಹೆಸರು. ಇನ್ನೊಂದು ವಿಭಾಗವು ಪ್ರಕೃತಿ ಮೂಲಕವಾಗಿದ್ದು (Material Cause) ಅದಕ್ಕೆ ಕರ್ಮ ಸಂಗ್ರಹವೆಂದು ಹೆಸರು. ಈ ಒಂದೊಂದು ವಿಭಾಗದಲ್ಲಿಯೂ ಇನ್ನು ಮೂರು ಮೂರು ಅಂತರ್ವಿಭಾಗಗಳು ಕಂಡುಬರುವವು. ಕರ್ಮಚೋದನೆ ಯಲ್ಲಿ ಜ್ಞಾನ, ಜ್ಞೇಯ ಮತ್ತು ಪರಿಜ್ಞಾತನೆಂಬವೂ ಕರ್ಮಸಂಗ್ರಹ ದಲ್ಲಿ ಕರಣ, ಕರ್ಮ ಮತ್ತು ಕರ್ತೃವೆಂಬವೂ ಈ ಅಂತರ್ವಿಭಾಗಗಳು.

ಕರ್ಮ ಮಾಡುವ ಉದ್ದೇಶವನ್ನು ತಾಳುವವನೇ **ಪರಿಜ್ಞಾತೃವು.** ಆ ಉದ್ದೇಶದ ಅಂತಿಮ ಪ್ರಾಪ್ತಿಯೇ **ಜ್ಞೇಯವೆನಿಸುವದು;** ಮತ್ತು **ಜ್ಞಾನವೆಂದರೆ** ಉದ್ದಿಷ್ಟ ವಸ್ತುವನ್ನು ಸಾಧಿಸುವ ಸಾಧನಮಾರ್ಗ.

**ಕರ್ತೃವೆಂದರೆ** ಮೂಲ ಉದ್ದೇಶಕ್ಕೆ ತನ್ನ ಪ್ರಯತ್ನದಿಂದ ಕರ್ಮ ಸ್ವರೂಪವನ್ನು ತರುವವನು. ಆತನ ಈ ಪ್ರಯತ್ನದ ಸ್ವರೂಪಕ್ಕೆ **ಕರ್ಮ ವೆಂದು** ಹೆಸರು. ಹೀಗೆ ಕರ್ಮವನ್ನೆಸಗುವಾಗ ಯಾವ ಸಾಧನ ಸಮು ಚ್ಚಯವನ್ನು ಆತನು ಉಪಯೋಗಿಸುವನೋ ಅದಕ್ಕೆಲ್ಲ **ಕರಣವೆಂಬ** ಹೆಸರು.

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥ ೧೯ ॥**

ಜ್ಞಾನ, ಕರ್ಮ, ಕರ್ತೃವೆಂಬವು ಗುಣಭೇದದಿಂದ ಒಂದೊಂದೂ ಮೂರು ಪ್ರಕಾರದ್ದಾಗಿ ಪರಿಣಮಿಸುವವೆಂದು ಸಾಂಖ್ಯ ಶಾಸ್ತ್ರದಲ್ಲಿ ಹೇಳಿದೆ. ಅದನ್ನೇ ಅರ್ಜುನನಿಗೆ ಶ್ರೀಕೃಷ್ಣನು ಇಲ್ಲಿ ಹೇಳುತ್ತಾನೆ.

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ವಿಕಮ್ ॥ ೨೦ ॥**

ಸೃಷ್ಟಿಯ ಸಮಷ್ಟಿತ್ವದ ವಿಷಯದಲ್ಲಿ ಮನುಷ್ಯನಿಗಿದ್ದ ಭಾವವು ಎಷ್ಟು ಮಟ್ಟಿಗೆ ಯಥಾರ್ಥವೋ ಅಷ್ಟು ಮಟ್ಟಿಗೇ ಅವನ ಜ್ಞಾನವೂ ಶುದ್ಧ ವಾಗಿದೆಯೆಂದು ಹೇಳಬೇಕು.

ಒಂದೇ ಕ್ಷೇತ್ರಾಧಿಪತ್ಯದ ಕೆಳಗೆ ಸಮನ್ವಯಿಸಿದ ಅಸಂಖ್ಯ ಜೀವ ಭೂತಗಳೆಲ್ಲವುಗಳಲ್ಲಿಯೂ ಏಕತ್ವದಿಂದ ನೆಲಸಿರುವ ಅವ್ಯಯಭಾವವನ್ನು ಯಾವನು ಗ್ರಹಿಸಿರುವನು ಮತ್ತು ವಿಭಕ್ತವಾದವುಗಳಲ್ಲಿಯೂ ಅವಿ ಭಕ್ತ್ಯಭಾವವು ಹೇಗೆ ನಿಂತಿರುವದೆಂಬದನ್ನು ಯಾವನು ತಿಳಿದಿರುವನು ಅವನ ಜ್ಞಾನವು ಸಾತ್ವಿಕವೆನಿಸುವದು (೧೩-೧೬).

**ಪೃಥಕ್ತ್ವೇನ ತು ಯಜ್ಞಾನಂ ನಾನಾ ಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ॥ ೨೧ ॥**

ಎಲ್ಲ ಭೂತಗಳಲ್ಲಿಯೂ ಕೇಂದ್ರೀಭೂತವಾದ ಈ ಏಕತ್ವವನ್ನು ಯಾವನು ಗಮನಿಸಲಶಕ್ತನೋ ಮತ್ತು ಯಾವನು ಎಲ್ಲ ಭೂತಗಳನ್ನೂ ಬೇರೆ ಬೇರೆ ಎಂಬುದಾಗಿಯೂ ನಾನಾವಿಧವೆಂಬುದಾಗಿಯೂ ಅನೇಕತ್ವದ ಭಾವನೆಯಿಂದ ಬಗೆಯುವನೋ ಅವನ ಜ್ಞಾನವು ರಾಜಸವೆನಿಸುವದು.

**ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥ ೨೨ ॥**

ತನ್ನದೊಂದು ಕ್ಷುಲ್ಲಕವಾದ ಕಾರ್ಯದಲ್ಲಿಯೇ ಆಸಕ್ತನಾಗಿ ನಿಷ್ಕಾರಣವಾಗಿಯೂ ಅರ್ಥವಿಲ್ಲದೆಯೂ ಆ ಕಾರ್ಯವೇ ಸರ್ವಸ್ವವೆಂದು ತಿಳಿಯುವವನ ಜ್ಞಾನವನ್ನು ತಾಮಸವೆಂದು ಹೇಳಿದೆ.

ರಾಜಸಜ್ಞಾನವು ಕೇಂದ್ರಮೂಲಕವಾದ ಏಕತ್ವವನ್ನು ಗಮನಿಸುವದಿಲ್ಲ. ಮತ್ತು ತಾಮಸಜ್ಞಾನವು ನಾನಾತ್ವವನ್ನೂ ಗಮನಿಸದೆ ತಾನೂ ತನ್ನ ಕಾರ್ಯವೂ ಜಗತ್ತಿನಲ್ಲಿ ಹೆಚ್ಚಿನವೆಂದು ತಿಳಿಯುವದು.

**ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ವಿಕಮುಚ್ಯತೇ ॥ ೨೩ ॥**

ಕರ್ತೃತ್ವ ಬುದ್ಧಿಯನ್ನು ಬಿಟ್ಟು ಇಚ್ಛಾದ್ವೇಷಗಳನ್ನು ತೊರೆದು ಹಾಗು ಫಲಾಕಾಂಕ್ಷೆಯನ್ನು ತ್ಯಜಿಸಿ ಮಾಡಿದ ನಿಯತ ಕರ್ಮವು ಸಾತ್ವಿಕವು.

**ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಂ ॥೨೪॥**

ಫಲವನ್ನಪೇಕ್ಷಿಸಿ ಅಹಂಕಾರ ಯುಕ್ತನಾಗಿ ಪ್ರಯಾಸದಿಂದ ಮಾಡಿದ ಕರ್ಮವು ರಾಜಸವೆನಿಸುವದು.

**ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಂ।**
**ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ ॥೨೫॥**

ಪರಿಣಾಮವನ್ನು ಲಕ್ಷಿಸದೆ ಹಾನಿಯನ್ನಾಗಲಿ ಹಿಂಸೆಯನ್ನಾಗಲಿ ತನ್ನ ಶಕ್ತಿಯ ಮೀರಿಯನ್ನಾಗಲಿ ಲಕ್ಷಿಸದೆ ಆರಂಭಿಸಿದ ಕರ್ಮವು ತಾಮಸವೆನಿಸುವದು.

**ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ವಿಕ ಉಚ್ಯತೇ ॥ ೨೬ ॥**

ಕರ್ತೃತ್ವ ಬುದ್ಧಿಯಿಲ್ಲದವನು, ಕರ್ತೃತ್ವಬುದ್ಧಿಯನ್ನು ಬಿಡುವದರಲ್ಲಿಯೂ ಅಹಂಕಾರವಿಲ್ಲದವನು, ಅಹಂಕಾರವನ್ನು ತ್ಯಜಿಸಿದವೂ ಧೃತಿಯನ್ನೂ ಉತ್ಸಾಹವನ್ನೂ ಕಾದುಕೊಳ್ಳುವವನು ಧೃತಿಯನ್ನೂ ಕಾದುಕೊಂಡರೂ ಕರ್ಮಫಲದ ವಿಷಯದಲ್ಲಿ ನಿಸ್ಪೃಹನು ಆದ ಕರ್ತೃವು ಸಾತ್ವಿಕನೆಂದು ತಿಳಿಯಲ್ಪಡುವನು.

**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ ೨೭ ॥**

ಕರ್ತೃತ್ವಬುದ್ಧಿಯುಳ್ಳವನೂ ಕರ್ಮಫಲದಲ್ಲಿ ಅಭಿಲಾಷೆಯನ್ನು ಹಿಡಿದವನೂ ಲುಬ್ಧನೂ ದುಷ್ಟನೂ ಅಶುಚಿಯೂ ಹರ್ಷಶೋಕಗಳಿಂದ ಯುಕ್ತನೂ ಆದ ಕರ್ತೃವು ರಾಜಸವೆನಿಸುವನು.

**ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ ।**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ ೨೮ ॥**

ಅಯೋಗ್ಯನೂ ತಿಳಿಗೇಡಿಯೂ ಗರ್ವಿಷ್ಠನೂ ಠಕ್ಕನೂ ಕೆಲಸಗೇಡಿಯೂ ಸೋಮಾರಿಯೂ ಖಿನ್ನನೂ ದೀರ್ಘಸೂತ್ರಿಯೂ ಆದ ಕರ್ತೃವು ತಾಮಸನೆನಿಸುವನು.

**ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥ ೨೯ ॥**

ಬುದ್ಧಿಯೂ ಧೃತಿಯೂ ಗುಣಗಳ ಸಂಸರ್ಗದಿಂದ ಮೂರು ವಿಧವಾಗಿ ಸಂಭವಿಸುವವು. ಅವುಗಳನ್ನು ಬೇರೆ ಬೇರೆಯಾಗಿಯೂ ನಿಃಶೇಷವಾಗಿಯೂ ಶ್ರೀಕೃಷ್ಣನು ಹೇಳುವನು; ಅರ್ಜುನನು ಕೇಳಬೇಕು.

**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ವಿಕೀ ॥ ೩೦ ॥**

ಕರ್ಮವನ್ನು ಮಾಡುವದೆಂದರೇನು, ಬಿಡುವದೆಂದರೇನು (೪-೧೮), ಯಾವ ಕರ್ಮವು ಮಾಡಲು ಯೋಗ್ಯವು ಮತ್ತು ಯಾವುದು ಅಯೋಗ್ಯವು, ಯಾವುದರಲ್ಲಿ ಭಯವುಂಟು ಭಯರಹಿತವಾವುದು, ಬಂಧ ಮೋಕ್ಷಗಳೆಂದರೇನು ಎಂಬುದನ್ನು ಯಥಾರ್ಥವಾಗಿ ತಿಳಿಯುವ ಬುದ್ಧಿಯು ಸಾತ್ವಿಕವು. ಇಂಥ ಸಾತ್ವಿಕ ಬುದ್ಧಿಯು ಕರ್ಮಗಳ ಯೋಗ್ಯತೆ ಅಯೋಗ್ಯತೆಗಳನ್ನು ತಿಳಿಯುವದರಲ್ಲಿ ತಪ್ಪುವದೇ ಇಲ್ಲ.

**ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।**
**ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥ ೩೧ ॥**

ಧರ್ಮವು ಯಾವುದು, ಅಧರ್ಮವು ಯಾವುದು, ಕಾರ್ಯವಾವುದು ಅಕಾರ್ಯವಾವುದು ಎಂಬದನ್ನು ಅಯಥಾರ್ಥವಾಗಿ ತಿಳಿಯುವ ಬುದ್ಧಿಯು ರಾಜಸವು.

ರಾಜಸ ಬುದ್ಧಿಗೆ ಧರ್ಮವಾವುದು ಅಧರ್ಮವಾವುದು ಎಂಬದನ್ನು ತಿಳಿಯುವ ಜಿಜ್ಞಾಸೆಯು ಇರುವದು. ಇಷ್ಟೇ ಅಲ್ಲ; ನಿಜವಾದ ಧರ್ಮ

ವನ್ನೇ ಆಚರಿಸಬೇಕೆಂಬ ಹವ್ಯಾಸವೂ ಇರುವದು. ಆದರೆ ರಾಜಸ ಗುಣದ ಪ್ರಾಬಲ್ಯದಿಂದ ಪ್ರಸಂಗವಿಶೇಷದಲ್ಲಿ ಧರ್ಮಾಧರ್ಮಗಳನ್ನು ನಿರ್ಣಯಿಸು ವಾಗ ಇದು ತಪ್ಪುವದು.

**ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ ।**
**ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥೩೨॥**

ತಾಮಸದಿಂದ ತುಂಬಿದ, ಅಧರ್ಮವನ್ನೇ ಧರ್ಮವೆಂದು ಎಲ್ಲೆಲ್ಲಿಯೂ ದುರಾಗ್ರಹದಿಂದ ಬಗೆಯುವ, ಎಲ್ಲ ಸಂದರ್ಭಗಳಲ್ಲಿಯೂ ವಿಪರೀತ ದೃಷ್ಟಿ ಯಿಂದ ನೋಡುವ ಬುದ್ಧಿಯು ತಾಮಸವು.

ತಾಮಸ ಬುದ್ಧಿಯು ಧರ್ಮವು ಇದೆ ಎಂದೂ ಅದನ್ನೇ ಆಚರಿಸ ಬೇಕೆಂದೂ ತಿಳಿದಿರುವದು. ಆದರೆ ವೃತ್ತಿಯೇ ತಾಮಸವಾದುದರಿಂದ ಯಥಾರ್ಥ ಧರ್ಮವನ್ನು ನಿಶ್ಚಯಿಸುವ ಶಕ್ತಿಯು ಈ ಬುದ್ಧಿಗೆ ಇರುವ ದಿಲ್ಲಿ. ಅಂದರೆ, ಧರ್ಮದ ಹವ್ಯಾಸವಿದ್ದರೂ ಅದನ್ನು ಕಂಡುಹಿಡಿಯುವದು ಇದಕ್ಕೆ ಕೈಲಾಗುವದಿಲ್ಲ. ಆದುದರಿಂದ ತಾನು ಮಾಡಿದ್ದೇ ಧರ್ಮವೆಂದು ನಂಬಿ ಸಮಾಧಾನ ಪಟ್ಟು ಈ ಬುದ್ಧಿಯು ಕೇವಲ ಕುರುಡತನದಿಂದ ಅಧರ್ಮವನ್ನೇ ಧರ್ಮವೆಂದು ಆಚರಿಸುವದು,

**ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ವಿಕೀ ॥೩೩॥**

ಪುರುಷೋತ್ತಮನಲ್ಲಿ ಅವ್ಯಭಿಚಾರಿಯಾದ ಭಾವವನ್ನಿಟ್ಟು ನಡೆಯು ವಾಗ ಮನಸ್ಸು ಪ್ರಾಣ ಹಾಗು ಇಂದ್ರಿಯ ಇವುಗಳ ಕ್ರಿಯೆಗಳನ್ನು ದೃಢ ವಾಗಿ ನೆರವೇರಿಸುವ ಧೃತಿಯು ಸಾತ್ವಿಕವೆಂದು ತಿಳಿಯಬೇಕು.

**ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ ।**
**ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥೩೪॥**

ಧರ್ಮ ಅರ್ಥ ಕಾಮಾದಿಗಳನ್ನು ಬಯಸಿ ಅವುಗಳನ್ನು ಪ್ರತಿಫಲ ವಾಗಿ ಪಡೆಯಬೇಕೆಂಬ ಹವಣಿಕೆಯಲ್ಲಿ ತೋರುವ ಧೃತಿಯು ರಾಜಸವು.

**ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।**
**ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ॥ ೩೫ ॥**

ಮೂಢನಾದವನು ಸ್ವಪ್ನ, ಭಯ, ಶೋಕ, ವಿಷಾದ, ಮದ ಇವು ಗಳನ್ನು ಬಿಡದೆ ಇರುವದರಲ್ಲಿ ತೋರುವ ಧೃತಿಯು ತಾಮಸವೆಂದು ತಿಳಿಯು ಬೇಕು.

**ಸುಖಂತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।**
**ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ ॥ ೩೬ ॥**

ಇನ್ನು ಮೂರು ವಿಧದ ಸುಖವನ್ನು ಕುರಿತು ಶ್ರೀಕೃಷ್ಣನು ಹೇಳು ವನು. ಭಗವಂತನಲ್ಲಿ ಪ್ರೀತಿಯನ್ನಿಡುವದು ಮನುಷ್ಯನ ಇಂದ್ರಿಯ ಸ್ವಭಾವಕ್ಕೆ(Sensual Nature) ರುಚಿಸದು. ಆದರೆ ಜಗತ್ತಿನಲ್ಲಿ ದುಃಖ ವನ್ನು ನಿರ್ಮೂಲ ಮಾಡುವದಕ್ಕೆ ಭಗವದ್ಭಕ್ತಿಯಲ್ಲದೆ ಬೇರೆ ಉಪಾಯ ವಿಲ್ಲ. ಈ ಭಗವದ್ಭಕ್ತಿಯು ಅಭ್ಯಾಸದಿಂದಲೇ ಸಾಧಿಸುವದು (೧೨-೯). ಅಭ್ಯಾಸಯೋಗವನ್ನು ಮನಸ್ಸಿನಿಂದ ಹೇಗೆ ಮಾಡಿಸಬೇಕು ಮತ್ತು ಅದು ಎಷ್ಟು ಆವಶ್ಯಕವು ಎಂಬುದು ಈ ಮೊದಲೇ (೬-೨೫,೨೬,೩೫,೩೬) ಹೇಳಿದೆ. ಆದುದರಿಂದ ಈ ಶ್ಲೋಕದಲ್ಲಿ ಬಂದಿರುವ ಅಭ್ಯಾಸದ ಉಲ್ಲೇಖವು ಭಗವದ್ಭಕ್ತಿ ಯನ್ನು ಅನುಲಕ್ಷಿಸಿದೆಯೆಂಬುದು ಸಿದ್ಧವು. ಇಂಥ ಅಭ್ಯಾಸದಿಂದ(೬-೨೧) ಯಾವ ಸುಖದ ಸ್ವಾರಸ್ಯವು ಮನುಷ್ಯನಲ್ಲಿ ಅಂಕುರಿಸುವದೋ ಅದು ದುಃಖವನ್ನು ನಿರ್ಮೂಲವಾಗಿ ಮಾಡುವದು.

**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।**
**ತತ್ಸುಖಂ ಸಾತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ॥ ೩೭ ॥**

ಆರಂಭದಲ್ಲಿ ವಿಷಮಯವಾಗಿ ತೋರಿ ಪರಿಣಾಮದಲ್ಲಿ ಅಮೃತೋಪ ಮವಾಗಿರುವ ಆತ್ಮಬುದ್ಧಿ ಜನಿತ ಶಾಂತಿಯಿಂದ ಪಡೆಯಬಹುದಾದ ಸುಖವು ಸಾತ್ವಿಕವೆಂದು ಹೇಳಿದೆ.

**ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಮ್ ।**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಂ ॥ ೩೮ ॥**

ವಿಷಯೇಂದ್ರಿಯಸಂಯೋಗದಿಂದ ಉಂಟಾಗುವ ಸುಖವು ಆರಂಭದಲ್ಲಿ ಅಮೃತದಂತಿದ್ದರೂ ಪರಿಣಾಮದಲ್ಲಿ ವಿಷವಾಗುವದು. ಇಂಥ ಸುಖವು ರಾಜಸವೆಂದು ಹೇಳಿದೆ.

**ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ ।**
**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ॥ ೩೯ ॥**

ಯಾವ ಸುಖವು ಆರಂಭದಲ್ಲಿಯೂ ಪರಿಣಾಮದಲ್ಲಿಯೂ ಆತ್ಮನನ್ನು ಮೋಹವಶನನ್ನಾಗಿ ಮಾಡಿ ನಿದ್ರೆ, ಮೋಹ, ಆಲಸ್ಯ, ಪ್ರಮಾದಗಳನ್ನು ಉಂಟುಮಾಡುವದೋ ಆ ಸುಖವು ತಾಮಸವೆಂದು ಹೇಳಿದೆ.

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।**
**ಸತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥ ೪೦ ॥**

ಸೃಷ್ಟಿಯಲ್ಲಿ ತ್ರಿಗುಣಗಳಿಂದಾಗುವ ಕಾರ್ಯವ್ಯಾಪಾರಗಳನ್ನೂ ಮನುಷ್ಯನ ಮೇಲೆ ಅವುಗಳಿಂದಾಗುವ ಪರಿಣಾಮವನ್ನೂ ಕುರಿತು ವಿವರವಾಗಿ ಇದುವರೆಗೆ ಸಾಕಷ್ಟು ಹೇಳಿದ್ದಾಯಿತು. ಇದೇ ರೀತಿಯಾಗಿ ವಿಷಯದ ವಿವರಣೆಯನ್ನು ಮುಂದುವರಿಸಿದರೆ ಅದು ಮುಗಿಯುವಂತಿಲ್ಲ. ಏಕೆಂದರೆ ಪ್ರಕೃತಿಯ ಮೂರು ಗುಣಗಳಿಂದ ಕೂಡಿರದ ವಸ್ತುವು ಪೃಥ್ವಿಯಲ್ಲಾಗಲಿ ದೇವತೆಗಳ ಸ್ವರ್ಗದಲ್ಲಾಗಲಿ ಒಂದಾದರೂ ಇಲ್ಲ. ಆದುದರಿಂದ ಈ ಪ್ರತಿಪಾದನೆಯನ್ನು ಇಲ್ಲಿಯೇ ಮುಗಿಸುವದು ಲೇಸು.

**ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥ ೪೧ ॥**

ಭಗವಂತನ ಸೃಷ್ಟಿಯಲ್ಲಿ ಎಲ್ಲ ಸಂಗತಿಗಳ ವ್ಯವಸ್ಥೆಯು ತತ್ವವನ್ನೂ ಪದ್ಧತಿಯನ್ನೂ ಅವಲಂಬಿಸಿರುವದು. ಅದೇ ರೀತಿಯಾಗಿ ಈ ಗುಣಗಳ ವಿಷಯದಲ್ಲಾದರೂ ವ್ಯಷ್ಟಿಯಿಂದ ಸಮಷ್ಟಿಯವರೆಗೆ ಸೋಪಾನಕ್ರಮದಿಂದ

ಸಂಘಟನೆಯಾಗಿದೆ. ಮನುಷ್ಯರಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ರೆಂಬವರ ಕರ್ಮಗಳನ್ನು ವಿಭಾಗಿಸಿದುದು ಈ ಸಂಘಟನೆಯ ಮಹತ್ವವುಳ್ಳ ಒಂದು ಪ್ರಕಾರವೆಂದು ಹೇಳಬಹುದು. ಅವರವರ ಸ್ವಭಾವಾನುರೂಪ ವಾದ ಗುಣವಿಶೇಷಗಳನ್ನು ಅನುಲಕ್ಷಿಸಿ ಈ ವಿಭಾಗಗಳು ಮಾಡಲ್ಪಟ್ಟಿವೆ

**ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥ ೪೨ ॥**

ಶಮ, ದಮ, ತಪ, ಶುಚಿರ್ಭೂತತೆ, ಕ್ಷಮೆ, ಸರಲತೆ, ಆತ್ಮಮೂಲಕ ವಿಜ್ಞಾನ, ಆಚರಣೆಯಲ್ಲಿ ಪ್ರಕಟವಾಗುವ (೧೩-೭-೧೧) ಮತ್ತು ಸೃಷ್ಟಿ ಸಂಬಂಧದ ಬುದ್ಧಿಗಮ್ಯವಾದ ಜ್ಞಾನ ( ೭-೨ ), ಆಸ್ತಿಕ ಬುದ್ಧಿ ಇವು ಸ್ವಾಭಾವಿಕವಾದ ಬ್ರಹ್ಮಕರ್ಮದ ಲಕ್ಷಣಗಳಾಗಿವೆ.

**ಶೌರ್ಯಂ ತೇಜೋಧೃತಿರ್ದಾಕ್ಷ್ಯಂ ಯುದ್ಧೇಚಾಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥ ೪೩ ॥**

ಶೌರ್ಯ ತೇಜ, ಧೃತಿ, ದಕ್ಷತೆ, ಯುದ್ಧದಲ್ಲಿ ಹಿಂದಿರುಗದಿರುವಿಕೆ, ದಾನ ಮತ್ತು ಈಶ್ವರಭಾವ ಇವು ಸ್ವಾಭಾವಿಕವಾಗಿ ಕ್ಷಾತ್ರಕರ್ಮದ ಲಕ್ಷಣಗಳಾಗಿವೆ.

ಈ ಶ್ಲೋಕದಲ್ಲಿ ಈಶ್ವರಭಾವವೆಂಬುದಕ್ಕೆ ರಾಜ್ಯವಾಳುವದು ಅಥವಾ ಅಧಿಕಾರ ನಡೆಯಿಸುವದು ಎಂಬುದಾಗಿ ಅರ್ಥವನ್ನು ಕೆಲವರು ಮಾಡು ವರು. ಇದು ನಮಗೆ ಸರಿಯೆಂದು ತೋರುವದಿಲ್ಲ. ರಾಜ್ಯವಾಳುವ ದೊಂದು ಭಾವವೆಂದು ಹೇಳಲಾಗದು. ಈಶ್ವರಭಾವವೆಂಬ ಶಬ್ದವು ಅನೀ ಶ್ವರಭಾವಕ್ಕೆ ವಿರುದ್ಧವಾದ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ ಎಂದು ನಮ್ಮ ನಂಬುಗೆ. ಅನೀಶ್ವರ ಭಾವವೆಂದರೇನೆಂಬುವದು ೧೬-೮ ನೆಯ ಶ್ಲೋಕದಲ್ಲಿ ನಿಸ್ಸಂದಿಗ್ಧವಾಗಿದೆ. ಆದುದರಿಂದ ಈಶ್ವರಭಾವವೆಂದರೆ ಸೃಷ್ಟಿಯ ಮೇಲಿರುವ ಪುರುಷೋತ್ತಮನ ಈಶ್ವರತ್ವದಲ್ಲಿ ಆಸ್ತಿಕ ಭಾವ ವಿರುವದು ಎಂಬ ಅರ್ಥವೇ ಸರಿಯಾದುದೆಂದು ತೋರುವದು. ಮತ್ತು ಕ್ಷಾತ್ರಧರ್ಮದ ಇತರ ಎಲ್ಲ ರಾಜಸಗುಣಗಳನ್ನು ಸಾತ್ವಿಕವಾಗಿ ಮಾಡು

ವಡಕ್ಕೆ ಇದು ಕಾರಣವೆಂಬುದು ಸ್ವಯಂಸಿದ್ಧವಾದ ಮಾತು. ವಾಸ್ತವಿಕ ವಾಗಿ, ಮಾನವರಲ್ಲಿ ಒಡೆತನವನ್ನು ವಹಿಸಿದಾತನು ಪರಮಾತ್ಮನಿಗೆ ತಾನು ಅಧೀನನಾಗಿ ಇರುವನೆಂಬದನ್ನು ಗಮನಿಸದಿದ್ದರೆ ಅದು ಘೋರತಾಮಸ ವೆಂದು ಹೇಳಬೇಕು. ಅದಕ್ಕಾಗಿಯೇ ಈಶ್ವರಭಾವವನ್ನು ಕ್ಷಾತ್ರಧರ್ಮದ ಸ್ವಾಭಾವಿಕ ಗುಣಗಳಲ್ಲಿ ಒಂದಾಗಿ ಹೇಳಿದೆ. ಇದೂ ಅಲ್ಲದೆ ಹುಟ್ಟಿದ ಕ್ಷತ್ರಿಯರೆಲ್ಲರೂ ರಾಜ್ಯವನ್ನಾಳುವರೆಂದು ಹೇಳಲಾಗದು. ಆದುದರಿಂದ ರಾಜ್ಯವಾಳುವದು ಕ್ಷಾತ್ರಸ್ವಭಾವದ ಲಕ್ಷಣವಾಗಲಾರದು. ಬ್ರಹ್ಮ ಸ್ವಭಾವಕ್ಕಾದರೂ ಆಸ್ತಿಕ ಭಾವದೊಂದಿಗೆ ವಿಜ್ಞಾನವು ಅವಶ್ಯವು ಎಂದು ಹೇಳಿದೆ. ಇದೇ ಆಸ್ತಿಕ ಭಾವವು ಕ್ಷತ್ರಿಯನಿಗೆ ಅವಶ್ಯವಾದರೂ ಅದು ವಿಜ್ಞಾನ ಪೂರ್ಣವಾಗಿರಬೇಕೆಂಬ ನಿರ್ಬಂಧವಿಲ್ಲ. ಮೇಲೆ ಹೇಳಿರುವಂತೆ ಕ್ಷತ್ರಿಯನಿಗೆ ಈಶ್ವರಭಾವವಿದ್ದರೆ ಸಾಕೆಂಬದೇ ಈ ಶ್ಲೋಕದ ಅಭಿಪ್ರಾಯ ವಿದ್ದಂತೆ ತೋರುವದು.

**ಕೃಷಿಗೋರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥ ೪೪ ॥**

ಕೃಷಿ ಗೋರಕ್ಷಣ ವಾಣಿಜ್ಯ ಇವು ವೈಶ್ಯರಿಗೆ ಸ್ವಾಭಾವಿಕವಾದ ಕರ್ಮಗಳು; ಮತ್ತು ಸೇವೆಯನ್ನು ಮಾಡುವದು ಶೂದ್ರನಿಗೆ ಸ್ವಾಭಾ ವಿಕವು.

**ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ॥ ೪೫ ॥**

ತನತನಗೆ ಅನುರೂಪವಾದ ಕರ್ಮದಲ್ಲಿ ಲಕ್ಷ್ಯವಿಟ್ಟು ನಡೆಯುವಾಗ ಮನುಷ್ಯರಿಗೆ ಸಿದ್ಧಿಯು ಹೇಗೆ ಪ್ರಾಪ್ತವಾಗುವದೆಂಬದನ್ನು ಶ್ರೀಕೃಷ್ಣನು ಹೇಳಲನುವಾಗುವನು.

ಮೇಲಿನ ನಾಲ್ಕು ಶ್ಲೋಕಗಳಲ್ಲಿ ಆಯಾ ವರ್ಣಸ್ವಭಾವಸಹಜ ವಾದ ಕರ್ಮಗಳ ಸ್ವರೂಪವನ್ನು ವ್ಯಾವಹಾರಿಕವಾಗಿಯೂ ಸ್ಥೂಲ

ವಾಗಿಯೂ ವರ್ಣಿಸಿದೆ. ಈ ವರೆಗೆ ಗೀತೆಯಲ್ಲಿ ವಿವರಿಸಿದ ಮನುಷ್ಯಸ್ವಭಾವದ ಗೂಢ ತತ್ವಗಳನ್ನು ಬಿಟ್ಟು ಚಾತುರ್ವರ್ಣ್ಯ ವ್ಯವಸ್ಥೆಯನ್ನೇ ಪ್ರಮಾಣವೆಂದು ಹೇಳುವದು ಗೀತೆಯ ಅಭಿಪ್ರಾಯವಾಗಲಾರದು. ಆ ತತ್ವಗಳಿಗೆ ವರ್ಣರಚನೆಯು ಹೇಗೆ ಹೊಂದಿರುವದೆಂಬದನ್ನು ಸೂಚಿಸುವದೇ ಇಲ್ಲಿ ನಡೆದ ನಿರೂಪಣೆಯ ಉದ್ದೇಶವೆಂದು ತಿಳಿಯಬೇಕು.

ಈ ವರೆಗೆ ಹೇಳಿದ ಮನುಷ್ಯ ಸ್ವಭಾವದ ತತ್ವಗಳನ್ನು ಇಲ್ಲಿ ಪರ್ಯಾಲೋಚಿಸುವ. ಗುಣಗಳ ವಿಹಾರಕ್ಕೆ ಮನುಷ್ಯ ಸ್ವಭಾವವು ಕ್ಷೇತ್ರವಾಗಿದೆ. ಈ ಗುಣಗಳು ಅವನಲ್ಲಿ ಸತ್ವವಾಗಿ ಪರಿಣಮಿಸುವವು. ಇದೇ ಅವನ ಪ್ರಕೃತಿಸ್ವಭಾವದ ವಿಕಾಸವು.

ಪ್ರಕೃತಿಯ ಸಂದಣಿಯಲ್ಲಿ ಸಿಲುಕಿದ ಅವನ ಆತ್ಮಸ್ವಭಾವದ ಪ್ರೇರಣೆಯು ( Impulse ) ಬಲಗೊಂಡು ಮೊದಲು ಶ್ರದ್ಧೆಯಾಗಿ ಪ್ರಕಟವಾಗುವದು. ಈ ಶ್ರದ್ಧೆಯಿಂದ ಅವನಲ್ಲಿ ಮುಂದಕ್ಕೆ ಆಧ್ಯಾತ್ಮಿಕ ಪ್ರಗತಿಯು ಭಕ್ತಿ, ಯೋಗ, ವಿಜ್ಞಾನ ಇವುಗಳ ಮಾರ್ಗವಾಗಿ ಸಾಗುವದು.

ಆಯಾ ವರ್ಣಗಳಲ್ಲಿ ವ್ಯಕ್ತಿಭೂತರಾದ (Individual) ಸಾಮಾನ್ಯರು ಈ ಸತ್ವಶ್ರದ್ಧೆಗಳಿಂದ ಯುಕ್ತರಾಗಿರುವರೆಂದೂ ಅಂಥವರು ವರ್ಣಸ್ವಭಾವ ಸಹಜವಾದ ಕರ್ಮಗಳ ಲಕ್ಷಣಗಳನ್ನು ಕಂಡುಕೊಂಡು ಪುರುಷೋತ್ತಮಾರ್ಪಣ ಬುದ್ಧಿಯಿಂದ ಅವುಗಳನ್ನು ಅನುಸರಿಸಿದರೆ ಸಾಕೆಂದೂ ಈ ಶ್ಲೋಕಗಳ ಅಭಿಪ್ರಾಯವು.

ಬುದ್ಧಿಯೋಗದ ಹೆಚ್ಚಿನ ತತ್ವಗಳನ್ನರಿತವರು ತತ್ವಾನುರೋಧವಾಗಿಯೇ ತಮ್ಮ ಕರ್ತವ್ಯಗಳನ್ನು ತಿಳಿದು ಮಾಡುವರು. ಇಂಥ ಕರ್ಮಗಳು ನಿಯತವಾಗಿ ಅಂದರೆ ಯಜ್ಞ ದಾನ ತಪಗಳಾಗಿ ಇರುವವು. ಶರೀರ ವಾಕ್ಕು ಮನಸ್ಸುಗಳಿಂದ ತಪವನ್ನಾಚರಿಸುತ್ತ ತಮ್ಮ ತಪೋಧನದಿಂದ ದಾನ ಯಜ್ಞಾದಿಕರ್ಮಗಳನ್ನು ಇವರು ಸಾಧಿಸುತ್ತ ನಡೆಯುವರು. ಇಂಥ ತತ್ವಗಳನ್ನರಿತ ಯೋಗಿಗಳು ತಮ್ಮ ತಮ್ಮ ವರ್ಣವಿಹಿತ ಕರ್ಮಗಳನ್ನು ಬಿಡಬಹುದೆಂಬ ಸೌಕರ್ಯವು ಗೀತೆಯಲ್ಲಿಲ್ಲ. ಅವರಾದರೂ ಹಾಗೆ ತಮ್ಮ

ವರ್ಣವಿಹಿತ ಕರ್ಮಗಳನ್ನು ಬಿಡುವ ಆಸಕ್ತಿಯನ್ನು ಹಿಡಿಯರು. ಏಕೆಂದರೆ ವರ್ಣಗಳು ಪುರುಷೋತ್ತಮನಿಂದಲೇ ನಿರ್ಮಿತವಾದುವು. ಆದರೆ ಅವರ ಯೋಗದೃಷ್ಟಿಯು ಅವರಿಗೆ ಅನ್ಯ ಮಾರ್ಗವನ್ನು ತೋರಿಸಿದರೆ--ಸರ್ವ ಧರ್ಮಗಳನ್ನೂ ಬಿಟ್ಟು—ಅವರು ಪುರುಷೋತ್ತಮ ಪ್ರೇರಿತ ಧರ್ಮವನ್ನೇ ಸ್ವೀಕರಿಸುವರೆಂಬುದು ಖಂಡಿತವು.

ಸಾರಾಂಶವೇನೆಂದರೆ, ಇಲ್ಲಿ ಹೇಳಿರುವ ಆಯಾವರ್ಣಗಳ ಸ್ವಭಾವ ಲಕ್ಷಣಗಳು ಸರ್ವಸಾಮಾನ್ಯವಾದವುಗಳೆಂಬುದನ್ನು ಮರೆಯಬಾರದು. ಯಾವ ಕರ್ಮವನ್ನೇ ಮಾಡಲಿ, ಅದರಿಂದ ಮಾತುವವನ ವರ್ಣಸ್ವಭಾವ ಲಕ್ಷಣಗಳ ವಿಕಾಸವಾದರೆ ಸಾಕೆಂದು ಗೀತೆಯು ಅಭಿಪ್ರಾಯ ಪಡುವದು. ಈ ವಿಧಾನವು ಸಾಮಾನ್ಯವಾದುದು. ಆದರೆ ಆಯಾ ವರ್ಣಗಳ ಧರ್ಮವನ್ನು ಕಾಲೋಚಿತವೆಂದು ಸ್ವೀಕರಿಸಿ ನಡೆದ ಉದಾಹರಣೆಗಳು ಮಹಾಭಾರತ ಯುದ್ಧಕಾಲದಲ್ಲಿಯೂ ಶ್ರೀಕೃಷ್ಣನಿಗೇ ಪ್ರತ್ಯಕ್ಷವಾಗಿದ್ದವು. ಹೀಗೆ ಪರ ಧರ್ಮವನ್ನು ಸ್ವೀಕರಿಸಿದವರು ಶ್ರೀಕೃಷ್ಣನ ಆದರಕ್ಕೆ ಪಾತ್ರರಾಗಿದ್ದರು. ಗೀತೆಯಲ್ಲಿ ಇಂಥ ಪರಧರ್ಮಸ್ವೀಕಾರದ ಪ್ರಶಂಸೆಯೂ ಇಲ್ಲ, ಧಿಕ್ಕಾರವೂ ಇಲ್ಲ. ಅಸಾಮಾನ್ಯರ ವಿಷಯದಲ್ಲಿ ಯದೃಚ್ಛೆಯೇ ಮಾನ್ಯವೆಂಬುದು ಇದಕ್ಕೆ ಕಾರಣವಿರಬಹುದು. (೪-೨೨). ಪರಧರ್ಮಸ್ವೀಕಾರದಿಂದ ಶ್ರೇಯಕ್ಕೆ ಹಾನಿಯುಂಟೆಂಬ ಸಾಮಾನ್ಯ ನಿಯಮವನ್ನು ಗೀತೆಯಲ್ಲಿ ನಿಸ್ಸಂದಿಗ್ಧವಾಗಿ ಸಾರಿರುವದೇನೋ ನಿಜ. ಏಕೆಂದರೆ ಇಂಥ ಸ್ವೀಕಾರವು ಇಂದ್ರಿಯ ಸ್ವಭಾವದ ಪ್ರೇರಣೆಯಿಂದಲೇ ಸಂಭವಿಸುವದು.

**ಯತಃ ಪ್ರವೃತ್ತಿರ್ಭೂತಾನಾಂ ಯೇನಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ ೪೬ ॥**

ಈಗ ವರ್ಣಿಸಿದ ವರ್ಣಸ್ವಭಾವಗಳು ಮೇಲೆಮೇಲೆ ನೋಡುವವರಿಗೆ ಉಚ್ಚ ನೀಚವಾಗಿರುವಂತೆ ತೋರುವವು. ಇದಕ್ಕಾಗಿಯೇ ಸಾಧಾರಣ ಮನುಷ್ಯರಲ್ಲಿ ಸ್ವಧರ್ಮವನ್ನು ಬಿಟ್ಟು ಪರಧರ್ಮವನ್ನು ಸ್ವೀಕರಿಸುವ ಪ್ರವೃತ್ತಿಯು ಕಂಡುಬರುವದು. ಆದರೆ ಹೀಗೆ ಕಂಡುಬರುವ ಉಚ್ಚ ನೀಚತೆಯು ವಾಸ್ತವವಲ್ಲ. ಅವುಗಳನ್ನು ಸೃಷ್ಟಿ ವ್ಯವಹಾರದ ಸೌಕರ್ಯ

ಕ್ಕಾಗಿಯೂ ಸಂಪೂರ್ತಿಗಾಗಿಯೂ ಹಾಗೆ ನಿಯಮಿಸಬೇಕಾಯಿತಲ್ಲದೆ ಮತ್ತಾವ ಯೋಗ್ಯತೆ ಆಯೋಗ್ಯತೆಗಳಾಗಲಿ ಹೆಚ್ಚು ಕಡಿಮೆಗಳಾಗಲಿ ಈ ಸ್ವಭಾವ ವಿವಿಧತೆಯಲ್ಲಿಲ್ಲ. ಎಲ್ಲವೂ ವಿರಾಟ ಪುರುಷನ ಸೇವೆಗಾಗಿಯೇ ವಿಧಿಸಲ್ಪಟ್ಟಿವೆ. ಹೀಗೆ ಅವನ ಸೇವೆಯಲ್ಲಿ ಲಕ್ಷ್ಯವಿಟ್ಟು ನಾಲ್ಕು ವರ್ಣದವರೂ ತಮ್ಮ ತಮ್ಮ ಸ್ವಭಾವಸಹಜವಾದ ಕರ್ಮಗಳನ್ನು ಮಾಡಬೇಕು. ಇದೇ ಅವನ ಉಪಾಸನೆ. ಇಂಥ ಉಪಾಸನೆಯಿಂದ ಅವನಿಗೆ ಬೇಕಾದ ಯಜ್ಞವೂ ಪ್ರಭುತ್ವವೂ ಸಲ್ಲುವವು. ಬ್ರಾಹ್ಮಣನು ಶೂದ್ರನಿಗಿಂತ ಶ್ರೇಷ್ಠನಲ್ಲ. ಶ್ರೇಷ್ಠರಾಗಲಿ ಕನಿಷ್ಠರಾಗಲಿ ಯಾರೂ ಇರುವದಿಲ್ಲ. ಶ್ರೇಷ್ಠತೆ ಕನಿಷ್ಠತೆಗಳು ಸಹಜಸ್ವಭಾವಗಳ ತಾರತಮ್ಯದಲ್ಲಿಲ್ಲ. ಆದರೆ ಪುರುಷೋತ್ತಮನಲ್ಲಿಯ ಅನನ್ಯ ಭಕ್ತಿಯಲ್ಲಿಯೂ ಅವನಿಗರ್ಪಿಸುವ ಯಜ್ಞ ಭಾವದಲ್ಲಿಯೂ ಸಂಭವಿಸುವವು. ಈ ಪುರುಷೋತ್ತಮನಿಂದ ಎಲ್ಲ ಭೂತಗಳೂ ನಿರ್ಮಿತವಾದವು. ಈ ಸೃಷ್ಟಿಯೇ ಅವನಿಂದ ಆಗಿದೆ. ತನ್ನ ಸ್ವಕರ್ಮದಿಂದ ಆತನನ್ನು ಪೂಜಿಸುವ ಮಾನವನು ಆ ಕರ್ಮವು ಉಚ್ಚವಾಗಲಿ ನೀಚವಾಗಲಿ, ಅದರಿಂದ ಸಿದ್ಧಿಯನ್ನು ಪಡೆಯುವನೆಂಬದರಲ್ಲಿ ಸಂದೇಹವಿಲ್ಲ.

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ ೪೭ ॥**

ಯದೃಚ್ಛೆಯಿಂದ ಒದಗಿದ ಸ್ವಕರ್ಮವು ಕರ್ತೃವಿಗೆ ಗುಣವಿಲ್ಲದ್ದಾಗಿ ತೋರಬಹುದು. ಒಂದು ವೇಳೆ ಆ ಸಮಯದಲ್ಲಿ ತಾನು ಅನ್ಯ ವರ್ಣದ ಕರ್ಮವನ್ನು ಸ್ವೀಕರಿಸುವದು ಹೆಚ್ಚು ಯಶಸ್ಕರವಾಗಿಯೂ ತೋರಬಹುದು. ಆದರೆ ಗುಣವಿಲ್ಲದ ತನ್ನ ವರ್ಣಸ್ವಭಾವ ನಿಯತವಾದ ಕರ್ಮವನ್ನೇ ಕೈಕೊಳ್ಳುವದು ಶ್ರೇಯಸ್ಕರವೆಂದು ಅವನು ತಿಳಿಯಬೇಕು. ಏಕೆಂದರೆ, ವರ್ಣಸ್ವಭಾವ ನಿಯತ ಕರ್ಮವನ್ನು ಮಾಡಿದರೆ—ಪರಿಣಾಮವು ಏನೇ ಆಗಲಿ–ಅವನಿಗೆ ದೋಷವು ತಟ್ಟದು. ಹಾಗಲ್ಲದೆ ಪರಧರ್ಮವನ್ನು ಕೈಕೊಂಡರೆ ದೋಷವು ತಗಲುವದು.

**ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥ ೪೮ ॥**

ವರ್ಣಸ್ವಭಾವ ನಿಯತ ಕರ್ಮಗಳನ್ನೇ ಸಹಜಕರ್ಮಗಳೆಂದು ಭಾವಿಸ ಬೇಕು. ಅಂಥ ಕರ್ಮಗಳು ದೋಷಯುಕ್ತವೆಂದು ಕಂಡುಬಂದರೂ ಅಡ್ಡಿ ಯಿಲ್ಲ. ಅವುಗಳನ್ನು ಪುರುಷೋತ್ತಮಾರ್ಪಣ ಬುದ್ಧಿಯಿಂದ ಮಾಡ ಬೇಕಲ್ಲದೆ ಬಿಡಬಾರದು. ಹುಡುಕಿದರೆ ಯಾವ ಕರ್ಮದಲ್ಲಾದರೂ ದೋಷವು ಕಾಣಿಸದಿರದು. ಅಗ್ನಿಯು ಹೊಗೆಯಿಂದ ಕೂಡಿರುವಂತೆ ಎಲ್ಲ ಕರ್ಮಗಳೂ ಒಂದಿಲ್ಲೊಂದು ದೋಷದಿಂದ ಕೂಡಿರುವವು. ಇದೂ ಅಲ್ಲದೆ ದೋಷವು ಹೇಗೆ ಕರ್ಮದಲ್ಲಿರಬಹುದೋ ಹಾಗೆಯೇ ಅದು ಕರ್ತೃತ್ವದ ದೃಷ್ಟಿಯಲ್ಲಾದರೂ ಇರಬಹುದು. ಆದುದರಿಂದ ಕರ್ಮದ ಬಾಹ್ಯ ಸ್ವರೂಪವನ್ನು ನೋಡಿ ಅರ್ಜುನನು ಬೆದರಿ ಹಿಂದೆಗೆಯಬಾರದು.

**ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥ ೪೯ ॥**

ಕರ್ಮದಲ್ಲಿ ಕಣ್ಣಿಗೆ ಬೀಳುವ ದೋಷವು ಆ ಕರ್ಮದಲ್ಲಿ ಇರಲಿ ಕರ್ತೃತ್ವದ ದೃಷ್ಟಿಯಲ್ಲಿರಲಿ, ಗೀತೆಯಲ್ಲಿ ವರ್ಣಿಸಿದ ಕರ್ಮಮಾಡುವ ಕೌಶಲದಿಂದ ಆ ದೋಷವು ಸಂಪೂರ್ಣವಾಗಿ ಪರಿಹಾರವಾಗುವದು. ಆದುದರಿಂದ ಕರ್ಮದೊಳಗೆ ದೋಷವು ಉಂಟೋ ಅಥವಾ ಇಲ್ಲವೋ ಎಂಬವನ್ನು ಹುಡುಕುವ ಕಾರಣವು ಯಾವಾಗಲೂ ಇರುವದಿಲ್ಲ. ಎಲ್ಲ ವಿಷಯದಲ್ಲಿಯೂ ಅನಾಸಕ್ತವಾದ ಬುದ್ಧಿ, ಇಂದ್ರಿಯ-ಸ್ವಭಾವದ ಯೋಗ್ಯ ನಿಯಮನ ಮತ್ತು ಅಹಂಕರ್ತೃತ್ವ ಬುದ್ಧಿಯ ಆತ್ಯಂತಿಕ ಅಭಾವ ಇವೇ ಗೀತೆಯಲ್ಲಿ ಸಂನ್ಯಾಸನೆಂದು ಹೇಳಿದ ರಾಜಮಾರ್ಗದ ಹೆಗ್ಗುರುತುಗಳಾ ಗಿವೆ. ಈ ರಾಜಮಾರ್ಗವನ್ನು ಅನುಸರಿಸಿದರೆ ಪರಮ ನೈಷ್ಕರ್ಮ್ಯ ಸಿದ್ಧಿ ಯನ್ನು—ಕರ್ಮದ ಬಾಹ್ಯಸ್ವರೂಪವು ಹೇಗೆಯೇ ಇರಲಿ— ಸಂದೇಹ ವಿಲ್ಲದೆ ಪಡೆಯ ಬಹುದು.

**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ ।**
**ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥ ೫೦ ॥**

ನೈಷ್ಕರ್ಮ್ಯಸಿದ್ಧಿಯು, ಅಂದರೆ ಕರ್ಮಮಾಡಿ ಬಂಧನದಿಂದ ಮುಕ್ತನಾಗುವದು, ಪ್ರಾಪ್ತವಾದರೆ ಮುಂದಕ್ಕೆ ಬ್ರಾಹ್ಮೀಸ್ಥಿತಿಯು ಪ್ರವಾಹ ಪತಿತವಾಗಿ ಹೇಗೆ ದೊರೆಯುವದೆಂಬುದನ್ನೂ ಈ ಸ್ಥಿತಿಯಲ್ಲಿ ಸಂಭವಿಸುವ ಪೂರ್ಣ ಜ್ಞಾನದಿಂದ ಪ್ರಾಪ್ತವಾಗುವ ಪುರುಷೋತ್ತಮನಲ್ಲಿಯ ನಿಃಸೀಮ ಭಕ್ತಿಯನ್ನೂ (೧೮-೫೬) ಇನ್ನು ಸಂಕ್ಷೇಪವಾಗಿ ಶ್ರೀಕೃಷ್ಣನು ವಿವರಿಸುವನು.

**ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।**
**ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥ ೫೧ ॥**

**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ ೫೨ ॥**

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಂ ।**
**ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥ ೫೩ ॥**

ವಿಶುದ್ಧ ಬುದ್ಧಿಯಿಂದ ಯುಕ್ತನಾಗಿ— ಗೀತೆಯಲ್ಲಿ ಹೇಳಿದ ಬುದ್ಧಿಯೋಗಕ್ಕೆ ಬುದ್ಧಿಯ ವಿಶುದ್ಧತೆಯೇ ಪ್ರತ್ಯಕ್ಷ ಫಲವಾಗಿದೆ—ಇಂದ್ರಿಯ ನಿಯಮನ ವಿಷಯದಲ್ಲಿ ಸಂಪೂರ್ಣ ಧೃತಿಯುಳ್ಳವನಾಗಿ, ಇಂಥ ಪರಿಣತ ಸ್ಥಿತಿಯಲ್ಲಿ ಶಬ್ದಾದಿ ಇಂದ್ರಿಯ ವಿಷಯಗಳನ್ನು ಪರಿತ್ಯಜಿಸಿ, ರಾಗದ್ವೇಷಾದಿಗಳನ್ನು ಬಿಟ್ಟು, ಏಕಾಂತವಾಸಿಯೂ ಅಲ್ಪಾಹಾರನೂ ಶರೀರವಾಙ್ಮನಗಳನ್ನು ಪುರುಷೋತ್ತಮನಿಗೆ ಅರ್ಪಿಸಿದವನೂ (೫-೨೮) ಆಗಿ, ಸರ್ವ ಕಾಲವೂ ಧ್ಯಾನಯೋಗ ವಿರಕ್ತಿಗಳನ್ನು ಆಶ್ರಯಿಸಿ, ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ, ಪರಿಗ್ರಹಾದಿಗಳನ್ನು ತೊರೆದು ನಿರ್ಮಮನು ಎಂದರೆ ಅಹಂಕಾರ ರಹಿತನೂ ಶಾಂತನೂ ಆದಾಗ ಅವನು ಬ್ರಾಹ್ಮೀಸ್ಥಿತಿಯನ್ನು ಪಡೆಯಲಿಕ್ಕೆ ಯೋಗ್ಯನೆಂದು ಎಣಿಸಲ್ಪಡುವನು.

ಅರ್ಜುನನನ್ನು ಯುದ್ಧಕ್ಕೆ ಪ್ರೇರಿಸುವಾಗ ಮೇಲೆ ಹೇಳಿದ ವೇದಾಂತವು ಅನವಶ್ಯವಾಗಿ ತೋರಬಹುದು. ಈ ವಿಷಯಗಳೆಲ್ಲ ಗೀತೆಯಲ್ಲಿ

ಭೋಧಿಸಿದ ಬುದ್ಧಿಯೋಗ ಶಾಸ್ತ್ರವನ್ನು ಮುಗಿಸುವದಕ್ಕಾಗಿ ಕೊನೆಯ ಪ್ರಮೇಯಗಳೆಂದು ಹೇಳಲ್ಪಡುತ್ತಲಿವೆ. ಇದೂ ಅಲ್ಲದೆ, ಅರ್ಜುನನಿಗೆ ಮರಣಾಂತದ ವರೆಗೂ ಯುದ್ಧವನ್ನೇ ಮಾಡಬೇಕಾಗಿಲ್ಲ. ಯುದ್ಧ ಸಮಾಪ್ತಿಯಾದ ಬಳಿಕ ಅವನ ಸಡೆವಳಿಗೆ ಈ ಉಪದೇಶವು ನೆರವಾಗುವದರಲ್ಲಿ ಸಂದೇಹವಿಲ್ಲ.

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಂ ॥ ೫೪ ॥**

ಅನಹಂಕಾರ ಶಾಂತಿಗಳಿಂದ ಯುಕ್ತನಾದ ಪ್ರಸನ್ನಾತ್ಮನಿಗೆ ಅಂದರೆ ಆತ್ಮಸ್ವಭಾವ ಜಾಗ್ರುತೆಯುಳ್ಳವನೂ ಇಚ್ಛಾದುಃಖವರ್ಜಿತನೂ ಎಲ್ಲ ಭೂತಗಳಲ್ಲಿ ಸಮಭಾವವನ್ನಿಟ್ಟವನೂ ಆದ ಬ್ರಹ್ಮಭೂತನಿಗೆ ನನ್ನ—ಅಂದರೆ ಪುರುಷೋತ್ತಮ ಶ್ರೀಕೃಷ್ಣನ—ಭಕ್ತಿಯು ಲಭಿಸುವದು. ಇದೇ ಮೇಲೆ (೧೮-೫೦) ಹೇಳಿದ ಜ್ಞಾನಸ್ಥಿತಿಯ ಪರಮಶ್ರೇಷ್ಠವಾರ ನಿಷ್ಠೆಯು.

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ವತಃ ।**
**ತತೋ ಮಾಂ ತತ್ವತೋ ಜ್ಞಾತ್ವಾ ವಿಶತೇ ತದನಂತರಂ ॥ ೫೫ ॥**

ಇಂಥ ಸ್ಥಿತಿಯಲ್ಲಿರುವಾಗ ನನ್ನಲ್ಲಿ ಭಕ್ತಿಯುಂಟಾಗಿ ನನ್ನ ವಿಷಯದ ಜ್ಞಾನವು ಸತ್ಯವೂ ಸಮರ್ಪಕವೂ ಸಂಪೂರ್ಣವೂ ಆಗುವದು. ನಾನು ಯಾರು ಎಂಥವನು ಎಂಬದು ತತ್ವತಃ ತಿಳಿಯುವದು. ಹೀಗೆ ನನ್ನನ್ನು ತತ್ವತಃ ತಿಳಿದ ಬಳಿಕ ಮನುಷ್ಯನು ನನ್ನಲ್ಲಿ ಪ್ರವೇಶಿಸುವನು. ಪರಮೇಶ್ವರನ ಯಾವುದಾದರೊಂದು ಸ್ವರೂಪದಲ್ಲಿ ಕೇವಲ ಭಕ್ತಿಯನ್ನಿಡುವದಕ್ಕಿಂತಲೂ ಗೀತೆಯಲ್ಲಿ ಹೇಳಿರುವಂತೆ ಅವನು ಭೋಕ್ತೃವು, ಪ್ರಭುವು, ಸರ್ವನಿಯಾಮಕನು (೯-೨೪) ಎಂದು ಅವನನ್ನು ಭಾವಿಸಿ, ಈ ಅವನ **ತತ್ವಸ್ವರೂಪವನ್ನು ತಿಳಿಯುವದೇ** ನಿಜವಾಗಿ ತಿಳಿಯುವದೆಂದು ಗೀತೆಯ ಮತ.

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ ॥ ೫೬ ॥**

ಶ್ರೀಕೃಷ್ಣನಲ್ಲಿ ಪ್ರವೇಶಿಸುವನೆಂದು ಹೇಳುದುದಕ್ಕೆ ಅವನು ನಿಃಶೇಷ ನಾಗಿ ಹೋಗುವನೆಂದು ತಿಳಿಯಬಾರದು. ಇಂಥ ಪ್ರವೇಶವನ್ನು ಬ್ರಹ್ಮ ನಿರ್ವಾಣವೆಂದು ಗೀತೆಯಲ್ಲಿ ಬೇರೆ ಕಡೆಗೆ ಹೇಳಿದೆ. **ಬ್ರಾಹ್ಮೀ ಸ್ಥಿತಿ ಯೆಂದರೆ ಬ್ರಹ್ಮಾನುಭವದ ಸಂಪೂರ್ಣ ಜ್ಞಾನ ಹಾಗು ತದನುರೋಧ ವಾದ ಬಾಳುವೆ (೧೮-೫೪,೫೫)**; ಇವುಗಳ ಶಾಶ್ವತಿಯಲ್ಲ; ಬ್ರಹ್ಮನಿರ್ವಾಣ ವನ್ನು ಪಡೆಯುವ ಮೊದಲಿನ ಸ್ಥಿತಿಯು. ಜ್ಞಾನಾನುಭವಗಳು ಬ್ರಾಹ್ಮೀ ಸ್ಥಿತಿಯಲ್ಲಿ ಸಂಪೂರ್ಣವಾಗಿದ್ದರೂ ಅವುಗಳ ಶಾಶ್ವತಿಯನ್ನು ಪಡೆಯು ವಷ್ಟು ಪುರುಷೋತ್ತಮನ ಅನುಗ್ರಹವು ಆ ಸ್ಥಿತಿಯಲ್ಲಿ ಇನ್ನೂ ಪ್ರಾಪ್ತ ವಾಗಿರುವದಿಲ್ಲ. ಆದುದರಿಂದ ಆ ಸ್ಥಿತಿಯು ಅಖಂಡವಾಗಿ ಅನಂತಕಾಲ ಉಳಿಯದೆ ಮರಳಿ ಕ್ಷರ ಸ್ವಭಾವಕ್ಕೆ ಬಲಿ ಬೀಳುವ ಸಂಭವವುಂಟು. ಬ್ರಹ್ಮ ನಿರ್ವಾಣ ಸ್ಥಿತಿಯನ್ನು ಪಡೆಯಲು ಪಾತ್ರನಾದ ಮೇಲೆ ಕರ್ಮಗಳು ತಪ್ಪುವ ವೆಂದು ಅಪೇಕ್ಷಿಸುವವರಿಗೆ ಗೀತೆಯು ನಿರಾಶೆಯನ್ನುಂಟುಮಾಡುವದು. ಕರ್ಮಗಳು ಬಿಟ್ಟು ಹೋಗುವವೆಂದು ಇಲ್ಲಿ ಉಲ್ಲೇಖವಿಲ್ಲ. ಇಷ್ಟೇ ಅಲ್ಲ, ಇಂಥ ಬ್ರಹ್ಮ ನಿರ್ವಾಣವನ್ನು ಸೇರಲಿರುವವನು ಭಗವಂತನನ್ನು ಆಶ್ರಯಿಸಿ ಎಲ್ಲ ಕರ್ಮಗಳನ್ನು ಮಾಡುತಲಿರುವನೆಂದೂ ಆ ಭಗವಂತನ ಪ್ರಸಾದದಿಂದ ಮುಂದೆ ಶಾಶ್ವತ ಪದವನ್ನು ಪಡೆಯುವನೆಂದೂ ಇಲ್ಲಿ ಹೇಳಿದೆ. ಹೀಗೆ ಪಡೆಯುವ ಪದವು ಶಾಶ್ವತವಾದುದೆಂಬುದು ನಿಜ. ಆ ಪದದಲ್ಲಿ ಜನ್ಮ ವಿದೆಯೋ ಇಲ್ಲವೋ ಎಂಬ ಬಗ್ಗೆ ಗೀತೆಯಲ್ಲಿ ಯಾವ ಸೂಚನೆಯೂ ಇಲ್ಲ ವೆಂದು ಒಪ್ಪಿಕೊಳ್ಳಬಹುದು. ನಮಗೆ ತೋರುವದೇನೆಂದರೆ, ಬಂಧನ ರಹಿತವಾದ ಜನ್ಮಗಳು ಭಗವಂತನ ಸೃಷ್ಟಿಕಾರ್ಯಕ್ಕಾಗಿ ಪರಮೇಶ್ವರನಿಗೂ ಬ್ರಹ್ಮನಿಗೂ ಲಭಿಸುವಂತೆ, ಆ ಭಗವಂತನ ಪ್ರಸಾದದಿಂದ ಈ ಮುಕ್ತ ಜೀವನಿಗಾದರೂ ಉಂಟಾಗಬಹುದು. ಇಲ್ಲದಿದ್ದರೆ ಈ ಮುಕ್ತಜೀವನು ತನ್ನ ಜೀವಭೂತ ಸ್ವಭಾವವನ್ನು ತೊರೆದು, ಬ್ರಹ್ಮನನ್ನು ಹಿಂದೆ ಬಿಟ್ಟು, ಹೋಗಿ ಪರಮೇಶ್ವರನಲ್ಲಿ ಲಯವಾಗುವನೆಂದು ಹೇಳಲಿಕ್ಕೆ ಗೀತೆಯಲ್ಲಿ ಆಧಾರವಿಲ್ಲವೆಂಬದು ಖಂಡಿತವು.

ವರ್ಣಸ್ವಭಾವವಿಹಿತ ಕರ್ಮ, ಇಂಥ ಕರ್ಮಗಳ ನಿತ್ಯ ಹವ್ಯಾಸ (೧೮-೪೫), ಇಂಥ ಹವ್ಯಾಸದಿಂದ ಸ್ವಧರ್ಮಪಾಲನೆ, ಧರ್ಮ ಪರಿಪಾಲನೆ

ಯನ್ನು ಮಾಡುತ್ತ ಕೈಕೊಂಡ ಕರ್ಮಗಳಿಂದ ನೆರವೇರಿಸಿದ ಪ್ರಭುವಿನ **ಉಪಾಸನೆ(೧೮-೪೬)**, ಉಪಾಸನೆಯಿಂದ ಪಡೆದ ನೈಷ್ಕರ್ಮ್ಯಸಿದ್ಧಿ **(೧೮-೪೯)** ಅಂದರೆ ಕರ್ಮ ಬಂಧನದಿಂದ ಮುಕ್ತಿ, ಈ ಮುಕ್ತಿಯಿಂದ ಪ್ರಾಪ್ತವಾದ ಬ್ರಾಹ್ಮೀ ಸ್ಥಿತಿ, **ಇಂಥ ಬ್ರಾಹ್ಮೀಸ್ಥಿತಿಯಲ್ಲಿ ಜ್ಞಾನದಿಂದುದ್ಭವಿಸಿದ ನಿಸ್ಸೀಮ ಭಕ್ತಿ-ನಿಷ್ಠೆ—(೧೮-೫೦,೫೪)**, ಈ ಭಕ್ತಿಯಿಂದ ಪ್ರಾಪ್ತವಾದ ಪ್ರಭುವಿನ ವಿಷಯದ ಸಂಪೂರ್ಣ ಜ್ಞಾನ ಮತ್ತು ಆ ಜ್ಞಾನದಿಂದ ಪ್ರಭುವಿನಲ್ಲಿ ದೊರೆಯುವ ಅಕ್ಷಯ ಅಥವಾ ಅಕ್ಷರಪದ (ಬ್ರಹ್ಮನಿರ್ವಾಣ) **(೧೮-೫೫)**—ಇದೇ ಗೀತೆಯಲ್ಲಿ ಪ್ರತಿಪಾದ್ಯವಾದ ಸಾದ್ಯಂತ ಮುಕ್ತಿ ಸೋಪಾನ ಮಾರ್ಗವು. ಈ ಶ್ರೇಣಿಯಲ್ಲಿ ಅರ್ಜುನನು ಮಧ್ಯದ ಒಂದು ಮೆಟ್ಟಲಿನ ವರೆಗೆ ಪ್ರಗತಿಯನ್ನು ಪಡೆದಿರುವನು. ಆ ಪರಿಸ್ಥಿತಿಯಲ್ಲಿ ಅವನಿಗೆ ಈ ಸೋಪಾನ ಮಾರ್ಗವು ಸಾದ್ಯಂತವಾಗಿ ಬುದ್ಧಿಗೋಚರವಾದರೂ ಅದು ಅನುಭವಕ್ಕೆ ಬರುವದು ಶಕ್ಯವಲ್ಲ. ಅವನು ಪ್ರಭುವಿನಲ್ಲಿಟ್ಟ ಶರಣಬುದ್ಧಿಯಿಂದ ಪ್ರೇರಿತನಾಗಿ ಸರ್ವ ಕರ್ಮಗಳನ್ನು ಮಾಡಬೇಕು. ಹೀಗೆ ಮಾಡಿದರೆ ಕೊನೆಗೆ ಆ ಪ್ರಭುವಿನ ಪ್ರಸಾದದಿಂದ ಅವನಿಗೆ ಅವ್ಯಯವೂ ಶಾಶ್ವತವೂ **ಆದ ಬ್ರಹ್ಮನಿರ್ವಾಣ ಪದವು ಪ್ರಾಪ್ತವಾಗುವದು.**

**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ ।**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥ ೫೭ ॥**

ಬುದ್ಧಿಯು ಬಾಹ್ಯಸ್ಪರ್ಶದಲ್ಲಿ ನಿರಾಸಕ್ತವಾಗಬೇಕು. ಆದರೆ ಆತ್ಮಸ್ವಭಾವಕ್ಕೆ ಸಹಜವಾದ ಪುರುಷೋತ್ತಮನ ಮೇಲಿನ ಪ್ರೇಮವು ಅದರಲ್ಲಿ ಬೇರೂರದಿದ್ದರೆ ಅದು ನಿರಾಸಕ್ತವಾಗಲಿ ಏಕಾಗ್ರವಾಗಲಿ ಆಗುವದೇ ಇಲ್ಲ. ಪುರುಷೋತ್ತಮನಲ್ಲಿ. ಭಕ್ತಿಯು ನೆಲೆಗೊಂಡು ಬುದ್ಧಿಯು ಏಕಾಗ್ರವಾದಾಗ ಆ ಬುದ್ಧಿಯೂ ಚೇತಸ್ ಎನಿಸುವದು. ಹೀಗೆ ಬುದ್ಧಿಯು ಏಕಾಗ್ರವಾದಾಗ ಮನುಷ್ಯನು ತನ್ನ ಅತ್ಯಲ್ಪಕರ್ಮದಲ್ಲಿಯೂ ಶ್ರೀಕೃಷ್ಣಪರವಾದ ಚಿತ್ತದಿಂದ ಕೂಡಿರುವನು. ಇದೇ ಬುದ್ಧಿಯೋಗವೆನಿಸುವದು. ಈ ಬುದ್ಧಿಯೋಗವನ್ನಾಶ್ರಯಿಸಿ ಅರ್ಜುನನು ತನ್ನ ಚಿತ್ತವನ್ನು ಸತತವೂ ಸಂಪೂರ್ಣವಾಗಿಯೂ ಶ್ರೀ ಕೃಷ್ಣಪರವಾಗಿ ಮಾಡಬೇಕು.

**ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
**ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥ ೫೮ ॥**

ಚಿತ್ತವು ಶ್ರೀಕೃಷ್ಣಪರವಾಗಿ ಒಂದು ಬಾರಿ ಸ್ಥಿರವಾಯಿತೆಂದರೆ ವಿಘ್ನಗಳೆಷ್ಟು ಬಂದರೂ ಅವೆಲ್ಲವುಗಳನ್ನು ಶ್ರೀಕೃಷ್ಣನ ಪ್ರಸಾದದಿಂದ ಅರ್ಜುನನು ನಿರಾಯಾಸವಾಗಿ ದಾಟಿಹೋಗುವನು. ಆದರೆ ಅಹಂಕಾರಕ್ಕೊಳಗಾಗಿ ಶ್ರೀಕೃಷ್ಣನ ಉಪದೇಶವನ್ನು ಕೇಳದಿದ್ದರೆ, ಅವನು ನಾಶವಾಗುವದು ನಿಜ, ಅಂದರೆ ಅವನ ಶ್ರೇಯಸ್ಸು ಮಣ್ಣುಪಾಲಾಗುವದು.

**ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥ ೫೯ ॥**

ಅಹಂಕಾರ ವಶನಾಗಿ, ಯುದ್ಧವನ್ನು ಮಾಡುವದಿಲ್ಲವೆಂದು ನೀನು ಹೇಳುವೆ. ಆದರೆ ಆ ನಿನ್ನ ನಿಶ್ಚಯವು ವ್ಯರ್ಥವೆಂದು ತಿಳಿ. ನಿನ್ನ ಪ್ರಕೃತಿಯು ನಿನ್ನನ್ನು ಯುದ್ಧ ಮಾಡುವದಕ್ಕೆ ಬಲವಿಯಿಂದ ಎಳೆದೊಯ್ಯುವದು.

**ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್ಕರಿಷ್ಯಸ್ಯವಶೋಽಪಿ ತತ್ ॥ ೬೦ ॥**

ಸ್ವಭಾವ ಜನ್ಯವಾದ ಕರ್ಮದ ಕಡೆಗಿರುವ ಒಲವು ಮನುಷ್ಯನಲ್ಲಿ ಬಹಳ ಪ್ರಬಲವಾಗಿರುವದು. ನಿನ್ನ ವರ್ಣಸ್ವಭಾವ ವಿಹಿತ ಕರ್ಮದಿಂದ ನೀನು ಈ ರೀತಿಯಾಗಿ ಬಂಧಿಸಲ್ಪಟ್ಟಿರುವೆ. ಮೋಹವಶನಾಗಿ ಯಾವ ಕೆಲಸವನ್ನು ಮಾಡಲು ಒಲ್ಲೆಯೋ ಅದನ್ನೇ ನೀನು ಅವಶನಾಗಿ ಅಂದರೆ ಸ್ವಭಾವ ವಶನಾಗಿ ಮಾಡೇ ಮಾಡುವಿ.

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥ ೬೧॥**

ನಿನ್ನ ನಿಶ್ಚಯದಿಂದ ನಿನ್ನನ್ನು ತೊಲಗಿಸುವದು ನಿನ್ನ ಸ್ವಭಾವ ಮಾತ್ರವಲ್ಲ. ಅದಕ್ಕಿಂತಲೂ ಬಲವತ್ತರವಾದ ಇನ್ನೊಂದು ಕಾರಣವೂ

ಇರುವದು. ಈಶ್ವರನು— ಪುರುಷೋತ್ತಮ ಶ್ರೀಕೃಷ್ಣನು— ಎಲ್ಲೆಲ್ಲಿಯೂ ಇರುವನು. ಆತನ ಶಕ್ತಿಯು ಎಲ್ಲೆಲ್ಲಿಯೂ ಪ್ರತ್ಯಯಕ್ಕೆ ಬರುವದು. ಆ ಶಕ್ತಿಯ ಹಿಂದೆ ಅವನ ಉದ್ದೇಶವಾದರೂ ಇದ್ದೇ ಇರುವದು. ಆದರೂ ಅದು ಸಾಧಾರಣವಾಗಿ ಗಮನಕ್ಕೆ ಬರುವದಿಲ್ಲ. ಆತನ ಪ್ರೇರಣೆಯಿಲ್ಲದೆ ಗಿಡದ ಎಲೆಗಳಾದರೂ ಕದಲುವದಿಲ್ಲವೆಂಬದು ಎಷ್ಟು ನಿಜವೋ ಎಲೆಗಳನ್ನು ಕದಲಿಸುವದರಲ್ಲಿ ಅವನ ವಿಶಿಷ್ಟ ಉದ್ದೇಶವಿರುವದಾದರೂ ಅಷ್ಟೇ ನಿಜವಾಗಿದೆ. ಈಶ್ವರನು ಎಲ್ಲ ಭೂತಗಳ ಹೃದಯದಲ್ಲಿ ವಾಸವಾಗಿರುವನು. ಮತ್ತು ಅವುಗಳನ್ನು ತನ್ನ ಅವಿರೋಧವೂ ಅವ್ಯಯವೂ ಆದ ಇಚ್ಛೆಯಿಂದ— ಯಂತ್ರಾರೂಢವಾಗಿ ಮಾಡುತ್ತಲಿರುವನು. ಜೀವನಾದವನು, ಅವನು ಪುಣ್ಯವಂತನಾಗಲಿ ಪಾಪಿಷ್ಠನಾಗಲಿ ಆತನ ಅವ್ಯಯ ಇಚ್ಛೆಯನ್ನು ಮೀರಿ ನಡೆಯುವದು ಅವನಿಗೆ ಶಕ್ಯವಲ್ಲ. ಸೃಷ್ಟಿಯೊಳಗಿನ ಲೋಕಸಂಗ್ರಾಹಕ ಮತ್ತು ಧರ್ಮಸಂಗ್ರಹಕಾರಕ ಕರ್ಮಗಳನ್ನು ಆತನು ಸಜ್ಜನರಿಂದ ಮಾಡಿಸಿಕೊಳ್ಳುವಂತೆ ಸಂಹಾರಕೃತ್ಯಗಳನ್ನು ದುರ್ಜನರಿಂದ ಮಾಡಿಸಿಕೊಳ್ಳುವನು. ಹೀಗೆ ಸಜ್ಜನರ ಸಂರಕ್ಷಣೆ ದುರ್ಜನರ ನಿಗ್ರಹಗಳೆಂಬ ನಿರಂತರವೂ ಅನಿವಾರ್ಯವೂ ಆದ ತನ್ನ ಕೃತ್ಯಗಳನ್ನು ಆತನು ಜೀವರಿಂದ ಪರಸ್ಪರವಾಗಿಯೇ ತನ್ನಿಚ್ಛೆಯಂತೆ ಮಾಡಿಸಿಕೊಳ್ಳುವನು. ಜಗತ್ತಿನೊಳಗೆ ಅಸ್ತಿತ್ವವು— ಅದು ಒಳಿತಾಗಿರಲಿ ಕೆಟ್ಟುದಾಗಿರಲಿ— ಅವನ ಇಚ್ಛೆಯನ್ನು ಮೀರುವದು ಶಕ್ಯವಿಲ್ಲ.

ಒದಗಿದ ಯುದ್ಧ ಪ್ರಸಂಗಕ್ಕೆ ಅರ್ಜುನನಾಗಲಿ ದುರ್ಯೋಧನನಾಗಲಿ ಕಾರಣರಲ್ಲ. ಆ ಯುದ್ಧದ ಮೂಲವು ಪಾಂಡವ-ಕೌರವರ ವೈರದಲ್ಲಿಲ್ಲ. ಆದರೆ ಪುರುಷೋತ್ತಮನ ಲೋಕಕ್ಷಯಕಾರಕ ಸಂಕಲ್ಪದಲ್ಲಿರುವದು ( ೧೧-೩೨). ಈ ಸಂಕಲ್ಪವನ್ನು ನೆರವೇರಿಸುವ ಪ್ರಧಾನವ್ಯಕ್ತಿಗಳಲ್ಲಿ ಅರ್ಜುನನು ಒಬ್ಬನಾಗಿರುವನು. ಕಾರ್ಯವನ್ನು ನಿರ್ವಹಿಸಲಿಕ್ಕೆ ಅನುರೂಪವಾದ ಗುಣಸಂಪತ್ತು ಆಜನ್ಮವಾಗಿಯೇ ಅವನಲ್ಲಿ ಅಡಕವಾಗಿರುವದು. ಮತ್ತು ಪುರುಷೋತ್ತಮ ಶ್ರೀಕೃಷ್ಣನು ಎಣಿಸುವಂತೆ ಆ ಕಾರ್ಯವನ್ನು ನೆರವೇರಿಸುವದಕ್ಕಾಗಿ ಅರ್ಜುನನು ಯಂತ್ರಾರೂಢನಾಗಿರುವನು.

ಈ ಶ್ಲೋಕದಲ್ಲಿ ಮನುಷ್ಯನನ್ನು ಕರ್ಮಾಸಕ್ತನನ್ನಾಗಿ ಮಾಡುವ ಪುರುಷೋತ್ತಮನು ಅವನ ಹೃದಯದಲ್ಲಿರುವನೆಂದು ಹೇಳುವದು ಸೂಚಕ ವಾಗಿದೆ. ಮನುಷ್ಯನು ಮಾಡುವ ಕಾರ್ಯಗಳಲ್ಲಿ ಬುದ್ಧಿಯ ಪ್ರೇರಣೆ ಮತ್ತು ಹೃದಯದ ಪ್ರೇರಣೆ ಎಂಬ ಎರಡು ಬಗೆಯ ಪ್ರೇರಣೆಗಳು ಅವನಿಗೆ ಅನುಭವಕ್ಕೆ ಬರುವವು. ಇವುಗಳಲ್ಲಿ ಬುದ್ಧಿಯ ಪ್ರೇರಣೆಗಳು ಮನುಷ್ಯನಿಗೆ ಪರಮ ತಾರಕಗಳೆಂದೂ ಹೃದಯದ ಪ್ರೇರಣೆಗಳು ಜೊಳ್ಳಾದ ಸಂವೇದನೆ ಗಳೆಂದೂ (Sentiments) ಈ ನಮ್ಮ ಯುಗದಲ್ಲಿ ಭಾವಿಸುವದುಂಟು. ಆದರೂ ಸ್ತ್ರೀ ಪುರುಷರ ಪ್ರೇಮ ವಿಷಯದಲ್ಲಿಯೂ ಕಲೆಗಳೊಳಗಿನ ಸೌಂದರ್ಯ ವಿಷಯದಲ್ಲಿಯೂ ಭಾವನೆಗಳಿಗೆ ಒಂದೊಂದು ವೇಳೆ ಮಿತಿ ಮೀರಿದ ಮರ್ಯಾದೆಯನ್ನು ಕೊಡುವದೂ ಉಂಟು. ಮನುಷ್ಯ ಜೀವ ನವು ಸರ್ವಸಾಧಾರಣವಾಗಿ ಬುದ್ಧಿಯ ಪ್ರೇರಣೆಗಳಿಗಿಂತಲೂ ಹೃದಯ ಸ್ಫೂರ್ತಿಗಳಿಂದ ತುಂಬಿರುವದು. ತಾನು ಮನುಷ್ಯನ ಹೃದಯದಲ್ಲಿ ವಾಸಿಸುವನೆಂಬದರಲ್ಲಿ ಪುರುಷೋತ್ತಮನು ಆದರ ಸ್ಫೂರ್ತಿಗಳಿಗೆ ಎಲ್ಲಕ್ಕೂ ಹೆಚ್ಚಿನ ಮಹತ್ವವನ್ನು ಕೊಟ್ಟಿರುವನು. ಇನ್ನು ಹೃದಯ ಭಾವನೆಗಳನ್ನು ದೌರ್ಬಲ್ಯದಿಂದ ಅವಾಸ್ತವವಾಗಿ ನಂಬಿ ಮನುಷ್ಯನು ಅದರ ದುಷ್ಪರಿಣಾಮ ಗಳನ್ನು ಅನುಭವಿಸುವದು ನಿಜವು. ಆದರೆ ಅದೇ ರೀತಿಯಾಗಿ ಬುದ್ಧಿ ಯನ್ನಾದರೂ ನಂಬಿ ಕೆಡಬಹುದೆಂಬದು ಅಷ್ಟೇ ನಿಜವಾಗಿದೆ. ಇಷ್ಟೇ ಅಲ್ಲ, ಇಂಥ ಎರಡು ಬಗೆಯ ಪರಿಣಾಮಗಳಲ್ಲಿಯೂ ಹೃದಯ ಸ್ಫೂರ್ತಿಯನ್ನು ಹೆಚ್ಚು ಸಾತ್ವಿಕವೆಂದು ನಂಬುವದು ಯೋಗ್ಯವೆಂಬ ವಿಶ್ವಾಸವನ್ನು ಭಾರತೀಯ ಸಂಸ್ಕೃತಿಯು ಯಾವಾಗಲೂ ತಳೆದಿರುವದು. ಈ ವಿಶ್ವಾಸವು ನಮ್ಮ ಕಾಲದಲ್ಲಿ ಸಡಲಿದಂತೆ ಕಾಣುವದು. ಆದರೆ, ಗೀತೋಕ್ತ ಬುದ್ಧಿ ಯೋಗದ ಪುನರುಜ್ಜೀವನವಾದರೆ ಅದು ದೃಢವಾಗಿ, ಭಾರತದ ಪೂರ್ವದ ಇತಿಹಾಸದಂತೆ ಭವಿಷ್ಯದ ಚರಿತ್ರವೂ ಉಜ್ವಲವಾಗದಿರದೆಂದು ನನ್ನ ನಂಬುಗೆ.

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**

**ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ॥ ೬೨॥**

ಯುದ್ಧ ಕಾರ್ಯವನ್ನು ತಪ್ಪಿಸುವದು ಇನ್ನು ಶಕ್ಯವಲ್ಲ; ಆದರೆ ಅರ್ಜುನನು ಆ ಕಾರ್ಯದಿಂದ ತನ್ನ ಶ್ರೇಯವನ್ನು ಸಂಪಾದಿಸುವದು ಮಾತ್ರ ಶಕ್ಯವಾಗಿದೆ. ಹೀಗೆ ತನ್ನ ಶ್ರೇಯವನ್ನು ಸಂಪಾದಿಸುವದಕ್ಕೆ ಅವನು ಪುರುಷೋತ್ತಮ ಶ್ರೀಕೃಷ್ಣನಿಗೆ ಶರಣಹೋಗಬೇಕು. ತನ್ನ ಭಾವ ಸರ್ವಸ್ವವನ್ನೂ ಅವನಿಗೆ ಧಾರೆಯೆರೆಯಬೇಕು. ಮತ್ತು ಇಂಥ ಭಯಂಕರ ಪ್ರಸಂಗದಲ್ಲಿಯೂ, ಮೊದಲೇ ಹೇಳಿದಂತೆ, ಆತನ ಪ್ರಸಾದದಿಂದ ಶಾಂತಿಯನ್ನೂ ಶಾಶ್ವತ ಪದವನ್ನೂ ದೊರಕಿಸಬೇಕು. ಇವುಗಳನ್ನು ಪಡೆಯುಲಿಕ್ಕೆ ಬೇರೆ ಯಾವ ಮಾರ್ಗವೂ ಇಲ್ಲ. ಭಯಂಕರ ವಿಪ್ಲವದ ಸಮಯದಲ್ಲಾಗಲಿ ಶಾಂತತೆಯ ಕಾಲದಲ್ಲಾಗಲಿ ಮನುಷ್ಯನನ್ನು ಅವನ ಶಾಶ್ವತ ಶ್ರೇಯದ ಕಡೆಗೆ ಒಯ್ಯುವ ಏಕಮೇವಾದ್ವಿತೀಯವಾದ ರಾಜಮಾರ್ಗವು ಇದೇ ಸರಿ. ಅರ್ಜುನನಿಗೆ ಎರಡನೆಯ ಅಧ್ಯಾಯದಲ್ಲಿ ತನ್ನ ಶ್ರೇಯವನ್ನು ಈ ಸಮಯದಲ್ಲಿ ಹೇಗೆ ಪಡೆಯಬೇಕೆಂಬ ಇಕ್ಕಟ್ಟು ಒದಗಿತ್ತು (೨-೭). ಅದನ್ನು ಪರಿಹರಿಸೆಂದು ಆಗ ಶ್ರೀಕೃಷ್ಣನನ್ನು ಅವನು ಬೇಡಿಕೊಂಡಿದ್ದನು. ಅದಕ್ಕೆ ಶ್ರೀಕೃಷ್ಣನು ಈ ಶ್ಲೋಕದಲ್ಲಿ ಉತ್ತರವನ್ನು ಹೇಳಿರುವನು.

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥೬೩॥**

ಈ ಉತ್ತರವೇ ಸತ್ಯವಾದುದು. ಗುಹ್ಯಗಳಲ್ಲೆಲ್ಲ ಗುಹ್ಯವಾದ ಜ್ಞಾನವು ಇದೇ ಆಗಿದೆ. ಸಂದೇಹವು ನಿನಗೆ ಉಳಿಯದಂತೆ ಅದನ್ನು ತಿಳಿಸಿ ಹೇಳಿರುವೆನು. ಪೂರ್ಣವಾಗಿ ವಿಚಾರಮಾಡು; ಮತ್ತು ಈ ಯುದ್ಧವನ್ನು ಮಾಡುವ ಅಥವಾ ಬಿಡುವ ವಿಷಯದಲ್ಲಿ ಇಚ್ಛೆ ಬಂದಂತೆ ಮಾಡು.

**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥೬೪॥**

ಆದರೆ, ಇನ್ನೂ ಒಂದು ಕೊನೆಯ ಅತ್ಯಂತ ರಹಸ್ಯದ ಮಾತನ್ನು

ನೀನು ಕೇಳು. ನನಗೆ ನೀನು ಅತ್ಯಂತ ಪ್ರಿಯನಾದವನು. ಆದಕ್ಕಾಗಿ ಈ ಹಿತದ ಮಾತನ್ನು ನಿನಗೆ ಹೇಳುವೆನು.

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥ ೬೫ ॥**

ನನ್ನಲ್ಲಿ ಮನಸ್ಸುಳ್ಳವನಾಗು, ನನ್ನ ಭಕ್ತನೆನಿಸು, ನನಗಾಗಿ ಯಜ್ಞ ಮಾಡು ಮತ್ತು ನನ್ನನ್ನು ನಮಸ್ಕರಿಸು. ಹೀಗೆ ಮಾಡಿದರೆ ನೀನು ನನ್ನನ್ನೇ ಸೇರುವೆ. ಇದು ಸತ್ಯವೆಂದು ತಿಳಿ. ನಾನು ನಿನಗೆ ಪ್ರಿಯನಾಗಿರುವೆ, ನನ್ನನ್ನು ಹೀಗೆ ಸೇರುವದೇ ಇಹಲೋಕದಲ್ಲಿ ಮನುಷ್ಯನು ಮಾಡುವ ಸತತ ಪ್ರಯತ್ನದ ಧ್ಯೇಯವಾಗಿದೆ. ಆದುದರಿಂದ ಸರಲವೂ ಮೂಲಭೂತವೂ ಆದ ಈ ಸತ್ಯವು ನಿನಗೆ ತಿಳಿಯದೆ ಹೋಗಿ, ಪ್ರಮಾದ ರಹಿತವಾದ ಸುಲಭವಾದ ಮಾರ್ಗವನ್ನು ನೀನು ಬಿಡಬಾರದೆಂದು ನಾನು ಹವಣಿಸುವೆನು.

**ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ**
**ಮಾ ಶುಚಃ ॥ ೬೬ ॥**

**ಗೀತೆಯಲ್ಲಿ ಧರ್ಮವೆಂದರೆ ಯಾವದಾದರೊಂದು ಅನಿಶ್ಚಿತವಾದ ಸದಾಚರಣೆಯಲ್ಲ,** ಅಥವಾ ನೀತಿಯ ಅನಿರ್ಣೀತವಾದ ಕಟ್ಟಳೆಗಳಲ್ಲ. ಯಾವನಿಂದ ಧರ್ಮವು ಪ್ರಸೃತವಾಯಿತೋ ಮತ್ತು ಜಗತ್ತಿನೊಳಗಿನ ಸರ್ವಧರ್ಮಗಳಿಗೆ ಯಾವನು ನಿಯಾಮಕನೋ ಆತನ ಸೃಷ್ಟಿಯೊಳಗಿನ ಪುರುಷೋತ್ತಮಭಾವವನ್ನು ಗ್ರಹಿಸಿ ಆ ಭಾವವನ್ನು ಪ್ರತಿಯಾಗಿ ಸಲ್ಲಿಸುವದೂ ತತ್ ಪ್ರೀತ್ಯರ್ಥವಾಗಿ ಪ್ರಯತ್ನಿಸುವದೂ ಗೀತೆಯಲ್ಲಿ ಧರ್ಮವೆನಿಸುವದು.

ಮನಸ್ಸಿಗಾಗಲಿ ಬುದ್ಧಿಗಾಗಲಿ ಅಹಂಕಾರ ಮೂಲಕವಾಗಿ ಹೊಳೆಯುವ ಸೂಕ್ಷ್ಮಧರ್ಮಗಳು ಎಷ್ಟಾದರೂ ಇರಲಿ. ಎಲ್ಲವುಗಳನ್ನು ಬಿಟ್ಟು

ಬಿಡು. ಗೀತೆಯಲ್ಲಿ ನಾನು ಬೋಧಿಸಿದಂತೆ, ಅಹಂಕಾರ ಶೂನ್ಯನಾಗಿ ನನಗೆ ಶರಣು ಬಾ– ನಿನ್ನ ಮನಸ್ಸಿಗೆ ತೋರುವ ಎಲ್ಲ ಪಾಪಗಳಿಂದಲೂ ನಿನ್ನನ್ನು ಮುಕ್ತನಾಗಿ ಮಾಡುವ ಅಧಿಕಾರವು ನನ್ನದಾಗಿದೆ. ನಿನ್ನಲ್ಲಿ ನನಗಿರುವ ಪರಮಪ್ರೇಮಕ್ಕಾಗಿ ಆ ಮುಕ್ತಿಯನ್ನು ಆನಂದದಿಂದಲೂ ಅಭಿಮಾನ ದಿಂದಲೂ ನಾನು ನಿನಗೆ ಕೊಡುವೆನು. ನಿನ್ನ ಭಾಗ್ಯವು ಇಷ್ಟು ಅಧಿಕ ವಾಗಿರುವಾಗ ನೀನು ಶೋಕಮಾಡುವದೇಕೆ ? ಶೋಕ ಮಾಡಬೇಡ.

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ**
**ಯೋಽಭ್ಯಸೂಯತಿ ॥ ೬೭ ॥**

ನನ್ನಲ್ಲಿ ಭಕ್ತಿ ಇಲ್ಲದವನಿಗೆ, ಕನಿಷ್ಠ ಪಕ್ಷಕ್ಕೆ ತಪವಾದರೂ ಇಲ್ಲದ ವನಿಗೆ ( ೧೮–೨ ಟಿಪ್ಪಣಿ ), ಕೇಳಲು ಇಚ್ಛೆಯು ಇಲ್ಲದವನಿಗೆ ಅಥವಾ ನನ್ನನ್ನು ದ್ವೇಷಿಸುವವನಿಗೆ ನಾನೀಗ ನಿನಗೆ ಹೇಳಿದ ಗುಹ್ಯತಮವಾದ ಸತ್ಯವನ್ನು ನೀನು ಎಂದೂ ಹೇಳಬೇಡ.

ಸುಕ್ಷೇತ್ರದಲ್ಲಲ್ಲವೇ ಬೀಜವನ್ನು ಬಿತ್ತಬೇಕಾದುದು ? ಮೇಲೆ ಹೇಳಿದವರು ಈ ಸತ್ಯವನ್ನು ಗ್ರಹಿಸಲಿಕ್ಕೆ ಅರ್ಹರಲ್ಲ. ತನ್ನಲ್ಲಿ ಶ್ರದ್ಧೆ ಇಲ್ಲದವರ ವಿಷಯವಾಗಿ ಅನೇಕಬಾರಿ ಶ್ರೀಕೃಷ್ಣನು ಹೀಗೆ ಹೇಳಿರುವನು ( ೩–೩೨, ೪–೩೯, ೯–೩ ).

**ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ ೬೮ ॥**

ನಾನು ವಿವರಿಸಿದ ಈ ಪರಮರಹಸ್ಯವನ್ನು ನನ್ನ ಭಕ್ತರಾದವರಿಗೆ ಹೇಳುವವನು ನನ್ನಲ್ಲಿ ಅವನಿಗಿರುವ ಪರಮ ಭಕ್ತಿಗಾಗಿ ನನ್ನನ್ನು ಕೂಡಿ ಕೊಳ್ಳುವನು. ಅರ್ಥಾತ್ ಗೀತೋಪದೇಶವನ್ನು ಮಾಡುವವನಿಗೆ ಪುರು ಷೋತ್ತಮ ಶ್ರೀಕೃಷ್ಣನಲ್ಲಿ ಭಕ್ತಿಯಿದ್ದರೆ ಮಾತ್ರ ಈ ಫಲವು ದೊರಕುವದು; ಗೀತೆಯನ್ನು ಉಪದೇಶಿಸಿದ್ದಕ್ಕಾಗಿ ಅಲ್ಲ. ಗೀತೆಯ ಅಧ್ಯಯನವಾಗಲಿ

ಅಧ್ಯಾಪನವಾಗಲಿ ಶ್ರದ್ಧಾಭಕ್ತಿಗಳಿಂದ ಮಾಡಿದ್ದಾದರೆ ಮಾತ್ರ ಫಲಿಸು ವದು. ಪ್ರಾಪ್ತವಾಗುವ ಫಲವು ಮಾಡಿದ ಶ್ರಮಕ್ಕಾಗಿ ಅಲ್ಲ; ಆದರೆ ಕರ್ತೃವಿನ ಭಕ್ತಿಭಾವಕ್ಕಾಗಿ ಇರುವದು.

**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೬೯ ॥**

ಭಕ್ತಿಭಾವದಿಂದ ಗೀತೆಯನ್ನುಪದೇಶಿಸುವವನಿಗಿಂತ ನನಗೆ ಅಧಿಕ ಪ್ರಿಯನಾದ ಸೇವಕನು ಮತ್ತಾವನೂ ಇಲ್ಲ; ಮತ್ತು ಪೃಥ್ವಿಯಲ್ಲಿ ಅವನಿಗಿಂತ ನನಗೆ ಮತ್ತಾವನೂ ಪ್ರಿಯನಾಗನು ( ೬-೨೯ ).

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ ೭೦ ॥**

ನಮ್ಮಿಬ್ಬರ ಈ ಧರ್ಮ ಸಂವಾದವನ್ನು ಅಧ್ಯಯನ ಮಾಡುವವನು ಜ್ಞಾನ ಯಜ್ಞದಿಂದ ನನ್ನನ್ನು ಸಂತೋಷ ಪಡಿಸುವನೆಂದು ನಾನು ಭಾವಿಸುವೆನು.

**ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।**
**ಸೋऽಪಿ ಮುಕ್ತಃ ಶುಭಾಲ್ಲೋಕಾನ್ಪ್ರಾಪ್ನುಯಾತ್ಪುಣ್ಯ ಕರ್ಮಣಾಂ ॥ ೭೧ ॥**

ಈ ಸಂವಾದವನ್ನು ದ್ವೇಷರಹಿತನೂ ಶ್ರದ್ಧಾವಂತನೂ ಆಗಿ ಕೇಳುವವನು ತನ್ನಲ್ಲಿದ್ದ ಭಕ್ತಿಭಾವವನ್ನು ವೃದ್ಧಿಗೊಳಿಸಿ, ಮುಕ್ತನಾಗಿ ಪುಣ್ಯ ಕರ್ಮಗಳಿಂದ ಪ್ರಾಪ್ತವಾಗುವ ಶುಭಲೋಕಗಳನ್ನು ಪಡೆಯುವನು.

ಭಗವದ್ಗೀತೆಯು ಕೇವಲ ಅರ್ಜುನನಿಗಾಗಿ ಹೇಳಲ್ಪಡಲಿಲ್ಲ. ಕುರುಕ್ಷೇತ್ರದಲ್ಲಿ ಉದ್ಭವಿಸಿದ ಅಪಶಕುನವನ್ನು ನಿವಾರಿಸುವದಕ್ಕಾಗಿಯೂ ಹೇಳಲ್ಪಡಲಿಲ್ಲ. ಕೃಷ್ಣಾವತಾರದಲ್ಲಿ ತಾನು ಮಾಡಬೇಕಾಗಿದ್ದ ಮಹತ್ತ್ವದ

ವಾದ ಕಾರ್ಯವೆಂದೂ ಮನುಷ್ಯ ಜಾತಿಗೆ ತನ್ನ ಶಾಶ್ವತ ಪ್ರಸಾದವೆಂದೂ ಸೃಷ್ಟಿರಚನಾ ಕುಶಲನಾದ ಪುರುಷೋತ್ತಮನು ಭಗವದ್ಗೀತೆಯನ್ನು ನಿರೂಪಿಸಿದನೆಂಬದಾಗಿ ನಾವು ಆರಂಭದಲ್ಲಿ (೨-೧೦) ಹೇಳಿರುವೆವು. ನಮ್ಮ ಊಹೆಯುು ಯಥಾರ್ಥವೆಂದು ಈ ಶ್ಲೋಕಗಳಿಂದ ಕಂಡುಬರುವದು.

**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನಸಂಮೋಹಃ ಪ್ರನಷ್ಟಸ್ತೇ ಧನಂಜಯ ॥ ೭೨ ॥**

ಎಲೈ ಅರ್ಜುನನೇ, ನಾನು ಹೇಳಿದುದನ್ನು ನೀನು ಏಕಾಗ್ರಚಿತ್ತ ನಾಗಿ ಕೇಳಿದಿಯಾ? ಹೇ ಧನಂಜಯಾ, ಅಜ್ಞಾನದಿಂದ ನಿನಗುಂಟಾಗಿದ್ದ ವ್ಯಾಮೋಹವು ನಷ್ಟವಾಯಿತೋ?

ಅರ್ಜುನ ಉವಾಚ—

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥ ೭೩ ॥**

ಅಚ್ಯುತನೇ, ನನ್ನ ವ್ಯಾಮೋಹವು ನಷ್ಟವಾಯಿತು. ನನಗೆ ಯಥಾರ್ಥ ಜ್ಞಾನವು ಉಂಟಾಗಿದೆ. ನಿನ್ನ ಪ್ರಸಾದದಿಂದ ನನ್ನ ಕರ್ತವ್ಯವನ್ನು ನಾನು ಅರಿತೆನು. ನನ್ನ ಸಂದೇಹವು ಪರಿಹಾರವಾಯಿತು, ನೀನು ಬೆಸಸಿದಂತೆ ಮಾಡಲಿಕ್ಕೆ ನಾನು ಸಿದ್ಧನಾಗಿರುವೆನು.

ಸಂಜಯ ಉವಾಚ—

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ॥ ೭೪ ॥**

ವಾಸುದೇವನು ಮಹಾತ್ಮನಾದ ಪಾರ್ಥನು ಇವರ ಅದ್ಭುತವೂ ರೋಮಾಂಚಕಾರಕವೂ ಆದ ಈ ಸಂವಾದವನ್ನು ನಾನು ಕೇಳಿದೆನು.

ಈ ಪರಮರಹಸ್ಯವಾದ ಯೋಗವನ್ನು ನಾನು ವ್ಯಾಸಮಹರ್ಷಿಯ ಪ್ರಸಾದದಿಂದ ಕೇಳಿದೆನು; ಅದೂ ಪ್ರತ್ಯಕ್ಷ ಯೋಗೇಶ್ವರನಾದ ಶ್ರೀಕೃಷ್ಣನ ಮುಖದಿಂದಲೇ.

**ರಾಜನ್ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಂ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ॥ ೭೬ ॥**

ಧೃತರಾಷ್ಟ್ರ ರಾಜನೇ, ಕೇಶವಾರ್ಜುನರಲ್ಲಿ ನಡೆದ ಅದ್ಭುತವೂ ಪುಣ್ಯಕಾರಕವೂ ಆದ ಈ ಸಂವಾದವು ನನಗೆ ಮತ್ತೆ ಮತ್ತೆ ನೆನಪಿಗೆ ಬರುವದು. ಆದುದರಿಂದ ನನಗೆ ಆನಂದವಾಗುವದು.

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾನ್ರಾಜನ್ ಹೃಷ್ಯಾಮಿ ಚ ಪುನಃಪುನಃ ॥ ೭೭ ॥**

ರಾಜನೇ, ಆ ಶ್ರೀಹರಿಯ ಅದ್ಭುತ ವಿಶ್ವರೂಪವು ಆಗಾಗ ನೆನಪಾಗಿ ನನಗೆ ಅತಿಶಯವಾದ ಆಶ್ಚರ್ಯವಾಗುವದು. ಆದರಿಂದ ನನಗೆ ಪುನಃ ಪುನಃ ಆನಂದವೂ ಆಗುವದು.

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥ ೭೮ ॥**

ಎಲ್ಲಿ ಯೋಗೇಶ್ವರ ಶ್ರೀಕೃಷ್ಣನಿರುವನು ಮತ್ತು ಎಲ್ಲಿ ಧನುರ್ಧಾರಿಯಾದ ಪಾರ್ಥನಿರುವನು ಅಲ್ಲಿ ಸಂಪತ್ತು, ವಿಜಯ, ಅಭಿವೃದ್ಧಿ, ಶಾಶ್ವತ ಧರ್ಮನೀತಿಗಳು ಇರುವವೆಂದು ನನ್ನ ಬುದ್ಧಿಗೆ ಖಂಡಿತವಾಗಿ ತೋರುವದು.

## ಹದಿನೆಂಟನೆಯ ಅಧ್ಯಾಯವು ಸಮಾಪ್ತವು



ಶ್ರೀಕೃಷ್ಣಾರ್ಪಣಮಸ್ತು.

# ಅನುಬಂಧ

## ಗೀತೆಯ ಪಾರಿಭಾಷಿಕ ಶಬ್ದಗಳು.

ಈ ಶಬ್ದಗಳ ಸ್ಪಷ್ಟೀಕರಣವನ್ನು ಮುಂದೆ ಕೊಟ್ಟ ಶ್ಲೋಕಗಳ ವಿವರಣೆಯ ದಪ್ಪ ಅಕ್ಷರದ ಭಾಗಗಳಲ್ಲಿ ನೋಡಿಕೊಳ್ಳಬೇಕು.

# ತಿದ್ದುಪಡಿ.

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೯ | ೪ | **ಶೃಶುರಾನ್** | **ಶ್ವಶುರಾನ್** |
| ೧೦ | ೧೬ | **ಆಚಾರ್ಯಃ** | **ಆಚಾರ್ಯಾಃ** |
| ೧೭ | ೫ | **ಭೈಕ್ಷ್ಯಮಪೀಹಿ** | **ಭೈಕ್ಷ್ಯಮಪೀಹ** |
| ೨೭ | ೨೮ | **ಪರಿವೇದನಾ** | **ಪರಿದೇವನಾ** |
| ೨೯ | ೪ | ಕಾರಣಎಲ್ಲವೆಂದು | ಕಾರಣವಿಲ್ಲವೆಂದು |
| ೨೯ | ೮ | ಮಾಡುವದಲ್ಲಿಯೇ | ಮಾಡುವದರಲ್ಲಿಯೇ |
| ೩೭ | ೩ | ಗ್ರಹಿಸಿಬೇಕು | ಗ್ರಹಿಸಬೇಕು |
| ೫೫ | ೧೩ | **ನಾರ್ಣವವಿವಾಂಭಸಿ** | **ನಾರ್ಣವಮಿವಾಂಭಸಿ** |
| ೬೨ | ೨೦ | ಭಗವದ್ಭಕ್ತಿಯನ್ನು | ಭಗವದ್ವ್ಯಕ್ತಿಯನ್ನು |
| ೭೪ | ೮ | ಧೇಯ | ಧ್ಯೇಯ |
| ,, | ೧೮ | (ಭ್ರ)ಮೆಯು | ಭ್ರಮೆಯು |
| ೭೭ | ೪ | ಉಂಟಾಗುದದು | ಉಂಟಾಗುವದು |
| ೭೯ | ೨೦ | ವಿರುದ್ಧವಾಗಿ | ವಿಶುದ್ಧವಾಗಿ |
| ೮೦ | ೧೨ | ನಿರತರವಾದರೆ | ಸಿರತವಾದರೆ |
| ೮೬ | ೧೨ | ಅಂಕುರಿಸಿದ | ಅಂಕುರಿಸದ |
| ೯೨ | ೨೫ | ತೋರುವದು | ತೋರುವವು |
| ೯೪ | ೧೦ | ಹೇಕುತ್ತಿರುವದನ್ನು | ಹೇಳುತ್ತಿರುವದನ್ನು |
| ೧೦೧ | ೧೭ | ಇವನ್ನು | ಇದನ್ನು |
| ೧೦೨ | ೧೦ | ರಹಿತವಾಗಿದೆ | ರಹಿತವಾಗಿವೆ. |
| ,, | ೨೦ | ಆಸಕ್ತಿಯೇ | ಆಸಕ್ತಿಯು |
| ೧೦೮ | ೯ | **ವಿಷಯಾನನ್ಯೇ** | **ವಿಷಯಾನನ್ಯ** |
| ೧೧೦ | ೨೦ | ಮಾಡಿದ | ಅರ್ಜುನನು ಮಾಡಿದ |

| | | | |
|---|---|---|---|
| ೧೧೪ | ೧೦ | ಆದರ ಉತ್ಪತ್ತಿಯು | ಅವರ ಉತ್ಪತ್ತಿಯು |
| ೧೧೭ | ೧೫ | ಮತ್ಪರಃ | ತತ್ಪರಃ |
| ೧೨೧ | ೧೦ | ಸಾಧಿಸಿರುವದೋ | ಸಾಧಿಸಿರುವವೋ |
| ೧೨೮ | ೨೪ | ತ್ಸಕ್ತ್ವಾತ್ಮಶುಪ್ಧಯೇ | ತ್ಯಕ್ತ್ವಾತ್ಮಶುದ್ಧಯೇ |
| ೧೩೧ | ೧೯ | ನಿರ್ಮಿಸಿ | ಸೃಷ್ಟಿಯನ್ನು ನಿರ್ಮಿಸಿ |
| ೧೩೬ | ೧೧ | ಹಕ್ಕೂ | ಹಕ್ಕು |
| ೧೫೯ | ೧೩ | ಏಕಸ್ಯಾಹಂ | ಏತಸ್ಯಾಹಂ |
| ೧೭೧ | ೨೧ | ತಪಸ್ವಿಗಳ | ತೇಜಸ್ವಿಗಳ |
| ೧೭೨ | ೧೫ | ಅಲಿಪ್ತಾಗಿರುಪನನು | ಅಲಿಪ್ತನಾಗಿರುವನು |
| ೧೭೪ | ೧೧ | ಜೀವದ | ಜೀವನ |
| ೧೭೬ | ೬ | ಅವರ | ಆದರ |
| ೧೭೯ | ೮ | ಆದನ | ಅವನ |
| ೨೧೬ | ೯ | ಯೋಗವನ್ನು | ಯೋಗಕ್ಷೇಮವನ್ನು |
| ೨೪೨ | ೧೯. | ಸ್ವಸ್ತ್ವೀತ್ಯುಕ್ತ್ವಾ | ಸ್ವಸ್ತೀತ್ಯುಕ್ತ್ವಾ |
| ೨೪೯ | ೧೨ | ನಿದಾನಂ | ನಿಧಾನಂ |
| ೨೫೧ | ೧೧ | ಸಖ್ಯಃ | ಸಖ್ಯುಃ |
| ೨೫೪ | ೧೪ | ಅರ್ಜುನ ಉವಾಚ | — |
| ೨೫೯ | ೯ | ಶಕ್ನೋಸಿ | ಶಕ್ತೋಸಿ |
| ೨೬೫ | ೬ | ಪುರುಷಾಕೃತಿಗಳ | ಪುರುಷಪ್ರಕೃತಿಗಳ |
| ೨೬೯ | ೧೯ | ಸ್ವರೂಪ (ಭಾವ) ವನ್ನೇ | ಸ್ವಭಾವವನ್ನೇ |
| ೨೭೨ | ೨೫ | ದೂರಸ್ಥ | ದೂರಸ್ಥಂ |
| ೨೯೩ | ೧೧ | ಜೀವಾತ್ಮನಿಗೆ | ಜೀವಾತ್ಮನು |
| ೩೦೩ | ೨೦ | ಗಚ್ಛಂತಿ ಮೂಢಾ: | ಗಚ್ಛಂತ್ಯಮೂಢಾಃ |
| ೩೧೬ | ೬ | ದೈವೀಮಥಿಜಾತೋಸಿ | ದೈವೀಮಭಿಜಾತೋಸಿ |
| ೩೫೨ | ೧೧ | ಸಿದ್ಧ್ಯೋರ್ನಿವಿಕಾರ | ಸಿದ್ಧ್ಯೋರ್ನಿರ್ವಿಕಾರಃ |
| ,, | ೧೪ | ಧೃತಿಯನ್ನೂ | ಧೃತಿಯನ್ನು |
| ೩೬೦ | ೧೦ | ಆಯಾ ವರ್ಣಗಳ | ಅನ್ಯವರ್ಣಗಳ |